ಶ್ರೀ:

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ



# ಯುಕ್ತಿಮಲ್ಲಿಕಾ

## ಫಲಸೌರಭ-೫

ಸಂಪುಟ-೧೦

॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# ಯುಕ್ತಿಮಲ್ಲಿಕಾ

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ಫಲಸೌರಭಮ್ - ೫

## ಸಂಪುಟ - ೧೦

ಅನುಗ್ರಹ :

**ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು**

ಪ್ರಥಮಪರ್ಯಾಯ. ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು :

ಪಿ. ಎಸ್. ಶೇಷಗಿರಿ ಆಚಾರ್ಯ

ಪ್ರಕಾಶಕರು :

ಶ್ರೀಮದ್ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-
ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ
**ಫಲಸೌರಭ - ಭಾಗ ೨**



ಪುಟಗಳು - V + 439 = 444

ಸಂಪುಟ - ೧೦(೧೦)

ಮುದ್ರಿತ ಪ್ರತಿಗಳು - ೧೦೦೦

ಪ್ರಕಾಶಕರು - ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ
ಹಾಗೂ ಪ್ರಕಾಶನ ಕೇಂದ್ರ,
ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ.

ಪುಟ ಸಂಯೋಜನೆ : ಬದರಿನಾರಾಯಣಾಚಾರ್ಯ ಎಸ್. ಕಡ್ಡಿ

ಅಕ್ಷರ ಜೋಡಣೆ : ಕೆ. ಗಣಪತಿ ಭಟ್
ಶ್ರೀಮತಿ ನಾಗಲತಾ (ಸುಧಾ),
ಎಂ. ಶರತ್ ಚಂದ್ರ

ಮುದ್ರಕರು : ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್
ಮೈಸೂರು. ✆ : 7899779255

ಗ್ರಂಥಪ್ರಾಪ್ತಿ : ಸೋದೆ ಶ್ರೀವಾದಿರಾಜಮಠ, ಉಡುಪಿ.

# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ, ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ. ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಬದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''



# ರಾಜರ ಸಂದೇಶ

## ''ವ್ಯಾಸೋಚ್ಛಿಷ್ಟಂ ಜಗತ್ಸರ್ವಂ''

ಅಷ್ಟಾದಶಪುರಾಣಾನಾಂ
ಕರ್ತಾ ಸತ್ಯವತೀಸುತಃ ।
ತದುಕ್ತೌ ಕಸ್ಯ ನ ಶ್ರದ್ಧಾ
ಯದುಚ್ಛಿಷ್ಟಂ ಜಗತ್ತ್ರಯಮ್ ॥

ಹದಿನೆಂಟು ಪುರಾಣಸಾಗರವನ್ನು ರಚಿಸಿದ ಧೀರ; ಅರವಿನಪಾರಾವಾರನೆನಿಸಿದ ಪಾರಾಶರ. ವ್ಯಾಸಪ್ರಸಾದದಿಂದಲೇ ಹದಿನಾಲ್ಕು ಜಗವೂ ಚೈತನ್ಯಮಯವಾಗಿದೆ. ಯಾವ ವಿವೇಕಿಗೆ ತಾನೇ ವ್ಯಾಸರಮಾತಿನಲ್ಲಿ ಶ್ರದ್ಧೆ ಹುಟ್ಟುವುದಿಲ್ಲ?

## ''ಅಧ್ಯಾತ್ಮಬಾಂಧವ್ಯ ಮುಕ್ತಿಯ ತನಕ''

ಸ್ವಬಂಧುಷು ಕೃತಃ ಸ್ನೇಹಃ
ಸ್ಯಾದ್ಧಿ ರಾಗಾದಿದೋಷತಃ ।
ಪಾಂಥೇಷು ತು ಕೃತಃ ಸ್ನೇಹೋ
ಧರ್ಮಂ ಶ್ರುತ್ವೈವ ತನ್ಮುಖಾತ್ ॥

ಬಂಧುಗಳಲ್ಲಿನ ಪ್ರೀತಿ ರಾಗದಿಂದ ಜನ್ಯ. ಅಧ್ಯಾತ್ಮ ಬಂಧುಗಳಲ್ಲಿನ ಪ್ರೀತಿ ಧರ್ಮಜನ್ಯ. ಬಂಧುಪ್ರೀತಿ ಮಸಣದ ತನಕ. ಅಧ್ಯಾತ್ಮ ಪ್ರೀತಿ ಮುಕುತಿಯ ತನಕ.





# ಫಲಸೌರಭಮ್ - ಸಂಪುಟ - ೧೦

## ವಿಷಯಾನುಕ್ರಮಣಿಕೆ



**ಪರಿಶಿಷ್ಟ :** ''ಫಲಸೌರಭೋದಾಹೃತಸ್ವಾರಸಿಕಯುಕ್ತಯಃ''

''ಶ್ರೀಸ್ವಾಪ್ನವೃಂದಾವನಾಖ್ಯಾನಗತಶ್ರುತಯಃ''

''ಫಲಸೌರಭ ಮತ್ತು ಋಜುತ್ವಚಿಂತನೆ''

''ಯುಕ್ತಿಮಲ್ಲಿಕಾ ಮತ್ತು ಶ್ರೀ ವಿಶ್ವವಲ್ಲಭತೀರ್ಥರು''

''ಯುಕ್ತಿಮಲ್ಲಿಕಾದಿಂದ ಉಂಟಾದ ಫಲಗಳು''

—o—

॥ ಶ್ರೀಮದ್‌ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾಯನಮಃ ॥

ತಪ್ತಮುದ್ರಾಧಾರಣೆಯ ಮಹತ್ವ -

ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ।
ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾ ॥
ಇತಿ ಶ್ರುತಿಃ ಪ್ರಾಕ್ ಪವಿತ್ರನಾಮ್ನಾऽऽಹೂಯ ಪುನಶ್ಚ ತತ್ ।
ಸಹಸ್ರಧಾರಂ ಯತ್ ಪ್ರಾಹ ತತ್ ಸಹಸ್ರಾರಮೇವ ತತ್ ॥ ೫೭೮ ॥

**ಅರ್ಥ–** ಯೇನ = ಯಾವ, ಪವಿತ್ರೇಣ = ಸುದರ್ಶನದಿಂದ, ದೇವಾಃ = ದೇವತೆಗಳು, ಆತ್ಮಾನಂ = ತಮ್ಮ ದೇಹವನ್ನು , ಸದಾ = ಯಾವಾಗಲೂ, ಪುನತೇ = ಪವಿತ್ರೀಕರಿಸಿಕೊಳ್ಳುವರೋ, ತೇನ = ಅಂತಹ ಮಹಿಮೆಯುಳ್ಳ, ಸಹಸ್ರಧಾರೇಣ = ಸುದರ್ಶನಚಕ್ರದಿಂದ, ಪಾವಮಾನ್ಯಃ = ಪವಮಾನರೂಪೀ ಗುರುಗಳು, ಮಾ = ನನ್ನನ್ನು, ಪುನಂತು = ಪವಿತ್ರೀಕರಿಸಲಿ. ಇತಿ ಶ್ರುತಿಃ = ಎಂಬ ವೇದಮಂತ್ರವು, ಪ್ರಾಕ್ ಪವಿತ್ರನಾಮ್ನಾ = ಮೊದಲು ಪವಿತ್ರ ಎಂಬ ಹೆಸರಿನಿದಂ, ಆಹೂಯ = ಕರೆದು, ಪುನಶ್ಚ ತತ್ = ಮತ್ತೆ ಅದನ್ನು, ಸಹಸ್ರಧಾರಂ ಯತ್ ಪ್ರಾಹ = ಸಹಸ್ರಧಾರ ಎಂಬುದಾಗಿ ಏನು ಕರೆದಿದೆಯೋ, ತತ್ = ಆದ್ದರಿಂದ ತತ್ = ಅದು, ಸಹಸ್ರಧಾರಂ ಏವ = ಸುದರ್ಶನಚಕ್ರವೇ.

**ಅನುವಾದ–** ಇಲ್ಲಿ ಮೊದಲಿನ ಎರಡು ಪಂಕ್ತಿಗಳು ಪವಮಾನ ಖಿಲದ ಮಂತ್ರವು. ಅದರಲ್ಲಿ ಮೊದಲಿನ ಸಾಲಿನ ಪವಿತ್ರ ಶಬ್ದವು ಎರಡನೆಯ ಸಾಲಿನ ಸಹಸ್ರಧಾರ ಪದದಿಂದ ಅನ್ವಿತವಾಗುತ್ತದೆ. ಹೇಗೆಂದರೆ-

ಯಾವ ಸುದರ್ಶನಚಕ್ರದಿಂದ ದೇವತೆಗಳು ಯಾವಾಗಲೂ ತಮ್ಮನ್ನು ಪವಿತ್ರೀರಿಸಿಕೊಳ್ಳವರೋ ಅಂತಹ ಸುದರ್ಶನದಿಂದ ಪವಮಾನಗುರು ಮಧ್ವರು ನನ್ನನ್ನು ಪವಿತ್ರನನ್ನಾಗಿ ಮಾಡಲಿ ಎಂಬ ಈ ಶ್ರುತಿಯು ಮೊದಲು ಪವಿತ್ರ ಎಂಬ ಹೆಸರಿನಿಂದ ಕರೆದು ಪುನಃ ಮುಂದಿನ ಪಂಕ್ತಿಯಲ್ಲಿ ಸಹಸ್ರಧಾರ ಎಂದು ಹೇಳಿದ್ದರಿಂದ ಪೂರ್ವೋಕ್ತ ಪವಿತ್ರಂ ಎಂಬುದು ಸಹಸ್ರಧಾರವೇ ಆದ ಸುದರ್ಶನಚಕ್ರವೇ.

**ಭಾವವಿಲಾಸಿನೀ–** ಇದಾನೀಂ ತಪ್ತಸುದರ್ಶನಧಾರಣಸ್ಯಾಪಿ ಶ್ರುತಿಮೂಲತಾಂ ದರ್ಶಯತಿ ॥ **ಯೇನೇತಿ** ॥ ಅನೇನ ''ಯೇನ ದೇವಾಃ ಪವಿತ್ರೇಣ ಆತ್ಮಾನಂ ಪುನತೇ ಸದಾ । ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾ । ಪ್ರಾಜಾಪತ್ಯಂ ಪವಿತ್ರಂ ಶತೋದ್ಯಾಮಂ ಹಿರಣ್ಮಯಮ್ । ತೇನ ಬ್ರಹ್ಮ ವಿದೋ ವಯಂ ಪೂಯಂ ಬ್ರಹ್ಮಪುನೀಮಹ'' ಇತಿ ಶ್ರುತಿದ್ವಯಂ ಗೃಹ್ಣಾತಿ । ಅಸ್ಯಾಯಮರ್ಥಃ । ದೇವಾಃ ಬ್ರಹ್ಮಾದಿದೇವಾಃ ಯೇನ । ಪವಿತ್ರಾಖ್ಯತಪ್ತ-ಸುದರ್ಶನೇನ । ಉತ್ತರಾರ್ಧೇ ತೇನೇತಿ ಪೂರ್ವೋಕ್ತಸುದರ್ಶನಧಾರಣಮೇವ ಪರಾಮೃಶ್ಯ ಪಾವಮಾನ್ಯಃ ಪುನಂತ್ವಿತಿ ತಸ್ಯೈವ ಗುರುಕರಕಮಲೇನ ಪ್ರಾರ್ಥಿತತ್ವಾದುಭಯತ್ರಾಪಿ ತಪ್ತ-ಸುದರ್ಶನಧಾರಣಮೇವ ಗಮ್ಯತೇ । ಗೋಪೀಚಂದನಾದಿನಾ ಸ್ವಕರೇಣ ಕ್ರಿಯಮಾಣಾ ತಪ್ತಚಕ್ರಧಾರಣಸ್ಯ ಪರಹಸ್ತಾನಪೇಕ್ಷಣಾತ್ । ಆತ್ಮಾನಂ ಸ್ವದೇಹಂ ಮನಶ್ಚ ಸದಾ ನಿಯಮೇನ ಶ್ರವಣದ್ವಾದಶ್ಯಾದಿಪುಣ್ಯದಿನೇಷು ಪುನತೇ ಪವಿತ್ರೀ ಕುರ್ವಂತಿ । ಗೋಪೀಚಂದನಾದಿನಾ ಪ್ರತಿದಿನಂ ಕ್ರಿಯಮಾಣಚಕ್ರಧಾರಣಸ್ಯ ಸೂಚನಾಯಾಪಿ ಸದೇತ್ಯುಕ್ತಮ್ । ತೇನ ಸಹಸ್ರಧಾರೇಣ ಸಹಸ್ರಂ ಧಾರಾಃ ಅರಾಗ್ರಧಾರಾ ಯಸ್ಯ ತೇನ । ಶತಧಾರಾಖ್ಯವಜ್ರಂ ಪರಿತಃ ಕ್ರೂರಶತಧಾರವತ್ ಷಟ್ಕೋಣಾಕಾರಚಕ್ರಂ ಪರಿತಃ ದಲಾಕಾರೇಣ ಸ್ಥಿತಸಹಸ್ರಾರೇಷು ಸಹಸ್ರಸಂಖ್ಯಾಕಕ್ರೂರಾಗ್ರ-ಧಾರಾಯಾಃ ಸತ್ತ್ವಾತ್ ವಜ್ರಸ್ಯೈವ ಶತಧಾರತ್ವವತ್ ಚಕ್ರಸ್ಯೈವ ಸಹಸ್ರಧಾರತ್ವಮ್ । ಪೂರ್ವೋಕ್ತಪವಿತ್ರಪದಸ್ಯಾನ್ಯಾರ್ಥತ್ವಶಂಕಾನಿರಾಸಾಯೋತ್ತರಾರ್ಧೇ ಚಕ್ರಾಸಾಧಾರಣ-ಸಹಸ್ರಧಾರಾಪದೇನ ಪರಾಮರ್ಶಃ । ಉಪಲಕ್ಷಣಂ ಚೈತತ್ । ಸೋಮರಸಶೋಧಕದಶಾ-ಪವಿತ್ರಸ್ಯ ಸದಾ ದೇವಾಂಗಪವಿತ್ರೀಕರಣಾ ಸಂಭವಾಚ್ಚ ಸುದರ್ಶನಮೇವೇದಂ ಪವಿತ್ರಮಿತ್ಯಪಿ ದ್ರಷ್ಟವ್ಯಮ್ । ಅತೋ ನಿರವಕಾಶೇಯಂ ಶ್ರುತಿಃ । ಪಾವಮಾನ್ಯಃ ಪವಮಾನ ಸಂಬಂಧಿನ್ಯಃ ಯುಗೇ ಯುಗೇ ಅವತಾರಾನ್ಮಧ್ವಚಾರ್ಯಸ್ಯ ತನವ ಇತ್ಯರ್ಥಃ । ಮಾ ಮಾಂ ಪುನಂತು ಭುಜಯೋಸ್ತಪ್ತಮುದ್ರಾಧಾರಣಂ ಕೃತ್ವಾ ಪವಿತ್ರೀಕುರ್ವಂತು ಇತ್ಯರ್ಥಃ । ಉತ್ತರಶ್ರುತ್ಯಾಂ ದಶಾಪವಿತ್ರಾವ್ಯಾವೃತ್ತ್ಯರ್ಥಂ ತಸ್ಯೈವ ಪವಿತ್ರಸ್ಯ ಮಹಿಮೋಚ್ಯತೇ । ಪ್ರಾಜಾಪತ್ಯಂ ಪ್ರಜಾನಾಮಧಿಪತೇರ್ನಾರಾಯಣಸ್ಯ ಸಂಬಂಧಿ ಪ್ರಾಗ್ವಿಷ್ಣುನಾ ಸ್ವಕರೇಣೈವ ಬ್ರಹ್ಮಭುಜೇ ಅಂಕನಾದ್ವಾ ಪ್ರಾಜಾಪತ್ಯಮ್ । ಶತೋದ್ಯಾಮಂ ಶತಶಃ ಉದ್ಯಾಮಃ ಪ್ರಯೋಗಕಾಲೇ ಭ್ರಮಣರೂಪಸನ್ನಾಹೋ ಯಸ್ಯ ತತ್ । ಹಿರಣ್ಮಯಂ ಸೌವರ್ಣಮ್ । ಇದಂ ವಿಶೇಷಣತ್ರಯಂ ಸುದರ್ಶನಸ್ಯೈವ ಶೋಭತೇ ನ ತು ದಶಾಪವಿತ್ರಸ್ಯ ನ ವಾಸೋಮ ಲತಾಯಾಃ । ತೇನ ಅಸ್ಮದ್ಭುಜೇಂಕಿತತಪ್ತಸೌವರ್ಣಸುದರ್ಶನ- ಚಕ್ರೇಣ । ಸುವರ್ಣೇನ ಚಕ್ರಕರಣಸ್ಯ ಆಗಮಿಕತ್ವಾತ್ ಬ್ರಹ್ಮವಿದಃ ''ಅತಪ್ತತನೂರ್ನತದಾಮೋ ಅಶ್ನುತ'' ಇತ್ಯುಕರಣೇ ಪ್ರತ್ಯವಾಯಪ್ರತಿ-ಪಾದಕವೇದವಾಕ್ಯವಿದಃ ವಯಂ ಪೂತಂ ಸ್ವಭಾವತ ಏತ ಪವಿತ್ರಂ ಬ್ರಹ್ಮವೇದಂ ಪುನೀಮಹೇ ವಿಷ್ಣುಚಕ್ರಾಂಕರಹಿತೇನ ವಿಪ್ರೇಣ ಪಠಿತವೇದಸ್ಯ ಶೂದ್ರಸ್ಪೃಷ್ಟಬ್ರಾಹ್ಮಣವತ್ ಅಪವಿತ್ರತ್ವಾತ್ ತಪ್ತಚಕ್ರಾಂಕನಂ ಕೃತ್ವಾಸ್ಮತ್ ಪಠಿತವೇದಂ ಪವಿತ್ರೀಕುರ್ಮ ಇತ್ಯರ್ಥಃ । ಇಮಮೇವಾರ್ಥಂ

**ಮನಸಿ ನಿಧಾಯಹ – ಇತಿ ಶ್ರುತಿರಿತಿ ॥ ಯದ್ಯಸ್ಮಾತ್ । ತತ್ ತಸ್ಮಾತ್ । ತತ್ ಪೂರ್ವಾರ್ಧೋಕ್ತಂ ಪವಿತ್ರಮ್ । ವಜ್ರಸ್ಯ ಶತಧಾರಶಬ್ದವತ್ ಸಹಸ್ರಧಾರಸ್ಯೈವ ಸಹಸ್ರಧಾರತ್ವೌಚಿತ್ಯಾದಿತಿ ಭಾವಃ ॥ ೫೭೮ ॥**

**ವಿವರಣೆ–** ಈಗ ತಪ್ತಸುದರ್ಶನಧಾರಣವೂ ಕೂಡ ಶ್ರುತಿಮೂಲವುಳ್ಳದ್ದು ಎಂದು ತೋರಿಸಿಕೊಡುವರು - ಯೇನ ಎಂಬ ಮಂತ್ರದಿಂದ

**ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ।**
**ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಂ ॥**

**ಪ್ರಾಜಾಪತ್ಯಂ ಪವಿತ್ರಂ ಶತೋದ್ಯಾಮಂ ಹಿರಣ್ಮಯಂ ।**
**ತೇನ ಬ್ರಹ್ಮವಿದೋ ವಯಂ ಪೂತಂ ಬ್ರಹ್ಮ ಪುನೀಮಹೇ ॥**

ಎಂಬ ಎರಡು ಶ್ರುತಿಗಳನ್ನು ತೆಗೆದುಕೊಂಡಿದ್ದಾರೆ. ಇವುಗಳ ಅರ್ಥ ಈ ರೀತಿ ಇದೆ-

ದೇವಾಃ ಬ್ರಹ್ಮಾದಿದೇವತೆಗಳು, ಪವಿತ್ರ ಎಂಬ ಹೆಸರುಳ್ಳ ತಪ್ತಸುದರ್ಶನದಿಂದ ತಮ್ಮ ದೇಹವನ್ನು ಪವಿತ್ರೀಕರಿಸುತ್ತಾರೆ. ಉತ್ತರಾರ್ಧದಲ್ಲಿ ತೇನ ಎಂದು ಪೂರ್ವೋಕ್ತ ಸುದರ್ಶನಧಾರಣೆಯನ್ನೇ ಪರಾಮರ್ಶಮಾಡಿ ಪಾವಮಾನ್ಯಃ ಪುನಂತು ಎಂದು ಅದನ್ನೇ ಗುರುಗಳ ಕರಕಮಲದಿಂದ ಪ್ರಾರ್ಥಿಸಿರುವುದರಿಂದ ಎರಡೂ ಕಡೆಯಲ್ಲೂ ತಪ್ತಸುದರ್ಶನ ಧಾರಣೆಯನ್ನೇ ಹೇಳಿದ್ದಾರೆಂದು ತಿಳಿದುಬರುತ್ತದೆ. ಗೋಪೀಚಂದನಾದಿಗಳಿಂದ ತಮ್ಮ ಸ್ವಂತಕೈಯಿಂದಲೇ ಮಾಡಿಕೊಳ್ಳುವ ಶೀತ(ಅತಪ್ತ) ಚಕ್ರಧಾರಣೆಗೆ ಇನ್ನೊಬ್ಬರ ಹಸ್ತದಿಂದ ಧಾರಣೆಯು ಬೇಕಾಗಿಲ್ಲವಷ್ಟೇ! ಆತ್ಮಾನಂ ಎಂದರೆ ತಮ್ಮ ದೇಹವನ್ನು ಮತ್ತು ಮನಸ್ಸನ್ನು, ಸದಾ ಎಂದರೆ ನಿಯಮೇನ (ತಪ್ಪದೇ) ಶ್ರವಣದ್ವಾದಶಿ ಮುಂತಾದ ಪುಣ್ಯದಿನಗಳಲ್ಲಿ ಪುನತೇ ಪವಿತ್ರಗೊಳಿಸಿಕೊಳ್ಳುವರು. ಗೋಪೀಚಂದನಾದಿಗಳಿಂದ ಪ್ರತಿದಿನವೂ ಚಕ್ರಧಾರಣೆ ಮಾಡಿಕೊಳ್ಳುವುದರ ಸೂಚನಾರ್ಥವಾಗಿ ಸದಾ ಎಂದು ಹೇಳಲಾಗಿದೆ. ತೇನ ಸಹಸ್ರಧಾರೇಣ ಎಂದರೆ ಸಾವಿರ ಧಾರೆಗಳು ಮೊನಚಾದ ಅಗ್ರಭಾಗವುಳ್ಳವುಗಳು. ಅದರಿಂದ ಎಂದರ್ಥ. ಶತಧಾರ ಎಂಬ ಹೆಸರುಳ್ಳ ವಜ್ರಕ್ಕೆ ಯಾವ ರೀತಿ ಸುತ್ತಲೂ ಚೂಪಾದ ತುದಿಗಳಿರುತ್ತವೆಯೋ ಅದರಂತೆ ಚಕ್ರವು ಷಟ್‌ಕೋನಾಕೃತಿಯುಳ್ಳದ್ದಾಗಿದ್ದು ಅದರ ಸುತ್ತಲೂ ದಳದ ಆಕಾರದಿಂದಿರುವ ಸಹಸ್ರತುದಿಗಳು (ಅರಗಳು) ಮೊನಚಾಗಿ ಸಾವಿರ ಸಂಖ್ಯೆಯಲ್ಲಿರುವುದರಿಂದ, ವಜ್ರಕ್ಕೇ ಶತಧಾರ ಎನ್ನುವಂತೆ ಚಕ್ರಕ್ಕೂ ಸಹಸ್ರಧಾರ ಎನ್ನುವರು. ಹಿಂದೆ ಹೇಳಿದ ಪವಿತ್ರ ಪದಕ್ಕೆ ಬೇರೆ ಅರ್ಥಮಾಡಬಹುದಾದ ಶಂಕೆಯನ್ನು ನಿವಾರಿಸಲು ಉತ್ತರಾರ್ಧದಲ್ಲಿ ಚಕ್ರದ ಅಸಾಧಾರಣ ಲಕ್ಷಣವಾದ ಸಹಸ್ರಧಾರ ಪದದಿಂದ ಪವಿತ್ರ ಪದಾರ್ಥದ ಪರಾಮರ್ಶೆ ಮಾಡಲಾಗಿದೆ. ಇದು ಉಪಲಕ್ಷಣವು. ಸೋಮರಸವನ್ನು ಸೋಸುವ ದಶಾಪವಿತ್ರವು

(ಬಟ್ಟೆಯ ತುಂಡು) ಯಾವಾಗಲೂ ದೇವತೆಗಳ ಶರೀರವನ್ನು ಪವಿತ್ರಮಾಡಲಾರದಷ್ಟೇ! ಪವಿತ್ರಮಾಡುವುದು ಅಸಂಭವವಾದ್ದರಿಂದ ಇಲ್ಲಿ ಪವಿತ್ರ ಎಂಬುದು ಸುದರ್ಶನವೇ ಎಂದು ತಿಳಿಯಬೇಕು. ಆದ್ದರಿಂದ ಈ ಶ್ರುತಿಯು ನಿರವಕಾಶವಾದುದು. (ಬೇರೆ ಅರ್ಥ ಮಾಡಲು ಅವಕಾಶವಿಲ್ಲದ್ದು) ಶ್ರುತಿಯಲ್ಲಿನ ಪಾವಮಾನ್ಯಃ ಎಂದರೆ ಪವಮಾನಸಂಬಂಧಿ ಯಾದ ಮಧ್ವಾಚಾರ್ಯರು ಪ್ರತಿಯುಗದಲ್ಲಿ ಅವತಾರಮಾಡುವುದರಿಂದ ಮಧ್ವಾಚಾರ್ಯರ ಶರೀರಗಳು ಎಂದರ್ಥ. ಮಾ ಎಂದರೆ ಮಾಂ - ನನ್ನನ್ನು ಪುನಂತು - ಎರಡೂ ಭುಜಗಳಿಗೆ ತಪ್ತಮುದ್ರೆಯನ್ನು ಧಾರಣಮಾಡಿಸಿ ಪವಿತ್ರನನ್ನಾಗಿ ಮಾಡಲಿ ಎಂದರ್ಥ. (ತಪ್ತಮುದ್ರಾಕೊಡುವ ಇಂದಿನ ಯತಿಗಳಲ್ಲೂ ಶ್ರೀಮಧ್ವರ ಸನ್ನಿಧಾನವಿದ್ದು ಅವರೇ ನಮ್ಮನ್ನು ಪವಿತ್ರರನ್ನಾಗಿ ಮಾಡುವರೆಂಬ ಅನುಸಂಧಾನವಿರುತ್ತದೆ.)

ಮುಂದಿನ ಶ್ರುತಿಯಲ್ಲಿ (ಪ್ರಾಜಾಪತ್ಯಂ ಪವಿತ್ರಂ ಎಂಬಲ್ಲಿ) ಈ ದಶಾ ಪವಿತ್ರದ ವ್ಯಾವೃತ್ತಿಗೋಸ್ಕರವೇ ಅದೇ (ಹಿಂದಿನ ಚಕ್ರ ಎಂಬರ್ಥದಲ್ಲಿ ಬಳಸಲ್ಪಟ್ಟ) ಪವಿತ್ರದ ಮಹಿಮೆಯು ಹೇಳಲ್ಪಟ್ಟಿದೆ. ಪ್ರಾಜಾಪತ್ಯಂ ಎಂದರೆ ಪ್ರಜೆಗಳಿಗೆ ಅಧಿಪತಿಯಾದ ನಾರಾಯಣನ ಸಂಬಂಧಿ (ವಿಷ್ಣುವಿನ ಚಕ್ರ ಎಂದರ್ಥ) ಅಥವಾ ಹಿಂದಕ್ಕೆ ವಿಷ್ಣುವು ತನ್ನ ಕೈಯಿಂದಲೇ ಬ್ರಹ್ಮದೇವರಿಗೆ ಮುದ್ರಾಂಕನಮಾಡಿದ್ದರಿಂದ ಚಕ್ರಕ್ಕೆ ಪ್ರಾಜಾಪತ್ಯವೆನ್ನುವರು. ಶತೋದ್ಯಾಮಂ ಎಂದರೆ ನೂರಾರು ಉದ್ಯಮವುಳ್ಳ (ಅದನ್ನು ಪ್ರಯೋಗಿಸುವಾಗ ವೇಗವಾಗಿ ತಿರುಗುವ ಸನ್ನಾಹವುಳ್ಳದ್ದು) ಹಿರಣ್ಮಯಂ - ಬಂಗಾರದಿಂದ ಮಾಡಲ್ಪಟ್ಟದ್ದು. ಹೀಗೆ ಈ ಮೂರು ವಿಶೇಷಣಗಳು (ಪ್ರಾಜಾಪತ್ಯಂ, ಶತೋದ್ಯಾಮಂ, ಹಿರಣ್ಮಯಂ) ಸುದರ್ಶನಚಕ್ರಕ್ಕೇನೇ ಶೋಭಿಸುವವೇ ಹೊರತು ದಶಾಪವಿತ್ರಕ್ಕಲ್ಲ. ತೇನ ಎಂದರೆ ನಮ್ಮ ಭುಜದಲ್ಲಿ ಅಂಕಿತವಾದ ತಪ್ತ (ಕಾಯ್ದ) ಬಂಗಾರದ ಸುದರ್ಶನಚಕ್ರದಿಂದ, ಚಕ್ರವನ್ನು ಬಂಗಾರದಿಂದ ಮಾಡಬೇಕೆಂಬುದು ಆಗಮಗಳಲ್ಲಿರುವುದರಿಂದ, ಬ್ರಹ್ಮವಿದೋ ವಯಂ ಎಂದರೆ ಬ್ರಹ್ಮಜ್ಞಾನಿಗಳಾದ ಅತಪ್ತತನೂರ್ನತದಾಮೋ ಅಶ್ನುತೇ ಎಂದು ತಪ್ತಮುದ್ರಾಧಾರಣೆ ಮಾಡಿಸಿಕೊಳ್ಳದಿದ್ದರೆ ಪ್ರತ್ಯವಾಯವನ್ನು ಹೇಳುವ ವೇದವಾಕ್ಯವನ್ನು ತಿಳಿದವರಾದ ನಾವು ಪೂತಂ ಬ್ರಹ್ಮ ಸ್ವಭಾವತಃ ಪವಿತ್ರವಾದ ವೇದವನ್ನು ಪುನೀಮಹೇ - ವಿಷ್ಣುಚಕ್ರಾಂಕರಹಿತಬ್ರಾಹ್ಮಣನಿಂದ ಪಠಿತವಾದ ವೇದವು ಶೂದ್ರನಿಂದ ಸ್ಪರ್ಶಿಸಲ್ಪಟ್ಟ ಬ್ರಾಹ್ಮಣನಂತೆ ಅಪವಿತ್ರ-ವಾಗುವುದರಿಂದ ತಪ್ತಮುದ್ರಾಧಾರಣೆಯನ್ನು ಮಾಡಿಕೊಂಡು ನಮ್ಮಿಂದ ಪಠಿಸಲ್ಪಟ್ಟ ವೇದವನ್ನು ಪವಿತ್ರವನ್ನಾಗಿ ಮಾಡುವೆವು. (ವೇದದ ಪಾವಿತ್ರ್ಯವನ್ನು ಕಾಪಾಡಿಕೊಳ್ಳುವೆವು.) ವಿಷ್ಣುಚಕ್ರದ ಅಂಕನದಿಂದ ರಹಿತನಾದ ಬ್ರಾಹ್ಮಣನಿಂದ ಪಠಿತವಾದ ವೇದವು ಶೂದ್ರಸ್ಪರ್ಶವಾದ ಬ್ರಾಹ್ಮಣನಂತೆ ಅಪವಿತ್ರವಾಗುವುದರಿಂದ, ತಪ್ತಚಕ್ರಾಂಕನವನ್ನು ಮಾಡಿಕೊಂಡು ನಾವು ಪಠಿಸುವ ವೇದವನ್ನು ಪವಿತ್ರ ಮಾಡಿಕೊಳ್ಳುತ್ತೇವೆ ಎಂದರ್ಥ. ಇದೇ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳುತ್ತಾರೆ - ಇತಿ ಶ್ರುತಿಃ ಎಂದು. ಯಾವ

ಕಾರಣದಿಂದ ಆ ಶ್ರುತ್ಯರ್ಥವು ಹೀಗಿದೆಯೋ ಆದ್ದರಿಂದಲೇ ಶ್ರುತಿಯ ಪೂರ್ವಾರ್ಧದಲ್ಲಿ ಹೇಳಿದ ಪವಿತ್ರಶಬ್ದವು ಸುದರ್ಶನಚಕ್ರವಾಚಕವೇ ಸರಿ. ಯಾವ ರೀತಿ ವಜ್ರಕ್ಕೆ ಶತಧಾರ ಎಂಬ. ಶಬ್ದವನ್ನು ಬಳಸುವರೋ ಹಾಗೆಯೇ ಸಹಸ್ರಧಾರೆಗೆ ಸಹಸ್ರಧಾರವೆಂದೇ ಅರ್ಥಮಾಡುವುದು ಉಚಿತವಾಗಿದೆ ಎಂದು ಅಭಿಪ್ರಾಯ.

ಈ ಶ್ರುತಿಗಳಲ್ಲಿ ದೇವತೆಗಳೂ ಕೂಡ ತಪ್ತಸುದರ್ಶನಚಕ್ರಧಾರಣೆಯನ್ನು ಮಾಡಿಕೊಂಡು ತಮ್ಮನ್ನು ಪವಿತ್ರೀಕರಿಸಿಕೊಳ್ಳುವವರಾದ್ದರಿಂದ, ನಮ್ಮನ್ನೂ ಕೂಡ ಪವಮಾನರೂಪಿ ಮಧ್ವರ ರೂಪಗಳು ಪವಿತ್ರೀಕರಿಸಲಿ. ಪೂರ್ವದಲ್ಲಿ ಶ್ರೀಮನ್ನಾರಾಯಣನೇ ಬ್ರಹ್ಮದೇವರಿಗೆ ತಪ್ತಸುದರ್ಶನಾಂಕವನ್ನು ಮಾಡಿದನು. ಆ ಚಕ್ರವು ನೂರಾರು ಉದ್ಯಮವುಳ್ಳದ್ದು (ವೇಗವಾಗಿ ತಿರುಗುವಂತಹದ್ದು). ಬಂಗಾರದಿಂದ ಮಾಡಲ್ಪಟ್ಟದ್ದು. ಆದರಿಂದ ನಮ್ಮನ್ನು ಶುದ್ಧರನ್ನಾಗಿ ಮಾಡಿಕೊಂಡು ನಾವು ಶುದ್ಧವಾದ ವೇದದ ಅಧ್ಯಯನ ಮಾಡುವೆವು ಎಂಬರ್ಥ ಇದೆ.

ಇಲ್ಲಿ ಇತರರು ಪವಿತ್ರಶಬ್ದಕ್ಕೆ ಯಜ್ಞದಲ್ಲಿ ಸೋಮರಸವನ್ನು ಸೋಸುವುದಕ್ಕಾಗಿ ಬಳಸುವ ಬಟ್ಟೆ ಎಂದರ್ಥವನ್ನು ಮಾಡಿದ್ದಾರೆ. ರಾಜರು ಇದನ್ನು ಸಯುಕ್ತಿಕವಾಗಿ ಖಂಡಿಸಿದ್ದಾರೆ.

ತಮ್ಮ ವೈಕುಂಠವರ್ಣನೆ ಅಥವಾ ತತ್ತ್ವಸಾರದಲ್ಲಿ -

**ಸೋಮರಸವ ಶೋಧಿಸುವ ಲೌಕಿಕ ವಸ**
**ಕ್ಕಾಮಹಾ ಚಕ್ರಸನ್ನಿಧಿಯು ।**
**ಧೀಮಂತರ್ ಮಾಡಿಸಬೇಕೆಂದು ಪವಿತ್ರ**
**ನಾಮಶ್ರುತಿಯಿಂದ ಮಂತ್ರಿಸುವರು ॥೧೮॥ ಸ್ಥಿತಿಸಂಧಿ.**
**ಪಾವನವ ಮಾಡಿಸುವ ಶಕ್ತಿ ನಮ್ಮ ಶ್ರೀ**
**ದೇವಯರಸನ ಚಕ್ರಕೆಂಬುದನು ।**
**ಭಾವಜ್ಞರಿಗೆ ತೋರಿಸಲು ಹರಿಚಕ್ರವನೇ**
**ಪವಿತ್ರನಾಮದಿಂ ಶ್ರುತಿ ಕರೆಯಿತು ॥೧೯॥ ಸ್ಥಿತಿಸಂಧಿ.**

(ಯೇನ ದೇವಾಃ ಶ್ರುತಿಯ ಪೂರ್ವಾರ್ಧದ ಅರ್ಥವನ್ನು ಹೇಳುತ್ತಾರೆ - ದೇವಾಶ್ಚ ಎಂದು)

**ದೇವಾಶ್ಚ ಯೇನ ಚಕ್ರೇಣ ಲಾಂಛಿತೇನ ಭುಜೇ ಸದಾ ।**
**ಸ್ವಸ್ವದೇಹಂ ಮನಶ್ಚಾಪಿ ಪುನತೇ ವೈಷ್ಣವೋತ್ತಮಾಃ ॥ ೫೭೯ ॥**

**ಅರ್ಥ--** ವೈಷ್ಣವೋತ್ತಮಾಃ= ಉತ್ತಮವಿಷ್ಣುಭಕ್ತರಾದ, ದೇವಾಃ ಚ= ಬ್ರಹ್ಮಾದಿದೇವತೆಗಳು, ಭುಜೇ= ಬಾಹುವಿನಲ್ಲಿ ಸದಾ= ಯಾವಾಗಲೂ, ಲಾಂಛಿತೇನ=

ಚಿಹ್ನಿತವಾದ, ಯೇನ ಚಕ್ರೇಣ= ಯಾವ ಚಕ್ರದಿಂದ, ಸ್ವಸ್ವದೇಹಂ = ತಮ್ಮ ದೇಹವನ್ನು ಚ= ಮತ್ತು, ಮನಃ ಅಪಿ= ಮನಸ್ಸನ್ನೂ ಕೂಡ, ಪುನತೇ= ಪವಿತ್ರೀಕರಿಸಿಕೊಳ್ಳುವರೋ (ತೇನ ಇತಿ ಉತ್ತರತ್ರ ಸಂಬಂಧಃ- ಅಂತಹ ಚಕ್ರದಿಂದ ಮಧ್ವರು ನನ್ನನ್ನು ಪವಿತ್ರೀಕರಿಸಲಿ ಎಂದು ಮುಂದಿನ ಶ್ಲೋಕದಿಂದ ಅನ್ವಯ)

**ಅನುವಾದ–** ಸುದರ್ಶನಚಕ್ರದಿಂದ ಅಂಕಿತವನ್ನು ಮಾಡಿಸಿಕೊಳ್ಳುವುದು ಶರೀರ-ಮನಸ್ಸುಗಳನ್ನು ಪವಿತ್ರವನ್ನಾಗಿ ಮಾಡುವುದೆಂಬುದನ್ನು ಪ್ರತಿಪಾದಿಸಲು ಆ ಚಕ್ರದ ಮಹತ್ವವನ್ನು ಹೇಳುತ್ತಾರೆ.

ವಿಷ್ಣುಭಕ್ತಾಗ್ರೇಸರರಾದ ಬ್ರಹ್ಮಾದಿದೇವತೆಗಳು ಯಾವ ಚಕ್ರದಿಂದ ತಮ್ಮ ತಮ್ಮ ಭುಜಗಳಲ್ಲಿ ಧರಿಸಿಕೊಂಡು ತಮ್ಮನ್ನು ಪವಿತ್ರರನ್ನಾಗಿ ಮಾಡಿಕೊಳ್ಳುವರೋ (ತಮ್ಮ ದೇಹವನ್ನು ಮತ್ತು ಮನಸ್ಸನ್ನು) ಅಂತಹ ತಪ್ತಸುದರ್ಶನಚಕ್ರಮುದ್ರಾಧಾರಣೆಯನ್ನು ಮಧ್ವರೂಪೀಗುರುಗಳು ನನಗೆ ಮಾಡಿ ನನ್ನನ್ನು ಶುದ್ಧನನ್ನಾಗಿ ಮಾಡಲಿ ಎಂಬ ಆಶಯವು ಮುಂದಿನ ಶ್ಲೋಕದಿಂದ ಅನ್ವಯಪೂರ್ತಿಯಾಗುತ್ತದೆ.

**ಭಾವವಿಲಾಸಿನೀ–** ಪೂರ್ವಾರ್ಧಸ್ಯಾರ್ಥಮಾಹ – **ದೇವಶ್ಚೇತಿ** ॥ ಆತ್ಮಪದಸ್ಯ ಮನೋ-ವಾಚಿತ್ವಾದ್ದೇಹವಾಚಿತ್ವಾಚ್ಚ ದೇಹಂ ಮನಶ್ಚಾಪೀತ್ಯುಕ್ತಮ್ ॥ ೫೭೯ ॥

**ವಿವರಣೆ–** ಪೂರ್ವಾರ್ಧದ ಅರ್ಥವನ್ನು ಹೇಳುತ್ತಾರೆ - ದೇವಾಶ್ಚ ಎಂದು. ಶ್ರುತಿಯಲ್ಲಿನ ಆತ್ಮ ಪದವು ಮನಸ್ಸು ಮತ್ತು ದೇಹ ಎರಡಕ್ಕೂ ವಾಚಕವಾದ್ದರಿಂದ ಇಲ್ಲಿ ದೇಹಂ ಮನಶ್ಚಾಪಿ ಎಂದು ಹೇಳಲಾಗಿದೆ.

ಯೇನ ದೇವಾಃ ಎಂಬುದರ ಪೂರ್ವಾರ್ಧದ ವಿವರಣೆ ಇದು. ವಿಷ್ಣುಭಕ್ತಾಗ್ರೇಸರರಾದ ದೇವತೆಗಳು ತಮ್ಮ ಭುಜಗಳಿಗೆ ತಪ್ತಸುದರ್ಶನಮುದ್ರಾಧಾರಣೆ ಮಾಡಿಸಿಕೊಂಡು ತಮ್ಮ ದೇಹ ಹಾಗೂ ಮನಸ್ಸನ್ನು ಪವಿತ್ರೀಕರಿಸಿಕೊಳ್ಳುವರು. ಉತ್ತರಾರ್ಧದ ಅರ್ಥವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

**ತೇನ ಚಕ್ರೇಣ ಮರುತೋ ಮೂರ್ತಯೋ ಮಾಂ ಪುನಂತ್ವಿತಿ ।**
**ಮುನಿಃ ಪ್ರಾರ್ಥಯತೇ ಕಶ್ಚಿತ್ ಇತ್ಯರ್ಥೋಽತ್ರ ಪ್ರದೃಶ್ಯತೇ ।**
**ಶಬ್ದಾನನುಪಮ್ಯದ್ಯೈವ ಶಬ್ದಶಬ್ದಾರ್ಥವೇದಿಭಿಃ ॥ ೫೮೦ ॥**

**ಅರ್ಥ–** ತೇನ ಚಕ್ರೇಣ = ಆ ಸುದರ್ಶನಚಕ್ರದಿಂದ, ಮರುತೋ ಮೂರ್ತಯಃ = ವಾಯುದೇವರ ಮೂರ್ತಿಗಳು, ಮಾಂ = ನನ್ನನ್ನು ಪುನಂತು ಇತಿ = ಪವಿತ್ರನನ್ನಾಗಿ ಮಾಡಲಿ ಎಂದು, ಕಶ್ಚಿತ್ ಮುನಿಃ = ಒಬ್ಬ ಋಷಿಯು (ಈ ಮಂತ್ರದ ದೃಷ್ಟಾರನಾದ ಋಷಿಯು) ಪ್ರಾರ್ಥಯತೇ = ಪ್ರಾರ್ಥಿಸುತ್ತಾನೆ. ಇತ್ಯರ್ಥಃ = ಎಂಬ ಅರ್ಥವು, ಶಬ್ದಶಬ್ದಾರ್ಥವೇದಿಭಿಃ = ಶಬ್ದ ಹಾಗೂ ಅದರ ಅರ್ಥವನ್ನು ತಿಳಿದಂತಹ ಜ್ಞಾನಿಗಳಿಂದ,

ಶಬ್ದಾನ್ = ಶಬ್ದಗಳನ್ನು ಅನುಪಪಮೃದ್ಯ ಏವ = ಅರ್ಥಸಂಕೋಚಮಾಡದೇ, ಅತ್ರ ಪ್ರದೃಶ್ಯತೇ= ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

**ಅನುವಾದ–** ಹಿಂದೆ ವರ್ಣಿತವಾದ (ದೇವತೆಗಳೂ ಬಳಸುತ್ತಿರುವಂತಹ) ವಿಷ್ಣುಚಕ್ರದಿಂದ ನನ್ನನ್ನೂ ನನ್ನ ಮನಸ್ಸನ್ನೂ ಮಧ್ವರೂಪೀ ಗುರುಗಳು ತಪ್ತಮುದ್ರಾಧಾರಣೆ ಮಾಡಿಸಿ ಪವಿತ್ರನನ್ನಾಗಿ ಮಾಡಲೆಂದು ಈ ಶ್ರುತಿಯನ್ನು ಕಂಡುಕೊಂಡ ಋಷಿಯು ಪ್ರಾರ್ಥಿಸುತ್ತಾನೆ. ವೈಯಾಕರಣಿಗಳು ಶಬ್ದಗಳಿಗೆ ಯಾವಾಗಲೂ ಮೊದಲು ವಾಚ್ಯಾರ್ಥವನ್ನೇ ಹೇಳುವರು. ಆದ್ದರಿಂದ ನಾವು ಹೇಳಿದ ಈ ಅರ್ಥವು ಸ್ಪಷ್ಟ ಹಾಗೂ ಅರ್ಥಸಂಕೋಚವಿಲ್ಲದ್ದಾಗಿದೆ.

**ಭಾವವಿಲಾಸಿನೀ–** ಉತ್ತರಾರ್ಧಸ್ಯಾರ್ಥಮಾಹ –**ತೇನೇತಿ** ॥ ಪಾವಮಾನ್ಯ ಇತ್ಯಸ್ಯಾರ್ಥ ಕಥನಂ ಮರುತೋ ಮೂರ್ತಾ ಇತಿ । ಪವಮಾನಸ್ಯೇಮಾಃ ಪವಾಮಾನ್ಯಃ । ಮುನಿಃ ಏತಚ್ಛ್ರುತಿವಾಕ್ಯ- ದ್ರಷ್ಟಾ। ಅತ್ರ ಶ್ರುತೌ ॥ ೫೮೦ ॥

**ವಿವರಣೆ–** ಉತ್ತರಾರ್ಧದ ಅರ್ಥವನ್ನು ಹೇಳುತ್ತಾರೆ - ತೇನ ಎಂದು. ಪಾವಮಾನ್ಯಃ ಇದರ ಅರ್ಥ ಮರುತೋ ಮೂರ್ತಯಃ - ವಾಯುದೇವರ ರೂಪಗಳು ಎಂದು ಹೇಳಿದ್ದು. ಪವಮಾನನಸಂಬಂಧಿ ಪಾವಮಾನಿಗಳು (ಪವಮಾನಸ್ಯ ಇಮಾಃ ಪಾವಮಾನ್ಯಃ) ಮುನಿಃ - ಶ್ರುತಿಯ ಈ ವಾಕ್ಯವನ್ನು ಕಂಡುಕೊಂಡವನು. ಅತ್ರ ಎಂದರೆ ಈ ಶ್ರುತಿಯಲ್ಲಿ.

ಈ ಹಿಂದೆ ನೋಡಿದಂತೆ ಈ ಪವಮಾನಖಿಲದ ಮಂತ್ರಗಳ ದ್ರಷ್ಟಾರರ ಹೆಸರುಗಳು ಲೋಪವಾಗಿವೆ. ಆದ್ದರಿಂದಲೇ ರಾಜರುಇಲ್ಲಿ ಕಶ್ಚಿತ್ ಋಷಿಃ ಎಂದಿರುವರು. ವಾಯುದೇವನ ಮೂರ್ತಿಗಳು ಎಂದರೆ ಕಲ್ಪ ಕಲ್ಪಗಳಲ್ಲೂ ಮಧ್ವಾವತಾರವಾಗುವುದು. ಅಂತಹ ಮಧ್ವಮೂರ್ತಿಗಳು ಪಾವಮಾನ್ಯಃ ಎನಿಸುತ್ತವೆ. ಅದಲ್ಲದೇ ಇಂದಿಗೂ ವೈಷ್ಣವರು ತೆಗೆದುಕೊಳ್ಳುತ್ತಿರುವ ತಪ್ತಮುದ್ರಾಧಾರಣೆಯು ಗುರುಗಳಲ್ಲಿ ಅಂತರ್ಯಾಮಿ ಯಾಗಿ ಮಧ್ವರೇ ಅನುಗ್ರಹಿಸುವರೆಂಬ ಅನುಸಂಧಾನವಿರುತ್ತದೆ. ಅಶೇಷ ಗುರ್ವಂತರ್ಯಾಮಿಣಾಂ ಅಸ್ಮದಾದಿಗುರೂಣಾಂ ಶ್ರೀಮದಾನಂದತೀರ್ಥಶ್ರೀಮಚ್ಚರ- ಣಾನಾಂ ಎಂದೇ ವಾಯುದೇವರ ಮಹಿಮೆಯನ್ನು ರಾಯರು ಹೇಳಿದ್ದಾರೆ. ರಾಜರು ಸರಸಭಾರತೀವಿಲಾಸದಲ್ಲಿ 'ಹೃದ್ಗಮಧ್ವಸ್ಯ ಕೃಪಯಾ ತತ್ ಶಿಷ್ಯಾಣಾಂ ಪರಂಪರಾ ಅದ್ಯಾಪಿ ಶಾಸ್ತಿ ಸತ್ತತ್ತ್ವಂ' ಎಂದಿದ್ದಾರೆ.

ಏವಂ ಚ ಸರ್ವದೇವಾನಾಂ ಕಾರ್ಯಂ ಚಕ್ರಾದಿಧಾರಣಮ್ ।
ಪ್ರಾರ್ಥ್ಯಂ ಮಹರ್ಷಿಭಿಃ ಕೋ ವಾ ಮಾನವೋऽನ್ಯೋ ನ ಮಾನಯೇತ್
॥ ೫೮೧ ॥

**ಅರ್ಥ–** ಏವಂ = ಹೀಗೆ (ಶ್ರುತ್ಯರ್ಥವಿಚಾರಮಾಡುವುದರಿಂದ) ಸರ್ವದೇವಾನಾಂ = ಎಲ್ಲ ದೇವತೆಗಳಿಗೆ, ಚಕ್ರಾದಿಧಾರಣಂ = ವಿಷ್ಣುಚಕ್ರಾದಿಧಾರಣವು, ಕಾರ್ಯಂ = ಅವಶ್ಯವಾಗಿ ಮಾಡಿಕೊಳ್ಳಬೇಕಾದ ಕರ್ತವ್ಯವು, ಚ = ಮತ್ತು, ಮಹರ್ಷಿಭಿಃ= ದೊಡ್ಡ ದೊಡ್ಡ ಜ್ಞಾನಿಗಳಿಂದ, ಪ್ರಾರ್ಥ್ಯಂ = ಪ್ರಾರ್ಥಿಸಿಕೊಳ್ಳಬೇಕಾದದ್ದು. ಅನ್ಯಃ = ಬೇರೆ, ಕಃ ವಾ ಮಾನವಃ = ಯಾವ ಮನುಷ್ಯನು ತಾನೇ, ನ ಮಾನಯೇತ್? = ಮನ್ನಿಸಲಿಕ್ಕಿಲ್ಲ?

**ಅನುವಾದ–** ಯೇನ ದೇವಾಃ ಪವಿತ್ರೇಣ ಎಂಬ ಶ್ರುತ್ಯರ್ಥವನ್ನು ಪರಾಮರ್ಶಿಸಲಾಗಿ ಎಲ್ಲ ದೇವತೆಗಳೂ ಸಹ ವಿಷ್ಣುವಿನ ಆಯುಧಗಳಾದ ಚಕ್ರಾದಿಧಾರಣೆಯನ್ನು ಮಾಡಿಕೊಳ್ಳುವರು ಎಂದು ತಿಳಿದುಬರುತ್ತದೆ. ಅದರಂತೆ ಶ್ರುತಿಯ ದ್ರಷ್ಟಾರರಾದ ಋಷಿಗಳು ತಪ್ತಮುದ್ರಾಧಾರಣೆಯನ್ನು ಅಪೇಕ್ಷಿಪಟ್ಟು ಪವಿತ್ರರಾಗುವುದಕ್ಕಾಗಿ ಪ್ರಾರ್ಥಿಸುತ್ತಾರೆ. ಎಂದ ಮೇಲೆ ಯಾವ ಮನುಷ್ಯನು ತಾನೇ ಈ ವಿಷಯವನ್ನು ಗೌರವಿಸಲಿಕ್ಕಿಲ್ಲ? ದೇವಋಷ್ಯಾದಿಗಳಿಂದ ಆದೃತವಾದ ಈ ಸಂಪ್ರದಾಯವನ್ನು ಆದರಿಸಿಯೇ ತೀರುತ್ತಾನೆ.

**ಭಾವವಿಲಾಸಿನೀ– ಫಲಿತಮಾಹ – ಏವಂ ಚೇತಿ ॥ ೫೮೧ ॥**

**ವಿವರಣೆ–** ಫಲಿತಾರ್ಥವನ್ನು ಹೇಳುತ್ತಾರೆ - ಏವಂ ಚ ಎಂಬ ಶ್ಲೋಕದಿಂದ.

ದೇವಾನುದೇವತೆಗಳು, ಋಷ್ಯಾದಿಗಳು ಇಷ್ಟಪಟ್ಟು ತಮ್ಮ ದೇಹ ಹಾಗೂ ಮನಸ್ಸಿನ ಪವಿತ್ರೀಕರಣಕ್ಕಾಗಿ ತಪ್ತಮುದ್ರಾಂಕನವನ್ನು ಮಾಡಿಸಿಕೊಳ್ಳುತ್ತಾರೆಂದ ಮೇಲೆ ಯಾವ ಮನುಷ್ಯ ತಾನೇ ಇದನ್ನು ನಿರಾಕರಿಸಿಯಾನು? ಆದರೆ ನಿರಾಕರಿಸುವ ಭಾಟ್ಟ ಭಾಸ್ಕರಾದಿವಾದಿಗಳೂ ಇರುವರು. ಕೆಲ ತಾಮಸಪುರಾಣ ವಚನಗಳೂ ಇವೆ. ಆದರೆ ನಿರವಕಾಶಶ್ರುತಿಗಳೆದುರು ಇವು ನಿಲ್ಲಲಾರವು. ಅದನ್ನೇ ವಾದಿರಾಜರು ವೈಕುಂಠವರ್ಣನೆಯಲ್ಲಿ-

ದ್ವಿರೇಖಮೂರ್ಧ್ವಪುಂಡ್ರಂ ಭಾವನೆ
ತಪ್ತಂ ಚಕ್ರಂ ದ್ವಿಭುಜೇ ಧಾರ್ಯತಿ ।
ಈ ಮಾಧ್ಯಂದಿನಶ್ರುತಿ ಹನ್ನೆರಡನೆ
ಖಂಡದಿ ತಪ್ತಚಕ್ರಧಾರಣವ ನಿರ್ಣೈಸಿತು ॥ ೩೨ ॥

ಇದು ಸ್ಪಷ್ಟವಚನವಾದುದರಿಂದ ತಪ್ತ ಚ
ಕ್ರಧಾರಣೆ ಇಲ್ಲದವ ವೇದಬಾಹ್ಯ ।
ಮದನನಯ್ಯನ ಪುರದಿ ಮುಕ್ತರಿಗಿದು ಬೇಕು
ಇದ ಜರಿವನಂಧಂತಮಕ್ಕೆದುವ ॥ ೩೩ ॥ ಎಂದಿದ್ದಾರೆ.

**ಸದೇತ್ಯುಕ್ತ್ವಾ ಯದ್ಗೋಪೀಚಂದನೈಶ್ಚಕ್ರಲಾಂಛನಮ್ ।**
**ಅದ್ಯಾಪಿ ಕುರ್ವತೇ ವೃದ್ಧಾಃ ತಚ್ಚ ಶ್ರುತಿರಸೂಚಯತ್ ॥ ೫೮೨ ॥**

**ಅರ್ಥ–** ಸದಾ ಇತಿ ಉಕ್ತ್ಯಾ= ಆತ್ಮಾನಂ ಪುನತೇ ಸದಾ ಎಂಬಲ್ಲಿ ಸದಾ ಎಂದು ಹೇಳುವುದರಿಂದ, ಗೋಪೀಚಂದನೈಃ= ಗೋಪೀಚಂದನದಿಂದ, ವೃದ್ಧಾಃ= ಜ್ಞಾನಿಗಳು, ಯತ್= ಯಾವ, ಚಕ್ರಲಾಂಛನಂ= ಚಕ್ರಗಳ ಚಿಹ್ನೆಯನ್ನು ಅದ್ಯಾಪಿ= ಇಂದಿಗೂ ಕೂಡ, ಕುರ್ವತೇ= ಮಾಡಿಕೊಳ್ಳುತ್ತಾರೆ. ತಚ್ಚ= ಅದನ್ನು, ಶ್ರುತಿಃ= ಯೇನ ದೇವಾಃ ಎಂಬ ಶ್ರುತಿಯು, ಅಸೂಚಯತ್=ಸೂಚಿಸಿತು.

**ಅನುವಾದ–** ಮೇಲಿನ ಶ್ರುತಿಯಲ್ಲಿನ ಸದಾ ಪದವು ಏನನ್ನು ಸೂಚಿಸುತ್ತದೆ ಎಂದರೆ ಜ್ಞಾನಿಗಳು ಗೋಪೀಚಂದನದಿಂದ ಚಕ್ರಾದಿ ವಿಷ್ಣ್ವಾಯುಧಗಳನ್ನು ನಿತ್ಯವೂ ಧಾರಣೆ ಮಾಡಿಕೊಳ್ಳುತ್ತಾರೆಂಬುದು. ತಪ್ತಮುದ್ರಾಧಾರಣೆಯನ್ನು ಗುರುಗಳ ಹಸ್ತದಿದಂ ಚಾತುರ್ಮಾಸ್ಯ, ಏಕಾದಶೀ, ಶ್ರವಣಾದಿ ಪುಣ್ಯದಿನಗಳಲ್ಲೂ, ನಿತ್ಯಕರ್ಮಾ-ನುಷ್ಠಾನಕ್ಕಾಗಿ ಗೋಪೀಚಂದನದಿಂದ ಶೀತಮುದ್ರೆಗಳನ್ನು ಧರಿಸಿಯೇ ಜಪಾದಿಗಳನ್ನು ಮಾಡುವುದು ಪರಂಪರಾಪ್ರಾಪ್ತವಾಗಿದೆಯಷ್ಟೇ! ಈ ಜ್ಞಾನಿಗಳ ಅನುಷ್ಠಾನಕ್ಕೆ ಶ್ರುತಿಯಲ್ಲಿನ ಸದಾ ಎಂಬ ಪದವೇ ಸೂಚಕವಾಗಿದೆ.

**ಭಾವವಿಲಾಸಿನೀ–** ವೃದ್ಧಾಃ ಅದ್ಯಾಪಿ ಗೋಪಿಚಂದನೈರ್ಯಚ್ಚಕ್ರಲಾಂಛನಂ ಕುರ್ವತೇ ತದಿತಿ ಸಂಬಂಧಃ। ಸದಾ ಸುದರ್ಶನಧಾರಣಸ್ಯ ಗೋಪೀಚಂದ್ರನೇನ್ನೈವ ಸಂಭಾವಿತತ್ವಾದಿತಿ ಭಾವಃ ॥ ೩೮೨ ॥

**ವಿವರಣೆ–** ಜ್ಞಾನಿಗಳು (ಜ್ಞಾನವೃದ್ಧರು) ಇಂದಿಗೂ ಗೋಪೀಚಂದನಗಳಿಂದ ಯಾವ ಚಕ್ರಾಂಕನವನ್ನು ಮಾಡಿಕೊಳ್ಳುವರೋ ಅದು ಎಂದು ಸಂಬಂಧ ಯೋಜಿಸಬೇಕು. ಸದಾ ಸುದರ್ಶನಧಾರಣವು ಗೋಪೀಚಂದನದಿಂದಲೇ ಶಕ್ಯವಿರುವುದರಿಂದ ಎಂದರ್ಥ.

ಚಕ್ರಮುದ್ರಾಧಾರಣೆಗೆ ಶಿಷ್ಟಾಚಾರವೂ ಇದೆ ಎಂಬುದನ್ನು ಇಲ್ಲಿ ತೋರಿಸುತ್ತಾರೆ. ಜ್ಞಾನವೃದ್ಧರು ಇಂದಿಗೂ ಗೋಪೀಚಂದನದಿಂದ ನಿತ್ಯವೂ ಮುದ್ರಾಂಕನ ಮಾಡಿಕೊಂಡೇ ನಿತ್ಯಕರ್ಮಾನುಷ್ಠಾನವನ್ನು ಪ್ರಾರಂಭಿಸುತ್ತಾರೆ. ಈ ಶಿಷ್ಟಾಚಾರಕ್ಕೆ ಮೂಲ - ಶ್ರುತಿಯಲ್ಲಿನ ಸದಾ ಎಂಬ ಪದ. ದೇವಾನುದೇವತೆಗಳೂ ಕೂಡ ನಿತ್ಯವೂ ತಮ್ಮನ್ನು ಚಕ್ರಲಾಂಛನದಿಂದ ಪವಿತ್ರೀಕರಿಸಿಕೊಳ್ಳುವರಾದ್ದರಿಂದ, ನಾವಾದರೂ ಗುರುಮುಖೇನ ತಪ್ತಮುದ್ರೆಗಳನ್ನೂ, ನಿತ್ಯವೂ ಗೋಪೀಚಂದನದಿಂದಲೂ ನಮ್ಮ ಮೈ-ಮನಗಳನ್ನು ಪವಿತ್ರಗೊಳಿಸಿಕೊಳ್ಳೋಣ ಎಂದು ಸದಾಚಾರವೂ ಸಾಂಪ್ರದಾಯಿಕವಾಗಿ ಬಂದಿದೆ.

ರಾಜರು ವೈಕುಂಠವರ್ಣನೆಯಲ್ಲಿ ಇತರ ಮತೀಯರು - ನಿಂಬಾರ್ಕ, ವಿಷ್ಣುಸ್ವಾಮಿ, ರಾಮಾನುಜ, ಭಾಗವತ ಪಂಥದ ಅದ್ವೈತಸನ್ಯಾಸಿಗಳು ಕೂಡ ಚಕ್ರಮುದ್ರೆಯನ್ನು ಧರಿಸುತ್ತಾರೆಂದು ಹೇಳುತ್ತಾ -

ನಿಮ್ಮ ಮತದ ಸನ್ಯಾಸಿಗಳೆಲ್ಲರು ನಿರ್ಮಲೋರ್ಧ್ವಪುಂಡ್ರಧರಿಸಿ ।
ತಮ್ಮ ಕರದಿಂದಲೇ ಚಕ್ರಮುದ್ರಿಕೆ ಸತ್ ಕರ್ಮಮಾಡುವಲ್ಲಿ ಧರಿಸುವರು ॥ ೮ ॥

**ಇಷ್ಟು ಶಿಷ್ಟಾಚಾರಕ್ಕೆ ಮೂಲವಾದ ಸ್ಪಷ್ಟಾರ್ಥವೇದಗಳ ಬಿಟ್ಟು ಕೆಡುವರೇ ।**
**ಪಟ್ಟದ ರುದ್ರ ಪಾದ್ಮದಲೆತ್ತಿದ ಶ್ರುತಿವೊಡಂಬಿಟ್ಟು ಚಕ್ರವ ಧರಿಸಿರೋ ॥ ೧೦ ॥**

ಎಂದು ಸ್ಥಿತಿ ಸಂಧಿಯಲ್ಲಿ ಹೇಳಿರುವರು.

**ದೇವಾಸ್ತು ತಪ್ತಚಕ್ರಾಂಕಯೋಗ್ಯೇ ಶುಭದಿನೇ ಸದಾ ।**
**ತಪ್ತೇನ ತೇನ ಪುನತೇ ಮೃದಾ ತಲ್ಲಾಂಛನೈಃ ಸದಾ ॥ ೫೮೩ ॥**

**ಅರ್ಥ–** ದೇವಾಃ ತು = ದೇವತೆಗಳಂತೂ, ತಪ್ತಚಕ್ರಾಂಕಯೋಗ್ಯೇ = ತಪ್ತಚಕ್ರಮುದ್ರಾಧಾರಣೆಗೆ ಯೋಗ್ಯವಾದ, ಶುಭದಿನೇ = ಶ್ರವಣದ್ವಾದಶೀ, ಪ್ರಥಮೈಕಾದಶೀ ಮುಂತಾದ ಮಂಗಳಕರ ದಿನಗಳಲ್ಲಿ, ಸದಾ = ಯಾವಾಗಲೂ (ತಪ್ಪದೇ, ನಿಯಮೇನ) ತಪ್ತೇನ ತೇನ = ತಪ್ತವಾದ ಆ ಚಕ್ರಮುದ್ರೆಯಿಂದ, ಪುನತೇ = ಪವಿತ್ರರಾಗುತ್ತಾರೆ. ಸದಾ = ನಿತ್ಯವೂ, ಮೃದಾ = ಗೋಪೀಚಂದನಮಣ್ಣಿನಿಂದ, ತಲ್ಲಾಂಛನೈಃ = ಆ ಚಕ್ರಾದಿಚಿಹ್ನೆಗಳಿಂದ, ಪುನತೇ = ಪವಿತ್ರರಾಗುತ್ತಾರೆ.

**ಅನುವಾದ– ದೇವತೆಗಳು ಶ್ರವಣದ್ವಾದಶ್ಯಾದಿ ಶುಭದಿನಗಳಲ್ಲಿ ಗುರುಮುಖೇನ ತಪ್ತಮುದ್ರಾಧಾರಣೆ ಹಾಗೂ ನಿತ್ಯವೂ ಗೋಪೀಚಂದನದಿಂದ ಸ್ವಯಂ ತಾವೂ ಲಾಂಛನಮಾಡಿಕೊಂಡು ಪವಿತ್ರರಾಗುತ್ತಾರೆ.**

**ಭಾವವಿಲಾಸಿನೀ–** ತಪ್ತಸುದರ್ಶನಧಾರಣವಿಷಯೇऽಪಿ ಸದಾಪದಂ ಯೋಜಯತಿ ॥ **ದೇವಾಸ್ತ್ವಿತಿ** ॥ ಶುಭದಿನೇ ಶ್ರಣದ್ವಾದಶೀಪ್ರಥಮೈಕಾದಶ್ಯಾದಿ ದಿನೇ । ತೇನ ಚಕ್ರೇಣ । ಮೃದಾ ಗೋಪಿಚಂದನೇನ । ತತ್ ಲಾಂಛನೈಃ ಚಕ್ರಲಾಂಛನೈಃ । ಸದಾ ಪ್ರತಿದಿನಮ್ ॥ ೫೮೩ ॥

**ವಿವರಣೆ–** ತಪ್ತಸುದರ್ಶನಧಾರಣೆಯ ವಿಷಯದಲ್ಲಿಯೂ ಸಹ ಸದಾ ಎಂಬ ಪದವನ್ನು ಯೋಜಿಸುತ್ತಾರೆ - ದೇವಾಸ್ತು ಎಂದು. ಶುಭದಿನೇ ಎಂದರೆ ಶ್ರವಣದ್ವಾದಶೀ, ಪ್ರಥಮೈಕಾದಶೀ (ಆಷಾಢಶುಕ್ಲ ದ್ವಾದಶೀ) ಮುಂತಾದ ದಿನಗಳಲ್ಲಿ ತೇನ - ಚಕ್ರದಿಂದ, ಮೃದಾ - ಗೋಪೀಚಂದನದಿಂದ, ತಲ್ಲಾಂಛನೈಃ - ಚಕ್ರಲಾಂಛನಗಳಿಂದ, ಸದಾ - ಪ್ರತಿದಿನವೂ.

ದೇವತೆಗಳು ಶ್ರವಣದ್ವಾದಶ್ಯಾದಿ ಶುಭದಿನಗಳಲ್ಲಿ ತಪ್ತಮುದ್ರಾಧಾರಣೆಯನ್ನು ದಿನನಿತ್ಯದಲ್ಲಿ ಗೋಪೀಚಂದನದಿಂದ ಮುದ್ರಾಧಾರಣೆಯನ್ನು ಮಾಡಿಕೊಳ್ಳುತ್ತಾರೆ.

ಶಾಸ್ತ್ರದಲ್ಲಿ ಶಿಷ್ಟಾಚಾರಕ್ಕೆ ಮುಖ್ಯವಾದ ಸ್ಥಾನವಿದೆ. ಗ್ರಂಥಾದಿಯಲ್ಲಿ ಮಂಗಳಾಚರಣೆಮಾಡಬೇಕೆಂದು ಸ್ಪಷ್ಟವಾದ ಶ್ರುತಿಯಿಲ್ಲದಿದ್ದರೂ , ಜ್ಞಾನಿಗಳ, ಶಿಷ್ಟರ ಆಚಾರವಿರುವುದರಿಂದ ಗ್ರಂಥಾದೌ ಮಂಗಳಮಾಚರೇತ್ ಎಂಬ ವಿಧಿವಾಕ್ಯವನ್ನು

ಕಲ್ಪಿಸಲಾಗುತ್ತದೆಯಷ್ಟೇ! ಇಲ್ಲಿ ತಪ್ತಮುದ್ರಾಧಾರಣೆಗೆ ಸ್ಪಷ್ಟವಾದ ವೇದವಾಕ್ಯವೇ ಇದೆ (ಪವಿತ್ರಂ ತೇ ವಿತತಂ ಎಂಬುದು) ಎಂದು ರಾಜರು ಚಕ್ರಸ್ತುತಿಯಲ್ಲಿ ಹೇಳಿದ್ದಾರೆ-

ಶಿಷ್ಟಾಚಾರಾದದೃಷ್ಟಸ್ಯ ಯದಾ ವೇದಸ್ಯ ಕಲ್ಪನಾ ।
ಸ್ಪಷ್ಟದೃಷ್ಟಶ್ರುತಿಂ ಸೋಽಪಿ ಬಲವಾನ್ ನೈವ ಮುಂಚತಿ ॥

ಮೇಲಿನ ಶ್ರುತಿಯಲ್ಲಿ ಅತಪ್ತತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ ವಹಂತಸ್ತತ್ ಸಮಾಶತ ॥ ವಾಕ್ಯಗಳಿಂದ ತಪ್ತಮುದ್ರಾಧಾರಣೆ ಹಾಗೂ ಗೋಪೀಚಂದನದಿಂದ ಧಾರಣೆ ಈ ಎರಡೂ ಅರ್ಥವನ್ನು ರಾಜರು ವೈಕುಂಠವರ್ಣನೆಯಲ್ಲಿ ಮಾಡಿರುವರು-

ಶೃಪಾಕೇ ಎಂಬ ಧಾತುವಿನಿಂದಲೇ ಚಕ್ರ ತಾಪ ಭುಜಯುಗದಲ್ಲಿಹುದು ।
ಗೋಪೀಚಂದನದಿಂದಲನುದಿನವು ವಹಿಸುವರ ಕೃಪಾಳು ಹರಿಯವರಿಗೊಲಿವ ॥

ಇತಿ ಪೂರ್ವಾರ್ಧವಾಕ್ಯಾರ್ಥೋ ಲಭ್ಯತೇ ಪದಸಂಪದಾ ।
ಉತ್ತರಪ್ರಾರ್ಥನಾಹೇತುರೂಪಯಾ ಚಾರ್ಥಸಂಪದಾ ॥ ೫೮೪ ॥

**ಅರ್ಥ–** ಇತಿ = ಹೀಗೆಂದು, ಪೂರ್ವಾರ್ಧವಾಕ್ಯಾರ್ಥಃ = ಶ್ರುತಿಯ ಮೊದಲನೆಯ ಸಾಲಿನ ಅರ್ಥವು, ಪದಸಂಪದಾ = ಅಲ್ಲಿನ ಶಬ್ದಗಳ ಸಂಪತ್ತಿನಿಂದ, ಲಭ್ಯತೇ = ದೊರಕುತ್ತದೆ. ಉತ್ತರಪ್ರಾರ್ಥನಾಹೇತುರೂಪಯಾ = ಮುಂದಿನ ವಾಕ್ಯವು ಗುರುಹಸ್ತದಿಂದ ಚಕ್ರಧರಾಣೆಯನ್ನು ಪ್ರಾರ್ಥಿಸುವ ಕಾರಣವನ್ನು ನಿರೂಪಿಸುವುದರಿಂದ, ಅರ್ಥಸಂಪದಾ = ಶಬ್ದಗಳ ಅರ್ಥಗಾಂಭೀರ್ಯದಿಂದ, (ಈ ವಾಕ್ಯವು ತಪ್ತಮುದ್ರಾಧಾರಣಪರವೆಂದು) ಲಭ್ಯತೇ = ಲಭಿಸುತ್ತದೆ.

**ಅನುವಾದ–** ಯೇನ ದೇವಾ ಎಂಬ ಶ್ರುತಿಯ ಪ್ರಥಮಪಾದದ ಅರ್ಥವು ಯಾವ ತಪ್ತಸುದರ್ಶನದಿಂದ ದೇವತೆಗಳು ತಮ್ಮನ್ನು ಯಾವಾಗಲೂ ಪವಿತ್ರೀಕರಿಸಿ ಕೊಳ್ಳುವರೋ ಎಂದೂ, ಅಂತಹ ತಪ್ತಸುದರ್ಶನದಿಂದ ಪವಮಾನರೂಪೀ ಗುರುಗಳು ನನ್ನನ್ನು ಪವಿತ್ರನನ್ನಾಗಿ ಮಾಡಲೆಂಬ ಋಷಿ ಪ್ರಾರ್ಥನೆಯು ಉತ್ತರವಾಕ್ಯದಲ್ಲೂ ಅಲ್ಲಿರುವ ಶಬ್ದಗಳ ಅರ್ಥಗಾಂಭೀರ್ಯದಿಂದ ತಿಳಿದುಬರುತ್ತದೆ.

**ಭಾವವಿಲಾಸಿನೀ–** ಸದಾಪದಸ್ಯೋಕ್ತರೀತ್ಯಾ ತಪ್ತಸುದರ್ಶನಧಾರಣವಿಷಯೇ ಗೋಪಿ-ಚಂದನೇನ ಸುದರ್ಶನಧಾರಣ ವಿಷಯೇ ಚ ಯೋಜನಾಸಂಭವಾತ್ ಪದಸಂಪದೇತ್ಯು-ಕ್ತಮ್ । ನನು ತಪ್ತೇತಿ ಪದಾಭಾವಾತ್ ತಪ್ತಸುದರ್ಶನಧಾರಣಸ್ಯ ಕಥಮಿದಂ ವಾಕ್ಯಂ ಪ್ರಾಪಕಮಿತ್ಯತ ಆಹ – **ಉತ್ತರೇತಿ** ॥ ಉತ್ತರಪ್ರಾರ್ಥನಾ ಉತ್ತರಾರ್ಧೋಕ್ತಪ್ರಾರ್ಥನಾ । ತಸ್ಯಾ

ಹೇತುರೂಪಯಾ ಹೇತುತ್ವರೂಪಯಾ । ಪ್ರಾರ್ಥನಾಯಾಂ ಹೇತುತ್ವಂ ಗುರುಕರಪಂಕಜೇನ ಕ್ರಿಯಮಾಣತಪ್ತಸುದರ್ಶನಧಾರಣಸ್ಯೈವೋಚಿತಂ ನ ತು ಗೋಪೀಚಂದನಾದಿನಾ ಸ್ವಕರೇಣ ಕ್ರಿಯಮಾಣಸುದರ್ಶನಧಾರಣಸ್ಯ । ಏವಂ ಚೋತ್ತರಾರ್ಧೋಕ್ತಪ್ರಾರ್ಥನಾಬಲಾತ್ ಪೂರ್ವಾರ್ಧೇಽಪಿ ತಪ್ತಸುದರ್ಶನಧಾರಣಸ್ಯೈವ ಪ್ರಸ್ತುತಿಃ । ಅನ್ಯಥಾ ಪೂರ್ವೋತ್ತ-ರಾರ್ಧಯೋಃ ವೈಯಧಿಕರಣ್ಯಪ್ರಸಂಗಾದಿತಿ ಭಾವೇನೋಕ್ತಮರ್ಥಸಂಪದೇತಿ ॥ ೫೮೪ ॥

**ವಿವರಣೆ–** ಸದಾ ಎಂಬ ಪದವನ್ನು ಮೇಲೆ ಹೇಳಿದಂತೆ ತಪ್ತಸುದರ್ಶನಧಾರಣೆಯ ವಿಷಯದಲ್ಲೂ ಗೋಪೀಚಂದನದಿಂದ ಸುದರ್ಶನಧಾರಣೆಯ ವಿಷಯದಲ್ಲೂ ಯೋಜಿಸುವುದು ಅಸಂಭವವಾದ್ದರಿಂದ ಪದಸಂಪದಾ ಶಬ್ದಗಾಂಭೀರ್ಯದಿಂದ ಎಂದು ಹೇಳಿದರು. ಶ್ರುತಿಯಲ್ಲಿ ತಪ್ತ ಎಂಬ ಶಬ್ದವೇ ಇಲ್ಲದಿರುವುದರಿಂದ ಈ ವಾಕ್ಯವು ತಪ್ತಸುದರ್ಶನಧಾರಣೆಯನ್ನು ಹೇಗೆ ತಿಳಿಸುತ್ತದೆ ಎಂಬ ಪ್ರಶ್ನೆ ಬಂದರೆ - ಅದಕ್ಕೆ ತಿಳಿಸುತ್ತಾರೆ - ಉತ್ತರಪ್ರಾರ್ಥನಾ.. ಎಂದು. ಉತ್ತರಪ್ರಾರ್ಥನಾ ಎಂದರೆ ಉತ್ತರಾರ್ಧದಲ್ಲಿ ಹೇಳಿದ ಪ್ರಾರ್ಥನೆ, ಅದರ ಕಾರಣದಿಂದ - ಪ್ರಾರ್ಥನೆಯು ಇದ್ದ ಕಾರಣದಿಂದ, ಪ್ರಾರ್ಥನೆಯ ಕಾರಣತ್ವವು ಏನೆಂದರೆ ಗುರುಗಳ ಕರಕಮಲಗಳಿಂದ ಮಾಡುವ ತಪ್ತಸುದರ್ಶನವೆಂಬುದೇ ಶ್ರೇಷ್ಠವೇ ಹೊರತು ಗೋಪೀಚಂದನದಿಂದ ತಾನೇ ಮಾಡಿಕೊಳ್ಳುವ ಸುದರ್ಶನಧಾರಣೆಯಲ್ಲ. ಹಾಗಾಗಿ ಈ ಉತ್ತರಾರ್ಧದ ಪ್ರಾರ್ಥನೆಗನುಗುಣವಾಗಿ (ಅದರ ಬಲದಿಂದ) ಪೂರ್ವಾರ್ಧದಲ್ಲೂ ಕೂಡ ತಪ್ತಸುದರ್ಶನಧಾರಣೆಯನ್ನೇ ಹೇಳಲಾಗಿದೆ ಎಂಬರ್ಥ ಸಮಂಜಸವಾಗುವುದು. ಇಲ್ಲವಾದರೆ ಪೂರ್ವಾರ್ಧ ಉತ್ತರಾರ್ಧಗಳಲ್ಲಿ ವೈಯಧಿಕರಣಪ್ರಸಂಗಬರುತ್ತದೆ ಎಂಬ ಅಭಿಪ್ರಾಯದಿಂದ ಅರ್ಥಸಂಪದಾ ಎಂದು ಹೇಳಿದ್ದಾರೆ.

ಮೇಲೆ ತಿಳಿಸಿದಂತೆ ಯೇನ ದೇವಾಃ ಶ್ರುತಿಯು ಪೂರ್ವಾರ್ಧದಲ್ಲಿ ಯಾವ ತಪ್ತಸುದರ್ಶನಧಾರಣೆಯಿಂದ ದೇವತೆಗಳು ತಮ್ಮನ್ನು ಸದಾ ಪವಿತ್ರೀಕರಿಸಿಕೊಳ್ಳುವರೋ ಎಂದೂ, ಉತ್ತರಾರ್ಧದಲ್ಲಿ ಅಂತಹ ತಪ್ತಸುದರ್ಶನಧಾರಣೆಯನ್ನು ಪವಮಾನರೂಪೀ ಗುರುಗಳು ಮಾಡಿ ನನ್ನನ್ನು ಪವಿತ್ರೀಕರಿಸಲಿ ಎಂಬ ಅರ್ಥವನ್ನೂ ಹೇಳಿದೆ. ಈ ರೀತಿ ಅಲ್ಲಿನ ಪದಗಳು ಇಲ್ಲವಲ್ಲ ಎಂಬ ಶಂಕೆ ಬಂದರೆ - ಅಲ್ಲಿದ್ದ ಪದಗಳ ಅರ್ಥಗಾಂಭೀರ್ಯವೇ ಈ ಭಾವವನ್ನು ಕೊಡುತ್ತದೆ. ಎಂದು ರಾಜರು ಇಲ್ಲಿ ಸಮರ್ಥನೆ ಮಾಡಿದ್ದಾರೆ.

**ಅರ್ಥ್ಯಮಾನಂ ತು ಮುನಿನಾ ತಪ್ತಚಕ್ರಸ್ಯ ಲಾಂಛನಮ್ ।**
**ಗುರೂಣಾಂ ಕರಕಂಜೇನ ಧಾರ್ಯಂ ಚಕ್ರಂ ತದೇವ ಹಿ ।**
**ಅತಃ ಪೂರ್ವಾರ್ಧವಾಕ್ಯೇಽಪಿ ತಪ್ತಾಂಕಪ್ರಸ್ತುತಿರ್ಬಲಾತ್ ॥ ೫೮೫ ॥**

**ಅರ್ಥ–** ಮುನಿನಾ= ಋಷಿಯಿಂದ, ಅರ್ಥ್ಯಮಾನಂ ತು= ಪ್ರಾರ್ಥಿಸಲ್ಪಡುವುದಾದರೂ, ತಪ್ತಚಕ್ರಸ್ಯ= ಕಾಯ್ದಸುದರ್ಶನಚಕ್ರದ, ಲಾಂಛನಂ= ಚಿಹ್ನೆಯು (ಭುಜದಲ್ಲಿ ಮೂಡಿಸುವಿಕೆ) ಹಿ= ಏಕೆಂದರೆ, ಗುರೂಣಾಂ= ಗುರುಗಳ, ಕರಕಂಜೇನ= ಕರಕಮಲದಿಂದ, ಧಾರ್ಯಂ= ಧರಿಸಬೇಕಾದ, ಚಕ್ರಂ= ಚಕ್ರವು, ತದೇವ= ಅದೇ ಆಗಿರುತ್ತದೆ. ಅತಃ= ಆದ್ದರಿಂದ, (ಪೂರ್ವೋತ್ತರವಾಕ್ಯಗಳ ಸಾಮಂಜಸ್ಯಕ್ಕಾಗಿ) ಪೂರ್ವಾರ್ಧವಾಕ್ಯೇ ಅಪಿ= ಪೂರ್ವಾರ್ಧವಾಕ್ಯದಲ್ಲಿಯೂ, ಬಲಾತ್= ಯುಕ್ತಿಬಲದಿಂದ, ತಪ್ತಾಂಕಪ್ರಸ್ತುತಿಃ= ತಪ್ತಸುದರ್ಶನದ್ದೇ ಪ್ರಸ್ತಾಪವಿದೆ.

**ಅನುವಾದ–** ಈ ಮಂತ್ರದ್ರಷ್ಟಾರ ಋಷಿಯು ಗುರುಗಳ ಕರಕಮಲದಿಂದ ತಪ್ತ-ಚಕ್ರಮುದ್ರಾಧಾರಣೆಯನ್ನು ಪ್ರಾರ್ಥಿಸುತ್ತಿರುವನಷ್ಟೇ! ಆದ್ದರಿಂದ ಈ ಮಂತ್ರದ ಯೇನ ದೇವಾಃ ಎಂಬ ಪೂರ್ವಾರ್ಧವಾಕ್ಯವೂ ಪವಿತ್ರೇಣ ಎಂಬ ಶಬ್ದದಿಂದ ತಪ್ತಸುದರ್ಶನಚಕ್ರಧಾರಣೆಯನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ಅತಃ ಪೂರ್ವೋತ್ತರಾರ್ಧಯೋರೈಕಾರ್ಥ್ಯಾವಶ್ಯಂ ಭಾವಾತ್ । ಬಲಾತ್ ಯುಕ್ತಿಬಲಾತ್ ॥ ೫೮೫ ॥

**ವಿವರಣೆ–** ಅತಃ ಎಂದರೆ ಪೂರ್ವೋತ್ತರ ಅರ್ಧ ಋಚೆಗಳಲ್ಲಿ ಅವಶ್ಯವಾಗಿ ಸಮಾನಾರ್ಥವಿರಬೇಕಾಗಿರುವುದರಿಂದ ಎಂದರ್ಥ. ಬಲಾತ್ ಎಂದರೆ ಯುಕ್ತಿಬಲಾತ್, ಯುಕ್ತಿಯ ಬೆಂಬಲವಿರುವುದರಿಂದ ಎಂದರ್ಥ.

ಪೂರ್ವೋತ್ತರವಾಕ್ಯಗಳಲ್ಲಿ ಏಕಾರ್ಥತೆ ಇರುವುದು ನಿಯಮವಷ್ಟೇ! ಯೇನ ದೇವಾಃ ಎಂಬ ಋಕ್ಕಿನಲ್ಲಿ ಉತ್ತರಾರ್ಧದಲ್ಲಿ ಮಂತ್ರದ್ರಷ್ಟಾರಋಷಿಯ ತಪ್ತಚಕ್ರಾಂಕನದಿಂದ ಪವಮಾನರೂಪಗಳು ನನ್ನನ್ನು ಪವಿತ್ರೀಕರಿಸಲಿ ಎಂಬ ಪ್ರಾರ್ಥನೆ ಇದೆ. ಪೂರ್ವಾರ್ಧದಲ್ಲಿ ದೇವತೆಗಳು ಪವಿತ್ರದಿಂದ ತಮ್ಮನ್ನು ಪಾವನಗೊಳಿಸಿಕೊಳ್ಳುವರು ಎಂದಿದೆ. ಇಲ್ಲಿನ ಪವಿತ್ರವು ಸಹಜವಾಗಿಯೇ ತಪ್ತಸುದರ್ಶನಮುದ್ರೆ ಎಂಬುದು ಯುಕ್ತಿಯುಕ್ತವಾಗಿಯೇ ಇದೆ.

**ಮುನೀಂಶ್ಚ ದೇವದೇಹಾಂಶ್ಚ ಶುದ್ಧೀಕುರ್ವತ್ ಸುದರ್ಶನಮ್ ।**
**ಪರಂ ಪವಿತ್ರಮತ್ರ ಸ್ಯಾತ್ ನಾನ್ಯತ್ ಪುಂಮತಿನಿರ್ಮಿತಮ್ ॥ ೫೮೬ ॥**

**ಅರ್ಥ–** ಅತ್ರ= ಈ ಮಂತ್ರದಲ್ಲಿ, ಮುನೀಂಶ್ಚ= ಮುನಿಗಳನ್ನು, ದೇವದೇಹಾಂಶ್ಚ= ದೇವತೆಗಳ ದೇಹಗಳನ್ನೂ, ಶುದ್ಧೀಕುರ್ವತ್= ಪವಿತ್ರಗೊಳಿಸುವ, ಸುದರ್ಶನಂ= ಸುದರ್ಶನಚಕ್ರವೇ, ಪರಂ= ಶ್ರೇಷ್ಠವಾದ, ಪವಿತ್ರಂ ಸ್ಯಾತ್= ಪವಿತ್ರ ಎಂಬ ಹೆಸರುಳ್ಳದ್ದಾಗುತ್ತದೆ. ಪುಂಮತಿನಿರ್ಮಿತಂ= ಪುರುಷಬುದ್ಧಿಕಲ್ಪಿತವಾದಂತಹ, ಅನ್ಯತ್ ನ=

ಬೇರೆ ಯಾವುದೂ ಅಲ್ಲ. (ಅಥವಾ ನಾನ್ಯತ್ ಪರಂ ಅತ್ರ ಸ್ಯಾತ್ - ಇಲ್ಲಿ ಬೇರೆಯದು ಆಗಲಾರದು.) (ಅಥವಾ ಪರಂ - ಕೇವಲ ಸುದರ್ಶನವೇ ಪವಿತ್ರಶಬ್ದವಾಚ್ಯವಾದುದು.)

**ಅನುವಾದ–** ಋಷಿಗಳ ಹಾಗೂ ದೇವತೆಗಳ ದೇಹಗಳನ್ನು ಪವಿತ್ರಮಾಡತಕ್ಕ ಸುದರ್ಶನವೇ ಇಲ್ಲಿ ಪವಿತ್ರಶಬ್ದವಾಚ್ಯವಾದೀತೇ ವಿನಃ ಬೇರೆ ಯಾರೋ ಪುರುಷರು ಕಲ್ಪಿಸಿದ ಅನ್ಯವಸ್ತುವಾಗಲಾರದು.

**ಭಾವವಿಲಾಸಿನೀ–** ಪರಂ ಕೇವಲಂ ಪವಿತ್ರಂ ಪವಿತ್ರಪದವಾಚ್ಯಮ್ । ದೇವಋಷ್ಯಾದಿದೇಹಂ ಪಾವಯತೋಽಸ್ಮದುಕ್ತಸುದರ್ಶನಸ್ಯೈವ ಪವಿತ್ರಪದಯೋಗಾರ್ಥ ಸಂಭವಾತ್ ಸೋಮರಸಮಾತ್ರಶ್ರವಣಹೇತುಭೂತದಶಾಪವಿತ್ರಸ್ಯ ಸೋಮರಸಶೋಧಯಿತೃತ್ವಮಾತ್ರ-ಸದ್ಭಾವೇಽಪಿ ಸೋಮರಸಪಾವಯಿತೃತ್ವಾಭಾವಾತ್ । ದೇವಾದ್ಯಂಗಪಾವಯಿತೃತ್ವಸ್ಯ ಸುತರಾ-ಮಭಾವಾಚ್ಚ ಚಕ್ರಮೇವಾತ್ರೋಕ್ತಂ ಪವಿತ್ರಮಿತಿ ಭಾವಃ। ಅತ ಏವ ಗ್ರಂಥಕಾರಃ ಕ್ಷಲನಾಭಾವೇ ಸ್ಪರ್ಶಾಯೋಗ್ಯತಯಾ ಸ್ವತೋಽಪವಿತ್ರಪಟಖಂಡರೂಪದಶಾವಸ್ತ್ರೇ ಪವಿತ್ರಪದವಾಚ್ಯ-ಸುದರ್ಶನಸನ್ನಿಧಾನಾದೇವ ಪವಿತ್ರಂತ ಇತಿ ಮಂತ್ರಸ್ಯ ವಿನಿಯೋಗ ಇತಿ ವಕ್ಷ್ಯತಿ ॥ ೫೮೬ ॥

**ವಿವರಣೆ–** ಪರಂ ಎಂದರೆ ಕೇವಲ, ಪವಿತಂ ಎಂದರೆ ಪವಿತ್ರಪದವಾಚ್ಯವು. ದೇವಋಷ್ಯಾದಿಗಳ ದೇಹಗಳನ್ನು ಪವಿತ್ರೀಕರಿಸುವಂತಹದು ನಾವು ಹೇಳಿದ ಸುದರ್ಶನಕ್ಕೇ ಪವಿತ್ರಪದಕ್ಕೆ ಯೋಗ್ಯ ಅರ್ಥ (ಯೌಗಿಕ ಅರ್ಥ) ಸಂಭವಿಸುವುದರಿಂದ, ಕೇವಲ ಸೋಮರಸವನ್ನು ಶೋಧಿಸಲು ಉಪಯೋಗಿಸುವ ದಶಾಪವಿತ್ರಕ್ಕೆ (ಬಟ್ಟೆಯ ತುಂಡು), ಸೋಮರಸವನ್ನು ಶೋಧನಮಾತ್ರಮಾಡುವ ಶಕ್ತಿಯುಂಟೇ ವಿನಃ ಅದು ಸೋಮರಸವನ್ನು ಪವಿತ್ರಮಾಡಲಾರದು. ಆದ್ದರಿಂದಲೇ ಮುಂದೆ ಗ್ರಂಥಕಾರರು (ವಾದಿರಾಜರು) ಒಗೆಯದೇ ಇದ್ದಾಗ ಸ್ಪರ್ಶಕ್ಕೂ ಯೋಗ್ಯವಲ್ಲವಾದ್ದರಿಂದ ಸ್ವತಃ ಅಪವಿತ್ರವಾದ ಬಟ್ಟೆಯ ತುಂಡಿನರೂಪವಾದ ದಶಾವಸ್ತ್ರದಲ್ಲಿ ಪವಿತ್ರಪದವಾಚ್ಯ-ಸುದರ್ಶನಸನ್ನಿಧಿಯಿಂದ ಪಾವಿತ್ರ್ಯ ಬರಲೆಂದು ಪವಿತ್ರಂತೇ ಎಂಬ ಮಂತ್ರವನ್ನು ಬಳಸುತ್ತಾರೆ ಎಂದು ಹೇಳುವವರಿದ್ದಾರೆ.

ಪರಕೀಯರು ಪವಿತ್ರ ಶಬ್ದಕ್ಕೆ ದಶಾಪವಿತ್ರ- ಎಂದರೆ ಯಜ್ಞದಲ್ಲಿ ಸೋಮರಸವನ್ನು ಕುದಿಸಿದ ಬಳಿಕ ಅದನ್ನು ಶೋಧಿಸಲು ಬಳಸುವ ಬಟ್ಟೆಯ ತುಂಡಿಗೆ ಪವಿತ್ರ ಎಂದು ಹೇಳುವರು. ಇದಕ್ಕೆ ಕಾರಣ, ಆ ಬಟ್ಟೆಯನ್ನು ಬಳಸುವಾಗ ಪವಿತ್ರಂ ತೇ ಎಂಬ ವೇದಮಂತ್ರವನ್ನು ವಿನಿಯೋಗಿಸುವರು. ಈ ಮಂತ್ರದಿಂದ ಅಭಿಮಂತ್ರಿಸಲ್ಪಡುತ್ತಿರುವ ದಶಾಪವಿತ್ರವೇ ಪವಿತ್ರಶಬ್ದವಾಚ್ಯ ಎಂಬುದು ಅವರ ವಾದವಾಗಿದೆ. ಆದರೆ ಪವಿತ್ರೀಕರಣಸಾಮರ್ಥ್ಯವುಳ್ಳದ್ದು ವಿಷ್ಣುವಿನ ಆಯುಧವಾದ ಸುದರ್ಶನವು. ಅದು ಋಷಿಗಳು ಹಾಗೂ ದೇವತೆಗಳ ದೇಹಗಳನ್ನು ಪವಿತ್ರಮಾಡುವ ಸಾಮರ್ಥ್ಯವುಳ್ಳದ್ದೆಂದು ಯೇನ ದೇವಾಃ ಮಂತ್ರದಲ್ಲಿ ನೋಡಿದ್ದೇವೆ. ಹಾಗಾದರೆ ದಶಾಪವಿತ್ರಕ್ಕೆ ಪವಿತ್ರಂತೇ

ಎಂಬ ಮಂತ್ರವನ್ನು ಏಕೆ ಬಳುತ್ತಾರೆಂದರೆ - ಅಲ್ಲಿನ ಪವಿತ್ರಪದವಾಚ್ಯಸುದರ್ಶನಸನ್ನಿಧಿಯಿಂದ ಆ ದಶಾಪವಿತ್ರಕ್ಕೂ ಪಾವಿತ್ರ್ಯ ಬರಲೆಂದು. ಈ ವಿಷಯವನ್ನು ರಾಜರು ಮುಂದೆ ವಿವರಿಸಲಿದ್ದಾರೆ.

**ಅತೋಽಪ್ಯನ್ಯಾರ್ಥಕಥನಂ ವ್ಯರ್ಥಮಾಸೀದ್ ದುರಾತ್ಮನಾಮ್ ।**
**ಸದೇತಿ ಚ ಪದಂ ಕುಪ್ಯೇತ್ ಪವಿತ್ರಾಂತರಕಲ್ಪನೇ ॥ ೫೮೭ ॥**

**ಅರ್ಥ–** ಅತಃ ಅಪಿ= ಆದ್ದರಿಂದಲೂ ಕೂಡ (ಉಕ್ತಯುಕ್ತಿಗಳಿರುವುದರಿಂದ) ಅನ್ಯಾರ್ಥಕಥನಂ= ಬೇರೆ ಅರ್ಥವನ್ನು ಹೇಳುವುದು, ದುರಾತ್ಮನಾಂ= ದುರ್ಬುದ್ಧಿಯುಳ್ಳವರಿಗೆ, ವ್ಯರ್ಥಂ ಆಸೀತ್= ನಿಷ್ಪ್ರಯೋಜಕವಾಯಿತು. ಚ= ಮತ್ತು, ಪವಿತ್ರಾಂತರಕಲ್ಪನೇ= ಪವಿತ್ರವೆಂಬ ಅನ್ಯವಸ್ತುವನ್ನು ಕಲ್ಪಿಸಿದರೆ, ಸದೇತಿ ಪದಂ= ಶ್ರುತಿಯಲ್ಲಿನ ಸದಾ ಎಂಬ ಪದವು, ಕುಪ್ಯೇತ್= ಸಿಟ್ಟಾಗುತ್ತದೆ.

**ಅನುವಾದ– ಪವಿತ್ರೀಕರಣಸಾಮರ್ಥ್ಯವು ಕೇವಲ ಸುದರ್ಶನಕ್ಕೇ ಇರುವುದರಿಂದ ಬೇರೆ ದಶಾಪವಿತ್ರ ಮುಂತಾದ ಅರ್ಥವನ್ನು ಪವಿತ್ರ ಶಬ್ದಕ್ಕೆ ಹೇಳುವ ದುಷ್ಟಬುದ್ಧಿಗಳಿಗೆ ಅದು ವ್ಯರ್ಥವೇ ಆಗುತ್ತದೆ. ಅಲ್ಲದೆ ಶ್ರುತಿಯಲ್ಲಿರುವ ಸದಾ ಎಂಬ ಪದವು ಕೋಪಿಸಿಕೊಳ್ಳುತ್ತದೆ. (ಸದಾ ಎಂಬ ಪದವು ಅನ್ಯಾರ್ಥಕಲ್ಪನೆಗೆ ವಿರೋಧವನ್ನು ತಂದೊಡ್ಡುತ್ತದೆ.)**

**ಭಾವವಿಲಾಸಿನೀ– ಅತಃ ಉಕ್ತಯುಕ್ತ್ಯಾ ಅಸ್ಯಾಂ ಶ್ರುತೌ ಸುದರ್ಶನಸ್ಯೈವ ಪವಿತ್ರಪದ-ವಾಚ್ಯತ್ವಾತ್ । ಅನ್ಯಾರ್ಥಕಥನಂ ಪವಿತ್ರಂ ತೇ ವಿತತಮಿತ್ಯಸ್ಯಾಂ ಋಷಿಪವಿತ್ರಪದಸ್ಯ ದಶಾಪವಿತ್ರ ರೂಪಾರ್ಥ ಕಥನಮ್ । ಪವಮಾನೇ ಪ್ರಾಕ್ ಪ್ರಸ್ತಾವಿತ ಪವಿತ್ರಸ್ಯೈವ ಪೂಯಮಾನೇ ಪ್ರಸ್ತಾವ್ಯತ್ವಾದಿತಿ ಭಾವಃ । ತರ್ಹ್ಯತ್ರಾಪಿ ದಶಾಪವಿತ್ರಸ್ಯೈವ ಪ್ರಸ್ತಾವೋಽಸ್ತ್ವಿತಿ ಚೇತ್ ನ । ದೂಷಿತತ್ವಾತ್ । ದೂಷಣಾಂತರಂ ಚಾಹ – ಸದೇತಿ ॥ ಯಜ್ಞ ಏವ ಸಂಭಾವಿತದಶಾಪವಿತ್ರಸ್ಯ ಸಾರ್ವಕಾಲೀನತ್ವಾಯೋಗಾತ್ ದಿವಿಸ್ಥದೇವೇಷು ಪ್ರಾಯಶೋಽಸಂಭವಾಚ್ಚೇತಿ ॥ ೫೮೭ ॥**

**ವಿವರಣೆ–** ಆದ್ದರಿಂದ ಎಂದರೆ ಮೇಲೆ ಹೇಳಿದ ಯುಕ್ತಿಯಿಂದ ಈ ಶ್ರುತಿಯಲ್ಲಿ (ಯೇನ ದೇವಾಃ ಈ ಶ್ರುತಿಯಲ್ಲಿ) ಸುದರ್ಶನವೇ ಪವಿತ್ರಪದವಾಚ್ಯವಾಗುತ್ತದೆ. ಅನ್ಯಾರ್ಥಕಥನಂ ಎಂದರೆ ಪವಿತ್ರಂ ತೇ ವಿತತಂ ಎಂಬ ಋಚೆಯಲ್ಲಿ ಪವಿತ್ರಪದಕ್ಕೆ ದಶಾ ಪವಿತ್ರ ಎಂಬ ಅರ್ಥವನ್ನು ಹೇಳಿದರೆ ಎಂದರ್ಥ. ಪವಮಾನಸೂಕ್ತಗಳಲ್ಲಿ ಈ ಹಿಂದೆ ಪ್ರಸ್ತಾಪಿಸಲ್ಪಟ್ಟ ಪವಿತ್ರವನ್ನೇ ಪೂಯಮಾನಮಂತ್ರಗಳಲ್ಲೂ ಪ್ರಸ್ತಾಪಿಸಬೇಕಷ್ಟೇ! ಹಾಗಾದರೆ ಅಲ್ಲಿಯೂ ದಶಾಪವಿತ್ರದ್ದೇ ಪ್ರಸ್ತಾಪನೆ ಇರಲಿ ಎಂದರೆ - ಹಾಗಲ್ಲ, ಈಗಾಗಲೇ ಈ ಅಭಿಪ್ರಾಯವನ್ನು ಖಂಡಿಸಲಾಗಿದೆ. ಬೇರೊಂದು ದೂಷಣವನ್ನೂ ಹೇಳುತ್ತಾರೆ - ಸದಾ ಎಂದು. ದಶಾಪವಿತ್ರವು ಯಜ್ಞದಲ್ಲಿ ಮಾತ್ರ ಸಂಭಾವಿತವು. ಅದು ಸದಾ ಎಂದು

ಸಾರ್ವಕಾಲೀನ ಆಗಲು ಶಕ್ಯವಿಲ್ಲ. ಸ್ವರ್ಗಾದಿಗಳಲ್ಲಿರುವ ದೇವತೆಗಳ ವಿಷಯದಲ್ಲಿ ಪ್ರಾಯಶಃ ಅದು ಅಸಂಭವವೇ.

ಯೇನ ದೇವಾಃ ಮಂತ್ರದಲ್ಲಿ ಸದಾ ಎಂಬ ಪದವು ಸಾರ್ವಕಾಲೀನ ಎಂಬರ್ಥದಲ್ಲಿದೆ. ದಶಾಪವಿತ್ರವೆಂಬ ಅನ್ಯಾರ್ಥಮಾಡುವ ದೋಷಬುದ್ಧಿಯುಳ್ಳವರಿಗೆ ಇದು ಬಾಧಕ. ಏಕೆಂದರೆ ದಶಾಪವಿತ್ರದ ಸಂದರ್ಭ ಬರುವುದು ಯಜ್ಞಗಳಲ್ಲಿ ಮಾತ್ರ. ದೇವತೆಗಳ ವಿಷಯದಲ್ಲಂತೂ ದೇವಲೋಕದಲ್ಲಿ ದಶಾಪವಿತ್ರದಿಂದ ಪಾವಿತ್ರ್ಯವು ಬರುವುದು ಅಸಂಭಾವಿತ. ಆದ್ದರಿಂದ ಸದಾ ಎಂಬ ಸಾರ್ವಕಾಲೀನತೆಯನ್ನು ತೋರಿಸುವ ಪದವು ಸುದರ್ಶನಚಕ್ರ ಎಂಬ ಅರ್ಥಮಾಡಿದರೇ ಸಂಮಜಸವಾಗುವುದು.

ಇದನ್ನೇ ರಾಜರು ತತ್ತ್ವಸಾರದಲ್ಲಿ -

ಪಾವನವ ಮಾಡಿಸುವ ಶಕ್ತಿ ನಮ್ಮಶ್ರೀ
ದೇವಿಯರಸನ ಚಕ್ರಕೆಂಬುದನು ।
ಭಾವಜ್ಞರಿಗೆ ತೋರಿಸಲು ಹರಿಚಕ್ರವನೆ
ಪವಿತ್ರನಾಮದಿಂ ಶ್ರುತಿ ಕರೆಯಿತು ॥೧೯॥ (ಸ್ಥಿತಿಸಂಧಿ) ಎಂದಿದ್ದಾರೆ.

**ಅತಃ ಶ್ರುತಿಃ ಪವಿತ್ರಂತೇ ಇತ್ಯತ್ರಾಪಿ ಸುದರ್ಶನಮ್ ।**
**ಪ್ರಭೋರಾಯುಧಮೇವಾಹ ವಿನಿಯೋಗಸ್ತಸ್ಯ ಸನ್ನಿಧೇಃ ।**
**ಅನ್ಯತ್ರಾಪಿ ಭವೇದನ್ನಮಂತ್ರಣೇ ಸೌರಮಂತ್ರವತ್ ॥ ೫೮೮ ॥**

**ಅರ್ಥ–** ಅತಃ= ಆದ್ದರಿಂದ, ಪವಿತ್ರಂತೇ ಇತಿ ಶ್ರುತಿಃ= ಪವಿತ್ರಂತೇ ಎಂಬ ಶ್ರುತಿಯು, ಅತ್ರಾಪಿ= ಇಲ್ಲಿಯೂ, ಪ್ರಭೋಃ = ಶ್ರೀಹರಿಯ, ಆಯುಧಂ ಏವ= ಆಯುಧವನ್ನೇ (ಸುದರ್ಶನಚಕ್ರವನ್ನೇ) ಆಹ= ಹೇಳಿದೆ. ಅನ್ಯತ್ರಾಪಿ = ಬೇರೆಡೆಯಲ್ಲಿಯೂ, ತಸ್ಯ ಸನ್ನಿಧೇಃ= ಆ ಸುದರ್ಶನದ ಸನ್ನಿಧಾನದ ದೆಸೆಯಿಂದ, ಅನ್ನಮಂತ್ರಣೇ = ಅನ್ನವನ್ನು ಅಭಿಮಂತ್ರಿಸುವಾಗ, ಸೌರಮಂತ್ರವತ್= ಗಾಯತ್ರೀಮಂತ್ರವನ್ನು ಉಪಯೋಗಿಸುವಂತೆ, ವಿನಿಯೋಗಃ= ಪವಿತ್ರಂ ತೇ ಎಂಬ ಮಂತ್ರದ ಬಳಕೆಯು ಇದೆ.

**ಅನುವಾದ–** ಆದ್ದರಿಂದ ಪವಿತ್ರಂ ತೇ ಎಂಬ ಶ್ರುತಿಯಲ್ಲಿಯೂ ಸಹ ಪವಿತ್ರಪದದಿಂದ ವಿಷ್ಣುವಿನ ಆಯುಧವಾದ ಸುದರ್ಶನವನ್ನೇ ಹೇಳಲಾಗಿದೆ. ಹಾಗಾದರೆ ದಶಾಪವಿತ್ರವನ್ನು ಅಭಿಮಂತ್ರಿಸಲು ಈ ಮಂತ್ರದ ವಿನಿಯೋಗ ಏಕೆ ಎಂದರೆ ಅಲ್ಲಿ ಪವಿತ್ರೀಕರಣಸಾಮರ್ಥ್ಯವುಳ್ಳ ಸುದರ್ಶನದ ಸಾನ್ನಿಧ್ಯಬರಲು. ಉದಾಹರಣೆಗೆ - ಊಟಮಾಡುವ ಅನ್ನವನ್ನು ಸೌರ (ಗಾಯತ್ರೀ)ಮಂತ್ರದಿಂದ ಅಭಿಮಂತ್ರಿಸುವ ಹಾಗೆ.

**ಭಾವವಿಲಾಸಿನೀ–** ಅತಃ ಪೂರ್ವಶ್ರುತಿಸಮಾಖ್ಯಾನಾತ್ । ಆಯುಧಂ ಸುದರ್ಶನಮ್ । ಕಥಂ ತರ್ಹಿ ದಶಾಪವಿತ್ರಪರತಯಾ ಅಸ್ಯ ಮಂತ್ರಸ್ಯ ವಿನಿಯೋಗ ಇತ್ಯತ ಆಹ – **ತಸ್ಯೇತಿ** ॥ ತಸ್ಯ ಸುದರ್ಶನಸ್ಯ ಸಂನಿಧೇಃ ದಶಾಪವಿತ್ರೇ ಸನ್ನಿಧಾನಾತ್ । ಛಿದ್ರೇ ವಸ್ತ್ರೇ ಪವಿತ್ರೀಕರಣಶಕ್ತ್ಯಾ-ಧಾನಾಯ ಸಹಸ್ರಛಿದ್ರಸಹಿತ ಭಗವತ್ ಸುದರ್ಶನಸ್ಯೈವಾವಶ್ಯಂ ಸನ್ನಿಧೇಯತ್ವಾದಿತಿ ಭಾವಃ । ಅನ್ಯತ್ರ ದಶಾಪವಿತ್ರೇ । ಅನ್ಯಾರ್ಥಕಮಂತ್ರಸ್ಯಾನ್ಯತ್ರವಿನಿಯೋಗೇ ದೃಷ್ಟಾಂತಮಾಹ – **ಅನ್ನಮಂತ್ರಣ ಇತಿ** ॥ ಸೌರಮಂತ್ರವತ್ ಗಾಯತ್ರೀಮಂತ್ರವತ್ । ಸೂರ್ಯಾರ್ಥಕತ್ವ-ಸೂಚನಾಯ ಸೌರೇತ್ಯುಕ್ತಮ್ ॥ ೫೮೮ ॥

**ವಿವರಣೆ–** ಅತಃ ಎಂದರೆ ಹಿಂದಿನ ಶ್ರುತಿಯ ಸಮಾಖ್ಯೆ ಇರುವುದರಿಂದ, ಆಯುಧಂ - ಸುದರ್ಶನವು, ಹಾಗಾದರೆ ಈ ಮಂತ್ರದ ವಿನಿಯೋಗವನ್ನು ದಶಾಪವಿತ್ರವನ್ನು ಅಭಿಮಂತ್ರಿಸಲು ಬಳಸುವರೇಕೆ ಎಂಬುದಕ್ಕೆ ತಸ್ಯ ಸನ್ನಿಧೇಃ ಎಂದು ಹೇಳಿದರು. ತಸ್ಯ ಎಂದರೆ ಆ ಸುದರ್ಶನದ, ಸನ್ನಿಧೇಃ - ದಶಾಪವಿತ್ರದಲ್ಲಿ ಸನ್ನಿಧಾನಬರಲಿಕ್ಕಾಗಿ, ತೂತುಗಳುಳ್ಳ ಆ ವಸ್ತ್ರದಲ್ಲಿ (ಸೋಮರಸವನ್ನು ಶೋಧಿಸುವ ವಸ್ತ್ರದತುಂಡಿನಲ್ಲಿ) ಪವಿತ್ರೀಕರಣ ಶಕ್ತಿಬರಲು ಭಗವಂತನ ಆಯುಧವಾದ ಸಹಸ್ರಛಿದ್ರಗಳುಳ್ಳ ಸುದರ್ಶನದ ಸನ್ನಿಧಾನವೇ ಅಲ್ಲಿ ಅವಶ್ಯವಾಗಿ ಇಡಬೇಕಾದ್ದರಿಂದ ಆ ಮಂತ್ರದ ವಿನಿಯೋಗ ಎಂದು ಅಭಿಪ್ರಾಯ. ಅನ್ಯತ್ರ ಎಂದರೆ ದಶಾಪವಿತ್ರದಲ್ಲಿ ಎಂದರ್ಥ. ಬೇರೆ ಅರ್ಥವನ್ನು ಹೇಳುವ ಮಂತ್ರವನ್ನು ಬೇರೆ ಕಡೆಯಲ್ಲಿ ಬಳಸುವ ಉದಾಹರಣೆಯನ್ನು ಹೇಳುತ್ತಾರೆ - ಅನ್ನಮಂತ್ರಣೇ ಎಂದು. ಸೌರಮಂತ್ರವತ್ ಎಂದರೆ ಗಾಯತ್ರೀಮಂತ್ರದಂತೆ. ಅದು ಸೂರ್ಯನನ್ನು ಹೇಳುತ್ತದೆ ಎಂಬರ್ಥದ ಸೂಚನೆಗಾಗಿ ಸೌರಮಂತ್ರ ಎಂದು ಹೇಳಿದ್ದಾರೆ.

ಪವಿತ್ರಂತೇ ಎಂಬ ಶ್ರುತಿಯು ಆಂಗೀರಸ ಋಷಿಗಳಿಂದ ದೃಷ್ಟವಾದದ್ದು. ಜಗತೀ ಛಂದಸ್ಸಿನಲ್ಲಿದ್ದು ಪವಮಾನಸೋಮದೇವತೆಗಳನ್ನು ಹೇಳುತ್ತದೆ.

ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।
ಅತಪ್ತತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ ವಹಂತಸ್ತತ್ ಸಮಾಶತ ॥

ಇಲ್ಲಿರುವ ಪವಿತ್ರ ಶಬ್ದವು ವಿಷ್ಣ್ವಾಯುಧಸುದರ್ಶನಚಕ್ರವನ್ನೇ ಹೇಳುತ್ತದೆ. ಹೇ ಬ್ರಹ್ಮನಿಗೂ ಒಡೆಯನಾದ ಶ್ರೀಹರಿಯೇ ನೀನು ಸರ್ವಶಕ್ತನಾಗಿದ್ದು ಎಲ್ಲರ ಶರೀರಗಳನ್ನು ವ್ಯಾಪಿಸಿರುವಿ. ನಿನ್ನ ಪವಿತ್ರವೂ ಅದರಂತೆ ಸರ್ವತ್ರ ವ್ಯಾಪ್ತವಾಗಿದೆ. (ನಿನ್ನೊಡನೆ ಇರುವ ನಿನ್ನ ಚಕ್ರವೂ ಕೂಡ ವ್ಯಾಪ್ತವೇ.) ಆದರಿಂದ ಅಂಕನ ಮಾಡಿಸಿಕೊಳ್ಳದವನು ಹಸಿ ಮಡಕೆಯಂತೆ ಕೆಡುತ್ತಾನೆ. ಯಾರು ಚಕ್ರದಿಂದ ಮೈತಾಪಮಾಡಿಸಿಕೊಳುವರೋ ಅವನು ಮೋಕ್ಷಾಖ್ಯಸುಖವನ್ನೇ ಹೊಂದುತ್ತಾನೆ ಎಂಬರ್ಥದ ಶ್ರುತಿಯಲ್ಲಿ ಪವಿತ್ರ ಎಂಬ ಪದವು ಸುದರ್ಶನವೆಂಬ ಅರ್ಥವನ್ನೇ ಕೊಡುತ್ತದೆ.

ಇನ್ನು ಈ ಮಂತ್ರವನ್ನು ಯಜ್ಞದಲ್ಲಿ ದಶಾಪವಿತ್ರವನ್ನು ಅಭಿಮಂತ್ರಿಸುವಾಗ ಬಳಸುತ್ತಾರಲ್ಲ ಎಂಬ ಪ್ರಶ್ನೆ ಬಂದರೆ - ಅಲ್ಲಿ ದಶಾಪವಿತ್ರಕ್ಕೆ ಪಾವಿತ್ರ್ಯವನ್ನು ಈ ಚಕ್ರಮಂತ್ರದ ಮೂಲಕ ತಂದುಕೊಡಲು ವಿನಿಯೋಗಿಸುವರು. ಸೂರ್ಯ-ದೇವತಾಕವಾದ ಗಾಯತ್ರೀಯನ್ನು ಅನ್ನಾಭಿಮಂತ್ರಣಕ್ಕೆ ಬಳಸುವರಷ್ಟೇ! ಇದನ್ನೇ ರಾಜರು ತಮ್ಮ ವೈಕುಂಠವರ್ಣನೆಯಲ್ಲಿ -

ಲೌಕಿಕಾಕನ್ನವ ಶುದ್ಧಿಮಾಡುವುದಕ್ಕೆ
ವಿವೇಕಿಗಳು ವ್ಯಾಹೃತಿಯಿಂದ ಪ್ರೋಕ್ಷಿಸಿ ।
ಬೇಕಾದ ಗಾಯತ್ರಿಮಂತ್ರದಿ ಮಂತ್ರಿಸಲಾ-
ಲೌಕಿಕಾನ್ನವು ಗಾಯತ್ರ್ಯರ್ಥವಹುದೆ ॥ ೨೨ ॥

ಎಂದಿರುವರು. ಆದ್ದರಿಂದ ಸುದರ್ಶನಚಕ್ರ ಪ್ರತಿಪಾದಕವಾದ ಮಂತ್ರವನ್ನು ದಶಾಪವಿತ್ರದ ಅಭಿಮಂತ್ರಣಕ್ಕೆ ಬಳಸಿದ ಮಾತ್ರಕ್ಕೆ ದಶಾಪವಿತ್ರವು ಆ ಮಂತ್ರದಿಂದ ಪ್ರತಿಪಾದ್ಯವಾಗಬೇಕಾಗಿಲ್ಲ.

ಪವಿತ್ರಂ ಚರಣಂ ನೇಮಿಃ ಅರಿಶ್ಚಕ್ರಂ ಸುದರ್ಶನಮ್ ।
ಸಹಸ್ರಾರಂ ಪ್ರಾಕೃತಘ್ನಂ ಲೋಕದ್ವಾರಂ ಮಹೌಜಸಮ್ ॥ ೫೮ ॥

ವಿಷ್ಣುಚಕ್ರಸ್ಯ ನಾಮಾನಿ ಪರ್ಯಾಯೇಣ ನಿಬೋಧ ಮೇ।
ಇತಿ ಪಾದ್ಮೋಕ್ತಗೌರೀಶವಾಕ್ ಹಿ ಲಿಂಗಾನುಶಾಸನಮ್ ॥ ೫೦ ॥

**ಅರ್ಥ–** ಇಲ್ಲಿ ಸುದರ್ಶನದ ಹತ್ತು ಹೆಸರುಗಳನ್ನು ಹೇಳಲಾಗಿದೆ. ಪವಿತ್ರಂ ಚರಣಂ ನೇಮಿಃ ಅರಿಶ್ಚಕ್ರಂ ಸುದರ್ಶನಂ ಸಹಸ್ರಾರಂ ಪ್ರಾಕೃತಘ್ನಂ ಲೋಕದ್ವಾರಂ ಮಹೌಜಸಂ= ಪವಿತ್ರ ಮೆದಲಾದವುಗಳು ವಿಷ್ಣುಚಕ್ರಸ್ಯ= ವಿಷ್ಣುಚಕ್ರದ, ನಾಮಾನಿ=ಹೆಸರುಗಳು, ಪರ್ಯಾಯೇಣ= ಏಕವಸ್ತುಬೋಧಕಶಬ್ದಗಳೆಂದು, ಮೇ= ನನ್ನಿಂದ, ನಿಬೋಧ= ತಿಳಿಯುವಂತಹವಳಾಗು. ಇತಿ= ಈ ರೀತಿಯಲ್ಲಿ, ಪಾದ್ಮೋಕ್ತಗೌರೀಶವಾಕ್= ಪದ್ಮಪುರಾಣದಲ್ಲಿ ಹೇಳಿದ ಪಾರ್ವತೀಪರಮೇಶ್ವರರ ಸಂಭಾಷಣೆಯು, ಹಿ= ಪ್ರಸಿದ್ಧವಾದ, ಲಿಂಗಾನುಶಾಸನಂ= ಸಮಾನಾರ್ಥಶಬ್ದಗಳನ್ನು ಕ್ರೋಢೀಕರಿಸುವ ಕೋಶವು.

**ಅನುವಾದ–** ಪದ್ಮಪುರಾಣದಲ್ಲಿ ಶಂಕರಪಾರ್ವತೀಸಂಭಾಷಣೆಯ ಸಂದರ್ಭದಲ್ಲಿ ಈಶ್ವರನು ಸುದರ್ಶನಚಕ್ರದ ಬೇರೆ ಬೇರೆ ಹೆಸರುಗಳನು ಹೇಳುತ್ತಾನೆ. ಅದರಲ್ಲಿ ಪವಿತ್ರ ಎಂಬ ಶಬ್ದವಂತೂ ಮೊದಲೇ ಪಠಿತವಾಗಿದೆ. ಆದ್ದರಿಂದ ಪವಿತ್ರಂತೇ ಎಂಬ ಋಕ್ಕಿನಲ್ಲಿ ಪವಿತ್ರಶಬ್ದಾರ್ಥವನ್ನು ವಿಷ್ಣುಚಕ್ರ ಎಂದು ಅರ್ಥೈಸಿದ್ದು ಸಮಂಜಸವೇ ಆಗಿದೆ.

**ಭಾವವಿಲಾಸಿನೀ–** ವ್ಯಾಸನಿಘಂಟುಪರ್ಯಾಲೋಚನಯಾಪಿ ಸುದರ್ಶನಮೇವ ಪವಿತ್ರ-ಪದವಾಚ್ಯಮಿತ್ಯಾಹ – **ಪವಿತ್ರಮಿತಿ ॥** ಗೌರೀಶಸ್ಯ ಲಿಂಗಪದವಾಚ್ಯತ್ವಾತ್ ಲಿಂಗಾನುಶಾಸನ-ಮಿತ್ಯುಕ್ತಮ್ । ಅಮರಸಿಂಹಾದಿಗ್ರಂಥಲಿಂಗಾನುಶಾಸನಮಿತಿ ಮಾನಯತಾ ಮಹಾಲಿಂಗಾ-ನುಶಾಸನಮಿದಂ ಕಥಂ ನ ಮಾನನೀಯಮಿತಿ ಸೂಚನಾಯ ಲಿಂಗಾನುಶಾಸನಮಿತ್ಯುಕ್ತಮ್ । ಅನೇನ "ಚರಣಂ ಪವಿತ್ರಂ ವಿತತಂ ಪುರಾಣಂ ಲೋಕಸ್ಯ ದ್ವಾರಮರ್ಚಿಮತ್ ಪವಿತ್ರಮಿತಿ ಶ್ರುತಿದ್ವಯಂ ಸುದರ್ಶನವಿಷಯಮೇವೇತಿ ಸೂಚಿತಂ ಭವತಿ । ಪರೋದೀರಿತಪವಿತ್ರೇ ಚರಣಪದಾಪ್ರಯೋಗಾಲ್ಲೋಕದ್ವಾರತ್ವಾಯೋಗಾತ್ ಅನಂತಾಸನಲೋಕಗಮ-ನಾಯಾಂಧೇ ತಮಸಿ ದ್ವಾರಂ ಕೃತವತಶ್ಚಕ್ರಸ್ಯೈವ ತದ್ಯೋಗಾಚ್ಚ ॥ ೫೮-೫೯ ॥

**ವಿವರಣೆ–** ವ್ಯಾಸನಿಘಂಟಿನ ಪರ್ಯಾಲೋಚನೆಯಿಂದಲೂ ಪವಿತ್ರ ಎಂಬ ಪದವು ಸುದರ್ಶನವನ್ನೇ ಹೇಳುತ್ತದೆ ಎನ್ನುತ್ತಾರೆ - ಪವಿತ್ರಂ ಚರಣಂ ಇತ್ಯಾದಿ. (ವೇದವ್ಯಾಸರು ಪುರಾಣಕರ್ತರಾದ್ದರಿಂದ- ಪುರಾಣದಲ್ಲಿನ ಪದಪುಂಜಗಳು ಅವರ ನಿಘಂಟು-ಎಂದಿದ್ದಾರೆ.) ಪಾರ್ವತೀಪತಿಶಂಕರನು ಲಿಂಗಶಬ್ದವಾಚ್ಯನಾಗಿರುವುದರಿಂದ ಲಿಂಗಾನು ಶಾಸನ ಎಂದಿರುವರು. (ಶಂಕರನು ತಿಳಿಸಿದ ಶಬ್ದಗಳು ಪರ್ಯಾಯಗಳು ಎಂಬರ್ಥ ದಲ್ಲಿ) ಅಮರಸಿಂಹ ಮುಂತಾದವರ ಗ್ರಂಥಗಳ್ನು ಲಿಂಗಾನುಶಾಸನ ಎಂದು ಒಪ್ಪತಕ್ಕವರಗೆ ಇದಂತೂ ಮಹಾಲಿಂಗಾನುಶಾಸನವು. - ವ್ಯಾಸೋಕ್ತವಾದುದರಿಂದ ಅದೇಕೆ ಮಾನ್ಯವಾಗಲಾರದು ಎಂದು ಸೂಚಿಸಲು ಲಿಂಗಾನುಶಾಸನ ಎಂಬ ಪದವನ್ನು ರಾಜರು ಹೇಳಿದ್ದಾರೆ. ಇದರಿಂದ ಚರಣಂ ಪವಿತ್ರಂ ವಿತತಂ ಪುರಾಣಂ, ಲೋಕಸ್ಯ ದ್ವಾರಂ ಅರ್ಚಿಮತ್ ಪವಿತಂ ಎಂಬ ಎರಡು ಶ್ರುತಿಗಳು ಸುದರ್ಶನಚಕ್ರವನ್ನೇ ಹೇಳುತ್ತವೆ ಎಂದು ಸೂಚಿಸಿದಂತೆ ಆಯಿತು. ಪರಕೀಯನು ಹೇಳುವ ಪವಿತ್ರಕ್ಕೆ ಚರಣ ಎಂಬ ಪದವನ್ನು ಬಳಸುವುದಿಲ್ಲ, ಅದು ಲೋಕದ್ವಾರವೂ ಆಗುವುದಿಲ್ಲ, ಅನಂತಾಸನಲೋಕಕ್ಕೆ ಹೋಗಲು ಅಂಧಂತಮಸ್ಸಿನಲ್ಲಿ ಕತ್ತಲೆಯನ್ನು ಸೀಳಿ ದಾರಿಯನ್ನು ಮಾಡಿಕೊಡುವ ಚಕ್ರಕ್ಕೇ ಈ ಹೆಸರು (ಲೋಕದ್ವಾರ) ಕೂಡುತ್ತದೆ.

ಪದ್ಮಪುರಾಣದಲ್ಲಿ ಶಂಕರ - ಪಾರ್ವತಿ ಸಂವಾದದಲ್ಲಿ ರುದ್ರದೇವರು ವಿಷ್ಣುವಿನ ಸುದರ್ಶನಚಕ್ರದ ಹತ್ತು ಹೆಸರುಗಳನ್ನು ಹೇಳುತ್ತಾರೆ. ಅದರಲ್ಲಿ ಪವಿತ್ರ ಶಬ್ದವೂ ಸುದರ್ಶನಚಕ್ರವಾಚಕವೇ ಆಗಿದೆ ಎಂದು ಸ್ಪಷ್ಟವಾಗಿ ಇದೆ.

ಅದರಂತೆ ಕೃಷ್ಣಯಜುರ್ವೇದದ ಮಂತ್ರವಾದ (ಕಾಠಕ , ತೃತೀಯ ಪ್ರಶ್ನ)
ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತಶ್ಚರತಿ ದುಷ್ಕೃತಾನಿ ।
ತೇನ ಪವಿತ್ರೇನ ಶುದ್ಧೇನ ಪೂತಾ ಅತಿಪಾಪ್ಮಾನಮರತಿ ತರೇಮ ॥

ಎಂಬಲ್ಲಿಯೂ ಪವಿತ್ರಶಬ್ದವು ಸುದರ್ಶನಚಕ್ರವನ್ನೇ ಹೇಳುತ್ತದೆ. ಲೋಕಸ್ಯ ದ್ವಾರಂ ಅರ್ಚಿಮತ್ ಪವಿತ್ರಂ ಎಂಬ ಮಂತ್ರವೂ ವಿಷ್ಣುಚಕ್ರವನ್ನೇ ಹೇಳುತ್ತದೆ.

ಲೋಕಸ್ಯ ದ್ವಾರಂ ಅರ್ಚಿಮತ್ ಪವಿತ್ರಂ
ಜ್ಯೋತಿಷ್ಮತ್ ಭ್ರಾಜಮಾನಂ ಮಹಸ್ವತೇ ।
ಅಮೃತಸ್ಯ ಧಾರಾ ಬಹುಧಾ ದೋಹಮಾನಂ
ಚರಣಂ ನೋ ಲೋಕೇ ಸುಧಿತಾನ್ ದಧಾತು ॥

**ಪಾವಮಾನೀ ತನುಶ್ಚೇಯಂ ಸ್ಯಾದಾಚಾರ್ಯಸ್ವರೂಪಿಣೀ ।**
**ಯಾऽಸ್ಯ ವೈಷ್ಣವಧರ್ಮಸ್ಯ ಸರ್ವತ್ರಾಪಿ ಪ್ರವರ್ತಿಕಾ ॥ ೫೯೧ ॥**

**ಅರ್ಥ–** ಇಯಂ= ಈ, ಪಾವಮಾನೀ = ವಾಯುದೇವರ ಸಂಬಂಧಿಯಾದ, ತನುಃ ಚ = ರೂಪವು, ಆಚಾರ್ಯಸ್ವರೂಪಿಣೀ ಸ್ಯಾತ್= ಶ್ರೀಮದಾನಂದತೀರ್ಥಭಗವತ್ಪಾದಾ-ಚಾರ್ಯರ ರೂಪವೇ ಆಗಿರುತ್ತದೆ. ಯಾ= ಯಾವ ರೂಪವು, ಸರ್ವತ್ರಾಪಿ= ಎಲ್ಲೆಡೆಯಲ್ಲಿಯೂ, ಅಸ್ಯ= ಈ, ವೈಷ್ಣವಧರ್ಮಸ್ಯ= ತಪ್ತಮುದ್ರಾಂಕನರೂಪವಾದ ವೈಷ್ಣವಧರ್ಮದ, ಪ್ರವರ್ತಿಕಾ= ಪ್ರಚಾರಕವು ಆಗಿದೇ.

**ಅನುವಾದ–** ಈ ತಪ್ತಮುದ್ರಾಧಾರಣಾದಿಗಳನ್ನೊಳಗೊಂಡ ವೈಷ್ಣವಧರ್ಮದ ಪ್ರಚಾರಕವಾದ ವಾಯುದೇವರ ರೂಪವು ಶ್ರೀಮಧ್ವಾಚಾರ್ಯರದ್ದೇ ಆಗಿದೆ.

**ವಿವರಣೆ–** ಆಚಾರ್ಯಸ್ವರೂಪಿಣೀ ಎಂದರೆ ಜಗದ್ಗುರುಸ್ವರೂಪಿಣೀ, ಏಕೆಂದರೆ ಮುನಿಗಳು ಅವರ ಹಸ್ತದಿಂದ ಮುದ್ರಾಂಕನ ಮಾಡಿಕೊಂಡು ತಮ್ಮ ಪಾವಿತ್ರ್ಯವನ್ನು ಪ್ರಾರ್ಥಿಸಿದ್ದಾರೆ. ಇಲ್ಲಿ ಪಾವಮಾನೀ ತನುಃ - ವಾಯುದೇವರ ರೂಪವೆಂದರೆ ಜ್ಞಾನಕಾರ್ಯಕ್ಕಾಗಿ ಅವತರಿಸಿದ ಮಧ್ವರೂಪವೇ. ಬಲಕಾರ್ಯಕ್ಕಾಗಿ ಪ್ರವೃತ್ತವಾದ ಹನುಮದ್ - ಭೀಮಾವತಾರಗಳಲ್ಲ. ಯಾ ಎಂದರೆ ಯಾವ ರೂಪವು, ಅಸ್ಯ ಎಂದರೆ ತಪ್ತಮುದ್ರಾಧಾರಣೆ ಎಂಬ ವೈಷ್ಣವ ಧರ್ಮದ. ಇದು ಲೋಕ ಹಾಗೂ ವೇದಗಳಲ್ಲಿ ಪ್ರಸಿದ್ಧವಿದೆಯಷ್ಟೇ!

ಪಾವಮಾನ್ಯಃ ಪುನಂತು ಮಾ ಎಂದು ವಾಯುದೇವರ ರೂಪಗಳು ನನ್ನನ್ನು ಪವಿತ್ರನನ್ನಾಗಿ ಮಾಡಲೆಂದು ಮಂತ್ರದ್ರಷ್ಟಾರಋಷಿಯ ಪ್ರಾರ್ಥನೆ ಇದೆ. ಈ ವಾಯುದೇವರ ರೂಪವೆಂದರೆ ಯಾವುದಾದೀತು? ಬಲಕಾರ್ಯದಲ್ಲಿ ಪ್ರವೃತ್ತವಾದ ಹನುಮ-ಭೀಮ ಅವತಾರಗಳಂತೂ ಅಲ್ಲ. ಆದ್ದರಿಂದ ಜಗದ್ಗುರುಸ್ವರೂಪರಾದ ಶ್ರೀಮನ್ಮಧ್ವಾಚಾರ್ಯರೇ ಮಾರುತೀ ತನುಃ ಎಂದೆನಿಸಿಕೊಳ್ಳುವರು. ಅವರೇ ಈ ತಪ್ತಮುದ್ರಾಧಾರಣೆಯೆಂಬ ವೈಷ್ಣವಧರ್ಮದ ಪ್ರಚಾರವನ್ನು ಮಾಡಿದವರು.

**ಸಾಚ ಪ್ರಸಿದ್ಧೇಃ ಬದರೀಮಧ್ಯೇ ಮುನಿಮನಃಪ್ರಿಯಾ ।**
**ವ್ಯಾಸಕೈಂಕರ್ಯಧುರ್ಯಾ ಚ ಮಾಧ್ವೀ ಭವಿತುಮರ್ಹತಿ ॥ ೫೯೨ ॥**

**ಅರ್ಥ–** ಸಾ ಚ= ಆ ವಾಯುದೇವರ ರೂಪವಾದರೋ, ಬದರೀಮಧ್ಯೇ= ಬದರಿಕಾಶ್ರಮದ ಮಧ್ಯದಲ್ಲಿ, ಮುನಿಮನಃಪ್ರಿಯಾ= ಋಷಿಗಳ ಮನಸ್ಸಿಗೆ ಪ್ರಿಯವಾದ, ವ್ಯಾಸಕೈಂಕರ್ಯಧುರ್ಯಾ= ಶ್ರೀವೇದವ್ಯಾಸರ ಸೇವೆಯನ್ನು ಮಾಡುವುದರಲ್ಲಿ ಮುಂಚೂಣಿಯಲ್ಲಿರುವ (ಧುರೀಣವಾದ) ಚ ಮಾಧ್ವೀ= ಶ್ರೀಮಧ್ವರೂಪವೇ, ಭವಿತುಂ= ಆಗಲು, ಅರ್ಹತಿ= ಯೋಗ್ಯವಾಗಿದೆ.

**ಅನುವಾದ–** ಪಾವಮಾನ್ಯಃ ಪುನಂತು ಮಾ ಎಂಬ ಶ್ರುತಿಯಲ್ಲಿ ಪಾವಮಾನೀ ಎಂದರೆ ವಾಯುದೇವರ ರೂಪಗಳು ನನ್ನನ್ನು ಪವಿತ್ರೀಕರಿಸಲಿ ಎಂದಿದೆ. ಈ ವಾಯುದೇವರ ರೂಪವು ಯಾವುದು ಎಂದು ಜಿಜ್ಞಾಸೆ ಮೂಡಲಾಗಿ ಶ್ರುತಿಪ್ರಸಿದ್ಧವಾದ ಹನುಮ - ಭೀಮ - ಮಧ್ವರಲ್ಲಿ ಮೊದಲಿನ ಎರಡು ರೂಪಗಳು ಬಲಕಾರ್ಯ ಪ್ರಚುರವಾದವುಗಳು. ಜಗದ್ಗುರು ಸ್ವರೂಪರೂ, ಉಪದೇಶಕರೂ ಆದ ರೂಪವೆಂದರೆ ಮಧ್ವರೂಪವೇ ಆಗುವುದು ಯುಕ್ತಿಯುಕ್ತವಾಗುತ್ತದೆ. ಆ ಮಧ್ವರೂಪವು ಬದರಿಕಾಶ್ರಮದಲ್ಲಿ (ಊರ್ಧ್ವಬದರಿಯ ಶ್ರೀವೇದವ್ಯಾಸದೇವರ ಆಶ್ರಯದಲ್ಲಿ) ಅಖಿಲಮುನಿವೃಂದಗಳಿಗೆ ಪ್ರೀತ್ಯಾಸ್ಪದರಾಗಿ, ವೇದವ್ಯಾಸದೇವರ ಸೇವೆಯನ್ನು ಇಂದಿಗೂ ಮಾಡುತ್ತಾ ವಿರಾಜಮಾನವಾಗಿದೆ. ಆದ್ದರಿಂದ ಮೇಲ್ಕಂಡ ಶ್ರುತಿಯಲ್ಲಿ ಸೂಚಿತ ಪಾವಮಾನ್ಯಃ ಎಂದರೆ ಶ್ರೀಮಧ್ವರ ರೂಪಗಳೇ ಆಗಿವೆ.

**ಭಾವವಿಲಾಸಿನೀ–** ಆಚಾರ್ಯಸ್ವರೂಪಿಣೀ ಜಗದ್ಗುರುಸ್ವರೂಪಿಣೀ । ಮುನಿಭಿಸ್ತತ್ಕರಕೃತ ಪವಿತ್ರಧಾರಣೇನಸ್ವಶುದ್ಧೇಃ ಪ್ರಾರ್ಥಿತತ್ವಾತ್ । ನತು ಬಲಕಾರ್ಯಾಯ ಪ್ರವೃತ್ತಾ ಹನೂಮದಾದಿತಿನುರಿತ್ಯರ್ಥಃ । ಯಾ ತನುಃ । ಅಸ್ಯ ತಪ್ತಮುದ್ರಾಧಾರಣಾಖ್ಯಸ್ಯ । ಪ್ರಸಿದ್ಧೇಃ ಲೋಕವೇದಯೋಃ ಪ್ರಸಿದ್ಧೇಃ ॥ ೫೧-೫೨ ॥

**ವಿವರಣೆ–** ಪ್ರಸಿದ್ಧ ಎಂದರೆ ಲೋಕ ಹಾಗೂ ವೇದಗಳಲ್ಲಿ ಎಂದರ್ಥ. (ಇಲ್ಲಿ ಲೋಕ ಎಂದರೆ ಪೌರುಷೇಯಪುರಾಣಾದಿಗಳು, ವೇದ ಎಂದರೆ ಅಪೌರುಷೇಯ ಶ್ರುತಿಗಳು ಎಂದರ್ಥ.)

ಶ್ರುತ್ಯುಕ್ತ ಪಾವಮಾನ್ಯಃ ಎಂದರೆ ಶ್ರೀಮಧ್ವರೂಪವೇ ಎಂದು ಇಲ್ಲಿ ಸಿದ್ಧಮಾಡಿದ್ದಾರೆ. ಬಹುವಚನ ಕೃತ್ಯವನ್ನು ಮುಂದೆ ಹೇಳಲಿದ್ದಾರೆ. ವಾದಿರಾಜರೇ ಹೇಳಿದಂತೆ **'ಅದೃಶ್ಯೋ ರೌಪ್ಯಪೀಠೇಽಸ್ತಿ ದೃಶ್ಯೋಽಸ್ತಿ ಬದರೀತಟೇ'** ಎಂದು ಆ ಮಧ್ವರೂಪವು ಇಂದಿಗೂ ಬದರಿಕಾಶ್ರಮದ ಶ್ರೀವೇದವ್ಯಾಸರದೇವರ ಸನ್ನಿಧಾನದಲ್ಲಿ ಅವರ ಕೈಂಕರ್ಯವನ್ನು ಮಾಡುತ್ತಲಿದೆ.

ಯುಗೇ ಯುಗೇ ಅವತೀರ್ಣಾನಾಂ ಬಹುತ್ವಮಪಿ ಯುಕ್ತಿಮತ್ ।
ದ್ವಿವಿಧಸ್ಯಾಸ್ಯ ಧರ್ಮಸ್ಯ ಮೌಲ್ಯಂ ಸಾ ಮೂರ್ತಿರರ್ಹತಿ ॥ ೫೩ ॥

**ಅರ್ಥ–** ಯುಗೇ ಯುಗೇ= ಪ್ರತಿಯುಗದಲ್ಲಿಯೂ, ಅವತೀರ್ಣಾನಾಂ= ಅವತಾರಮಾಡುವ ಮಧ್ವರೂಪಗಳ, ಬಹುತ್ವಂ ಅಪಿ= ಬಹುವಚನವೂ ಕೂಡ, ಯುಕ್ತಿಮತ್= ಯುಕ್ತಿಯುಕ್ತವೇ ಆಗುತ್ತದೆ. ದ್ವಿವಿಧಸ್ಯ ಅಸ್ಯ ಧರ್ಮಸ್ಯ = ಈ ರೂಪದ ಎರಡೂ ವಿಧದ ಧರ್ಮಗಳ (ತಪ್ತಮುದ್ರಾಂಕನ ಮತ್ತು ಶಾಸ್ತ್ರೋಪದೇಶ) ಮೌಲ್ಯಂ= ಮೂಲಕಾರಣತ್ವವನ್ನು, ಸಾ ಮೂರ್ತಿಃ= ಆ ಮಧ್ವರೂಪವು, ಅರ್ಹತಿ = ಹೊಂದಲು ಯೋಗ್ಯವಾಗಿದೆ.

**ಅನುವಾದ– ಯುಗಯುಗಗಳಲ್ಲೂ ಮಧ್ವಾವತಾರವಾಗುತ್ತದೆ. ಈ ದೃಷ್ಟಿಯಿಂದ ಶ್ರುತಿಯಲ್ಲಿನ ಪಾವಮಾನ್ಯಃ ಎಂಬ ಬಹುವಚನವು ಯುಕ್ತವೇ. ಈ ಮಧ್ವರೂಪವು ತಪ್ತಮುದ್ರಾಧಾರಣ ಮತ್ತು ಶಾಸ್ತ್ರೋಪದೇಶ ಎರಡಕ್ಕೂ ಮೂಲವಾಗಿದೆ.**

**ಭಾವವಿಲಾಸಿನೀ–ಮೌಲ್ಯಂ ಮೂಲಸ್ಯ ಭಾವಂ ಮೌಲ್ಯಂ ಮೂಲಕಾರಣತ್ವಮಿತ್ಯರ್ಥಃ॥೫೩॥**

**ವಿವರಣೆ–** ಮೌಲ್ಯಂ ಎಂದರೆ ಮೂಲದ ಭಾವ (ಇರುವಿಕೆ) ಮೂಲಕಾರಣ ಎಂದರ್ಥ.

ಧಾತಾ ಯಥಾಪೂರ್ವಮಕಲ್ಪಯತ್ ಎಂಬಂತೆ ಪ್ರತಿಯುಗಗಳಲ್ಲೂ ಮಧ್ವಾವತಾರ ಆಗುತ್ತಲೇ ಇರುತ್ತದೆ. ಆದ್ದರಿಂದ ಶ್ರುತ್ಯುಕ್ತ ಬಹುವಚನವು ಯುಕ್ತವೇ ಆಗಿದೆ. ಅಲ್ಲದೆ ವಾಯುದೇವರ ರೂಪಗಳು ಅಸಂಖ್ಯ. ಜ್ಞಾನಕಾರ್ಯವಂತೂ ಎಲ್ಲ ಗುರುಗಳಲ್ಲೂ ಅವರೇ ನಿಂತು ಪ್ರೇರಣೆಮಾಡಿಸಿದರೆ ಮಾತ್ರ ಆಗುವಂತಹದು. ಈ ಹಿಂದೆ ಹೇಳಿದಂತೆ ಇಂದಿಗೂ ಪೀಠಾಧಿಪತಿಗಳು, ಯತಿಶ್ರೇಷ್ಠರುಗಳಿಂದ ನಾವು ತೆಗೆದುಕೊಳ್ಳುವ ತಪ್ತಮುದ್ರಾಂಕನವು, ಅವರ ಅಂತರ್ಯಾಮಿಗಳಾಗಿ ಮೂಲಗುರುಗಳಾದ ಶ್ರೀಮನ್ಮಧ್ವಾಚಾರ್ಯರೇ ಅನುಗ್ರಹಿಸಿದ್ದೆಂಬ ಅನುಸಂಧಾನವಿರುತ್ತದಷ್ಟೇ! ಹೀಗಾಗಿ ಸಮಸ್ತ ಗುರ್ವಂತರ್ಯಾಮಿಗಳಾದ ಶ್ರೀಮಧ್ವಾಚಾರ್ಯರ ರೂಪಕ್ಕೆ ಬಹುವಚನವು ಯುಕ್ತವೇ ಆಗಿದೆ.

**ಬಲಕಾರ್ಯಾಣಿ ರೂಪಾಣಿ ವಾಯೋಃ ಸಂತು ಸಹಸ್ರಶಃ ।**
**ಜ್ಞಾನಕಾರ್ಯಂತು ತದ್ರೂಪಂ ಇದಮೇವ ಪ್ರದೃಶ್ಯತೇ ॥ ೫೪ ॥**

**ಅರ್ಥ–** ವಾಯೋಃ= ವಾಯುದೇವರ, ಬಲಕಾರ್ಯಾಣಿ= ಬಲಕಾರ್ಯ-ಪ್ರಚುರವಾದ, ರೂಪಾಣಿ= ರೂಪಗಳು, ಸಹಸ್ರಶಃ= ಸಾವಿರಾರು, ಸಂತು= ಇರಲಿ. ತು= ಆದರೆ, ಜ್ಞಾನಕಾರ್ಯಂ= ಜ್ಞಾನವೇ ಕಾರ್ಯವಾಗಿ ಉಳ್ಳ, ತದ್ರೂಪಂ= ಆ ವಾಯುವಿನ ರೂಪವು, ಇದಂ ಏವ= ಇದು ಮಾತ್ರ (ಈ ಮಧ್ವರೂಪವೇ) ಪ್ರದೃಶ್ಯತೇ= ಕಂಡುಬರುತ್ತದೆ.

**ಅನುವಾದ–** ವಾಯುದೇವರ ಬಲಕಾರ್ಯಮಾಡುವ ರೂಪಗಳು ಸಹಸ್ರಾರು ಇವೆ. ಆದರೆ ಜ್ಞಾನಕಾರ್ಯಕ್ಕೆ ಪ್ರವೃತ್ತವಾದ ರೂಪವು ಇದೊಂದೇ ಮಧ್ವರೂಪ ಎಂದು ತಿಳಿದುಬರುತ್ತದೆ.

**ಭಾವವಿಲಾಸಿನೀ–** ಜ್ಞಾನಕಾರ್ಯಂ ಜ್ಞಾನಮೇವ ಕಾರ್ಯಂ ಯಸ್ಯ ತತ್ತಥೋಕ್ತಂ ॥ ೫೪ ॥

**ವಿವರಣೆ–** ವಾಯುದೇವರ ಪ್ರಸಿದ್ಧವಾದ ಮೂರು ರೂಪಗಳಲ್ಲಿ ಹನುಮದ್ - ಭೀಮ ರೂಪಗಳು ಬಲಕಾರ್ಯಕ್ಕಾಗಿಯೇ ಅವತರಿಸಿದಂತಹವುಗಳು. ದುಷ್ಟಶಿಕ್ಷಣಕ್ಕಾಗಿ ಅಸಂಖ್ಯರೂಪಗಳು ಕಾರ್ಯಗಳನ್ನು ಮಾಡುತ್ತಲಿರುತ್ತವೆ. ಆದರೆ ಜ್ಞಾನಕಾರ್ಯಕ್ಕಾಗಿ ಮಾತ್ರ ಮೀಸಲಿದ್ದ ರೂಪವು ಶ್ರೀಮಧ್ವರೂಪವು.

ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ ।
ಬ್ರಹ್ಮ ತೇನ ಪುನೀಹೀತಿ ತಸ್ಯೈವ ಪ್ರಾರ್ಥನಾಂತರಮ್ ॥ ೫೫ ॥

**ಅರ್ಥ–** ಅಗ್ನೇ= ಹೇ ಅಗ್ನಿನಾಮಕ ಪವಮಾನನೇ, ತೇ= ನಿನ್ನ ಅರ್ಚಿಷಿ= ಅಗ್ನಿಜ್ವಾಲೆಯಲ್ಲಿ, ಅಂತರಾ= ಒಳಗೆ, ವಿತತಂ = ವಿಸ್ತಾರವಾಗಿ ಹಬ್ಬಿದ, ಯತ್ ಪವಿತ್ರಂ= ಯಾವ ಪವಿತ್ರನಾಮಕಚಕ್ರವೋ, ತೇನ= ಅದರಿಂದ, (ಆ ತಪ್ತಮುದ್ರೆಯಿಂದ) ಬ್ರಹ್ಮ= ವೇದವನ್ನು, ಪುನೀಹಿ= ಪವಿತ್ರವನ್ನಾಗಿ ಮಾಡು, ಇತಿ = ಎಂದು, ತಸ್ಯೈವ= ಆ ಚಕ್ರದ್ದೇ, ಪ್ರಾರ್ಥನಾಂತರಂ= ಇನ್ನೊಂದು ಪ್ರಾರ್ಥನೆ.

**ಅನುವಾದ–** 'ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ। ಬ್ರಹ್ಮತೇನ ಪುನೀಹಿ ನಃ' ಎಂಬ ಋಕ್ಕಿನಲ್ಲೂ ಅದೇ ಸುದರ್ಶನಚಕ್ರದ ಮತ್ತೊಂದು ಪ್ರಾರ್ಥನೆ ಇದೆ. ವೈಷ್ಣವತ್ವದಿಂದ ಪರಿಷ್ಕೃತವಾದ ಅಗ್ನಿಜ್ವಾಲೆಗಳಲ್ಲಿ ಸ್ಥಾಪಿಸಿದ ಸುದರ್ಶನಚಕ್ರದಿಂದ ಅಂಕನಮಾಡಿ ಹೇ ಅಗ್ನಿನಾಮಕ ಪವಮಾನನೇ ನಾವು ಪಠಿಸುತ್ತಿರುವ ವೇದವನ್ನು ಹಾಗೂ ನಮ್ಮನ್ನು ಪವಿತ್ರವನ್ನಾಗಿ ಮಾಡು.

**ಭಾವವಿಲಾಸಿನೀ–** ಪೂರ್ವೋಕ್ತಪರಿಶಿಷ್ಟ ಶ್ರುತಾವಪಿ ತಪ್ತಸುದರ್ಶನಧಾರಣಸ್ಯೈವ ಪ್ರಸ್ತುತಿರಿತಿ ಸೂಚನಾಯ ಸ್ಪಷ್ಟಂ ತಪ್ತಸುದರ್ಶನಧಾರಣಪ್ರತಿಪಾದಕಂ ತಸ್ಯೈವ ಋಷೇಃ ಸಂಹಿತಾಸ್ಥಂ ವಚನಮಪ್ಯಾಹ – **ಯತ್ತ ಇತಿ** ॥ ಪುನೀಹೀತಿ ಪುನೀಹಿನ ಇತಿ ಶ್ರುತ್ಯಾ । ಅಯಮರ್ಥಃ । ಹೇ ಅಗ್ನೇ ಅಂಗಭೂತರುದ್ರಾದಿದೇವನೇತೃತ್ವೇನಾಗ್ನೌ ಸನ್ನಿಹಿತತ್ವೇನ ಚ ಅಗ್ನಿಪದವಾಚ್ಯಪವಮಾನ-ಕುಂಡಸ್ಥಿತಲಕ್ಷ್ಮ್ಯಂ ನಾರಾಯಣಸಮಾಗಮೇನ ವಿಷ್ಣುಕುಮಾರತಯಾ ಜಾತಸ್ಯಾಭಿನವಗ್ನೇಃ ವಿಷ್ಣುಂ ಪ್ರತಿ ಕ್ರಿಯಮಾಣಹೋಮಯೋಗ್ಯಾಗ್ನೌ ತಾಂತ್ರಿಕೈಃ ಸನ್ನಿಧಾಪ್ಯಮಾನತ್ವಾತ್ ಪವಮಾನಸೂಕ್ತತ್ವಾಚ್ಚ ಅಗ್ನಿಸ್ಥಪವಮಾನಾಗ್ನೇರೇವಾತ್ರ ಗ್ರಹಣಮ್ । ತೇ ತವ ಅರ್ಚಿಷಿ ಜ್ವಲಾಯಾಂ ಅಂತರಾ ಅಂತಃ ವಿತತಂ ವಿಶೇಷೇಣ ತತಮ್ । ತಾಪಾಯ ಯಾವತ್ತಾಪಂ

ವಿಸ್ತಾರಿತಮಿತ್ಯರ್ಥಃ । ಯತ್ ಪವಿತ್ರಂ ಪಾವನತ್ವಾತ್ ಪವಿತ್ರವತ್ ವಜ್ರವತ್ ತ್ರಾತೃತ್ವಾದ್ವಾ ಪವಿತ್ರಪದವಾಚ್ಯಂ ಸುದರ್ಶನಮ್ । ವಸ್ತ್ರರೂಪದಶಾಪವಿತ್ರಸ್ಯ ಅಗ್ನಿಜ್ವಾಲಾಂತರ್ನಿವೇಶನೇ ದಾಹೇನ ನಾಶಾವಶ್ಯಂಭಾವಾತ್ ಅಗ್ನಿಜ್ವಾಲಾಂತರ್ನಿವೇಶನೇಽಪ್ಯನಶ್ಯತ್ ಪವಿತ್ರಂ ಚಕ್ರಮೇವ ಭವೇತ್ । ದಶಾಪವಿತ್ರೇ ಅಗ್ನಿಜ್ವಾಲಾಂತರ್ನಿವೇಶನಸ್ಯ ಶಿಷ್ಟೈರಕ್ರಿಯಮಾಣತ್ವಾತ್ ಚಕ್ರೇ ತಪ್ತಮುದ್ರಾಧಾರಣಾಯ ಕ್ರಿಯಮಾಣತ್ವಾದಪಿ ಚಕ್ರಮೇವೇದಂ ಭವೇತ್ । ತೇನ ಅಸ್ಮದ್ಭುಜೇಂಕಿತೇನ ವೈಷ್ಣವಾಗ್ನೌ ಸಂಸ್ಕೃತಸುದರ್ಶನೇನ । ನ ಇತ್ಯುಕ್ತ್ವಾ ಸ್ವಸಂಬಂಧಸ್ಯಾಪ್ಯಾ-ವಶ್ಯಕತ್ವಾತ್ ನಃ ಅಸ್ಮಾಕಂ ಬ್ರಹ್ಮ ವೇದಂ ಅಸ್ಮತ್ ಪಠಿತ ವೇದಮಿತ್ಯರ್ಥಃ । ಪುನೀಹಿ ಪವಿತ್ರಂ ಕುರು । ವಿಷ್ಣುಚಕ್ರಲಾಂಛನಾಭಾವೇ ಅವೈಷ್ಣವತಯಾ ವೇದೇ ಅನಧಿಕಾರಿತ್ವೇನ ಅನಧಿ ಕಾರಿಪಠಿತವೇದಸ್ಯ ಚ ಶೂದ್ರಪಠಿತವೇದಸ್ಯೇವ ಶೂದ್ರಸ್ಪೃಷ್ಟಬ್ರಾಹ್ಮಣವದಪವಿತ್ರತ್ವಾತ್ ತಪ್ತ ಸುದರ್ಶನಧಾರಣೇನಾಸ್ಮತ್ ಪಠಿತಂ ವೇದಂ ಪುನೀಹೀತ್ಯರ್ಥಃ । "ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೆ" ಇತಿ ವಚನಾತ್ ॥ ೫೫ ॥

**ವಿವರಣೆ–** ಈ ಹಿಂದೆ ಹೇಳಿದ ಪರಿಶಿಷ್ಟ (ಖಿಲ) ಶ್ರುತಿಗಳಲ್ಲಿಯೂ (ಯೇನ ದೇವಾಃ, ಪ್ರಾಜಾಪತ್ಯಂ) ತಪ್ತಸುದರ್ಶನಧಾರಣೆಯನ್ನು ಪ್ರಸ್ತಾಪಿಸಲಾಗಿದೆ ಎಂದು ಸೂಚಿಸಲು, ಸ್ಪಷ್ಟವಾಗಿ ತಪ್ತಸುದರ್ಶನಧಾರಣೆಯನ್ನೇ ಪ್ರತಿಪಾದಿಸುವ ಅದೇ ಋಷಿಗಳ ಸಂಹಿತೆಯಲ್ಲಿದ್ದ ವಚನವನ್ನೂ ಹೇಳುತ್ತಾರೆ. - ಯತ್ತೇ ಎಂದು. ಪುನೀಹಿ ಎಂದರೆ ಪುನೀಹಿ ನಃ ಎಂಬ ಶ್ರುತಿಯಿಂದ. ಅದರ ಅರ್ಥವು ಹೀಗಿದೆ -

ಹೇ ಅಗ್ನಿಯೇ, (ಅಂಗಭೂತ ರುದ್ರಾದಿದೇವತೆಗಳ ನೇತಾರನಾದ್ದರಿಂದ ಹಾಗೂ ಅಗ್ನಿಯಲ್ಲಿ ಸನ್ನಿಹಿತನಾದ್ದರಿಂದ ಅಗ್ನಿಪದವಾಚ್ಯನಾದ ಪವಮಾನನೇ!) ಹೋಮ ಕುಂಡದಲ್ಲಿ ಸನ್ನಿಹಿತರಾದ ಲಕ್ಷ್ಮೀನಾರಾಯಣರ ಸಮಾಗಮದಿಂದ ವಿಷ್ಣುಕುಮಾರನೆಂದು ಜನಿಸಿದ ಅಭಿನವ ಅಗ್ನಿಯನ್ನು ವಿಷ್ಣುವನ್ನು ಉದ್ದೇಶಿಸಿ ಮಾಡುವ ಹೋಮಕ್ಕೆ ಯೋಗ್ಯವನ್ನಾಗಿ ಮಾಡಲು ತಾಂತ್ರಿಕರು ಅಗ್ನಿಯನ್ನು ಸ್ಥಾಪಿಸುವುದರಿಂದಲೂ, ಈ ಮಂತ್ರವು ಪವಮಾನಸೂಕ್ತದಲ್ಲಿ ಪಠಿತವಾದದ್ದರಿಂದಲೂ ಇಲ್ಲಿ ಅಗ್ನ್ಯಂತರ್ಗತ-ಪವಮಾನನನ್ನೇ ಗ್ರಹಣಮಾಡಿರುವರು. ತೇ - ನಿನ್ನ ಅರ್ಚಿಷಿ - ಅಗ್ನಿ ಜ್ವಾಲೆಗಳಲ್ಲಿ ಅಂತರಾ - ಒಳಗೆ, ವಿತತಂ - ವಿಶೇಷವಾಗಿ ಹಬ್ಬಿಕೊಂಡ, ಕಾಯಿಸಲು ಎಷ್ಟು ಬೇಕೋ ಅಷ್ಟು ವಿಸ್ತೃತವಾದ ಎಂದರ್ಥ. ಯತ್ ಪವಿತ್ರಂ -ಪವಿತ್ರಮಾಡುವುದರಿಂದ, ಅಥವಾ ಪವಿಯಂತೆ - ವಜ್ರದಂತೆ, ರಕ್ಷಣೆಮಾಡುವುದರಿಂದ ಪವಿತ್ರ ಪದವಾಚ್ಯವಾದ ಯಾವ ಸುದರ್ಶನವೋ. (ಇಲ್ಲಿ ವಸ್ತ್ರರೂಪವಾದ ದಶಾ ಪವಿತ್ರ ಎಂದಿಟ್ಟುಕೊಂಡರೆ ಅದನ್ನು ಅಗ್ನಿಜ್ವಾಲೆಗಳಲ್ಲಿ ಹಾಕಿದರೆ ಅದು ಅವಶ್ಯವಾಗಿ ಸುಟ್ಟು ನಾಶವಾಗುವುದು. ಆದ್ದರಿಂದ ಅಗ್ನಿಜ್ವಾಲೆಗಳಲ್ಲಿಟ್ಟರೂ ಸಹ ನಾಶ ಹೊಂದದ ಪವಿತ್ರವೆಂದರೆ ಚಕ್ರವೇ ಆಗಬೇಕು. ಶಿಷ್ಟರು ದಶಾ ಪವಿತ್ರವನ್ನು ಅಗ್ನಿಜ್ವಾಲೆಗಳಲ್ಲಿ ಹಾಕುವುದಿಲ್ಲವಾದ್ದರಿಂದಲೂ, ತಪ್ತಮುದ್ರಾಧಾರಣೆಗಾಗಿ ಚಕ್ರವನ್ನು ಅಗ್ನಿಯಲ್ಲಿ ಹಾಕುವುದರಿಂದಲೂ, ಇದು

ಸುದರ್ಶನಚಕ್ರವೇ ಆಗಬೇಕು). ತೇನ ಎಂದರೆ ನಮ್ಮ ಭುಜದಲ್ಲಿ ಅಂಕಿತವಾದ ವೈಷ್ಣವಾಗ್ನಿಯಲ್ಲಿ ಸಂಸ್ಕೃತವಾದ ಸುದರ್ಶನದಿಂದ, ನಃ ಎಂದು ಹೇಳಿದ್ದರಿಂದ ಸ್ವ-ಸಂಬಂಧವೂ ಅವಶ್ಯವಾದ್ದರಿಂದ, ನಃ ಎಂದರೆ ನಮ್ಮಗಳ ಬ್ರಹ್ಮ ಎಂದರೆ ವೇದವನ್ನು ನಮ್ಮಿಂದ ಪಠಿತವಾದ ವೇದವನ್ನು ಪುನೀಹಿ - ಪವಿತ್ರವನ್ನಾಗಿ ಮಾಡು. ವಿಷ್ಣು ಲಾಂಛನವಿಲ್ಲದೇ ಇದ್ದರೆ ಅವೈಷ್ಣವರಾಗುವುದರಿಂದ, ವೇದದಲ್ಲಿ ಅಧಿಕಾರ ಇರುವುದಿಲ್ಲ ವಾದ್ದರಿಂದ, ಅನಧಿಕಾರಿಗಳಿಂದ ಪಠಿತವೇದವು ಶೂದ್ರರಿಂದ ಪಠಿತವೇದದಂತೆ, ಶೂದ್ರನು ಮುಟ್ಟಿದ ಬ್ರಾಹ್ಮಣನಂತೆ, ಅಪವಿತ್ರವಾಗುವುದರಿಂದ ತಪ್ತಸುದರ್ಶನ-ಧಾರಣೆಯಿಂದ ನಮ್ಮಿಂದ ಪಠಿಸಲ್ಪಟ್ಟ ವೇದವನ್ನು ಶುದ್ಧವನ್ನಾಗಿ ಮಾಡು ಎಂದರ್ಥ. ಏಕೆಂದರೆ ಅವೈಷ್ಣವಸ್ಯ ವೇದೇಽಪ್ಯಧಿಕಾರೋ 'ನ ವಿದ್ಯತೇ' ಎಂಬ ವಚನವು ಇದೆ.

ಯತ್ತೇ ಪವಿತ್ರಮರ್ಚಿಷ್ಯಗ್ನೇ ಎಂಬ ಮಂತ್ರವು ಅಂಗೀರಸ ಪವಿತ್ರ, ಅಥವಾ ಮೈತ್ರಾವರುಣಿ ವಶಿಷ್ಠಋಷಿಗಳಿಂದ ದೃಷ್ಟವಾದದ್ದು. ಗಾಯತ್ರೀಛಂದಸ್ಕವು. ಅಗ್ನಿನಾಮಕ ಪವಮಾನನನ್ನು ಹೋಮಕುಂಡದಲ್ಲಿ ತಾಪಿತವಾದ ಸುದರ್ಶನದಿಂದ ನಮಗೆ ಅಂಕನವನ್ನು ಮಾಡಿ ನಾವು ಪಠಿಸುವ ವೇದವನ್ನೂ, ನಮ್ಮನ್ನೂ ಪವಿತ್ರರನ್ನಾಗಿ ಮಾಡು ಎಂದು ಪ್ರಾರ್ಥನೆ ಇದೆ.

ಹೋಮಕುಂಡದಲ್ಲಿ ಋತ್ವಿಜರು ಮೊದಲು ಅಗ್ನಿಗೆ ಸಂಸ್ಕರಣವನ್ನು ಮಾಡುವರು. ಇಲ್ಲಿ ಲಕ್ಷ್ಮೀನಾರಾಯಣರ ಸನ್ನಿಧಾನವಿರುವುದರಿಂದ ಅವರಿಂದ ಹುಟ್ಟಿದ ಅಗ್ನಿಯು ಅವರ ಮಗನೇ ಆಗುತ್ತಾನೆ. ವಿಷ್ಣುಪುತ್ರ ಬ್ರಹ್ಮ - ಪವಮಾನರಷ್ಟೇ! ಅಂತಹ ಅಗ್ನಿಯಿಂದ ತಾಪಿತವಾದ ಸುದರ್ಶನವು ನಮ್ಮ ಭುಜಗಳಲ್ಲಿ ಅಂಕಿತವಾದರೆ ನಾವು ವೈಷ್ಣವರಾಗುವೆವು. ಅವೈಷ್ಣವರಿಗೆ ವೇದಾಧಿಕಾರ ಇರುವುದಿಲ್ಲವಾದ್ದರಿಂದ ಅಂತಹವರಿಂದ ಪಠಿತವೇದಗಳೂ ಅಪವಿತ್ರವಾಗುವವು. ಆದ್ದರಿಂದ ಚಕ್ರಾಂಕನ ಮಾಡಿಕೊಂಡೇ ವೇದಗಳನ್ನು ಪಠಿಸಬೇಕು. ಅದಕ್ಕಾಗಿ ಈ ಪ್ರಾರ್ಥನೆ.

ಇನ್ನು ಋಕ್ಕಿನಲ್ಲಿರುವ ಪವಿತ್ರಶಬ್ದಕ್ಕೆ ದಶಾಪವಿತ್ರವೆಂದರ್ಥಮಾಡಿದರಂತೂ ಅದನ್ನು ಅಗ್ನಿಯಲ್ಲಿ ಹಾಕಲೂ ಬರುವುದಿಲ್ಲ. (ಸುಟ್ಟು ಹೋಗುತ್ತದೆ.) ಅದು ನಮ್ಮನ್ನು ಹಾಗೂ ನಾವು ಪಠಿಸುವ ವೇದವನ್ನು ಪವಿತ್ರವನ್ನಾಗಿ ಮಾಡುವುದೂ ಇಲ್ಲ. ಆದ್ದರಿಂದ ರಾಜರು ತಿಳಿಸಿದ ಅರ್ಥವೇ ಸಮಂಜಸ ಹಾಗೂ ಪ್ರಾಮಾಣಿಕವಾದುದು.

**ಸಖ್ಯುರಗ್ರೇ ಹೃದಿಗತಂ ಅಗ್ರ್ಯಾಖ್ಯಂ ತಂ ಗುರುಂ ಪ್ರತಿ ।**
**ಸ್ಪಷ್ಟೀಕರ್ತುಂ ಮಹಾಧರ್ಮಂ ತಪ್ತಚಕ್ರಾಂಕಧಾರಣಮ್ ॥ ೫೬ ॥**

**ಅರ್ಥ–** ಸಖ್ಯುಃ= ಮಿತ್ರನ, ಅಗ್ರೇ = ಎದುರಿಗೆ, ಹೃದಿಗತಂ= ಮನಸ್ಸಿನಲ್ಲಿರುವುದನ್ನು ತಂ= ಆ, ಅಗ್ರ್ಯಾಖ್ಯಂ= ಜೀವೋತ್ತಮರಾದ, ಗುರುಂ ಪ್ರತಿ= ಮಧ್ವರೂಪೀ ಪವಮಾನನನ್ನು

ಉದ್ದೇಶಿಸಿ, ಸ್ಪಷ್ಟೀಕರ್ತುಂ= ಸ್ಪಷ್ಟವಾಗಿ ನಿರೂಪಿಸಲು, ಮಹಾಧರ್ಮಂ= ತಪ್ತಚಕ್ರಾಂಕನವು ಮಹಾಧರ್ಮವೆಂದು ತೋರಿಸಲು, ತಪ್ತಚಕ್ರಾಂಕಧಾರಣಂ= ತಪ್ತಸುದರ್ಶನಧಾರಣೆಯ ಪ್ರಾರ್ಥನೆ ಇಲ್ಲಿದೆ.

**ಅನುವಾದ–** ಅಗ್ನಿಯ ಮಿತ್ರನು ವಾಯುದೇವನು. ಹಾಗಾಗಿ ಮಂತ್ರದ್ರಷ್ಟಾರರಾದ ಆಂಗೀರಸ ವಶಿಷ್ಠಾದಿ ಋಷಿಗಳು ತಪ್ತಚಕ್ರಾಂಕನವನ್ನು ಧರಿಸವುದು ಮಹಾಧರ್ಮವೆಂಬ ತಮ್ಮ ಹೃದ್ಗತವನ್ನು ಅಗ್ನಿಮಿತ್ರನಾದ ವಾಯುದೇವನ ಎದುರಿಗೆ ಪ್ರಾರ್ಥಿಸಿದ್ದಾರೆ.

**ಭಾವವಿಲಾಸಿನೀ–** ಇಮಮೇವಾರ್ಥಮಭಿಪ್ರೇತ್ಯಾಹ – **ಸಖ್ಯುರಿತ್ಯಾದಿನಾ ॥ ಗುರುಂ ಮಧ್ವರೂಪಿಣಂ ಪವಮಾನಮ್ ॥ ೫೯ ॥**

**ವಿವರಣೆ–** ಇದೇ ಅರ್ಥದ ಅಭಿಪ್ರಾಯದಿಂದ ಸಖ್ಯುರಗ್ರೇ ಇತ್ಯಾದಿ ಹೇಳುತ್ತಾರೆ. ಗುರುಂ ಎಂದರೆ ಮಧ್ವರೂಪಿಯಾದ ಪವಮಾನನನ್ನು ಎಂದರ್ಥ.

ತಪ್ತಮುದ್ರಾಂಕನವನ್ನು ಮಾಡಿಸಿಕೊಳ್ಳುವುದು ಮಹಾಧರ್ಮವೆಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ವಾಯುಮಿತ್ರನಾದ ಅಗ್ನಿಯ ಎದುರಿಗೆ, ಅಗ್ನಿಮಿತ್ರನಾದ ಪವಮಾನನನ್ನು ಕುರಿತು ಈ ಮಂತ್ರದ್ರಷ್ಟಾರರಾದ ಋಷಿಗಳು ಪ್ರಾರ್ಥಿಸಿದ್ದಾರೆ.

**ಅಥವಾ**

ಮಿತ್ರನಾದ ಅಗ್ನ್ಯಂತರ್ಗತ ಅಂಗಭೂತರುದ್ರಾದಿದೇವತೆಗಳಲ್ಲಿ ನೇತಾರನಾದ (ಶ್ರೇಷ್ಠನಾದ) ಅಗ್ನಿನಾಮಕ ಮಧ್ವರೂಪೀ ಪವಮಾನಗುರುವನ್ನು ಕುರಿತು ತಪ್ತಾಂಕನವು ಮಹಾಧರ್ಮವೆಂಬುದನ್ನು ಸ್ಪಷ್ಟೀಕರಿಸಲು ಈ ಪ್ರಾರ್ಥನೆ ಇದೆ.

**ಅಗ್ನಿಶ್ಚ ದಹ್ಯಾತ್ ತ್ವಾಂ ನೋಚೇತ್ ಪೂರ್ವಾ ವಾಕ್ ಚ ಪ್ರಧಕ್ಷ್ಯತಿ ।**
**ಅನ್ಯಥಾ ವಾಕ್ಯಭೇದಃ ಸ್ಯಾತ್ ಸೂಕ್ತಂ ಚೈತತ್ ಪ್ರಕುಪ್ಯತಿ ॥ ೫೮ ॥**

**ಅರ್ಥ–** ನೋಚೇತ್= ಇಲ್ಲವಾದರೆ (ಇಲ್ಲಿನ ಪವಿತ್ರ ಪದವು ವಿಷ್ಣುಚಕ್ರ ಎಂಬರ್ಥವು ಇಲ್ಲವಾದರೆ) ತ್ವಾಂ= ನಿನ್ನನ್ನು, ಪೂರ್ವಾ ವಾಕ್= ಪೂರ್ವೋದಾಹೃತವಾದ ಯೇನ ದೇವಾಃ ಎಂಬ ಮಂತ್ರವು, ಪ್ರಧಕ್ಷ್ಯತಿ= ಸುಟ್ಟುಹಾಕುತ್ತದೆ. ಚ= ಮತ್ತು. ಅಗ್ನಿಃ = ಅಗ್ನಿಯು, ದಹ್ಯಾತ್= ನಿನ್ನ ದಶಾಪವಿತ್ರವನ್ನು ಸುಟ್ಟುಹಾಕುತ್ತದೆ. ಅನ್ಯಥಾ = ಬೇರೆರೀತಿಯಿಂದ ಅರ್ಥಮಾಡಿದರೆ, ವಾಕ್ಯಭೇದಃ ಸ್ಯಾತ್= ಆ ಎರಡೂ ವಾಕ್ಯಗಳು ಭಿನ್ನಾಭಿಪ್ರಾಯವನ್ನು ಹೇಳಿದಂತಾಗುತ್ತದೆ. ಚ= ಮತ್ತು, ಏತತ್ ಸೂಕ್ತಂ= ಈ ಯತ್ತೇ ಪವಿತ್ರಂ ಎಂಬ ಈ ಸೂಕ್ತವು, ಪ್ರಕುಪ್ಯತಿ= ಕೋಪಗೊಳ್ಳುತ್ತದೆ (ತಪ್ಪು ಅರ್ಥವನ್ನು ಸಹಿಸಲಾರದು).

**ಅನುವಾದ–** ಒಂದು ವೇಳೆ ಪವಿತ್ರಶಬ್ದವಾಚ್ಯವಾದುದು ದಶಾಪವಿತ್ರವೆಂಬ ಸಹಸ್ರಛಿದ್ರವುಳ್ಳ ಶೋಧಿಸುವ ಬಟ್ಟೆ ಎಂದಾದರೆ ಅಗ್ನಿಜ್ವಾಲೆಗಳಲ್ಲಿ ಅದನ್ನು ಹಾಕಿದರೆ ಅದು ಸುಟ್ಟು ಹೋಗುತ್ತದೆ. ಮತ್ತು ಹಿಂದಿನ ವಾಕ್ಯವು (ಯೇನ ದೇವಾ ಎಂಬುದು) ನಿನ್ನನ್ನು ಸುಡುತ್ತದೆ. ಅಲ್ಲದೇ ವಾಕ್ಯಭೇದವುಂಟಾಗಿ (ಪರಸ್ಪರ ಭಿನ್ನಾರ್ಥಕಗಳಾಗಿ) ಈ ಸೂಕ್ತವು (ಯತ್ತೇ ಪವಿತ್ರಂ) ಕೋಪಿಸಿಕೊಳ್ಳುತ್ತದೆ.

**ಭಾವವಿಲಾಸಿನೀ–** ನೋ ಚೇತ್ ಅತ್ರತ್ಯಪವಿತ್ರಪದವಾಚ್ಯಂ ಚಕ್ರಂ ನೋ ಚೇತ್ ದಶಾಪವಿತ್ರ-ಮುಚ್ಯತೇ ಚೇದಿತ್ಯರ್ಥಃ। ತ್ವಾಂ ತ್ವದಭಿಮತದಶಾಪವಿತ್ರಂ ದಹ್ಯಾತ್ ತ್ವದಭಿಮತದಶಾಪವಿತ್ರ-ಸ್ಯಾತ್ರ ಗ್ರಹಣೇಽನುಪಪತ್ತಿಂ ದರ್ಶಯಿತ್ವಾ ಪರಾಭವಜಾತಲಜ್ಜಾಯಾ ಅಗ್ನೌ ಪತಂ ತಂ ತ್ವಾಂ ದಹ್ಯಾದಿತಿ ವಾ। ಪೂರ್ವಾ ಅಸ್ಮಾಭಿಃ ಪೂರ್ವಮುದಾಹೃತಾ। ವಾಕ್ ಯೇನ ದೇವಾ ಇತಿ ವಾಕ್। ಅನ್ಯಥಾ ಪೂರ್ವವಾಕ್ಯೇಽಪಿ ಸುದರ್ಶನಾಗ್ರಹಣೇ ವಾಕ್ಯಭೇದಃ ಉದ್ದಿಷ್ಟಪರಿ-ಶಿಷ್ಟ ವಾಕ್ಯಯೋರರ್ಥಭೇದಃ। ಸೂಕ್ತಂ ಏಕಾರ್ಥಪ್ರತಿಪಾದಕವಾಕ್ಯಸಮುದಾಯಾತ್ಮಕಂ ಸೂಕ್ತಮ್ ॥ ೫೯೭ ॥

**ವಿವರಣೆ–** ನೋಚೇತ್ ಎಂದರೆ ಇಲ್ಲಿರುವ ಪವಿತ್ರಪದವಾಚ್ಯವಾದುದು ಚಕ್ರ ಎಂಬರ್ಥವಾಗದಿದ್ದರೆ, ದಶಾಪವಿತ್ರವನ್ನೇ ಹೇಳುತ್ತದೆ ಎಂದಾದರೆ ಎಂದರ್ಥ. ತ್ವಾಂ ನಿನಗೆ ಅಭಿಮತವಾದ ದಶಾಪವಿತ್ರವನ್ನು ದಹ್ಯಾತ್ -ಸುಟ್ಟುಹಾಕುತ್ತದೆ. ಅಥವಾ ನಿನಗೆ ಅಭಿಮತವಾದ ದಶಾಪವಿತ್ರ ಎಂಬರ್ಥವನ್ನು ಸ್ವೀಕರಿಸಿದರೆ ಆಗುವ ಅನುಪಪತ್ತಿಯನ್ನು ತೋರಿಸಿ, ಸೋತೆನೆಂಬ ನಾಚಿಕೆಯಿಂದ ಅಗ್ನಿಯಲ್ಲಿ ಹಾರಿಕೊಳ್ಳುವ ನಿನ್ನನ್ನು ದಹಿಸಿಹಾಕುವುದು. ಪೂರ್ವಾ ಎಂದರೆ ನಮ್ಮಿಂದ ಈ ಹಿಂದೆ ಉದಾಹರಿಸಲ್ಪಟ್ಟ ವಾಕ್ - ಯೇನ ದೇವಾಃ ಎಂಬ ವಾಕ್ಯವು. ಅನ್ಯಥಾ ಎಂದರೆ ಪೂರ್ವವಾಕ್ಯದಲ್ಲೂ ಸುದರ್ಶನ ಎಂಬರ್ಥವನ್ನು ಹೇಳದಿದ್ದರೆ, ವಾಕ್ಯಭೇದಃ - ಉದ್ದಿಷ್ಟ ಮತ್ತು ಪರಿಶಿಷ್ಟ ವಾಕ್ಯಗಳಲ್ಲಿ (ಯತ್ತೇ ಪವಿತ್ರಂ ಮತ್ತು ಯೇನ ದೇವಾಃ) ಅರ್ಥಭೇದವು ಉಂಟಾಗುವುದು. ಸೂಕ್ತವೆಂದರೆ ಒಂದೇ ಅರ್ಥವನ್ನು ಪ್ರತಿಪಾದನೆಮಾಡುವ ವಾಕ್ಯಗಳ ಸಮುದಾಯವು.

ಪವಿತ್ರಶಬ್ದಕ್ಕೆ ದಶಾಪವಿತ್ರ ಎಂಬರ್ಥಮಾಡಿದರೆ ಬರುವ ಅನುಪಪತ್ತಿಗಳನ್ನು ಇಲ್ಲಿ ತೋರಿಸಿ ಪರವಾದಿಯನ್ನು ಹಾಸ್ಯಮಾಡುತ್ತಾರೆ. ಹೋಮಕುಂಡದಲ್ಲಿ ದಶಾಪವಿತ್ರವನ್ನು ಹಾಕಿದರೆ ಅದು ಸುಟ್ಟುಹೋಗವುದು. ಪೂರ್ವಶ್ರುತಿಯಲ್ಲಿ ಹೇಳಿದಂತೆ ದೇವತೆಗಳು ಈ ಬಟ್ಟೆಯಿಂದ ತಮ್ಮನ್ನು ಪವಿತ್ರಮಾಡಿಕೊಳ್ಳಲು ಸಾಧ್ಯವಿಲ್ಲ. ಈ ಅನುಪಪತ್ತಿಯನ್ನು ನೋಡಿ ನಾಚಿಕೆಯಿಂದ ನೀನು ಅಗ್ನಿಪ್ರವೇಶಮಾಡಬೇಕಾದೀತು. ಆಗ ಅಗ್ನಿಯು ನಿನ್ನನ್ನು ದಹಿಸುವುದು. ಮೇಲಿನ ಎರಡೂ ಋಕ್ಕುಗಳೂ ಪವಮಾನ ಸೂಕ್ತಗಳಲ್ಲಿರುವುದರಿಂದ ಸಮಾನ ಅರ್ಥವನ್ನೇ ಹೇಳುವುದು ನ್ಯಾಯ. ಆದ್ದರಿಂದ ಎರಡೂ ಕಡೆಯಲ್ಲಿ ಪವಿತ್ರ ವೆಂದರೆ ಸುದರ್ಶನ ಚಕ್ರ ಎಂಬರ್ಥವೇ ಸರಿಯಾದುದು.

ವೈಕುಂಠ ವರ್ಣನೆಯಲ್ಲಿ 'ಯತ್ತೇ ಪವಿತ್ರಮರ್ಚಿಷ್ಯಗ್ನೇ' ಎಂಬ ಶ್ರುತಿ ಮತ್ತೆ ನಿನ್ನ ಖಂಡವ ಸುಡದೇ? ಚಿತ್ತಜನಯ್ಯನ ಚಕ್ರವೆಂಬ ಪವಿತ್ರಕ್ಕೆ ತಾಪ ಒಪ್ಪುವುದೇ ವಾದಿ ॥29॥ ಎಂದಿದ್ದಾರೆ.

ಇಲ್ಲಿ ಖಂಡ ವೆಂದರೆ ದಶಾಪವಿತ್ರವೆಂಬ ವಸ್ತ್ರಖಂಡ ಹಾಗೂ ಪರವಾದಿಯ ಮೈಯ ಮಾಂಸಖಂಡ ಎಂದಭಿಪ್ರಾಯ.

**ಅಗ್ನೇ ತೇ ಅರ್ಚಿಷಿ ಯಚ್ಚಕ್ರಮಂತರಾ ವಿತತಂ ಕೃತಮ್ ।**
**ತಪ್ತೇನ ತೇನ ಚಕ್ರೇಣ ಬ್ರಹ್ಮ ವೇದಂ ಪುನೀಹಿ ನಃ ॥ ೫೮ ॥**

**ಅರ್ಥ–** ಅಗ್ನೇ = ಹೇ ಅಗ್ನಿಯೇ ಅಥವಾ ಅಗ್ನಿಸಂಬಂಧಿಯಾದ ಪವಮಾನನೇ, (ಅಗ್ನಿನಾಮಕ ಪವಮಾನನೇ) ಯತ್= ಯಾವ ಕಾರಣದಿಂದ, ತೇ= ನಿನ್ನ, ಅರ್ಚಿಷಿ= ಜ್ವಾಲೆಗಳಲ್ಲಿ, ಚಕ್ರಂ= ವಿಷ್ಣುಚಕ್ರವು, ಅಂತರಾ ವಿತತಂ ಕೃತಂ= ವ್ಯಾಪ್ತವಾಗಿಡಲ್ಪಟ್ಟಿದೆಯೋ, ತೇನ= ಆ ಜ್ವಾಲೆಗಳಿಂದ, ತಪ್ತೇನ= ದಹಿಸಲ್ಪಟ್ಟ ಚಕ್ರೇಣ= ಚಕ್ರದಿಂದ, ಬ್ರಹ್ಮ ವೇದ= ಬ್ರಹ್ಮ ಎಂದರೆ ವೇದವನ್ನು ಪುನೀಹಿ = ಶುದ್ಧವನ್ನಾಗಿ ಮಾಡು.

**ಅನುವಾದ–** ಯತ್ತೇ ಪವಿತ್ರಂ ಎಂಬ ಶ್ರುತ್ಯರ್ಥವನ್ನು ಇಲ್ಲಿ ಅನುವಾದಿಸುತ್ತಾರೆ. ಹೇ ಅಗ್ನಿಯೇ (ಪವಮಾನನೇ) ನಿನ್ನ ಜ್ವಾಲೆಗಳಲ್ಲಿ ಇಡಲ್ಪಟ್ಟ ತಪ್ತವಾದ ಸುದರ್ಶನಚಕ್ರದಿಂದ ನಮ್ಮ ಭುಜದಲ್ಲಿ ಅಂಕನಮಾಡಿ, ವೇದಾಧಿಕಾರವನ್ನುಂಟು ಮಾಡಿ ನಮ್ಮನ್ನೂ, ವೇದವನ್ನೂ ಪವಿತ್ರೀಕರಿಸು. ಚಕ್ರಾಂಕನವಿಲ್ಲದ ಬ್ರಾಹ್ಮಣರಿಗೆ ವೇದಾಧಿಕಾರ ಇಲ್ಲ. ಹಾಗೆಯೇ ಪಠಣಮಾಡಿದರೆ ವೇದವು ಅಪವಿತ್ರವಾಗುವುದು.

**ಭಾವವಿಲಾಸಿನೀ–** ಯದ್ಯಸ್ಮಾತ್ ॥ ೫೮ ॥

**ವಿವರಣೆ–** ಪರಿಷ್ಕೃತವೈಷ್ಣವಾಗ್ನಿಯಲ್ಲಿ ತಪ್ತವಾದ ಸುದರ್ಶನದಿಂದ ಭುಜದಲ್ಲಿ ಅಂಕನಮಾಡಿಸಿಕೊಳ್ಳುವುದರಿಂದ ಬ್ರಾಹ್ಮಣನಿಗೆ ವೇದಾಧಿಕಾರವು ಬರುವುದು. ಅದಿಲ್ಲದೆ ವೇದ ಪಠಣಮಾಡಿದರೆ ಸ್ವಾಭಾವಿಕವಾಗಿ ಪವಿತ್ರವಿದ್ದ ವೇದವೂ ಅಪವಿತ್ರವಾಗುವುದು. ಶೂದ್ರ ಸ್ಪೃಷ್ಟ ಬ್ರಾಹ್ಮಣನಂತೆ. ಆದ್ದರಿಂದ ಆಂಗೀರಸ, ವಸಿಷ್ಠಾದಿ ಋಷಿಗಳು ಅಗ್ನಿಯನ್ನು ಅಗ್ನ್ಯಂತರ್ಗತ ಪವಮಾನನನ್ನು ಈ ರೀತಿ ಪ್ರಾರ್ಥಿಸುತ್ತಾರೆ. ನಿನ್ನಲ್ಲಿಟ್ಟು ಕಾಯಿಸಲ್ಪಟ್ಟ ಚಕ್ರದಿಂದ ನಮ್ಮ ಬ್ರಾಹ್ಮಣ್ಯವನ್ನೂ, ನಾವು ಪಠಿಸುವ ವೇದವನ್ನೂ ಪವಿತ್ರಗೊಳಿಸು ಎಂದು.

**ಇತಿ ಪ್ರಾರ್ಥನರೂಪೋಽರ್ಥೋ ಯಃ ಸ್ಪಷ್ಟೋಽತ್ರ ಪ್ರತೀಯತೇ ।**
**ಅತಃ ಚಕ್ರಾಂಕಶೂನ್ಯಾನಾಂ ವೇದಾಭ್ಯಾಸೋ ವೃಥಾ ಭವೇತ್ ॥ ೫೯ ॥**

**ಅರ್ಥ–** ಇತಿ= ಹೀಗೆ, ಪ್ರಾರ್ಥನಾರೂಪಃ= ಪ್ರಾರ್ಥನಾರೂಪವಾದ, ಯಃ= ಯಾವ ಅರ್ಥಃ= ಅರ್ಥವು, ಅತ್ರ = ಇಲ್ಲಿ, ಈ ಶ್ರುತಿಯಲ್ಲಿ ಸ್ಪಷ್ಟಃ = ಸ್ಪಷ್ಟವಾಗಿ, ಪ್ರತೀಯತೇ = ತಿಳಿದುಬರುತ್ತದೆಯೋ, ಅತಃ= ಆದ್ದರಿಂದ, ಚಕ್ರಾಂಕಶೂನ್ಯಾನಾಂ= ಚಕ್ರಾಂಕನವಿಲ್ಲದವರಿಗೆ, ವೇದಾಭ್ಯಾಸಃ= ವೇದಾಧ್ಯಯನವು, ವೃಥಾ ಭವೇತ್= ವ್ಯರ್ಥವಾಗುವುದು.

**ಅನುವಾದ–** ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಚಕ್ರಾಂಕನದಿಂದಲೇ ಬ್ರಾಹ್ಮಣರಿಗೂ ವೇದಕ್ಕೂ ಪಾವಿತ್ರ್ಯಬರುವುದರಿಂದ, ಅದಿಲ್ಲದೇ ಮಾಡುವ ವೇದಾಧ್ಯಯನವು ವ್ಯರ್ಥ. ಅಂತಹವರು ಅನಧಿಕಾರಿಗಳು. ಅವರು ಅಧ್ಯಯನಾದಿಗಳನ್ನು ಮಾಡಿದರೂ ಅದರಿಂದ ಜ್ಞಾನ, ಅದೃಷ್ಟ ಮುಂತಾದ ಫಲಗಳು ಸಿಗುವುದಿಲ್ಲ.

**ಭಾವವಿಲಾಸಿನೀ–** ಅತಃ ಚಕ್ರಾಂಕಾಭಾವೇ ಪಠಿತವೇದಾಪಾವಿತ್ರ್ಯಸ್ಯ ಶ್ರೌತತ್ವಾತ್ ॥ ೫೯ ॥

**ವಿವರಣೆ–** ಅತಃ ಎಂದರೆ ಚಕ್ರಾಂಕನವಿಲ್ಲದೆ ಪಠಣ ಮಾಡಿದ ವೇದವು ಅಪವಿತ್ರವಾಗುವುದೆಂದು ಶ್ರುತಿಯಲ್ಲಿ ಹೇಳಿದ್ದರಿಂದ ಎಂದರ್ಥ.

**ಯದಾ ಚಕ್ರಾಂಕಶೂನ್ಯೋಕ್ತವೇದಸ್ಯಾಪ್ಯಪವಿತ್ರತಾ ।**
**ತದಾ ತೇಷಾಂತು ಮೂರ್ಖಾಣಾಂ ಹೀನಾದಪಿ ಚ ಹೀನತಾ ।**
**ಕಿಂ ವಾಚ್ಯಾ ತೇನ ಚಂಡಾಲಾದಧಮಂ ತಂ ಸ್ಮೃತಿರ್ಜಗೌ ॥ ೬೦ ॥**

**ಅರ್ಥ–** ಯದಾ= ಯಾವಾಗ, ಚಕ್ರಾಂಕಶೂನ್ಯೋಕ್ತವೇದಸ್ಯ ಅಪಿ= ಚಕ್ರಾಂಕನವಿಲ್ಲದವನಿಂದ ಪಠಿತವಾದ ವೇದಕ್ಕೆ ಸಹ, ಅಪವಿತ್ರತಾ= ಅಶುದ್ಧತ್ವವಿರುವುದೋ, ತದಾ= ಆಗ, ತೇಷಾಂ= ಆ, ಮೂರ್ಖಾಣಾಂ ತು= ಅಜ್ಞಾನಿಗಳಿಗಾದರೂ, ಹೀನಾತ್ ಅಪಿ= ನೀಚರಿಗಿಂತಲೂ, ಹೀನತಾ = ನೀಚತ್ವವು, ಕಿಂ ವಾಚ್ಯಾ= ಹೇಳುವುದೇನಿದೆ? ತೇನ ತು= ಆಕಾರಣದಿಂದಲೇ, ತಂ= ಅಂತಹವನನ್ನು ಸ್ಮೃತಿಃ= ಸ್ಮೃತಿಯು, ಚಂಡಾಲಾತ್= ಚಂಡಾಲನಿಗಿಂತಲೂ, ಅಧಮಂ= ಕೀಳು ಎಂದು, ಜಗೌ= ಹೇಳಿರುತ್ತದೆ.

**ಅನುವಾದ–** ಚಕ್ರಾಂಕನಿಲ್ಲದವನ ವೇದಾಧ್ಯಯನದಿಂದ ವೇದವೂ ಅಪವಿತ್ರವಾಗುವುದೆಂದ ಮೇಲೆ ಈ ಬಗ್ಗೆ ಏನೂ ತಿಳಿಯದ ಮೂರ್ಖರನ್ನು ಪತಿತರಿಗಿಂತ ಕೀಳು ಎಂದು ಏನು ಹೇಳುವುದಿದೆ? ಆದ್ದರಿಂದಲೇ ಸ್ಮೃತಿಯು ಅಂತಹವನನ್ನು ಚಂಡಾಲನಗಿಂತ ಕಡೆ ಎಂದು ಹೇಳಿತು.

**ಭಾವವಿಲಾಸಿನೀ–** ತೇನ ಚಕ್ರಾಂಕಶೂನ್ಯಸ್ಯಾಧಮಾಧಮತ್ವೇನ । ಸ್ಮೃತಿಃ ''ಅವೈಷ್ಣವಸ್ತು ಯೋ ವಿಪ್ರಶ್ಚಂಡಾಲಾದಧಮಃ ಸ್ಮೃತ'' ಇತ್ಯಾದಿಕಾ ॥ ೬೦ ॥

**ವಿವರಣೆ–** ಸ್ಮೃತಿಗಳು ಅವೈಷ್ಣವ ವಿಪ್ರನನ್ನು ನಿಂದಿಸಿವೆ. ಅಲ್ಲಿ ಅವೈಷ್ಣವ ಪದಕ್ಕೆ ಚಕ್ರಾಂಕನಹೀನ ಎಂದರ್ಥ. ಅಂತಹ ವ್ಯಕ್ತಿಯ ವೇದಪಾರಾಯಣದಿಂದ ವೇದವೇ

ಅಪವಿತ್ರವಾಗುತ್ತದೆ. ಆದ್ದರಿಂದ ತಪ್ತಸುದರ್ಶನಧಾರಣೆಯು ಆವಶ್ಯಕ. ನಂತರವೇ ಶ್ರುತಿಸ್ಮೃತ್ಯುಕ್ತವೇದಾಧ್ಯಯನ ಕರ್ಮಾನುಷ್ಠಾನಕ್ಕೆ ಪ್ರವೇಶ.

**ಪ್ರತಪ್ತಂ ಬಿಭೃಯಾಚ್ಚಕ್ರಂ ಶಂಖಂ ಚ ಭುಜಮೂಲಯೋಃ ।**
**ಶ್ರೌತಸ್ಮಾರ್ತಾದಿಸಿದ್ಧ್ಯರ್ಥಂ ಮಂತ್ರಸಿದ್ಧ್ಯರ್ಥಮೇವ ಚ ॥ ೬೦೧ ॥**

**ಅಚಕ್ರಧಾರಿಣಂ ವಿಪ್ರಂ ದೂರತಃ ಪರಿವರ್ಜಯೇತ್।**
**ಶ್ವಪಾಕಮಿವ ನೇಕ್ಷೇತ ಲೋಕೇ ವಿಪ್ರಮವೈಷ್ಣವಮ್ ॥ ೬೦೨ ॥**

**ಯಸ್ತು ನಾರಾಯಣಂ ದೇವಂ ಬ್ರಹ್ಮರುದ್ರಾದಿದೈವತೈಃ ।**
**ಸಮತ್ವೇನಾಭಿಮನ್ಯೇತ ಸ ಪಾಷಂಡೋ ನರಃ ಸ್ಮೃತಃ ॥ ೬೦೩ ॥**

**ಯೋ ಮೋಹಾದ್ ವಿಷ್ಣುಮನ್ಯೇನ ಹೀನದೇವೇನ ದುರ್ಮತಿಃ ।**
**ಸಾಧಾರಣಂ ಸಕೃತ್ ಬ್ರೂತೇ ಸೋಽಂತ್ಯಜೋ ನಾಂತ್ಯಜೋಽಂತ್ಯಜಃ ॥ ೬೦೪॥**

**ಅರ್ಥ–** ಶ್ರೌತಸ್ಮಾರ್ತಾದಿಸಿದ್ಧ್ಯರ್ಥಂ= ವೇದೋಕ್ತ ಮತ್ತು ಸ್ಮೃತ್ಯುಕ್ತ ಕರ್ಮಗಳ ಸಿದ್ಧಿಗಾಗಿ, ಚ= ಮತ್ತು, ಮಂತ್ರಸಿದ್ಧ್ಯರ್ಥಂ ಏವ= ಮಂತ್ರಗಳ ಸಿದ್ಧಿಯನ್ನು ಪಡೆಯಲು, ಭುಜಮೂಲಯೋಃ= ಭುಜಗಳ ಮೂಲಗಳಲ್ಲಿ, ಪ್ರತಪ್ತಂ= ಕಾಯಿಸಿದ, ಚಕ್ರಂ= ಸುದರ್ಶನಚಕ್ರವನ್ನು ಚ= ಮತ್ತು, ಶಂಖಂ= ಶಂಖವನ್ನು ಬಿಭೃಯಾತ್= ಧರಿಸಿಕೊಳ್ಳಬೇಕು. ಅಚಕ್ರಧಾರಿಣಂ= ಚಕ್ರಾಂಕನವನ್ನು ಧರಿಸದ, ವಿಪ್ರಂ= ಬ್ರಾಹ್ಮಣನನ್ನು, ದೂರತಃ = ದೂರದಿಂದಲೇ, ಪರಿವರ್ಜಯೇತ್ = ತ್ಯಜಿಸಬೇಕು. ಲೋಕೇ= ಈ ಜಗತ್ತಿನಲ್ಲಿ , ಅವೈಷ್ಣವಂ= ಚಕ್ರಾಂಕಹೀನನಾದ, ವಿಪ್ರಂ= ಬ್ರಾಹ್ಮಣನನ್ನು (ಶ್ವಪಾಕಂ ಇವ= ಚಾಂಡಾಲನಂತೆ), ನ ಈಕ್ಷೇತ = ನೋಡಕೂಡದು.

ಯಃ ತು= ಯಾವನಾದರೋ, ದೇವಂ= ಕ್ರೀಡಾದಿಗುಣವಿಶಿಷ್ಟನಾದ, ನಾರಾಯಣಂ= ನಾರಾಯಣನನ್ನು ಬ್ರಹ್ಮರುದ್ರಾದಿದೈವತೈಃ= ಬ್ರಹ್ಮರುದ್ರಾದಿದೇವತೆಗಳಿಂದ, ಸಮತ್ವೇನ= ಸಮನೆಂದು, ಅಭಿಮನ್ಯೇತ= ತಿಳಿಯುತ್ತಾನೋ, ಸ ನರಃ= ಆ ವ್ಯಕ್ತಿಯು, ಪಾಷಂಡಃ= ಪಾಷಂಡಿ ಎಂಬುದಾಗಿ, ಸ್ಮೃತಃ= ಸ್ಮೃತಿಯಲ್ಲಿ ಹೇಳಲ್ಪಟ್ಟಿದ್ದಾನೆ.

ಯಃ ದುರ್ಮತಿಃ= ಯಾವ ದುಷ್ಟನು, ಮೋಹಾತ್= ಅಜ್ಞಾನದಿಂದ, ವಿಷ್ಣುಂ= ವಿಷ್ಣುವನ್ನು ಅನ್ಯೇನ= ಬೇರೆ, ಹೀನದೇವೇನ = ಅವರರಾದ ದೇವತೆಗಳಿಂದ, ಸಾಧಾರಣಂ= ಸಮನೆಂದು, ಸಕೃತ್ ಬ್ರೂತೇ= ಒಮ್ಮೆಯಾದರೂ ಹೇಳುತ್ತಾನೋ, ಸಃ= ಅವನು, ಅಂತ್ಯಜಃ = ಚಂಡಾಲನು. ಅಂತ್ಯಜಃ= ಚಂಡಾಲಯೋನಿಯಲ್ಲಿ ಹುಟ್ಟಿದವನು, ನ ಅಂತ್ಯಜಃ= ಶೂದ್ರನಲ್ಲ. (ಚಂಡಾಲ ಎಂದರೆ ಶೂದ್ರತಂದೆಯಿಂದ ಬ್ರಾಹ್ಮಣತಾಯಿಯಲ್ಲಿ ಹುಟ್ಟಿದವನು)

**ಅನುವಾದ–** ತಪ್ತಚಕ್ರಾಂಕನದ ಮಹತ್ವವನ್ನು ಈ ಸ್ಮೃತಿಗಳು ಹೇಳುತ್ತವೆ. ಕರ್ಮಾನುಷ್ಠಾನ ಮತ್ತು ಮಂತ್ರಸಿದ್ಧಿಗೆ ತಪ್ತಮುದ್ರಾಧಾರಣೆಯು ಬೇಕೇ ಬೇಕು. ಚಕ್ರಾಂಕನವಿಲ್ಲದ ಬ್ರಾಹ್ಮಣನ ಮುಖವನ್ನೂ ಕೂಡ ನೋಡಕೂಡದು. ಅದರಂತೆ ಸರ್ವೋತ್ತಮನಾದ ವಿಷ್ಣುವನ್ನು ಇತರ ದೇವತೆಗಳಿಗೆ ಸಮಾನ ಎಂದು ತಿಳಿಯುವವನು ಪಾಷಂಡಿಯು. ಯಾವಾಗಲೋ ಒಮ್ಮೆಯೂ ಇತರ ಅವರದೇವತೆಗಳು ವಿಷ್ಣುವಿಗೆ ಸಮ ಎಂದರೆ ಅವನು ಅಂತ್ಯಜನೇ ಸರಿ.

**ಭಾವವಿಲಾಸಿನೀ–** ತಾಮೇವ ಸ್ಮೃತಿಮುದಾಹರತಿ ॥ ಪ್ರತಪ್ತಮಿತ್ಯಾದಿನಾ ॥ ೬೦೧-೬೦೪ ॥

**ವಿವರಣೆ–** ಹಿಂದೆ ಹೇಳಿದ ಅಭಿಪ್ರಾಯವುಳ್ಳ ಸ್ಮೃತಿಯನ್ನು (ಪದ್ಮಪುರಾಣ) ಉದಾಹರಿಸುತ್ತಾರೆ - ಪ್ರತಪ್ತಂ ಇತ್ಯಾದಿ.

ತಪ್ತಮುದ್ರಾಧಾರಣೆಯ ಮಹತ್ವವನ್ನು ಅನ್ವಯ ವ್ಯತಿರೇಕಗಳಿಂದ ತಿಳಿಸುತ್ತಾರೆ. ಪಾದ್ಮಪುರಾಣ ಹಾಗೂ ವಾಶಿಷ್ಠದ ವಚನಗಳು ಇವು. ತಪ್ತಮುದ್ರಾಂಕನವುಳ್ಳವನಿಗೇ ವೇದಾಧಿಕಾರ. ಇಲ್ಲದವನು ಚಂಡಾಲನೇ ಸರಿ. ಅದರಂತೆ ವಿಷ್ಣುಸರ್ವೋತ್ತತ್ವ ಜ್ಞಾನವೂ ಆವಶ್ಯಕ. ಬ್ರಹ್ಮರುದ್ರಾದಿದೇವತೆಗಳಿಗೆ ವಿಷ್ಣುವು ಸಮನೆಂದು ಒಮ್ಮೆಯೂ ಚಿಂತಿಸಬಾರದು.

**ಅತಃ ಶ್ರುತೇಃ ಸ್ಮೃತೇಶ್ಚೈಕೋ ಮಾರ್ಗಃ ಸದ್ಧರ್ಮರಕ್ಷಣೇ ॥ ೬೦೫ ॥**

**ಅರ್ಥ–** ಅತಃ= ಆದ್ದರಿಂದ, ಸದ್ಧರ್ಮರಕ್ಷಣೇ= ಸಮೀಚೀನವಾದ ಧರ್ಮದ ರಕ್ಷಣೆಯ ವಿಷಯದಲ್ಲಿ ಶ್ರುತೇಃ= ಹಿಂದೆ ಹೇಳಿದ ಶ್ರುತಿಗಳ, ಚ= ಮತ್ತು, ಸ್ಮೃತೇಃ= ಪಾದ್ಮ ವಾಶಿಷ್ಠಾದಿ ಸ್ಮೃತಿಗಳ, ಮಾರ್ಗಃ= ದಾರಿಯು (ರೀತಿಯು) ಏಕಃ= ಒಂದೇ ಆಗಿರುತ್ತದೆ.

**ಅನುವಾದ–** ಹೀಗೆ ಉದಾಹೃತ ಶ್ರುತಿಸ್ಮೃತಿಗಳಲ್ಲಿ ಸೂಚಿತವಾದ ಧರ್ಮರಕ್ಷಣೆಯ ವಿಷಯವು ಏಕರೂಪವಾಗಿರುತ್ತದೆ.

**ಭಾವವಿಲಾಸಿನೀ–** ಅತಃ ಪ್ರತಪ್ತಮಿತ್ಯಾದಿಪದ್ಮಪುರಾಣೇ ವಾಸಿಷ್ಠಸ್ಮೃತೌ ಯೇನ ದೇವಾ ಇತ್ಯಾದಿ ಶ್ರುತೌ ಚೋಕ್ತರೀತ್ಯಾ ಅಚಕ್ರಧಾರಿಣಾಂ ನಿಂದನಾತ್ ॥ ೬೦೫ ॥

**ವಿವರಣೆ–** ಅತಃ ಎಂದರೆ ಪ್ರತಪ್ತಂ ಇತ್ಯಾದಿ ಪಾದ್ಮ ಹಾಗೂ ವಾಶಿಷ್ಠಸ್ಮೃತಿಗಳಲ್ಲಿ ಯೇನ ದೇವಾಃ ಇತ್ಯಾದಿ ಶ್ರುತಿಗಳಲ್ಲಿ ಈ ಮೊದಲು ಹೇಳಿದಂತೆ ಚಕ್ರಮುದ್ರಧಾರಣೆ ಇಲ್ಲದವರ ನಿಂದೆ ಇರುವುದರಿಂದ ಎಂದರ್ಥ.

ಸದ್ಧರ್ಮರಕ್ಷಣೆಯ ವಿಷಯದಲ್ಲಿ ಶ್ರುತಿ, ಸ್ಮೃತಿಗಳಲ್ಲಿ ಏಕಾಭಿಪ್ರಾಯವಿದೆ. ಆದ್ದರಿಂದ ಅವುಗಳನ್ನು ಅರ್ಥೈಸುವಾಗ ವಾಕ್ಯಭೇದವಾಗದಂತೆ ಎಚ್ಚರಿಕೆ ವಹಿಸಬೇಕು. ಪೂರ್ವಾಚಾರ್ಯರ ಅಭಿಪ್ರಾಯಗಳನ್ನು ಕಡೆಗಣಿಸಬಾರದು.

**ಕಿಂಚ ಶ್ರುತ್ಯಂತರಪ್ರೋಕ್ತಂ ಶತೋದ್ಯಾಮಂ ಹಿರಣ್ಮಯಮ್ ।**
**ಪವಿತ್ರಾಖ್ಯಂ ವಿಷ್ಣುಚಕ್ರಂ ಧಾರಣಾಯ ವಿನಿರ್ಮಿತಮ್ ।**
**ಯಜ್ಞರಕ್ಷಾಕರಂ ಸೋಽಗ್ನಿಃ ಸಹತೇ ಸ್ವೋದರೇಽರ್ಪಿತಮ್ ॥ ೬೦೬ ॥**

**ಅರ್ಥ–** ಕಿಂಚ= ಅಲ್ಲದೇ, ಶ್ರುತ್ಯಂತರಪ್ರೋಕ್ತಂ= ಇನ್ನೊಂದು ಶ್ರುತಿಯಲ್ಲಿ ಹೇಳಿದ (ಪ್ರಾಜಾಪತ್ಯಂ ಎಂಬಲ್ಲಿ) ಶತೋದ್ಯಾಮಂ= ನೂರಾರು ಉದ್ಯಮಗಳುಳ್ಳ, ಹಿರಣ್ಮಯಂ= ಬಂಗಾರದ, ಪವಿತ್ರಾಖ್ಯಂ= ಪವಿತ್ರವೆಂಬ ಹೆಸರುಳ್ಳ, ಯಜ್ಞರಕ್ಷಾಕರಂ= ಯಜ್ಞರಕ್ಷಣೆಯನ್ನು ಮಾಡುವ, ವಿಷ್ಣುಚಕ್ರಂ= ವಿಷ್ಣುಚಕ್ರವಾದ ಸುದರ್ಶನವು, ಧಾರಣಾಯ= ಭುಜಗಳಲ್ಲಿ ಧರಿಸಲು, ವಿನಿರ್ಮಿತಂ= ನಿರ್ಮಿಸಲ್ಪಟ್ಟಿದೆ. ಸಃ= ಅಂತಹ, ಅಗ್ನಿಃ= ಅಗ್ನಿಯು, ಸ್ವೋದರೇ= ತನ್ನ ಉದರದಲ್ಲಿ, ಅರ್ಪಿತಂ = ಸ್ಥಾಪಿಸಿದ ಚಕ್ರವನ್ನು, ಸಹತೇ= ಸಹಿಸಿಕೊಳ್ಳುತ್ತದೆ.

**ಅನುವಾದ– ಪ್ರಾಜಾಪತ್ಯಂ ಎಂಬ ಶ್ರುತಿಯಲ್ಲಿ ವರ್ಣಿತವಾದ ಶತೋದ್ಯಾಮಂ ಹಿರಣ್ಮಯಂ ಇತ್ಯಾದಿ ವಿಶೇಷಗಳು ಪವಿತ್ರನಾಮಕಚಕ್ರಕ್ಕೇನೇ ಅನ್ವಯವಾಗುತ್ತದೆ. ಈ ಸುದರ್ಶನವು ಪುರಾಣಾದಿಗಳಲ್ಲಿ ಯಜ್ಞವಿಘ್ನಕರವಾದ ರಾಕ್ಷಸರನ್ನು ನಾಶಮಾಡಿ ಯಜ್ಞರಕ್ಷಾಕರ ಎಂದು ಪ್ರಸಿದ್ಧವಾಗಿದೆ. ಅದು ಸಜ್ಜನರ ಉದ್ಧಾರಕ್ಕಾಗಿಯೇ ಭುಜಗಳಲ್ಲಿ ಧರಿಸಲು ನಿರ್ಮಿತವಾಗಿದೆ. ಅದು ಅಗ್ನಿಕುಂಡದಲ್ಲಿ ಇರಲು ಸಾಧ್ಯ ಹೊರತು ದಶಾಪವಿತ್ರವಲ್ಲ.**

**ಭಾವವಿಲಾಸಿನೀ– ಅಗ್ನಿಶ್ಚ ದಹ್ಯಾದಿತಿ ಪ್ರಾಗುಕ್ತಮರ್ಥಂ ಸ್ಪಷ್ಟಯತಿ – ಕಿಂ ಚೇತಿ ॥** ಶ್ರುತ್ಯಂತರಪ್ರೋಕ್ತಂ ಪ್ರಾಜಾಪತ್ಯಮಿತಿ ಶ್ರುತೌ ಪ್ರೋಕ್ತಮ್ । ಧಾರಣಾಯ ಭುಜಯೋ-ರ್ಧಾರಣಾಯ । ಸುದರ್ಶನೇನ ಯಜ್ಞಘ್ನರಾಕ್ಷಸವಧಕರಣಸ್ಯ ಪುರಾಣಾದೌ ಶ್ರವಣಾತ್ ಯಜ್ಞ-ರಕ್ಷಾಕರಮಿತ್ಯುಕ್ತಮ್ । ಸಃ ಯಜ್ಞಾಂಗಭೂತಃ । ಸ್ವೋದರೇ ಸ್ವಜ್ವಾಲಾಮಧ್ಯೇ ॥ ೬೦೬ ॥

**ವಿವರಣೆ–** ಹಿಂದೆ ಅಗ್ನಿಶ್ಚ ದಹ್ಯಾತ್ ಎಂದು ಹೇಳಿದ ವಿಷಯವನ್ನು ಸ್ಪಷ್ಟಪಡಿಸುತ್ತಾರೆ - ಕಿಂಚ ಎಂದು. ಶ್ರುತ್ಯಂತರಪ್ರೋಕ್ತಂ ಎಂದರೆ ಪ್ರಾಜಾಪತ್ಯಂ ಎಂಬ ಶ್ರುತಿಯಲ್ಲಿ ಹೇಳಿದ ಎಂದರ್ಥ. ಧಾರಣಾಯ ಭುಜಗಳಲ್ಲಿ ಧರಿಸಲು. ಸುದರ್ಶನದಿಂದ ಯಜ್ಞವನ್ನು ಘಾತಿಸುವ ರಾಕ್ಷಸರನ್ನು ವಧೆ ಮಾಡಿದ ವಿಷಯವು ಪುರಾಣಾದಿಗಳಲ್ಲಿ ಕೇಳಿಬರುವುದರಿಂದ ಯಜ್ಞರಕ್ಷಾಕರಂ ಎಂದಿದ್ದಾರೆ. ಸಃ ಅಗ್ನಿಃ ಎಂಬಲ್ಲಿ ಸಃ ಎಂದರೆ ಯಜ್ಞಾಂಗಭೂತವಾದ, ಸ್ವೋದರೇ - ತನ್ನ ಜ್ವಾಲೆಗಳ ಮಧ್ಯದಲ್ಲಿ

ಶ್ರುತಿಗಳಲ್ಲಿ ವರ್ಣಿತವಾದ ಪವಿತ್ರ, ಶತೋದ್ಯಾಮ, ಹಿರಣ್ಮಯ ಇತ್ಯಾದಿ ಹೆಸರುಳ್ಳ, ಸುದರ್ಶನಚಕ್ರವು ಸಜ್ಜನ ಸಾಧಕರ ಭುಜದಲ್ಲಿ ಧಾರಣೆಗಾಗಿಯೇ ನಿರ್ಮಿತವಾಗಿದೆ. ಅದರಿಂದಲೇ ವೈಷ್ಣವತ್ವಸಿದ್ಧಿ. ಅಗ್ನಿಜ್ವಾಲೆಗಳನ್ನು ಸಹಿಸತಕ್ಕದ್ದು ಈ ಚಕ್ರವೇ ವಿನಃ ದಶಾಪವಿತ್ರವಲ್ಲ.

**ಅನ್ಯತ್ತು ಕುಪಿತಃ ಸರ್ವಂ ದಹೇದ್ ವಾಯುಸಖೋ ಹ್ಯಸೌ ।**
**ಅತೋಽರ್ಥಾಂತವಾರ್ತಾಽತ್ರ ದಗ್ಧೈವಾಭೂನ್ನ ಸಂಶಯಃ ॥ ೬೦೭ ॥**

**ಅರ್ಥ–** ಅನ್ಯತ್ ತು= ಬೇರೆ ಅರ್ಥವನ್ನಾದರೂ (ದಶಾಪವಿತ್ರ ಇತ್ಯಾದಿ) ಸರ್ವಂ= ಎಲ್ಲ ಇತರ ಅರ್ಥಗಳನ್ನು ಕುಪಿತಃ = ಕೋಪಗೊಂಡ ಅಗ್ನಿಯು, ದಹೇತ್= ಸುಟ್ಟುಹಾಕುತ್ತಾನೆ. ಕಾರಣ, ಅಸೌ= ಈ ಅಗ್ನಿಯು, ವಾಯುಸಖಃ= ವಾಯುದೇವರ ಮಿತ್ರನು. ಹಿ= ಪ್ರಸಿದ್ಧವಾಗಿದೆ (ಮರುತ್ಸಖೋ ಹುತಾಶನ ಎಂದು ಮಹಾಭಾರತತಾತ್ಪರ್ಯನಿರ್ಣಯಾದಿ ಗಳಲ್ಲಿ ಪ್ರಸಿದ್ಧವಾಗಿದೆ). ಅತಃ= ಆದ್ದರಿಂದ, ಅರ್ಥಾಂತರವಾರ್ತಾ ಅಪಿ= ಬೇರೆ ಅರ್ಥವನ್ನು ಮಾಡುವ ಸುದ್ದಿಯೇ, ದಗ್ಧಾ ಏವ = ಸುಟ್ಟಂತೆಯೇ, ಅಭೂತ್= ಆಯಿತು. ನ ಸಂಶಯಃ= ಈ ವಿಷಯದಲ್ಲಿ ಸಂಶಯವೇ ಇಲ್ಲ.

**ಅನುವಾದ– ಅಗ್ನಿಯು ವಾಯುಸಖನಾದ್ದರಿಂದ, ಪವಿತ್ರಶಬ್ದಕ್ಕೆ ಚಕ್ರ ಎಂಬ ಯೋಗ್ಯವಾದ ಅರ್ಥವನ್ನು ಬಿಟ್ಟು ಬೇರೆ ದಶಾಪವಿತ್ರ ಇತ್ಯಾದಿ ಅರ್ಥಗಳನ್ನು ಹೇಳಿದರೆ, ಅವುಗಳನ್ನು ಅಗ್ನಿಯೇ ಕೋಪಿಸಿಕೊಂಡು ಸುಟ್ಟುಹಾಕುವನು. ಆದ್ದರಿಂದ ಪರಕೀಯರು ಮಾಡುವ ಅರ್ಥಾಂತರಗಳು ನಿಸ್ಸಂಶಯವಾಗಿ ಸುಟ್ಟು ಹೋದಂತೆಯೇ.**

**ಭಾವವಿಲಾಸಿನೀ– ಅನ್ಯಾತ್ ।** ವಸ್ತ್ರರೂಪದಶಾಪವಿತ್ರಂ ದರ್ಭರೂಪಕರ್ಮಾಂಗಪವಿತ್ರಂ ತಂತುರೂಪಪಂಚದರ್ಬಾಂಗಪವಿತ್ರಮ್ । ಧಾರಣಾಯ ಕೃತಸೌವರ್ಣಸುದರ್ಶನಮೇವ ಹಿರಣ್ಮಯಮಿತಿ ಶ್ರುತಿಃ ''ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರೇ''ತಿ ಶ್ರುತಿಶ್ಚ ಶಂಸತಿ । ತಸ್ಯೈವ ಹಿರಣ್ಮಯತ್ವಸಂಭವಾತ್ ಅಗ್ನಿಜ್ವಾಲಾಂತಃಪ್ರವೇಶಸಂಭವಾಚ್ಚ ಅನ್ಯಸ್ಯ ಹಿರಣ್ಮಯ-ತ್ವಾಭಾವಾತ್ ಅಗ್ನಿಜ್ವಾಲಾಂತಃಪ್ರವೇಶಾಸಹತ್ವಾಚ್ಚ ನಾತ್ರ ಪ್ರತಿಪಾದನಾವಸರ ಇತಿ ಭಾವಃ । ವಾಯುರೂಪಮಧ್ವಾಚಾರ್ಯೇಣ ಸುದರ್ಶನಧಾರಣಸ್ಯೈವ ಪ್ರತಿಷ್ಠಿತಾಪಿತತ್ವಾತ್ ತದನುಕೂಲ ಏವಾಗ್ನಿಃ ನತ್ವನ್ಯಸ್ಯೇತಿ ಸೂಚನಾಯ ವಾಯುಸಖ ಇತ್ಯುಕ್ತಮ್ ॥ ೬೦೭ ॥

**ವಿವರಣೆ–** ಅನ್ಯತ್ ಎಂದರೆ ವಸ್ತ್ರರೂಪದಶಾ ಪವಿತ್ರ, ದರ್ಭೆರೂಪ ಕರ್ಮಾಂಗ ಪವಿತ್ರ, ತಂತುರೂಪ ಪವಿತ್ರ ಇತ್ಯಾದಿಗಳು. ತಪ್ತಮುದ್ರಾಂಕನಧಾರಣೆಗಾಗಿ ಮಾಡಲ್ಪಟ್ಟ ಬಂಗಾರದ ಸುದರ್ಶನವನ್ನೇ ಪ್ರಾಜಾಪತ್ಯಂ ಹಿರಣ್ಮಯಂ ಎಂಬ ಶ್ರುತಿಯು ಹಾಗೂ ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ ಎಂಬ ಶ್ರುತಿಯು ಹೇಳುತ್ತದೆ (ವರ್ಣಿಸುತ್ತದೆ). ಆ ಚಕ್ರವೇ ಹಿರಣ್ಮಯ ಎಂದರೆ ಬಂಗಾರದ್ದಾಗುವ ಸಂಭವವಿರುವುದರಿಂದಲೂ, ಅಗ್ನಿಜ್ವಾಲೆಗಳಲ್ಲಿ ಪ್ರವೇಶಿಸಲು ಶಕ್ಯವಿರುವುದರಿಂದಲೂ, ಇತರ ಪವಿತ್ರಗಳು ಬಂಗಾರದ್ದಾಗುವುದು ಶಕ್ಯವಿಲ್ಲವಾದ್ದರಿಂದಲೂ, ಅವುಗಳು ಅಗ್ನಿಜ್ವಾಲೆಗಳಲ್ಲಿ ಪ್ರವೇಶಿಸಿ ಸಹಿಸಲಾರವುಗಳೂ ಆದ್ದರಿಂದ ಇಲ್ಲಿ ಅವುಗಳ ಪ್ರತಿಪಾದನೆ

ಮಾಡುವ ಸಂದರ್ಭವೇ ಇಲ್ಲ. ವಾಯುರೂಪಮಧ್ವಾಚಾರ್ಯರಿಂದ ಸುದರ್ಶನ ಧಾರಣೆಯ ಪ್ರತಿಪಾದನೆ ಮಾಡಲ್ಪಟ್ಟದ್ದರಿಂದ ಅದಕ್ಕೆ ಅನುಕೂಲವಾಗಿಯೇ ಅಗ್ನಿಯು ಇರುತ್ತದೆ ಎಂದು ಸೂಚಿಸಲು ವಾಯುಸಖ ಎಂದು ಹೇಳಲ್ಪಟ್ಟಿದೆ.

ಪವಿತ್ರ ಶಬ್ದಕ್ಕೆ ದಶಾಪವಿತ್ರ, ದರ್ಭೆಪವಿತ್ರ ಮುಂತಾದ ಅರ್ಥಾಂತರಗಳನ್ನು ಹೇಳಿದರೆ ವಾಯುಸಖನಾದ ಅಗ್ನಿಯು ಅವುಗಳನ್ನು ಸುಟ್ಟುಹಾಕಿಯಾನು. ಶ್ರುತಿಯಲ್ಲಿ ಪವಿತ್ರವನ್ನು ಹಿರಣ್ಮಯ ಎಂದಿದ್ದಾರೆ. ಮೇಲಿನ ಪವಿತ್ರಗಳು ಅರಿವೆ ಹಾಗೂ ದರ್ಭೆಯವು. ಪವಿತ್ರವನ್ನು ಅಗ್ನಿಜ್ವಾಲೆಯಲ್ಲಿ ಸ್ಥಾಪಿಸುವುದಾಗಿ ಶ್ರುತಿಯು ಹೇಳುತ್ತದೆ. ಈ ಪವಿತ್ರಗಳು ಅಗ್ನಿಯಲ್ಲಿ ಸುಟ್ಟೇ ಹೋಗುವವು. ಆದ್ದರಿಂದ ವಿಷ್ಣುಚಕ್ರ ಎಂಬರ್ಥವನ್ನು ಪವಿತ್ರ ಶಬ್ದಕ್ಕೆ ಮಾಡಬೇಕು.

**ಚಕ್ರಂ ಸುವರ್ಣಾತಃ ಕುರ್ಯಾಚ್ಛಂಖಂ ತು ರಜತೇನ ಚ ।**
**ಇತಿ ಪೌರಾಣಿಕೀ ಗೋಷ್ಠೀ ತತ್ ಸರ್ವಂ ಮೇ ಮನೋರಮಂ॥ ೬೦೮ ॥**

**ಅರ್ಥ–** ಚಕ್ರಂ= ತಪ್ತಮುದ್ರೆಯನ್ನು ಹಾಕಿಕೊಳ್ಳುವ ಸುದರ್ಶನ ಚಕ್ರವನ್ನು, ಸುವರ್ಣಾತಃ= ಚಿನ್ನದಿಂದ, ಕುರ್ಯಾತ್= ಮಾಡಬೇಕು, ಶಂಖಂ ತು= ಶಂಖವನ್ನಾದರೂ, ರಜತೇನ= ಬೆಳ್ಳಿಯಿಂದ ಮಾಡಬೇಕು, ಇತಿ ಪೌರಾಣಿಕೀಗೋಷ್ಠೀ= ಹೀಗೆಂಬ ಪದ್ಮಪುರಾಣದ ವಚನವು, ತತ್ಸರ್ವಂ= ಅದೆಲ್ಲವೂ, ಮೇ= ನನಗೆ, ಮನೋರಮಂ= ಬಹಳ ಪ್ರಿಯವಾದುದು.

**ಅನುವಾದ–** ತಪ್ತಾಂಕನದ ಚಕ್ರವನ್ನು ಸುವರ್ಣದಿಂದಲೂ ಮತ್ತು ಶಂಖವನ್ನು ರಜತದಿಂದಲೂ ಮಾಡಬೇಕು ಎಂಬ ಪದ್ಮಪುರಾಣ ವಚನವೆಲ್ಲವೂ ನನಗೆ ಅತಿಪ್ರಿಯವಾದುದು.

**ಏವಂ ಚ ತಪ್ತಚಕ್ರಂ ಮೇ ನಾಂಹೋದಾಹಾಯ ಕೇವಲಮ್ ।**
**ವಿರುದ್ಧಪಕ್ಷಕಕ್ಷಾಣಾಮಪಿ ದಾಹಮಚೀಕ್ಲೃಪತ್ ॥ ೬೦೯ ॥**

**ಅರ್ಥ–** ಏವಂ ಚ= ಹೀಗೆ, ಮೇ= ನನಗೆ, ಚಕ್ರಾಂಕನಂ= ಚಕ್ರಾಂಕನವು, ಕೇವಲಂ= ಕೇವಲ, ಅಂಹೋದಾಹಾಯ= ಪಾಪವನ್ನು ಭಸ್ಮೀಕರಿಸುವುದಕ್ಕಾಗಿ, ನ= ಅಲ್ಲ, ವಿರುದ್ಧ ಪಕ್ಷಕಕ್ಷಾಣಾಮಪಿ= ವಿರುದ್ಧ ಪಕ್ಷವೆಂಬ ಹುಲ್ಲುಗಾವಲುಗಳ, ದಾಹಂ= ದಾಹವನ್ನು, ಅಚೀಕ್ಲೃಪತ್= ಅದು ಉಂಟುಮಾಡಿತು.

**ಅನುವಾದ– ಹೀಗೆ ತಪ್ತಚಕ್ರಾಂಕನವು ನನಗೆ ಕೇವಲ ಪಾಪದ ದಾಹಕ್ಕಾಗಿ ಅಲ್ಲ. ಅದು ವಿರುದ್ಧವಾದ ಪಕ್ಷಗಳೆಂಬ ಹುಲ್ಲುಗಾವಲುಗಳನ್ನೂ ದಹಿಸುತ್ತದೆ.**

**ಭಾವವಿಲಾಸಿನೀ–** ಧಾರಣಯೋಗ್ಯಚಕ್ರಸ್ಯ ಹಿರಣ್ಮಯತ್ವಂ ಪದ್ಮಪುರಾಣವಚನೇನ ದರ್ಶಯತಿ– **ಚಕ್ರಮಿತಿ** ॥ ತತ್ ತಸ್ಮಾತ್ ಶ್ರುತಿಸ್ಮೃತ್ಯನುಕೂಲತ್ವಾತ್ । ಮೇ ಮಮ ಪ್ರಮೇಯಂ ॥ ೬೦೮-೦೯॥

**ಪವಮಾನಪದ್ಯೈಃ ಸೋಮಪದೇನ ಚ ಯ ಈರ್ಯತೇ ।**
**ಸ ಏವಾಗ್ನಿಸವಿತ್ರಾದೌ ಸ್ಥಿತಸ್ತತ್ತತ್ಪದೋದಿತಃ ॥ ೬೧೦ ॥**

**ಅರ್ಥ–** ಯಃ= ಯಾವನು, ಪವಮಾನಪದ್ಯೈಃ= ಪವಮಾನ ಪದಗಳಿಂದಲೂ, ಸೋಮಪದೇನ= ಸೋಮಪದಗಳಿಂದಲೂ, ಈರ್ಯತೇ= ಹೇಳಲ್ಪಡುತ್ತಾನೆಯೋ, ಸ ಏವ= ಆ ವಾಯುವೇ, ಅಗ್ನಿಸವಿತ್ರಾದೌ= ಅಗ್ನಿಸವಿತೃ ಮೊದಲಾದವರಲ್ಲಿ, ಸ್ಥಿತಃ= ಇದ್ದವನಾಗಿ, ತತತ್ಪದೋದಿತಃ= ಆಯಾ ಪದವಾಚ್ಯನಾಗುತ್ತಾನೆ.

**ಅನುವಾದ– ಯಾವನು ಪವಮಾನ ಪದಗಳಿಂದಲೂ, ಸೋಮಪದಗಳಿಂದಲೂ ಹೇಳಲ್ಪಡುತ್ತಾನೆಯೋ ಅವನೇ (ಆ ವಾಯುವೇ) ಅಗ್ನಿಸವಿತ್ರಾದಿಗಳಲ್ಲಿ ಇದ್ದವನಾಗಿ ಅಗ್ನಿ ಸವಿತೃ ಮೊದಲಾದ ಪದಗಳಿಂದ ವಾಚ್ಯನಾಗುತ್ತಾನೆ.**

**ಭಾವವಿಲಾಸಿನೀ–** ''ಯತ್ತೇ ಪವಿತ್ರಮರ್ಚಿಷ್ಯಗ್ನ'' ಇತ್ಯತ್ರೋಕ್ತಾಗ್ನಿಪದಂ ''ಉಭಾಭ್ಯಾಂ ದೇವಸವಿತಃ'' ಇತ್ಯಾದೌ ಉಕ್ತಸವಿತ್ರಾದಿಪದಂ ಚ ಪವಮಾನಸೂಕ್ತತ್ವಾತ್ ಪವಮಾನೇಽಪಿ ಯೋಗಸಂಭವಾಚ್ಚ ವಾಯುಪರಮೇವೇತ್ಯಾಹ – **ಪವಮಾನಪದ್ಯೈರೀತ್ಯಾದಿನಾ** ॥ ವಾಯು-ವಾಚಕಮಧ್ವಾದಿಪದಸಂಗ್ರಹಾಯ ಬಹುವಚನಮ್ । ತತ್ತತ್ ಪದೋದಿತಃ ಅಗ್ನಿಸವಿತ್ರಾದಿ-ಪದೋದಿತಃ । ಸ್ವಾತಂತ್ರ್ಯಸ್ಯ ಶಬ್ದಪ್ರವೃತ್ತಿಕಾರಣತ್ವಾತ್ । ಯೋಗಂ ಚ ಪ್ರದರ್ಶಯತಿ ॥೬೧೦॥

**ಅಂಗೀಭೂತಾಗ್ನಿನೇತೃತ್ವಾದಂಗೇಷ್ವಗ್ನಿಶಿಖಾ ನಯನ್ ।**
**ಪ್ರಾಣಾಗ್ನಿರಿತಿ ಯಃ ಪ್ರೋಕ್ತಃ ಸ ಏವಾಗ್ನಿಸ್ಥಿತಾಮಲಃ ॥ ೬೧೧ ॥**

**ಅರ್ಥ–** ಅಂಗೀಭೂತ ಅಗ್ನಿನೇತೃತ್ವಾತ್= ತನಗೆ ಅಂಗಭೂತನಾದ ಎಂದರೆ ಅಪ್ರಧಾನನಾದ ಅಗ್ನಿಗೆ ನಾಯಕನಾಗಿರುವುದರಿಂದ, ಅಂಗೇಷು= ದೇಹದ ಅವಯವಗಳಲ್ಲಿ, ಅಗ್ನಿಶಿಖಾಃ= ಅಗ್ನಿಯ ಕಿರಣಗಳನ್ನು, ನಯನ್= ಕೊಂಡೊಯ್ಯುವ ವನಾಗಿ, ಯಃ= ಯಾವನು, ಪ್ರಾಣಾಗ್ನಿರಿತಿ= ಪ್ರಾಣಾಗ್ನಿ ಎಂದು, ಪ್ರೋಕ್ತಃ= ಹೇಳಲ್ಪಡುತ್ತಾ ನೆಯೋ, ಸ ಏವ= ಅವನೇ, ಅಗ್ನಿಸ್ಥಿತಾಮಲಃ= ಅಗ್ನಿಸ್ಥಿತನಾದ ನಿರ್ದುಷ್ಟನಾದ ವಾಯುದೇವ.

**ಅನುವಾದ– ತನಗೆ ಅಧೀನನಾದ ಅಗ್ನಿಯನ್ನು ನಯನ ಮಾಡುವುದರಿಂದಲೂ ದೇಹದ ಅವಯವಗಳಲ್ಲಿ ಅಗ್ನಿ ಕಿರಣಗಳನ್ನು ನಯನ ಮಾಡುವುದರಿಂದಲೂ ಯಾವನು ಪ್ರಾಣಾಗ್ನಿ ಎಂದು ಕರೆಸಿಕೊಳ್ಳಲ್ಪಡುತ್ತಾನೆಯೋ ಅವನೇ ಅಗ್ನಿಸ್ಥಿತನಾದ ದೋಷರಹಿತನಾದ ವಾಯುದೇವ.**

**ಭಾವವಿಲಾಸಿನೀ— ಅಂಗೀಭೂತೇತಿ ॥** ಅಪ್ರಧಾನಭೂತಾಗ್ನಿನೇತೃತ್ವಾದಿತ್ಯರ್ಥಃ। ಯೋಗಾಂತರಂ ಚಾಹ— **ಅಂಗೇಷ್ವಿತಿ ॥** ಕರಚರಣಾದ್ಯಂಗೇಷ್ವಿತ್ಯರ್ಥಃ। ಅಗ್ನಿಶಿಖಾಮಿತಿಯೋಗ್ಯತಯಾ ಸಂಬಂಧಃ। ಸಂತಾಪಯತಿಸ್ವಂದೇಹಮಾಪಾದತಲಮಸ್ತಕಾದಿತಿ ವಚನಾತ್ । ಹೃದಯಸ್ಥಿತಾಗ್ನೇಃ ನಾನಾ ನಾಡೀಷು ವ್ಯಾನಾಖ್ಯಾ ವಾಯುಸಹಾಯೇನೈವಗಮನಾತ್ ಅಂಗೇಷ್ವಗ್ನಿಶಿಖಾಂ ನಯನ್ನಿ-ತ್ಯುಕ್ತಮ್ । ಅನೇನ ಅಂಗಂ ನಯನ್ನಿತಿ ಅಂಗೇಷುನಯನ್ನಿತಿಚಾಗ್ನಿ ಪದಸ್ಯ ಯೋಗಃ ಪ್ರದರ್ಶಿತಃ॥ ನಿರುಕ್ತತ್ವಾದಕಾರಲೋಪೋ ಬಿಂದುಲೋಪಶ್ಚ। ಣೀಪೂ ಪ್ರಾಪಣ ಇತಿ ಧಾತೋರೌಣಾದಿ ಕೋಡಿ ಪ್ರತ್ಯಯಃ। ರೂಢಿಂ ಚ ಪ್ರದರ್ಶಯತಿ ॥ **ಪ್ರಾಣಾಗ್ನಿರಿತಿ** ॥ ೬೧೧ ॥

**ವಿವರಣೆ—** ಅಗ್ನಿ ಶಬ್ದಕ್ಕೆ ಅಂಗಂ ನಯತಿ, ಅಂಗೇಷು ನಯತಿ ಎಂದು ಎರಡು ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. ಅಂಗಂ ನಯತಿ ಎಂದರೆ ಅಪ್ರಧಾನವಾದವನನ್ನು ನಡೆಸುತ್ತಾನೆ ಎಂದು ಅರ್ಥ. ಅಂಗೇಷು ನಯತಿ ಎಂದರೆ ಅಂಗಗಳಲ್ಲಿ ಒಯ್ಯುತ್ತಾನೆ ಎಂದು ಅರ್ಥ. 'ಸಂತಾಪಯತಿ ಸ್ವಂದೇಹಂ ಆಪಾದತಲಮಸ್ತಕಃ' ಎಂಬ ಉಪನಿಷದ್ವಾಕ್ಯವಿದೆ. ಈ ವಾಕ್ಯದಿಂದ ಪಾದದಿಂದ ಮಸ್ತಕದವರೆಗೆ ದೇಹದ ಎಲ್ಲ ಭಾಗವನ್ನೂ ಅಗ್ನಿಯು ಬಿಸಿಯಾಗಿ ಇಡುತ್ತಾನೆ ಎಂದು ಅರ್ಥ. ದೇಹದಲ್ಲಿ ಎಪ್ಪತ್ತೆರಡು ಸಾವಿರ ನಾಡಿಗಳಿವೆ. ಆ ನಾಡಿಗಳಲ್ಲಿ ವ್ಯಾನನು ಸಂಚರಿಸುತ್ತಾನೆ. ವ್ಯಾನನು ಸಂಚರಿಸುತ್ತ ತನ್ನ ಜೊತೆಯಲ್ಲಿ ಅಗ್ನಿಶಿಖೆಯನ್ನು ತೆಗೆದುಕೊಂಡು ಹೋಗುವುದರಿಂದ ಶರೀರವೆಲ್ಲವೂ ಬೆಚ್ಚಗಿರುತ್ತದೆ. ಆದ್ದರಿಂದ ಅಂಗೇಷು ನಯತಿ ಎಂಬ ವ್ಯುತ್ಪತ್ತಿಯನ್ನು ಇಲ್ಲಿ ಹೇಳಿದ್ದಾರೆ.

**ಅಲಂಭಾವೋ ಯತೋ ನಾಸ್ಯ ಪವಿತ್ರೀಕರಣೇ ಸತಾಮ್ ।**
**ಉಪಸ್ಥಾತೃಷು ಯಃ ಪುಣ್ಯರಾಶಿಂ ಸೂತೇ ದಿನೇದಿನೇ ॥ ೬೧೨ ॥**

**ಸ ಏವ ಸವಿತಾ ಸೋಮಬಿಂಬಸ್ಥಃ ಸೋಮನಾಮಕಃ ।**
**ಸಮತ್ವಾಹ್ಲಾದಕಾರಿತ್ವಪೂರ್ವೈಃ ಶುಭಗುಣೈಃ ಪ್ರಭುಃ ॥ ೬೧೩ ॥**

**ಅರ್ಥ—** ಯತಃ= ಯಾವ ಕಾರಣದಿಂದ, ಅಸ್ಯ= ಈ ವಾಯುದೇವನಿಗೆ, ಸತಾಂ= ಸಜ್ಜನರನ್ನು ಪವಿತ್ರೀಕರಣೇ= ಪವಿತ್ರ ಮಾಡುವ ವಿಷಯದಲ್ಲಿ, ಅಲಂಭಾವಃ= ಸಾಕು ಎಂಬ ಭಾವನೆಯು, ನಾಸ್ತಿ= ಇಲ್ಲವೋ (ಆದ್ದರಿಂದ ಅನಲನೆಂದು ಕರೆಯಲ್ಪಡುತ್ತಾನೆ), ಯಃ= ಯಾವನು, ಉಪಸ್ಥಾತೃಷು= ಮೂರು ಕಾಲದಲ್ಲಿ ಸೂರ್ಯೋಪಸ್ಥಾನವನ್ನು ಮಾಡುವವರಿಗೆ ದಿನೇ ದಿನೇ= ಪ್ರತಿದಿನವೂ, ಪುಣ್ಯರಾಶಿಂ= ಪುಣ್ಯದ ರಾಶಿಯನ್ನೇ, ಸೂತೇ= ಸೃಷ್ಟಿಸುತ್ತಾನೆಯೋ, ಸ ಏವ= ಅಂತಹ ವಾಯುವೇ, ಸವಿತಾ= ಸವಿತೃನಾಮಕನಾದವನು, ಸೋಮಬಿಂಬಸ್ಥಃ= ಸೋಮಬಿಂಬದಲ್ಲಿ ಎಂದರೆ ಚಂದ್ರನ ಬಿಂಬದಲ್ಲಿ ಇದ್ದವನಾಗಿ, ಸೋಮನಾಮಕಃ= ಸೋಮನಾಮಕನಾಗುತ್ತಾನೆ, ಪ್ರಭುಃ= ಸಮರ್ಥನಾದ ಆ ವಾಯುದೇವರು, ಸಮತ್ವಾತ್= ಸಮನಾಗಿರುವುದರಿಂದ, ಆಹ್ಲಾದಕಾರಿತ್ವಪೂರ್ವೈಃ=

ಆಹ್ಲಾದಕಾರಿತ್ವ ಮೊದಲಾದ, ಶುಭಗುಣೈಃ ಶುಭಗುಣಗಳಿಂದ ಪೂರಿತನಾದ್ದರಿಂದ (ಸೋಮನಾಮಕನೆನಿಸುತ್ತಾನೆ).

**ಅನುವಾದ–** ಸಜ್ಜನರನ್ನು ಪವಿತ್ರೀಕರಿಸುವ ವಿಷಯದಲ್ಲಿ ಅವನಿಗೆ ಅಲಂಬುದ್ಧಿ ಇಲ್ಲದ ಕಾರಣ ವಾಯುವು ಅನಲ ಶಬ್ದವಾಚ್ಯನಾಗುತ್ತಾನೆ. ಮೂರು ಕಾಲಗಳಲ್ಲಿ ಸೂರ್ಯೋಪಸ್ಥಾನವನ್ನು ಮಾಡುವವರಿಗೆ ಪ್ರತಿದಿನದಲ್ಲಿ ಯಾವನು ಪುಣ್ಯರಾಶಿಯನ್ನು ಸುರಿಸುತ್ತಾನೆಯೋ ಅವನೇ ಆ ಕಾರಣದಿಂದ ಸವಿತೃನಾಮಕ-ನಾಗುತ್ತಾನೆ. ಸೋಮಬಿಂಬದಲ್ಲಿ ಇರುವವನಾಗಿ ಸೋಮನಾಮಕನಾಗುತ್ತಾನೆ. ಸಮತ್ವದಿಂದಲೂ ಆಹ್ಲಾದಕಾರಿತ್ವ ಮೊದಲಾದ ಶುಭಗುಣಗಳಿಂದಲೂ ಪೂರ್ಣನಾದುದರಿಂದ ಆ ಪ್ರಭುವು ಸೋಮನಾಮಕನಾಗುತ್ತಾನೆ.

**ಭಾವವಿಲಾಸಿನೀ–** ಅನಲಪದಸ್ಯ ಸವಿತೃಪದಸ್ಯ ಚ ಯೋಗಮಾಹ – ಅಲಂಭಾವ ಇತಿ ॥ ಅಸ್ಯ ಪವಮಾನಸ್ಯ । ಸತಾಂ ಪವಿತ್ರೀಕರಣೇ ಅಸ್ಯ ಅಲಂಭಾವಃ ಯತೋಽನೇತಿ ಸಂಬಂಧಃ । ಉಪಾಸ್ಥಾತೃಷುಪ್ರಾತಃಕಾಲಾದಿಸಂಧ್ಯಾಕಾಲೇಷು ಸೂರ್ಯೋಪಸ್ಥಾನಂ ಕುರ್ವತ್ಸು । ಉಭಾಭ್ಯಾಂ ದೇವಸವಿತಃ ಪವಿತ್ರೇಣ ಸವೇನ ಚ । ಮಾಂ ಪುನೀಹಿ ವಿಶ್ವತಃ'' ಇತಿ ಶ್ರುತೌ ಸವಿತಃ ಪುಣ್ಯಪ್ರಸ್ಯ ಹೇ ದೇವಪವಮಾನ ಪವಿತ್ರೇಣ ಸಂಧ್ಯಾಂಗತಯಾ ಬಾಹುಮೂಲೇ ಧೃತಚಕ್ರೇಣ ಸವೇನ ಸವನೇನ ಸಂಧ್ಯಾಂಗಭೂತಪ್ರಾತಃಕಾಲಾದಿಕಾಲೇನೇತ್ಯುಭಾಭ್ಯಾಂ ಮಾಂ ವಿಶ್ವತಃ ಸರ್ವತಃ ಪುನೀಹಿ । ಅವೈಷ್ಣವಸಂಧ್ಯಾಕರಣಾದೋಷಾತ್ ಕಾಲಾತಿಕ್ರಮದೋಷಾಚ್ಚ ಪವಿತ್ರೀಕುರ್ವಿತಿ ತ್ರಿಷುವರ್ಣೇಷು ಕ್ರಿಯಮಾಣಮಧ್ವಾಚಾರ್ಯೋಕ್ತಚಕ್ರಧಾರಣಪೂರ್ವಕ ಸಂಧ್ಯಾವಂದನೇನ ಸ್ವಪಾವಿತ್ರ್ಯಂ ಪವಮಾನಂ ಪ್ರತಿ ಪ್ರಾರ್ಥಯಮಾನೇನ ತಸ್ಮಿನ್ ಸವಿತೃಪದ-ಪ್ರಯೋಗಾದುಪಸ್ಥಾತೃಷು ಯಃ ಪುಣ್ಯರಾಶಿಂ ಸೂತ ಇತ್ಯುಕ್ತಮ್ । ಅನೇನ ಪವಿತ್ರನಾಮಕ-ಸುದರ್ಶನಧಾರಣಸ್ಯಾಪಿ ಉಭಾಭ್ಯಾಮಿತಿ ಸಹೈವ ಗೃಹೀತತ್ವಾತ್ ಕಾಲತ್ರಯೇಽಪಿ ಕ್ರಿಯಮಾಣಸಂಧ್ಯಾವಂದನಸ್ಯ ಗೋಪೀಚಂದನೇನ ಕ್ರಿಯಮಾಣಸುದರ್ಶನಧಾರಣ-ಪೂರ್ವಕತ್ವನಿಯಮೋಽಪಿ ಸೂಚಿತೋ ಭವತಿ । ಪುಣ್ಯರಾಶಿಮಿತ್ಯುಪಲಕ್ಷಣಮ್ । ತ್ರಿಭಿಷ್ಟ್ವಂದೇವ ಸವಿತರ್ವರ್ಷಿಷ್ಠೈಃ ಸೋಮ ಧಾಮಭಿಃ । ಅಗ್ನೇ ದಕ್ಷೈಃ ಪುನೀಹಿನಃ'' ಇತಿ ಶ್ರುತೌ ಸಂಧ್ಯಾವಂದನಾಂಗಭೂತಾಹೋರಾತ್ರಿ ಸಂಧ್ಯಾಪ್ರವರ್ತಕಸವಿತೃಸೋಮಾಗ್ನಿಷು ಸ್ಥಿತಂ ಪವಮಾನದೇವಂ ತತ್ತತ್ಪದೈಃ ಸಂಬೋಧ್ಯ ವರ್ಷಿಷ್ಠೈಃ ಬಹುವರ್ಷಸ್ಥಾಯಿಭಿಃ ಅನಾದ್ಯನಂತಕಾಲೀನೈರಿತ್ಯರ್ಥಃ ।

ದಕ್ಷೈಃ ಕಾಮಾನ್ನಾದಿಸಕಲಾಭೀಷ್ಟದಾನಕುಶಲೈಃ ತ್ರಿಭಿರ್ಧಾಮಭಿಃ ತದುಕ್ತರೀತ್ಯಾ ಕೃತವಿಷ್ಣುಪ್ರೀತಿಕರಸಂಧ್ಯಾವಂದನತ್ರಯೀಫಲಭೂತೈಃ ವೈಕುಂಠಶ್ವೇತದ್ವೀಪನಾಂತಾಸ-ನಾಖ್ಯಾತ್ರಿಸಂಖ್ಯಾಕಾಲೋಕೈಃ। ತ್ವಂ ನಃ ಪುನೀಹಿ। ಉಕ್ತಲೋಕತ್ರಯಂ ದತ್ವಾಸಂಸಾರಾಖ್ಯಮಲಂ ವಿನಾಶ್ಯ ಪವಿತ್ರೀಕುರ್ವಿತಿ ಮೋಕ್ಷರೂಪಫಲಸ್ಯಾಪಿ ಪ್ರಾರ್ಥಿತತ್ವಾನ್ನೈಕ್ತಭೋಗರಾಶಿಂ ಚ ಸೂತೇ

ಸುನೋತಿ । ಅಪ್ರಧಾನಭೂತಮುಕ್ತವರ್ಗೇಷು ತಂ ನಯತೀತಿ ವ್ಯುತ್ಪತ್ತ್ಯಾ ಚ ಸವಿತ್ರಾದಿ-ಪದವಾಚ್ಯತ್ವಂ ದ್ರಷ್ಟವ್ಯಮ್ । ಅನೇನ ವಾಯೋರಪಿ ವಾಯುಶ್ಚ ತದನುಜ್ಞಯೇತಿ ಸ್ಮೃತ್ಯುಕ್ತ-ಮೋಕ್ಷದಾತೃತ್ವಮಪಿ ಸ್ಪಷ್ಟೀಕೃತಂ ಭವತಿ । ಪೂರ್ವೈರಿತ್ಯನೇನ ಸು ಪ್ರಸವೈಶ್ವರ್ಯಯೋರಿತಿ ಧಾತುನಿಷ್ಪನ್ನ- ಸೋಮಶಬ್ದಾರ್ಥೋ ಗೃಹ್ಯತೇ ॥ ೬೧೨-೬೧೩ ॥

**ವಿವರಣೆ**– 'ಉಭಾಭ್ಯಾಂ ದೇವ ಸವಿತಃ ಪವಿತ್ರೇಣ ಸವೇನ ಚ । ಮಾಂ ಪುನೀಹಿ ವಿಶ್ವತಃ' ಎಂಬ ಮಂತ್ರವಿದೆ. ಅದರ ಅರ್ಥ ಹೀಗೆ : ಸವಿತಃ= ಎಲ್ಲೆ ಪುಣ್ಯವನ್ನು ಸೃಷ್ಟಿಸುವವನಾದ ದೇವ= ಎಲ್ಲೆ ಪವಮಾನನೇ ಪವಿತ್ರೇಣ= ಸಂಧ್ಯಾಂಗವಾಗಿ ಬಾಹುಮೂಲದಲ್ಲಿ ಧರಿಸಿದ ಚಕ್ರದಿಂದಲೂ ಸವೇನ= ಸಂಧ್ಯಾಂಗವಾದ ಪ್ರಾತಃಕಾಲಾದಿ ಕಾಲದಿಂದಲೂ ಹೀಗೆ ಉಭಾಭ್ಯಾಂ= ಎರಡರಿಂದಲೂ ಮಾಂ= ನನ್ನನ್ನು, ವಿಶ್ವತಃ= ಎಲ್ಲ ರೀತಿಯಿಂದಲೂ ಪುನೀಹಿ= ಪವಿತ್ರೀಕರಿಸು. ಅವೈಷ್ಣವ ಪದ್ಧತಿಯಲ್ಲಿ ಸಂಧ್ಯಾವಂದನೆ ಮಾಡುವ ದೋಷದಿಂದಲೂ, ಕಾಲಾತಿಕ್ರಮ ದೋಷದಿಂದಲೂ ನನ್ನನ್ನು ಪವಿತ್ರೀಕರಿಸು ಎಂಬ ಅರ್ಥದ ಈ ಮಂತ್ರದಿಂದ ಮೂರು ಕಾಲಗಳಲ್ಲಿ ಮೂರು ವರ್ಣದವರು ಮಾಡುವ ಸಂಧ್ಯಾವಂದನೆಯನ್ನು ಮಧ್ವಾಚಾರ್ಯರು ಹೇಳಿದಂತೆ ಬಾಹುಮೂಲದಲ್ಲಿ ಚಕ್ರಚಿಹ್ನೆಯನ್ನು ಧರಿಸಿ ವಾಯುವನ್ನು ಪ್ರಾರ್ಥಿಸಬೇಕು ಎಂದು ತಿಳಿಯುವುದರಿಂದ ಹಾಗೆ ಪವಿತ್ರೀಕರಿಸಿ ಪುಣ್ಯರಾಶಿಯನ್ನು ಸುರಿಸುವುದರಿಂದ ವಾಯುವು ಸವಿತೃವೆನಿಸುತ್ತಾನೆ. ಇದರಿಂದ ತಪ್ತಚಕ್ರಾಂಕನವಲ್ಲದೆ ಕಾಲತ್ರಯದಲ್ಲಿಯೂ ಸಂಧ್ಯಾವಂದನೆಯನ್ನು ಮಾಡುವಾಗ ಗೋಪೀಚಂದನದಿಂದ ಚಕ್ರಾಂಕನವನ್ನು ಮಾಡಿ ಕೊಳ್ಳಬೇಕೆಂದು ಸಿದ್ಧವಾಗುತ್ತದೆ. ಪುಣ್ಯರಾಶಿಯನ್ನು ಸುರಿಸುತ್ತಾನೆ ಎಂಬುದು ಉಪಲಕ್ಷಣ. ಮೋಕ್ಷದಲ್ಲಿ ಭೋಗರಾಶಿಯನ್ನೂ ಸುರಿಸುತ್ತಾನೆ ಎಂದು ಇಟ್ಟುಕೊಳ್ಳಬೇಕು. ಏಕೆಂದರೆ 'ತ್ರಿಭಿಷ್ಟ್ವಂ ದೇವ ಸವಿತಃ ವರ್ಷಿಷ್ಠೈಃ ಸೋಮ ಧಾಮಭಿಃ । ಪುನೀಹಿ ನಃ' ಎಂಬ ವೇದಮಂತ್ರವಿದೆ. ಇಲ್ಲಿ ಸಂಧ್ಯಾವಂದನೆಗೆ ಅಂಗವಾದ ಹಗಲು ರಾತ್ರಿ ಮತ್ತು ಸಂಧ್ಯಾಕಾಲಪ್ರವರ್ತಕರಾದ ಸವಿತೃ ಸೋಮ ಮತ್ತು ಅಗ್ನಿಗಳಲ್ಲಿರುವ ಪವಮಾನ ದೇವನನ್ನು ಸವಿತ್ರಾದಿ ಪದಗಳಿಂದ ಸಂಬೋಧಿಸಿ ವರ್ಷಿಷ್ಠೈಃ= ಬಹುವರ್ಷಗಳವರೆಗೆ ಇರುವ ಎಂದರೆ ಅನಾದ್ಯನಂತ ಕಾಲೀನವಾದ ದಕ್ಷೈಃ= ಸಕಲಾಭೀಷ್ಟವನ್ನೂ ಸುರಿಸಲು ಸಮರ್ಥವಾದ ತ್ರಿಭಿಃಧಾಮಭಿಃ= ವಾಯುದೇವನ ಶಾಸನದ ರೀತಿಯಲ್ಲಿ ಮಾಡಲ್ಪಟ್ಟ ವಿಷ್ಣುಪ್ರೀತಿಕರವಾದ ಮೂರು ಕಾಲದ ಸಂಧ್ಯಾವಂದನೆಯ ಫಲವಾದ ವೈಕುಂಠ, ಶ್ವೇತದ್ವೀಪ, ಅನಂತಾಸನವೆಂಬ ಲೋಕಗಳಿಂದ ತ್ವಂ= ನೀನು ನಃ= ನಮ್ಮನ್ನು ಪುನೀಹಿ= ಪವಿತ್ರೀಕರಿಸು. ಎಂದರೆ ಈ ಮೂರು ಲೋಕಗಳನ್ನು ಕೊಟ್ಟು ಸಂಸಾರವೆಂಬ ಮಲವನ್ನು ನಾಶಮಾಡಿ ಮೋಕ್ಷರೂಪ ಫಲವನ್ನು ಕೊಡು ಎಂದು ಪ್ರಾರ್ಥಿಸಲ್ಪಟ್ಟಿರುವುದರಿಂದ ಪವಮಾನನು ಮೋಕ್ಷದಲ್ಲಿ ಭೋಗರಾಶಿಯನ್ನು ಪ್ರಸವಿಸುತ್ತಾನೆ ಎಂದು ಅಭಿಪ್ರಾಯ. 'ವಿಷ್ಣೋರ್ಹಿದಶಾಮೋಕ್ಷಸ್ಯ ವಾಯುಶ್ಚ ತದನುಜ್ಞಯಾ' ಎಂಬ ಪ್ರಮಾಣವೂ ಸಹ ಇದಕ್ಕೆ ಪೂರಕವಾಗಿದೆ.

**ಪವಮಾನಸ್ಯ ಯತ್ ಸೂಕ್ತೇ ಪವಮಾನಪ್ರಶಂಸನಮ್ ।**
**ಉಚಿತಂ ತೇನ ವಾಯುಶ್ಚ ವಾಯುಗೋ ಹರಿರೇವ ಚ ।**
**ಸೂಕ್ತಸ್ಥಿತಾಖಿಲರ್ಗ್ಭಿಶ್ಚ ಸ್ತುತ್ಯೋ ನಾನ್ಯಸ್ಯ ವಾಗಿಯಮ್ ॥ ೬೧೪ ॥**

**ಅರ್ಥ–** ಯತ್= ಯಾವ ಕಾರಣದಿಂದ, ಪವಮಾನ ಸೂಕ್ತೇ= ಪವಮಾನ ಸೂಕ್ತದಲ್ಲಿ, ಪವಮಾನ ಪ್ರಶಂಸನಂ= ಪವಮಾನನ ಪ್ರಶಂಸನೆಯು, ಉಚಿತಂ= ಯೋಗ್ಯವಾಗಿದೆಯೋ, ತೇನ= ಆ ಕಾರಣದಿಂದ, ವಾಯುಶ್ಚ= ವಾಯುವೂ, ವಾಯುಗಃ= ವಾಯುಸ್ಥಿತನಾದ, ಹರಿರೇವ ಚ= ಹರಿಯೂ ಸಹ, ಸೂಕ್ತಸ್ಥಿತಾಖಿಲರ್ಗ್ಭಿಶ್ಚ= ಸೂಕ್ತದಲ್ಲಿರುವ ಎಲ್ಲಾ ಮಂತ್ರಗಳಿಂದಲೂ, ಸ್ತುತ್ಯಃ= ಸ್ತುತ್ಯರಾದವರು, ಇಯಂ ವಾಕ್= ಈ ಋಕ್‌ಗಳು, ಅನ್ಯಸ್ಯ ನ= ಇನ್ನೊಬ್ಬನನ್ನು ಸ್ತೋತ್ರ ಮಾಡುವುದಿಲ್ಲ.

**ಅನುವಾದ–** ಯಾವ ಕಾರಣದಿಂದ ಪವಮಾನ ಸೂಕ್ತದಲ್ಲಿ ಪವಮಾನನ ಪ್ರಶಂಸೆಯೇ ಯೋಗ್ಯವಾಗುತ್ತದೆಯೋ ಆ ಕಾರಣದಿಂದ ಪವಮಾನ ಸೂಕ್ತದಲ್ಲಿರುವ ಎಲ್ಲ ಮಂತ್ರಗಳಿಂದಲೂ ವಾಯುವೂ ಮತ್ತು ವಾಯ್ವಂತರ್ಗತನಾದ ಹರಿಯೂ ಸ್ತೋತ್ರ ಮಾಡಲ್ಪಡುತ್ತಾರೆ. ಈ ಮಂತ್ರಗಳು ಬೇರೆಯವರನ್ನು ಸ್ತೋತ್ರ ಮಾಡುವುದಿಲ್ಲ.

**ಭಾವವಿಲಾಸಿನೀ–** ಯದ್ಯಸ್ಮಾತ್ । ತೇನಕಾರಣೇನ । ಇಯಂ ಪವಮಾನಪೂಯಮಾನರೂಪಾ ॥ ೬೧೪ ॥

**ಅತೋಽಗ್ನಾವಾಹಿತಂ ಚಕ್ರಂ ಸ್ವಾರ್ಚಿಷಾ ಪುಣ್ಯದಾಯಿನಾ ।**
**ಸ ಏವ ತಪ್ತಂ ಕುರುತೇ ಗುರುಭೂರ್ತ್ವಾ ಸ ಏವ ಚ ॥ ೬೧೫ ॥**

**ಸತಾಂ ಭುಜೇ ಧಾರಯತಿ ಮುನೀನಾಂ ಮಧ್ವರೂಪಧೃಕ್ ।**
**ಸ ಏವ ಧಾರಯೇದ್ ವಾಯುರನ್ಯತ್ರ ಗುರುಷು ಸ್ಥಿತಃ ॥ ೬೧೬ ॥**

**ಅರ್ಥ–** ಅತಃ= ಆದ್ದರಿಂದ, ಅಗ್ನೌ= ಅಗ್ನಿಯಲ್ಲಿ, ಆಹಿತಂ= ಸ್ಥಾಪಿತವಾದ, ಚಕ್ರಂ= ಚಕ್ರವನ್ನು, ಪುಣ್ಯದಾಯಿನಾ= ಪುಣ್ಯವನ್ನು ಕೊಡುವ, ಸ್ವಾರ್ಚಿಷಾ= ತನ್ನ ಕಿರಣಗಳಿಂದ, ಸ ಏವ= ಆ ವಾಯುವೇ, ತಪ್ತಂ ಕುರುತೇ= ತಪ್ತವನ್ನಾಗಿ ಮಾಡುತ್ತಾನೆ, ಚ= ಮತ್ತು, ಸ ಏವ= ಆ ವಾಯುದೇವನೇ, ಗುರುರ್ಭೂತ್ವಾ= ಗುರುವಿನ ರೂಪದಲ್ಲಿ ಇದ್ದು, ಸತಾಂ= ಸಜ್ಜನರಾದ, ಮುನೀನಾಂ= ಮುನಿಗಳ, ಭುಜೇ= ಭುಜದಲ್ಲಿ, ಧಾರಯತಿ= ಮುದ್ರಿಸುತ್ತಾನೆ, ಸ ಏವ= ಆ ವಾಯುದೇವನೇ, ಮಧ್ವರೂಪಧೃಕ್= ಮಧ್ವರೂಪವನ್ನು ಧರಿಸಿ, ಅನ್ಯತ್ರ= ಬೇರೆ ಬೇರೆ, ಗುರುಷು= ಗುರುಗಳಲ್ಲಿ, ಸ್ಥಿತಃ= ಇದ್ದವನಾಗಿ, ಧಾರಯತಿ= ಮುದ್ರಾಂಕನವನ್ನು ಮಾಡುತ್ತಾನೆ.

**ಅನುವಾದ–** ಆದ್ದರಿಂದ ಅಗ್ನಿಯಲ್ಲಿ ಸ್ಥಾಪಿತವಾದ ಚಕ್ರವನ್ನು ಆ ವಾಯುದೇವನು ತನ್ನ ಕಿರಣಗಳಿಂದ ತಾನೇ ಕಾಯಿಸಿ ಗುರುವಾಗಿ ಸಜ್ಜನರಾದ ಮುನಿಗಳ ಭುಜದಲ್ಲಿ ಮುದ್ರಿಸುತ್ತಾನೆ. ಆ ವಾಯುವೇ ಮಧ್ವರೂಪವನ್ನು ಧರಿಸಿ ಅನೇಕ ಗುರುಗಳಲ್ಲಿದ್ದು ಶಿಷ್ಯರಿಗೆ ಮುದ್ರಾಂಕನವನ್ನು ಮಾಡುತ್ತಾನೆ.

**ಭಾವವಿಲಾಸಿನೀ–** ಅತಃ ವಾಯೋರೇವ ಪವಮಾನಸೂಕ್ತಪ್ರತಿಪಾದ್ಯತ್ವಾತ್ । ಸ ಏವ ವಾಯುರೇವ । ಮಧ್ವರೂಪಧೃಕ್ ಗುರುರ್ಭೂತ್ವಾ ಸತಾಂ ಮುನೀನಾಂ ಭೋಭ್ರುಜೇ ಧಾರಯತೀತಿ ಸಂಬಂಧಃ । ಅನ್ಯತ್ರ ಮಧ್ವರೂಪಾದನ್ಯತ್ರ ಗುರುಷ ಮುದ್ರಾಧಾರಣಕರ್ತೃಷು ಪರಮಹಂಸೇಷು ಸ್ಥಿತಃ ಅಂತರ್ಯಾಮೀ ॥ ೬೧೫-೬೧೬ ॥

**ವಿವರಣೆ–** ಮುದ್ರಾಂಕನವನ್ನು ಮಾಡುವ ಪರಮಹಂಸಾದಿ ಗುರುಗಳಲ್ಲಿ ಅನೇಕ ರೂಪಗಳಿಂದ ಇದ್ದು ಮಧ್ವಾಚಾರ್ಯರೇ ಮುದ್ರಾಂಕನವನ್ನು ಮಾಡುತ್ತಾರೆ. ಆದ್ದರಿಂದಲೇ ಪವಮಾನ ಸೂಕ್ತದಲ್ಲಿ ಮಧ್ವಾಚಾರ್ಯರ ಅನೇಕ ಮೂರ್ತಿಗಳ ಅಭಿಪ್ರಾಯದಿಂದ ಪಾವಮಾನ್ಯಃ ಎಂದು ಬಹುವಚನವು ಪ್ರಯೋಗಿಸಲ್ಪಟ್ಟಿದೆ.

ಮಧ್ವಾಖ್ಯಗುರುರೂಪೇಣ ಪೂಯಮಾನಃ ಸ ಪಾವಯನ್ ।
ಧಾರಯೇತ್ತಾನಿ ರೂಪಾಣಿ ಮಧ್ವಸ್ಯೈವ ಬಹೂನಿ ತತ್ ॥ ೬೧೭ ॥

**ಅರ್ಥ–** ಸಃ= ಆ ವಾಯುದೇವರು, ಮಧ್ವಾಖ್ಯಗುರುರೂಪೇಣ= ಮಧ್ವಾಚಾರ್ಯರೆಂಬ ಗುರು ರೂಪದಿಂದ, ಪೂಯಮಾನಃ= ಸ್ವತಃ ಪವಿತ್ರರಾಗಿ, ಪಾವಯನ್= ಭಕ್ತರನ್ನು ಪವಿತ್ರೀಕರಿಸುತ್ತಾ, ಧಾರಯೇತ್= ಮುದ್ರಾಂಕನವನ್ನು ಮಾಡುತ್ತಾರೆ, ತತ್= ಆದ್ದರಿಂದ, ತಾನಿ= ಆ, ಬಹೂನಿ ರೂಪಾಣಿ= ಅನೇಕ ರೂಪಗಳು, ಮಧ್ವಸ್ಯೈವ= ಮಧ್ವಾಚಾರ್ಯರದ್ದೇ ಆಗಿವೆ.

**ಅನುವಾದ–** ಆ ವಾಯುದೇವನೇ ಮಧ್ವಾಚಾರ್ಯರೆಂಬ ಗುರುರೂಪದಿಂದ ಸ್ವಯಂ ಪವಿತ್ರರಾಗಿ ಭಕ್ತರನ್ನು ಪವಿತ್ರೀಕರಿಸುತ್ತಾ ಮುದ್ರಾಂಕನವನ್ನು ಮಾಡುತ್ತಾರೆ. ಮುದ್ರಾಂಕನವನ್ನು ಮಾಡುವ ಗುರುಗಳಲ್ಲಿರುವ ಆ ಅನೇಕ ರೂಪಗಳು ಮಧ್ವಾಚಾರ್ಯರದ್ದೇ ಆಗಿವೆ.

**ಭಾವವಿಲಾಸಿನೀ–** ತಾನಿ ತತ್ರ ತತ್ರಾಗಿನಷು ಸ್ಥಿತ್ವಾ ಸುದರ್ಶನಾಪಕಾನಿ ದೈನಂದಿನಮಧ್ವರೂಪೈಃ ಸತ್ ಸುಸಾಕ್ಷಾನ್ ಮುದ್ರಾಂಕನಕರ್ತೄಣಿ ತತ್ರ ತತ್ರ ಮುದ್ರಾಂಕನಂ ಕುರ್ವತ್ಸು ಗುರುಷು ಪ್ರೇರಕತಯಾ ಸ್ಥಿತಾನಿ ಚ । ತತ್ತಸ್ಮಾತ್ । ಅತ ಏವ ಶ್ರುತೌ ಪಾವಮಾನ್ಯ ಇತಿ ಬಹುವಚನಮಿತಿ ಭಾವಃ ॥ ೬೧೭ ॥

ಶಿಷ್ಟಾಚಾರಾದದೃಷ್ಟಸ್ಯ ಯದಾ ವೇದಸ್ಯ ಕಲ್ಪನಾ ।
ಸ್ಪಷ್ಟದೃಷ್ಟಶ್ರುತಿಂ ಸೋತಿಬಲವಾನ್ನೈವ ಮುಂಚತಿ ॥ ೬೧೮ ॥

**ಅರ್ಥ–** ಯದಾ= ಯಾವಾಗ, ಶಿಷ್ಟಾಚಾರಾತ್= ಶಿಷ್ಟಾಚಾರದ ಬಲದಿಂದ, ಅದೃಷ್ಟಸ್ಯ= ಅದೃಷ್ಟವಾದ, ವೇದಸ್ಯ ಕಲ್ಪನಾ= ವೇದದ ಕಲ್ಪನೆಯನ್ನು ಮಾಡುತ್ತಾರೆಯೋ ಆ ಕಾರಣದಿಂದ, ಬಲವಾನ್ ಸಃ= ಪ್ರಬಲವಾದ ಆ ಶಿಷ್ಟಾಚಾರವು, ಸ್ಪಷ್ಟದೃಷ್ಟಶ್ರುತಿಂ= ಸ್ಪಷ್ಟವಾಗಿ ಕಣ್ಣಿಗೆ ಕಾಣುವ ಶ್ರುತಿಯನ್ನು, ನೈವ ಮುಂಚತಿ= ಎಂದೂ ಬಿಡುವುದಿಲ್ಲ.

**ಅನುವಾದ–** ಶಿಷ್ಟಾಚಾರದಿಂದ ಮೀಮಾಂಸಕರು ಮತ್ತು ವೇದಾಂತಿಗಳು ಅದೃಷ್ಟವಾದ ಶ್ರುತಿಯನ್ನು ಕಲ್ಪನೆ ಮಾಡಿ ಅದರಂತೆ ಕಾರ್ಯವನ್ನು ಮಾಡುತ್ತಾರೆ. ಹೀಗಿರುವಾಗ ಪ್ರಬಲವಾದ ಶಿಷ್ಟಾಚಾರವು ಸ್ಪಷ್ಟವಾಗಿ ಕಾಣುವ ಶ್ರುತಿಯನ್ನು ಎಂದೂ ಬಿಡುವುದಿಲ್ಲ.

**ಭಾವವಿಲಾಸಿನೀ–** ಸಃ ಶಿಷ್ಟಾಚಾರಃ ॥ ೬೧೮ ॥

**ವಿವರಣೆ–** ಶ್ರುತಿಯೇ ಇಲ್ಲದಿದ್ದರೂ ಶಿಷ್ಟಾಚಾರದ ಬಲದಿಂದಲೇ ಒಂದು ಶ್ರುತಿಯನ್ನು ಅನುಮಾನದಿಂದ ಕಲ್ಪನೆ ಮಾಡಿ ಅದರಂತೆ ಕಾರ್ಯವನ್ನು ಮಾಡುವಾಗ ಪ್ರತ್ಯಕ್ಷ ಶ್ರುತಿ ಇರುವಾಗ ಶಿಷ್ಟಾಚಾರವು ಆ ಶ್ರುತಿಯನ್ನು ಎಂದೂ ಬಿಡುವುದಿಲ್ಲ ಎಂದು ಅಭಿಪ್ರಾಯ.

**ಅತಃ ಶ್ರುತಿರಭೂದೇಷಾ ತಪ್ತಚಕ್ರಾಂಕಶಾಸನಮ್ ।**
**ಲಿಂಗಾನುಶಾಸನಂ ತೂಕ್ತಂ ಶಾಸನದ್ವಯಸಂಪದಾ ।**
**ಸಂಹಿತಾಂ ವೈಷ್ಣವಗ್ರಾಮಸೀಮಾಂ ಕೋ ವಾ ನ ಮಾನಯೇತ್ ॥ ೬೧೯ ॥**

**ಅರ್ಥ–** ಅತಃ= ಆದ್ದರಿಂದ, ಏಷಾ ಶ್ರುತಿಃ= ಉಭಾಭ್ಯಾಂ ದೇವ ಸವಿತಃ ಎಂಬ ಈ ಶ್ರುತಿಯು, ತಪ್ತಚಕ್ರಾಂಕಶಾಸನಂ= ತಪ್ತಚಕ್ರಾಂಕನವನ್ನು ವಿಧಾನ ಮಾಡುವ ಶಾಸನವಾಗಿ, ಅಭೂತ್= ಆಯಿತು, ಲಿಂಗಾನುಶಾಸನಂ ತು= ಲಿಂಗಾನುಶಾಸನವನ್ನಾದರೂ, ಉಕ್ತಂ= ಮೊದಲೇ ಹೇಳಿದ್ದೇವೆ. ಶಾಸನದ್ವಯಸಂಪದಾ= ಎರಡು ಶಾಸನಗಳ ಬಲದಿಂದ, ಸಂಹಿತಾಂ= ಕೂಡಿದಂತಹ, ವೈಷ್ಣವಗ್ರಾಮಸೀಮಾಂ= ಈ ವೈಷ್ಣವಾಚಾರವೆಂಬ ಗ್ರಾಮದ ಸೀಮೆಯನ್ನು, ಕೋ ವಾ= ಯಾವನು ತಾನೇ, ನ ಮಾನಯೇತ್= ಗೌರವಿಸುವುದಿಲ್ಲ?

**ಅನುವಾದ–** ಆದ್ದರಿಂದ ಉಭಾಭ್ಯಾಂ ದೇವ ಸವಿತಃ ಎಂಬ ಶ್ರುತಿಯೇ ತಪ್ತಚಕ್ರಾಂಕನವನ್ನು ವಿಧಾನ ಮಾಡುವ ಶಾಸನವಾಯಿತು. 'ಪವಿತ್ರಂ ಚರಣಂ ನೇಮಿಃ' ಮೊದಲಾದ ಲಿಂಗಾನುಶಾಸನ ರೂಪವಾದ ಕೋಶವನ್ನು ಮೊದಲೇ ಹೇಳಿದ್ದಾಗಿದೆ. ಈ ಎರಡು ಶಾಸನಗಳ ಬಲದಿಂದ ಕೂಡಿದ ವೈಷ್ಣವಾಚಾರ ರೂಪವಾದ ಗ್ರಾಮದ ಸೀಮೆಯನ್ನು (ಎಲ್ಲೆಯನ್ನು) ಯಾವನು ಗೌರವಿಸುವುದಿಲ್ಲ?

**ಭಾವವಿಲಾಸಿನೀ–** ಲಿಂಗಾನುಶಾಸನಂ "ಪವಿತ್ರಂ ಚರಣಂ ನೇಮಿತರಿ"ತ್ಯಾದಿಕಮ್ ॥೬೧೯॥

ಪ್ರಾಸ್ತಾವಯತ್ ಸಂಹಿತಾ ಯತ್ ತದೇವ ಪರಿಶಿಷ್ಟವಾಕ್ ।
ಪ್ರಪಂಚಯತಿ ತೇನಾಭೂತ್ ತಚ್ಚ ಶಿಷ್ಟಾನುಶಾಸನಮ್ ॥ ೬೨೦ ॥

**ಅರ್ಥ–** ಯತ್= ಯಾವ ಕಾರಣದಿಂದ, ಸಂಹಿತಾ= ಸಂಹಿತೆಯು, ಯತ್= ಯಾವುದನ್ನು, ಪ್ರಾಸ್ತಾವಯತ್= ಮೊದಲು ಪ್ರಸ್ತಾಪ ಮಾಡಿತೋ, ತದೇವ= ಅದನ್ನೇ, ಪರಿಶಿಷ್ಟವಾಕ್= ಪರಿಶಿಷ್ಟವಾಕ್ಯಭಾಗವು, ಪ್ರಪಂಚಯತಿ= ವಿಸ್ತಾರವಾಗಿ ಹೇಳುತ್ತದೆ. ತೇನ= ಆ ಕಾರಣದಿಂದ, ತತ್= ಆ ತಪ್ತಚಕ್ರಾಂಕನವು, ಶಿಷ್ಟಾನುಶಾಸನಂ= ಶಿಷ್ಟಾನುಶಾಸನವು ಆಯಿತು.

**ಅನುವಾದ–** ಸಂಹಿತೆಯು ಮೊದಲು ಯಾವ ತಾಪದಿಂದ ದೇಹಶುದ್ಧಿಯನ್ನು ಪ್ರಸ್ತಾವಿಸಿತೋ ಅದನ್ನೇ ಪರಿಶಿಷ್ಟವಾಕ್ಯಭಾಗವು ವಿಸ್ತಾರ ಮಾಡಿ ಹೇಳುತ್ತದೆ. ಆದ್ದರಿಂದ ತಪ್ತಮುದ್ರಾಧಾರಣವು ಶಿಷ್ಟಾನುಶಾಸನಾನುಗೃಹೀತವೂ ಆಯಿತು.

**ಭಾವವಿಲಾಸಿನೀ–**ತೇನ ಸಂಹಿತಾ ಪರಿಶಿಷ್ಟವಾಕ್ಯಯೋರೇಕಾರ್ಥತ್ವೇನ । ತತ್ ಪರಿಶಿಷ್ಟ ವಚನಮ್ । ನ ಕೇವಲಂ ಶಿಷ್ಟಾಚಾರಃ ಕಿಂತು ಪರಿಶಿಷ್ಟವಚನಾಖ್ಯಶಿಷ್ಟವಚನಮಪ್ಯಸ್ತೀತಿ ಭಾವಃ ॥ ೬೨೦ ॥

**ವಿವರಣೆ–** 'ಯತ್ತೇ ಪವಿತ್ರಂ' ಎಂಬ ಸಂಹಿತೆಯಲ್ಲಿ ಉಕ್ತವಾದ ತಪ್ತಚಕ್ರಧಾರಣವೇ ಯಾರು ಯಾರಿಂದ ಮಾಡಲ್ಪಟ್ಟಿತು ಎಂಬ ಆಕಾಂಕ್ಷೆ ಉಂಟಾದರೆ ಪರಿಶಿಷ್ಟ ಭಾಗದಿಂದ ಅದು ವರ್ಣಿಸಲ್ಪಡುತ್ತದೆ. ಆದ್ದರಿಂದಲೇ ಅದು ಪರಿಶಿಷ್ಟವೆನಿಸುತ್ತದೆ. ಆದ್ದರಿಂದ ಸಂಹಿತೆ ಮತ್ತು ಪರಿಶಿಷ್ಟ ಎರಡು ಭಾಗಗಳಲ್ಲೂ ಉಕ್ತವಾದುದರಿಂದ ತಪ್ತಮುದ್ರಾಧಾರಣವು ಅವಶ್ಯವಾಗಿ ಅನುಷ್ಠೇಯವಾದುದು ಎಂದು ಅಭಿಪ್ರಾಯ.

ಪ್ರಪಂಚನಂ ಚ ಪ್ರೋಕ್ತಸ್ಯ ತೇನ ವಾಕ್ಯದ್ವಯೇನ ತತ್ ।
ತಪ್ತಚಕ್ರಾಂಕನಂ ವಕ್ತಿ ವಾಕ್ಯಭೇದೋ ನ ಚೇದ್ ಭವೇತ್ ।
ಯತೋಽಸ್ಯ ಪರಿಶಿಷ್ಟತ್ವಂ ತಚ್ಛೇಷತ್ವಮಪೇಕ್ಷತೇ ॥ ೬೨೧ ॥

**ಅರ್ಥ–** ಪ್ರೋಕ್ತಸ್ಯ= ಸಂಹಿತೆಯಲ್ಲಿ ಹೇಳಿದ ವಿಷಯದ, ತತ್= ಆ ಪರಿಶಿಷ್ಟ ಭಾಗವು, ವಾಕ್ಯದ್ವಯೇನ= ಎರಡು ವಾಕ್ಯಗಳಿಂದ, ತಪಚಕ್ರಾಂಕನಂ= ತಪ್ತಮುದ್ರಾಧಾರಣೆಯನ್ನು, ಪ್ರಪಂಚನಂ= ವಿಸ್ತಾರರೂಪದಿಂದ, ವಕ್ತಿ= ಹೇಳುತ್ತದೆ, ನ ಚೇತ್= ಇಲ್ಲದಿದ್ದರೆ, ವಾಕ್ಯಭೇದಃ= ವಾಕ್ಯಭೇದವು, ಭವೇತ್= ಉಂಟಾಗುತ್ತದೆ, ಯತಃ= ಯಾವ ಕಾರಣದಿಂದ, ಅಸ್ಯ= ಈ ಭಾಗಕ್ಕೆ, ಪರಿಶಿಷ್ಟತ್ವಂ= ಪರಿಶಿಷ್ಟತ್ವವಿದೆಯೋ ಆ ಕಾರಣದಿಂದಲೂ, ತಚ್ಛೇಷತ್ವಂ= ಸಂಹಿತಾ ಶೇಷತ್ವವು, ಅಪೇಕ್ಷತೇ= ಅಪೇಕ್ಷಿಸಲ್ಪಡುತ್ತದೆ.

**ಅನುವಾದ–** ಸಂಹಿತೆಯಲ್ಲಿ ಹೇಳಿದ ಪ್ರಮೇಯದ ಪ್ರಪಂಚನ ರೂಪವಾದ ತಪ್ತಚಕ್ರಧಾರಣೆಯನ್ನೇ ಪರಿಶಿಷ್ಟಭಾಗವು ಎರಡು ವಾಕ್ಯಗಳಿಂದ ವಿಸ್ತಾರವಾಗಿ ಹೇಳುತ್ತದೆ. ಇಲ್ಲದಿದ್ದರೆ ವಾಕ್ಯಭೇದವು ಉಂಟಾಗುತ್ತದೆ. ಈ ಭಾಗವು ಪರಿಶಿಷ್ಟವಾದ ಕಾರಣದಿಂದಲೂ ಸಂಹಿತೆಯ ಶೇಷತ್ವವು ಅದಕ್ಕೆ ಅಪೇಕ್ಷಿತವಾಗುತ್ತದೆ.

**ಭಾವವಿಲಾಸಿನೀ–** ತತ್ ಸಂಹಿತಾಪರಿಶಿಷ್ಟಸೂಕ್ತಮ್ । ತಚ್ಛೇಷತ್ವಂ ಸಂಹಿತಾಶೇಷತ್ವಮ್ । ಸಂಹಿತೋಕ್ತತಾಪಾಖ್ಯಾರ್ಥಸ್ಯ ಶೇಷಭೂತೋ ದೇಹಪಾವಿತ್ರ್ಯಾಖ್ಯಾರ್ಥ ಏವ ಪರಿಶಿಷ್ಟೇ ಯತಃ ಕಥ್ಯತೇ ಅತಃ ಸಂಹಿತಾಪರಿಶಿಷ್ಟಾಭ್ಯಾಂ ತಾಪೇನ ದೇಹಪಾವಿತ್ರ್ಯಮುಕ್ತಮಿತಿ ಶೇಷಃ । ಏವಂ ಚ ಯತ್ತೇ ಪವಿತ್ರಮರ್ಚಿಷೀತಿ ಸಂಹಿತಾಯಾಮುಕ್ತತಪ್ತಚಕ್ರಧಾರಣಾಖ್ಯಾರ್ಥಸ್ಯೈವ ಕೈಃ ಕೈರ್ಧೃತಮಿತ್ಯಾಕಾಂಕ್ಷಾಯಾಂ ಶೇಷಭೂತೋಽರ್ಥಃ ಪರಿಶಿಷ್ಟೇ ಪ್ರತಿಪಾದ್ಯತೇ । ಅತ ಏವ ತತ್ ಪರಿಶಿಷ್ಟಮ್ । ತಸ್ಮಾದುಭಯತ್ರಾಪಿ ತಪ್ತಮುದ್ರಾಧಾರಣಸ್ಯೈವ ಪ್ರಸ್ತುತಿರಿತಿ ಭಾವಃ । ತತ್ ಪಾವಿತ್ರ್ಯಹೇತುಭೂತಮ್ ॥ ೬೨೧ ॥

**ವಿವರಣೆ–** ಸಂಹಿತೆಗೂ ಮತ್ತು ಪರಿಶಿಷ್ಟಕ್ಕೂ ಶೇಷಿ-ಶೇಷ ಭಾವವಿದೆ. ಅದು ಬೇರೆ ಬೇರೆ ವಿಷಯಗಳನ್ನು ಹೇಳಿದರೆ ವಾಕ್ಯಭೇದವು ಬರುವುದರಿಂದ ಶೇಷ-ಶೇಷಿ ಭಾವವೇ ಕೂಡುವುದಿಲ್ಲ. ಆದ್ದರಿಂದ ಅವಶ್ಯವಾಗಿ ಸಂಹಿತೆಯಲ್ಲಿ ಹೇಳಿದುದನ್ನೇ ಪರಿಶಿಷ್ಟ ಭಾಗವು ಪ್ರಪಂಚನ ಮಾಡುತ್ತದೆ ಎಂದು ಅಂಗೀಕರಿಸಬೇಕು.

ತಾಪೇನ ದೇಹಪಾವಿತ್ರ್ಯಕೃತ್ಪವಿತ್ರಂ ಜಗತ್ತ್ರಯೇ ।
ನಾಪರಂ ವಿದ್ಯತೇ ವಿಷ್ಣುಚಕ್ರಾದ್ವೈಷ್ಣವಸಂಮತಾತ್ ॥ ೬೨೨ ॥

**ಅರ್ಥ–** ತಾಪೇನ= ತಾಪದಿಂದ, ದೇಹಪಾವಿತ್ರ್ಯಕೃತ್= ದೇಹವನ್ನು ಪವಿತ್ರೀಕರಿಸುವ, ಪವಿತ್ರಂ= ಪವಿತ್ರವು, ಜಗತ್ತ್ರಯೇ= ಮೂರು ಲೋಕಗಳಲ್ಲಿಯೂ, ವೈಷ್ಣವಸಮ್ಮತಾತ್= ವೈಷ್ಣವ ಸಮ್ಮತವಾದ, ವಿಷ್ಣುಚಕ್ರಾತ್= ವಿಷ್ಣುವಿನ ಚಕ್ರಕ್ಕಿಂತ, ಅಪರಂ= ಭಿನ್ನವಾದುದು, ನ ವಿದ್ಯತೇ= ಇರುವುದಿಲ್ಲ.

**ಅನುವಾದ–** ತಾಪದಿಂದ ದೇಹವನ್ನು ಪವಿತ್ರೀಕರಿಸುವ ಪವಿತ್ರವಾದರೂ ವೈಷ್ಣವ ಸಮ್ಮತವಾದ ವಿಷ್ಣುಚಕ್ರಕ್ಕಿಂತ ಭಿನ್ನವಾದುದು ಯಾವುದೂ ಮೂರು ಲೋಕದಲ್ಲಿಯೂ ಇರುವುದಿಲ್ಲ.

**ಭಾವವಿಲಾಸಿನೀ–** ತಾಪೇನ ದೇಹಪಾವಿತ್ರ್ಯಂ ಸುದರ್ಶನೇನೈವ ವಕ್ತವ್ಯಂ ನಾನ್ಯೇನ । ದಶಾಪವಿತ್ರಾದಿನಾ ದೇಹತಾಪಾಭಾವಾತ್ । ಅತಃ ದೇಹ ತಾಪಹೇತುಭೂತಂ ಪವಿತ್ರಂ ಚ ಸುದರ್ಶನಮೇವ ಭವೇತ್ ನಾನ್ಯದಿತಿ ಭಾವಃ ॥ ೬೨೨ ॥

**ವಿವರಣೆ–** ದಶಾಪವಿತ್ರ ಮೊದಲಾದವುಗಳಿಂದ ದೇಹದ ತಾಪವುಂಟಾಗುವುದಿಲ್ಲ. ತಾಪ ಉಂಟಾಗಬೇಕಾದರೆ ಪುರಾಣ ಪ್ರಸಿದ್ಧಿ ಇರುವಂತೆ ಅದು ವಿಷ್ಣುಚಕ್ರವೇ ಆಗಬೇಕೆಂದು ಅಭಿಪ್ರಾಯ.

**ಜಡರ್ಚಾಂ ಶ್ರವಣಾಯೋಗಾನ್ನ ತಾಃ ಪ್ರಾರ್ಥಯತೇ ಮುನಿಃ ।**
**ಋಗರ್ಥೀಭೂತಪವನತನೂನಾಂ ಪ್ರಾರ್ಥನಂ ಹಿ ತತ್ ॥ ೬೨೩ ॥**

**ಅರ್ಥ–** ಜಡರ್ಚಾಂ= ಜಡವಾದ ಋಕ್‌ಗಳಿಗೆ, ಶ್ರವಣಾಯೋಗಾತ್= ಶ್ರೋತ್ರವು ಇಲ್ಲದಿರುವುದರಿಂದ (ಶ್ರವಣವು ಇಲ್ಲದಿರುವುದರಿಂದ) ಮುನಿಃ= ಮಂತ್ರದ್ರಷ್ಟಾರಾದ ಋಷಿಯು, ತಾಃ= ಆ ಋಕ್‌ಗಳನ್ನು, ನ ಪ್ರಾರ್ಥಯತೇ= ಪ್ರಾರ್ಥಿಸುವುದಿಲ್ಲ, ತತ್= ಅದು, ಋಗರ್ಥೀಭೂತಪವನತನೂನಾಂ= ಋಗರ್ಥವಾದ ಪವಮಾನನ ಮೂರ್ತಿಗಳ, ಪ್ರಾರ್ಥನಂ ಹಿ= ಪ್ರಾರ್ಥನೆಯಷ್ಟೆ.

**ಅನುವಾದ–** ಜಡವಾದ ಋಕ್‌ಗಳನ್ನು ಅವುಗಳಿಗೆ ಶ್ರವಣವಿಲ್ಲದಿರುವುದರಿಂದ ಮಂತ್ರದ್ರಷ್ಟಾವಾದ ಋಷಿಯು ಪ್ರಾರ್ಥಿಸುವುದಿಲ್ಲ. ಋಗರ್ಥವಾದ ಪವಮಾನನ ತನುಗಳನ್ನು (ಮೂರ್ತಿಗಳನ್ನು ಮಾತ್ರ) ಪ್ರಾರ್ಥಿಸುತ್ತಾನೆ. ಆ ಮಂತ್ರಗಳು ಪವಮಾನನ ಮೂರ್ತಿಗಳ ಪ್ರಾರ್ಥನಾರೂಪವಾಗಿವೆ.

**ಭಾವವಿಲಾಸಿನೀ–** ನನು ಪಾವಮಾನ್ಯ ಇತ್ಯತ್ರ ಪವಮಾನತನೂನಾಂ ಕುತೋ ಗ್ರಹಣಮಿತ್ಯತ ಆಹ –**ಜಡರ್ಚಾಮಿತ್ಯಾದಿನಾ** ॥ ಶ್ರವಣಯೋಗಾತ್ ಪ್ರಾರ್ಥನಾ ವಚನಶ್ರವಣಾಯೋಗಾತ್ । ತಾಃ ಪವಮಾನ ಪ್ರತಿಪಾದಕಋಚಃ । ಉಪಲಕ್ಷಣಂ ಚೈತತ್ । ಇಂದ್ರಃ ಸುನೀತೀ ಸಹಮಾ ಪುನಾತು ಸೋಮಃ ಸ್ವಸ್ತ್ಯಾವರುಣಃ ಸಮೀಚ್ಯೇತ್ಯಾದಿವಚನಾತ್ ಇಂದ್ರಸೋಮಾದಿಪದವಾಚ್ಯ ಪವಮಾನತನೂನಾಮೇವ ಪ್ರಾರ್ಥನಾತ್ ಪೂರ್ವಶ್ರುತಾವಪಿತಾಮೇವ ಪ್ರಾರ್ಥನಮಿತಿ ದ್ರಷ್ಟವ್ಯಂ ॥ ೬೨೩ ॥

**ವಿವರಣೆ–** ಪವಮಾನ ಸೂಕ್ತದಲ್ಲಿ ಮತ್ತು ಪರಿಶಿಷ್ಟದಲ್ಲಿ ಅಲ್ಲಲ್ಲಿ ಪಾವಮಾನ್ಯಃ ಎಂಬ ಸಂಬೋಧನೆ ಇದೆ. ಇದು ಸ್ತ್ರೀಲಿಂಗ ಬಹುವಚನವಾದ್ದರಿಂದ ಪವಮಾನ ಸಂಬಂಧಿಯಾದ ಋಕ್‌ಗಳು ಎಂದು ಭ್ರಾಂತಿ ಬರುವ ಸಂಭವವಿದೆ. ಆದರೆ ಪಾವಮಾನ್ಯಃ ಎಂದು ಕರೆಸಿಕೊಳ್ಳಲ್ಪಡುವುದು ಪವಮಾನನ ಮೂರ್ತಿಗಳೇ ಹೊರತು ಋಕ್‌ಗಳಲ್ಲ ಎಂದು ಇಲ್ಲಿ ಗ್ರಂಥಕಾರರು ಸಮರ್ಥಿಸುತ್ತಾರೆ.

**ಯತಸ್ತತ್ರೈವ ಸ ಮುನಿರ್ದೇವೈರ್ದೇವೀಃ ಸಮಾಹಿತಾಃ ।**
**ಇತ್ಯಾಹ ತೇನ ಸರ್ವರ್ಕ್ಷು ದೇವ್ಯೈಃ ಸಹ ಸಮಾಹಿತಾಃ ॥ ೬೨೪ ॥**

**ದೇವ್ಯಶ್ಚ ಸಂತಿ ಭಾರತ್ಯಾ ಮೂರ್ತಯೋ ವಾಯುಮೂರ್ತಯಃ ।**
**ಮಾನಿನ್ಯಃ ಪ್ರತಿಪಾದ್ಯಾಶ್ಚ ತತಸ್ತತ್ಪ್ರತಿಪಾದಿತಾಃ ॥ ೬೨೫ ॥**

**ಅರ್ಥ–** ಯತಃ= ಯಾವ ಕಾರಣದಿಂದ, ತತ್ರೈವ= ಅಲ್ಲಿಯೇ, ಸ ಮುನಿಃ= ಆ ಋಷಿಯು, ದೇವೈಃ= ದೇವತೆಗಳಿಂದ, ದೇವೀಃ= ದೇವಿಯರು, ಸಮಾಹಿತಾಃ= ಕೂಡಿಕೊಂಡಿದ್ದಾರೆ, ಇತ್ಯಾಹ= ಎಂದು ಹೇಳಿದರೋ, ತೇನ= ಆ ಕಾರಣದಿಂದ, ಸರ್ವರ್ಕ್ಷು= ಎಲ್ಲ ಋಕ್‌ಗಳಲ್ಲಿಯೂ, ದೇವೈಃ ಸಹ= ಪುರುಷ ದೇವತೆಗಳ ಜೊತೆಯಲ್ಲಿ, ಸಮಾಹಿತಾಃ= ಆಶ್ಲಿಷ್ಟರಾದ, ದೇವ್ಯಶ್ಚ ಸಂತಿ= ದೇವಿಯರೂ ಇದ್ದಾರೆ ಅವು, ಭಾರತ್ಯಾಃ ಮೂರ್ತಯಃ= ಭಾರತಿಯ ಮೂರ್ತಿಗಳು ಮತ್ತು, ವಾಯುಮೂರ್ತಯಃ= ವಾಯುದೇವರ ಮೂರ್ತಿಗಳು, ಅವು, ಮಾನಿನ್ಯಃ= ಮಂತ್ರಗಳಿಗೆ ಅಭಿಮಾನಿಗಳು, ಚ= ಮತ್ತು, ಪ್ರತಿಪಾದ್ಯಾಃ= ಪ್ರತಿಪಾದ್ಯವಾದವುಗಳು, ತತಃ= ಆ ಕಾರಣದಿಂದ, ತತ್ಪ್ರತಿಪಾದಿತಾಃ= ಅಲ್ಲಿ ಪ್ರತಿಪಾದಿತವಾಗಿವೆ.

**ಅನುವಾದ–** ಯಾವ ಕಾರಣದಿಂದ ಅಲ್ಲಿಯೇ ಆ ಮಂತ್ರದ್ರಷ್ಟ್ರುವಾದ ಋಷಿಗಳು ದೇವತೆಗಳ ಜೊತೆಯಲ್ಲಿ ದೇವಿಯರು ಕೂಡಿಕೊಂಡಿದ್ದಾರೆ ಎಂದು ಹೇಳಿದ್ದಾರೆಯೋ ಆ ಕಾರಣದಿಂದ ಎಲ್ಲ ಋಕ್‌ಗಳಲ್ಲಿಯೂ ದೇವತೆಗಳಿಂದ ಒಡಗೂಡಿದ ದೇವಿಯರೂ ಇದ್ದಾರೆ. ಅವು ಭಾರತಿಯ ಮತ್ತು ವಾಯುದೇವರ ಮೂರ್ತಿಗಳು. ಆ ಮೂರ್ತಿಗಳು ಮಂತ್ರಗಳಿಗೆ ಅಭಿಮಾನಿಗಳು ಮತ್ತು ಮಂತ್ರ ಪ್ರತಿಪಾದ್ಯರಾದವರು. ಆದ್ದರಿಂದ ಆ ಮಂತ್ರಗಳಲ್ಲಿ ಅವರು ಪ್ರತಿಪಾದಿಸಲ್ಪಡುತ್ತಾರೆ.

**ಭಾವವಿಲಾಸಿನೀ–** ನಿಮಿತ್ತಾಂತರಂ ಚಾಹ – **ಯತ ಇತಿ** ॥ ತತ್ರೈವ ಯೇನದೇವಾ ಇತಿ ಶ್ರುತೇಃ ಪೂರ್ವಂ ಪಾವಮಾನೀರ್ದಿಶಂತು ನ ಇಮಂ ಲೋಕಮಥೋ ಅಮುಮ್ । ಕಾಮಾಂತ್ಸಮರ್ಧಯಂತು ನೋ ದೇವೈರ್ದೇವೀಃ ಸಮಾಹಿತಾ ಇತಿ ಶ್ರುತಾವೇವ । ಅಯಮರ್ಥಃ । ಪಾವಮಾನೀಃ ಪಾವಮಾನ್ಯಃ। ಪವಮಾನಸೂಕ್ತಸಂಬಂಧಿನ್ಯ ಇತ್ಯರ್ಥಃ। ದೇವೈಃ ದೇವಶಬ್ದವಾಚ್ಯ ಪವಮಾನಮೂರ್ತಿಭಿಃ ಸಹ ಸಮಾಹಿತಾಃ ಸಮ್ಯಗಾಹಿತಾಃ । ಪವಮಾನ ಸೂಕ್ತಸ್ಥಋಚಾಂ ಪ್ರತಿಪಾದ್ಯತಯಾ ಅಭಿಮಾನಿತಯಾ ಚ ಸ್ಥಿತಾ ಇತ್ಯರ್ಥಃ । ದೇವೀಃ ದೇವ್ಯಃ ಭಾರತೀ ಮೂರ್ತಯಃ ನಃ ಇಮಂ ಲೋಕಂ ಅಥೋ ಅನಂತರಂ ಅಮುಂ ಪರಲೋಕಂ ಚ ದಿಶಂತು । ನಃ ಕಾಮಾನ್ ಕಾಮ್ಯಂತ ಇತಿ ಕಾಮಾಃ ತಾನ್ ಇಹಾಮುತ್ರ ಚ ಕಾಮ್ಯಸಕಾಲಾರ್ಥಾನಿತ್ಯರ್ಥಃ । ಸಮರ್ಧಯಂತು ಸಮೃದ್ಧಾನ್ ಕುರ್ವಂತ್ವಿತಿ ।

ಏವಂ ಚಾಸ್ಯಾಂ ಶ್ರುತೌ ಪವಮಾನಸೂಕ್ತಸ್ಥಋಕ್‌ಪ್ರತಿಪಾದ್ಯತಯಾ ತದಭಿಮಾನಿತಯಾ ಚ ದೇವಶಬ್ದವಾಚ್ಯಪವಮಾನಮೂರ್ತೀನಾಂ ದೇವೀಶಬ್ದವಾಚ್ಯ ಭಾರತೀಮೂರ್ತೀನಾಂ ಚ ಪಾವಮಾನೀಪದೇನ ಪ್ರಸ್ತುತತ್ವಾದ್ಯೇನ ದೇವಾ ಇತಿ ಶ್ರುತಾವಪಿ ಪಾವಮಾನೀಪದಂ ಗುರುತ್ವ-ಯೋಗ್ಯಪವಮಾನತನೂನಾಮೇವ ಪ್ರತಿಪಾದಕಮಿತಿಭಾವಃ। ಸಃ ಯೇನ ದೇವಾ ಇತಿ ಮಂತ್ರ-ದ್ರಷ್ಟಾ ತೇನ ಮಂತ್ರದ್ರಷ್ಟೃವೋಕ್ತತ್ವೇನ । ತತಃ ಋಗತಿರಿಕ್ತದ್ವಿವಿಧಮೂರ್ತೀನಾಂ ಸತ್ವಾತ್ । ಸಮಾಹಿತಾಃ ಇತ್ಯತ್ರ ದೇವ್ಯಃ ಪುಲಿಂಗತಯಾ ಸ್ತ್ರೀಲಿಂಗತಯಾ ಚ ದೇವಪದಸಂಬಂಧಿನ್ಯಃ ।

ಮಾನಿನ್ಯಃ ಪ್ರತಿಪಾದ್ಯಾಃ ಭಾರತೀಮೂರ್ತಯೋ ವಾಯುಮೂರ್ತಯಶ್ಚ ಯತಃ ಸಂತೀತ್ಯಾಹೇತಿ ಕ್ರಿಯಾಧ್ಯಾಹಾರೇಣ ಸಂಬಂಧಃ ॥ ೬೨೪, ೬೨೫ ॥

**ವಿವರಣೆ–** 'ಯೇನ ದೇವಾಃ ಪವಿತ್ರೇಣ' ಎಂಬ ಮಂತ್ರಕ್ಕಿಂತಲೂ ಮೊದಲು 'ಪಾವಮಾನೀರ್ದಿಶಂತು ನ ಇಮಂ ಲೋಕಮಥೋ ಅಮುಂ । ಕಾಮಾನ್ ಸಮರ್ಥಯಂತು ನೋ ದೇವೈರ್ದೇವೀಃ ಸಮಾಹಿತಾಃ' ಎಂಬ ಮಂತ್ರವಿದೆ. ಪಾವಮಾನೀಃ= ಪವಮಾನ ಸೂಕ್ತ ಸಂಬಂಧಿಯಾದಂತಹ, ದೇವೈಃ= ದೇವಶಬ್ದವಾಚ್ಯರಾದ ಪವಮಾನಮೂರ್ತಿಗಳ ಜೊತೆಯಲ್ಲಿ, ಸಮಾಹಿತಾಃ= ಚೆನ್ನಾಗಿ ಒಡಗೂಡಿದಂತಹ, ದೇವೀಃ= ಭಾರತೀದೇವಿಯರ ಮೂರ್ತಿಗಳು, ನಃ= ನಮಗೆ, ಇಮಂ ಲೋಕಂ= ಈ ಲೋಕವನ್ನೂ, ಅಥೋ= ಅನಂತರ, ಅಮುಂ= ಪರಲೋಕವನ್ನೂ, ದಿಶಂತು= ಕೊಡಲಿ, ನಃ= ನಮಗೆ, ಕಾಮಾನ್= ಇಷ್ಟವಾದ ಪದಾರ್ಥಗಳನ್ನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ, ಸಮರ್ಥಯಂತು= ಸಮೃದ್ಧಿಗೊಳಿಸಲಿ ಎಂದು ಅರ್ಥ. ಆದ್ದರಿಂದ ಪವಮಾನ ಸೂಕ್ತದಲ್ಲಿರುವ ಮಂತ್ರಗಳಿಗೆ ಅಭಿಮಾನಿಗಳಾಗಿ ಮತ್ತು ಪ್ರತಿಪಾದ್ಯರಾಗಿ ಪವಮಾನ ಮೂರ್ತಿಗಳ ಜೊತೆಯಲ್ಲಿ ಇರುವ ಭಾರತೀದೇವಿಯ ಮೂರ್ತಿಗಳನ್ನೂ ಪಾವಮಾನೀ ಶಬ್ದದಿಂದ ಪ್ರಸ್ತಾಪಿಸಿ ಋಷಿಗಳು ಅವರನ್ನು ಸ್ತೋತ್ರ ಮಾಡುತ್ತಾರೆ ಹೊರತಾಗಿ ಜಡವಾದ ಋಕ್‌ಗಳನ್ನಲ್ಲ ಎಂದು ಅಭಿಪ್ರಾಯ.

ಚಕ್ರಾಂಕಧಾರಣಂ ತೇಷು ಕುರ್ವಂತ್ಯೋ ವಾಯುಮೂರ್ತಯಃ ।
ಪ್ರಧಾನಭೂತಾಃ ಪ್ರಾರ್ಥ್ಯಂತೇ ಶೇಷೇ ಶೇಷಿಣಿ ವಾಕ್ಚಯೇ ॥ ೬೨೬ ॥

**ಅರ್ಥ–** ತೇಷು= ಆ ಮೂರ್ತಿಗಳಲ್ಲಿ, ಪ್ರಧಾನಭೂತಾಃ= ಪ್ರಧಾನರಾದ, ಚಕ್ರಾಂಕಧಾರಣಂ ಕುರ್ವಂತ್ಯಃ= ಚಕ್ರಾಂಕಧಾರಣವನ್ನು ಮಾಡುವ, ವಾಯುಮೂರ್ತಯಃ = ವಾಯುದೇವರ ಮೂರ್ತಿಗಳು, ಶೇಷೇ ಶೇಷಿಣಿ= ಶೇಷ-ಶೇಷಿ ರೂಪವಾದ, ವಾಕ್ಚಯೇ= ವಾಕ್ಯ ಸಮೂಹದಲ್ಲಿ, ಪ್ರಾರ್ಥ್ಯಂತೇ= ಪ್ರಾರ್ಥಿಸಲ್ಪಡುತ್ತಾರೆ.

**ಅನುವಾದ–** ಆ ಮೂರ್ತಿಗಳಲ್ಲಿ ಪ್ರಧಾನವಾದ ಚಕ್ರಾಂಕಧಾರಣವನ್ನು ಮಾಡುವ ವಾಯು ಮೂರ್ತಿಗಳು ಪ್ರಧಾನವಾದ ಸಂಹಿತಾಭಾಗದಲ್ಲಿಯೂ ಅಂಗವಾದ ಪರಿಶಿಷ್ಟ ಭಾಗದಲ್ಲಿಯೂ ವಾಕ್ಯಸಮೂಹಗಳಿಂದ ಪ್ರಾರ್ಥಿಸಲ್ಪಡುತ್ತಾರೆ.

**ಭಾವವಿಲಾಸಿನೀ–** ಚಕ್ರಾಂಕಧಾರಣಂ ಕುರ್ವಂತ್ಯಃ ಪ್ರಧಾನಭೂತಾ ಇತ್ಯನೇನ ಪೂರ್ವಶ್ರುತೌ ಮೂರ್ತಿ ದ್ವಯಸ್ಯ ಪ್ರಸ್ತುತತ್ವೇಪಿ ಉತ್ತರಶ್ರುತೌ ವಾಯುಮೂರ್ತಿನಾಮೇವ ಗ್ರಹಣೇ ನಿಮಿತ್ತಂ ಸೂಚಯತಿ । ಯುಕ್ತ್ಯಂತರಂ ಚಾಹ–ಶೇಷ ಇತಿ । ಶೇಷೇ ಸಂಹಿತಾಶೇಷಾತ್ಮಕಪರಿಶಿಷ್ಟರೂಪೇ । ಶೇಷಿಣಿ ಪ್ರಧಾನಭೂತಸಂಹಿತಾರೂಪೇ । ವಾಕ್ಯೇ ವಾಕ್ಯಸಮೂಹೇ । ಅಂಗಪ್ರಧಾನವಚನಾ-

ನಾಮ್ನೈಕಾರ್ಥ್ಯನಿಯಮಾತ್ ಸೂಕ್ತಪ್ರತಿಪಾದ್ಯವಾಯೋರೇವ ಪರಿಶಿಷ್ಟವಚನೇಽಪಿ ಪ್ರತಿ-ಪಾದ್ಯತ್ವಾತ್ ಯೇನ ದೇವಾ ಇತ್ಯಾದಿಶ್ರುತಿರಪಿ ವಾಯುಪ್ರತಿಪಾದಿಕೈವ । ಅತೋಽಪಿ ಪವಾಮಾನ್ಯ ಇತಿ ಪದಂ ವಾಯುಮೂರ್ತೀನಾಮೇವ ಪ್ರತಿಪಾದಕಮಿತಿ ಭಾವಃ ॥ ೬೨೬ ॥

**ವಿವರಣೆ–** ಅಂಗಾಂಗಿಗಳಿಗೆ ಸಮಾನ ವಿಷಯತ್ವ ಇರಬೇಕಾಗಿರುವುದರಿಂದ ಅಂಗಿಯಲ್ಲಿ ಸ್ತೋತ್ರ ಮಾಡಲ್ಪಡುವ ವಾಯುದೇವರೇ ಅಂಗದಲ್ಲಿಯೂ ಸ್ತೋತ್ರ ಮಾಡಲ್ಪಡುತ್ತಾರೆ. ಆದ್ದರಿಂದ ಪಾವಮಾನ್ಯಃ ಎಂಬುದು ವಾಯುದೇವರ ಮೂರ್ತಿಗಳನ್ನೇ ಹೇಳುತ್ತದೆ ಎಂದು ಅಭಿಪ್ರಾಯ.

ನ ಯಸ್ಯ ಸರ್ವಮೋಕ್ಷೇಪಿ ಮೋಕ್ಷಃ ಸಾಧರ್ಮ್ಯಧರ್ಮಿಣಿ ।
ತಚ್ಚಕ್ರಲಾಂಛನಂ ಮೋಕ್ಷಯೋಗ್ಯಾತ್ ಕೋ ಮೋಚಯೇದ್ ಬುಧಃ
॥ ೬೨೭ ॥

**ಅರ್ಥ–** ಸಾಧರ್ಮ್ಯಧರ್ಮಿಣಿ= ಸಾರೂಪ್ಯಾತ್ಮಕವಾದ, ಸರ್ವಮೋಕ್ಷೇಪಿ= ಪೂರ್ಣ ಮೋಕ್ಷದಲ್ಲಿಯೂ, ಯಸ್ಯ= ಯಾವ ಚಕ್ರಾಂಕನದ, ಮೋಕ್ಷಃ= ನಿವೃತ್ತಿಯು, ನ= ಇಲ್ಲವೋ, ತಚ್ಚಕ್ರಲಾಂಛನಂ= ಆ ಚಕ್ರಚಿಹ್ನೆಯನ್ನು, ಮೋಕ್ಷಯೋಗ್ಯಾತ್= ಮುಕ್ತಿಯೋಗ್ಯರಿಂದ, ಕೋ ಬುಧಃ= ಯಾವ ವಿವೇಕಿಯು, ಮೋಚಯೇತ್= ಬಿಡಿಸುತ್ತಾನೆ.

**ಅನುವಾದ–** ಸರ್ವಮೋಕ್ಷರೂಪವಾದ ಸಾರೂಪ್ಯ ಮೋಕ್ಷದಲ್ಲಿಯೂ ಯಾವ ಚಕ್ರಾಂಕನಕ್ಕೆ ನಿವೃತ್ತಿ ಇಲ್ಲವೋ ಅಂತಹ ಚಕ್ರಾಂಕನವನ್ನು ಮುಕ್ತಿಯೋಗ್ಯನ ಭುಜದಿಂದ ಯಾವ ವಿವೇಕಿಯು ಬಿಡಿಸುತ್ತಾನೆ?

**ಭಾವವಿಲಾಸಿನೀ–** ಶ್ರೀಮುದ್ರಾಧಾರಣಸ್ಯ ಮೋಕ್ಷಯೋಗ್ಯೇಷ್ವಾವಶ್ಯಕತ್ವೇಯುಕ್ತಿಂ ಚಾಹ – **ನ ಯಸ್ಯೇತಿ** ॥ ಯಸ್ಯ ಚಕ್ರಾದಿಧಾರಣಸ್ಯ । ಸಾಧರ್ಮ್ಯಧರ್ಮಿಣಿ । ಸಾರೂಪ್ಯಾಖ್ಯಸಾದೃಶ್ಯ-ಧರ್ಮಿಣಿ । ಸರ್ವಮೋಕ್ಷೇಽಪಿ ಸಕಲಸಂಸಾರಮೋಕ್ಷೇಽಪಿ । ಮೋಕ್ಷೋ ಮೋಚನಂ ನೇತಿ ಸಂಬಂಧಃ । ಮೋಕ್ಷಯೋಗ್ಯಾದಿತ್ಯನೇನ ತಮೋಯೋಗ್ಯಾನ್‌ಮಧ್ಯಮಜೀವಾಚ್ಚ ಚಕ್ರಾದಿ-ಮೋಚನಂ ಸಂಭಾವಿತಮಿತಿ ಸೂಚಯತಿ । ಅತ ಏವ ತಾವುಭೌ ಸ್ವಗತಾವಪಿ ಚಕ್ರಾದಿ-ಧಾರಣಾಭಾವಾತ್ ಸಂಸಾರೇಽಪಿ ಚಕ್ರಾದಿಧಾರಣನಿಂದಾಂ ಕುರ್ವಾತೇ । ತಾಮಸ ರಾಜಸ ಸ್ಮೃತಯೋಪಿ ವಿಂದಂತಿ । ಮೋಕ್ಷಯೋಗ್ಯಸ್ತು ವೈಷ್ಣವಾಃ ಮೋಕ್ಷೇಽಪ್ಯಾವಶ್ಯಕಸ್ಯ ಸಂಸಾರೇ ಸುತರಾಮಪೇಕ್ಷಿತತ್ವಾತ್ ಚಕ್ರಾದಿಧಾರಣಂ ಸ್ತುವಂತಿ । ಶ್ರುತಿಯೋ ವಾಸಿಷ್ಠಾದಿಸ್ಮೃತಯಶ್ಚ ಉಕ್ತವಿಧಯಾ ಚಕ್ರಾದಿಧಾರಣಂ ಸ್ತುವಂತೀತಿ ಭಾವಃ । ಅನೇನೈವ ನಿಂದಾವಚನಾಂ ಗತಿರಪಿ ಸೂಚಿತೇತಿ ದ್ರಷ್ಟವ್ಯಮ್ ॥ ೬೨೭ ॥

**ವಿವರಣೆ–** ಮೋಕ್ಷ ಯೋಗ್ಯಾತ್ ಎಂದು ಹೇಳಿರುವುದರಿಂದ ನಿತ್ಯ ಸಂಸಾರಿ ಗಳಿಂದಲೂ ಮತ್ತು ತಮೋಯೋಗ್ಯರಿಂದಲೂ ಚಕ್ರಾಂಕನವನ್ನು ಬಿಡಿಸಬಹುದು.

ಏಕೆಂದರೆ ಅವರಿಗೆ ಸ್ವಭಾವದಲ್ಲಿ ಚಕ್ರಾಂಕನವಿಲ್ಲ. ಆದ್ದರಿಂದಲೇ ಅವರು ಸಂಸಾರದಲ್ಲಿಯೂ ಚಕ್ರಾಂಕನವಿಲ್ಲದೇ ಚಕ್ರಾಂಕನವನ್ನು ನಿಂದಿಸುತ್ತಾ ತಿರುಗಾಡುತ್ತಾರೆ. ಮುಕ್ತಿಯೋಗ್ಯರ ಸ್ವರೂಪದಲ್ಲೇ ಚಕ್ರಾಂಕನವಿದೆ. ಆದ್ದರಿಂದ ಅವರು ಸಂಸಾರದಲ್ಲಿಯೂ ಚಕ್ರವನ್ನು ಧರಿಸುತ್ತಾರೆ. ಅವರ ಹೃದಯದಿಂದ ಯಾರೂ ಚಕ್ರಚಿಹ್ನೆಯನ್ನು ವಿಮೋಚನೆಗೊಳಿಸಲು ಸಾಧ್ಯವಿಲ್ಲ ಎಂದು ಭಾವ. ಹೀಗೆ ಹೇಳುವುದರಿಂದ ಸ್ಮೃತಿಗಳಲ್ಲಿ ಅಲ್ಲಲ್ಲಿ ಕಂಡುಬರುವ ಚಕ್ರಾಂಕನನಿಂದೆಯು ದರ್ಶನ ಭಾಷೆಯಿಂದ ಪ್ರವೃತ್ತವಾದಂತಹ ಅನ್ಯರು ಮಾಡುವಂತಹ ನಿಂದೆಯ ಅನುವಾದ ಎಂದು ಆ ವಾಕ್ಯಗಳಿಗೆ ಗತಿಯು ಸೂಚಿಸಲ್ಪಟ್ಟಿದೆ.

**ಚಮೂಷತ್ ಸಾಧುಚಮ್ವಾಂ ಸನ್ ವೈಷ್ಣವೇಷು ಸಮುಜ್ಜ್ವಲನ್ ।**
**ಸುಖೀ ಹರಿರ್ಹಿ ಯಸ್ಯೇನಃ ಸ ಶ್ಯೇನೋ ವಿಷ್ಣುಕಿಂಕರಃ ॥ ೬೨೮ ॥**

**ಅರ್ಥ–** ಚಮೂಷತ್=ಚಮೂಷತ್ ನಾಮಕ ಭಗವಂತನು, ಸಾಧುಚಮ್ವಾಂ= ಸತ್ಕರ್ಮಗಳಲ್ಲಿ, ಸನ್= ಇದ್ದು, ವೈಷ್ಣವೇಷು= ವಿಷ್ಣುಭಕ್ತರಲ್ಲಿ, ಸಮುಜ್ಜ್ವಲನ್= ಉತ್ಕೃಷ್ಟವಾಗಿ ಪ್ರಕಾಶಿಸುವವನಾಗಿ, ಹಿ ಸುಖೀ= ಯಾವ ಕಾರಣದಿಂದ ಸುಖರೂಪನಾದ, ಹರಿಃ ಯಸ್ಯ ಇನಃ= ನಾರಾಯಣನು ಯಾರಿಗೆ ಸ್ವಾಮಿಯಾಗಿರುವನೋ, ಸಃ ಶ್ಯೇನಃ=ಅಂತಹ ಉತ್ತಮ ದೇವ ಋಷ್ಯಾದಿ ಜೀವನು, ವಿಷ್ಣುಕಿಂಕರಃ=ವಿಷ್ಣುಸೇವಕನು.

**ಅನುವಾದ–** ಇಷ್ಟರವರೆಗೆ ಪವಮಾನಸೂಕ್ತಗತವಾದ ವೇದಮಂತ್ರಗಳಿಂದ ಮುದ್ರಾಧಾರಣೆಯ ವೈಶಿಷ್ಟ್ಯವನ್ನು ಸಾಧಿಸಿ, ಈಗ 'ಪೂಯಮಾನ'ಸೂಕ್ತಾಂತರ್ಗತ 'ಚಮೂಷತ್ ಶ್ಯೇನಶ್ಶಕುನಃ' ಎಂಬ ಮಂತ್ರದಿಂದ ಭಗವಂತನ ನಾಲ್ಕೂ ಆಯುಧಗಳ ಧಾರಣೆಯನ್ನು ಮಾಡಲೇಬೇಕು ಎಂದು ಸಾಧಿಸುತ್ತಾರೆ. ಆ ಮಂತ್ರದಲ್ಲಿ ಮೊದಲ ಎರಡು ಶಬ್ದಗಳನ್ನು ವಾಯುದೇವರ ಪರವಾಗಿ ಕೂಡಿಸುತ್ತಾರೆ. ಚಮೂಷತ್ ಎಂದರೆ ಸೇನಾನಾಯಕ ಎಂದರ್ಥ. ಸಜ್ಜನರೆಂಬ ವೈಷ್ಣವರ ಸೇನೆಗಳಲ್ಲಿ ಯಾವಾಗಲೂ ಪ್ರಕಾಶಿಸುವವನಾಗಿ ಇರುವವನು. ಶ್ಯೇನ ಎಂದರೆ ಸುಖಸ್ವರೂಪನಾದ ಹರಿಯೇ ಸ್ವಾಮಿಯು ಯಾರಿಗೋ ಅವನು ಎಂದರ್ಥ. ಅಂದರೆ ಭಗವಂತನೇ ಸ್ವಾಮಿ ಎಂದು ತನ್ನ ಮೂರು ಅವತಾರದಲ್ಲಿ ಸಾರಿದವ ವಾಯುದೇವನೊಬ್ಬನೇ. ಇದನ್ನೇ ರಾಜರು 'ಸ ಶ್ಯೇನೋ ವಿಷ್ಣುಕಿಂಕರಃ' ಎಂದು ತಿಳಿಸುತ್ತಾರೆ. ಆದ್ದರಿಂದ ಸರ್ವವೇದಮಂತ್ರಗಳಿಗೆ ದೇವರು ಪರಮಮುಖ್ಯಪ್ರತಿಪಾದ್ಯರಾದರೆ ನಂತರದ ಪ್ರತಿಪಾದ್ಯತ್ವ ವಾಯುದೇವರಿಗೇ ಎಂದು ಭಾವೀಸಮೀರ ಶ್ರೀಮದ್ವಾದಿರಾಜರು ಈ ಮೂಲಕ ಪ್ರತಿಪಾದಿಸಿದ್ದಾರೆ.

'ಯತ್ತೇ ಪವಿತ್ರಮರ್ಚಿಷಿ' ಎಂಬ ಶ್ರುತಿಯಿಂದ ಹೇಳಲ್ಪಟ್ಟ ಮುದ್ರಾಧಾರಣೆಯನ್ನೇ ಪರಿಶಿಷ್ಟ ಸೂಕ್ತವೂ ವಿಸ್ತಾರವಾಗಿ ಹೇಳುತ್ತದೆ. ಏಕೆಂದರೆ ಇದೇ ವೇದಮಂತ್ರದ

**ಪರಿಶಿಷ್ಟ ಆದ್ದರಿಂದ ತಪ್ತಚಕ್ರಮುದ್ರೆಯ ಧಾರಣೆ ಯಾರಿಂದ ಮಾಡಲ್ಪಡ ಬೇಕೆಂಬುದನ್ನು ಪರಿಶಿಷ್ಟವಾಕ್ಯವು ಹೇಳುತ್ತದೆ ಎಂದು ಹೇಳಬೇಕು. ಇಲ್ಲದಿದ್ದರೆ ಮೂಲಸಂಹಿತೆಗೂ ಪರಿಶಿಷ್ಟವಾಕ್ಯಕ್ಕೂ ಏಕವಾಕ್ಯತ್ವವು ಕೂಡುವುದಿಲ್ಲ.**

**ಭಾವವಿಲಾಸಿನೀ–** ಪವಮಾನಸೂಕ್ತಸ್ಥಋಗ್ಭಿಶ್ಚಕ್ರಾದಿಧಾರಣಂ ಪ್ರಸ್ತುತ್ಯ ಇದಾನೀಂ ಪೂಯಮಾನಸೂಕ್ತಸ್ಥೇನ ಚಮೂಷಚ್ಛ್ಯೇನಃ ಶಕುನೋ ವಿಭೃತ್ವಾ ಗೋವಿಂದುರ್ದ್ರಪ್ಸ ಆಯುಧಾನಿ ಬಿಭ್ರತ್ । ಅಪಾಮೂರ್ಮಿಂ ಸಚಮಾನಃ ಸಮುದ್ರಂ ತುರೀಯಂ ಧಾಮ ಮಹಿಷೋ ವಿವಕ್ತೀತಿ ವಚನೇನ ಚಕ್ರಾದಿಚತುರಾಯುಧಧಾರಣಾಮಪಿ ಸ್ತೌತಿ । ಅಸ್ಯೇತ್ಥಂ ನಿರುಕ್ತಮಾಮನಂತಿ । ಚಮೂಃ ಕರ್ಮಸಂಘಾಃ । ಶ್ಯೇನೋ ಜೀವಃ ಶಕುನಸ್ತಸ್ಯಾಂತರಾವಿಶೇಷಃ । ವಿಭೃತ್ವೇತಿ ವಿಶೇಷೇಣ ಪೋಷಯಿತ್ವಾ ಶಕುನ ಇತಿ ಶಕುನಾಮಾ, ಸದಿತಿ ಪರಬ್ರಹ್ಮರೂಪಂ ಭವತಿ, ಗೋವಿಂದುರ್ಗೋವಿಂದಸ್ಯೇತಿ ದ್ರಪ್ಸೋಽಂಗಸಂಗಿಚಂದನಬಿಂದನಾದಾಯುಧಾನಿ ಬಿಭ್ರದಿತಿ ಧಾರಯನ್ ಅಪಾಮೂರ್ಮಿಂ ಸಚಮಾನಃ ಸಮುದ್ರಮ್ ಅಪಾಮೂರ್ಮಿಮಿತಿ ಬುದ್ಬುದಾಯಮಾನಂ ಸಂಸ್ಕೃತಿಕಾರಂಭಕಕರ್ಮ ಸಚಮಾನೋ ನಿರಾಕರಣಶೀಲಃ ಸಮುದ್ರಮಿತಿ ಮುದ್ರಾಭಿಃ ಸಹಿತಂ ವಪುರ್ದರ್ಶಯನ್ ಮಹಿಷ ಇತಿ ಸಂಸಾರ್ಯಪಿ ತುರೀಯಂ ಧಾಮೇತಿ ಮಹದಾನಂದಂ ವಕ್ತೀತಿ ಜಾನಿತೇ ಊರ್ಧ್ವೋ ಗಂಧರ್ವೋ ಅಧಿನಾಕೇ ಅಸ್ಥಾದಿತ್ಯಪಿ ನಿಗಮೋ ಭವತೀತಿ ।

ತಥಾ ಚಾರ್ಯಮರ್ಥಃ । ಶ್ಯೇನಃ ಪಕ್ಷಿಷು ಶ್ಯೇನ ಇವ ಸ್ಥಲೋ ದೇವರ್ಷ್ಯಾದಿಜೀವಃ । ಶ್ಯೇನೋ ಜೀವ ಇತಿ ವಚನಾತ್ । ಶಕುನಃ ಶುಕ ಇವ ಸೂಕ್ಷ್ಮಮನುಷ್ಯಾದಿ ಜೀವಃ । ಶಕುನಸ್ತಸ್ಯಾಂತರಾವಿಶೇಷಃ ಶಕುನ ಇತಿ ಶಕುನಾಮೇತಿ ವಚನಾತ್ । ಜೀವೇಷೂಕ್ತತಾರತಮ್ಯಜ್ಞಾನಂ ಚಾಪೇಕ್ಷಿತಮಿತಿ ಸೂಚನಾಯೇತ್ಥಮುಕ್ತಮ್ । ಗೋವಿಂದುಃ ಗೋವಿಂದನಾಮಕನಾರಾಯಣಸ್ಯ । ಭಗವತಃಸಕಲವೇದಪ್ರತಿಪಾದ್ಯತ್ವಜ್ಞಾನಸ್ಯಾಪ್ಯಾವಶ್ಯಕತ್ವಸೂಚನಾಯೇತ್ಥಮುಕ್ತಮ್ । ಗಾಃ ವಿದ್ಯಾಃ ವಿಂದತ ಇತಿ ವ್ಯುತ್ಪತ್ತೇಃ । ಗೋವಿಂದುರ್ಗೋವಿಂದಸ್ಯೇತಿ ವಚನಾತ್ । ಆಯುಧಾನಿ ಚಕ್ರಶಂಖಗದಾಪದ್ಮಾದ್ಯಾಯುಧಾನಿ । ಬಿಭೃತ್ವಾ ಶ್ರುತಿಸ್ಮೃತ್ಯಾದಿಭಿಸ್ತದ್ಧಾರಣಂ ಪೋಷಯಿತ್ವಾ । ಬಿಭೃತ್ವಾ ಪೋಷಯಿತ್ವೇತಿ ವಚನಾತ್ । ಕೇವಲಂ ಮುದ್ರಾಧಾರಣಮೇವ ನಾಲಮ್ । ಕಿಂತು ಸದಸಿ ಮುದ್ರಾಧಾರಣಸ್ಯಾವಶಕ್ಯಕತ್ವ ಸಮರ್ಥನಮಪ್ಯಪೇಕ್ಷಿತಮಿತಿ ಸೂಚನಾಯೇತ್ಥಮುಕ್ತಮ್ ।

ದ್ರಪ್ಸಃ ಗೋಪೀಚಂದನಾಖ್ಯಾದ್ರವದ್ರವ್ಯಾತ್ । ಸುಮನಸ ಇತಿವತ್ ಪಂಚಮ್ಯಂತಂ ಛಾಂದಸಮಿದಮ್ । ಚಂದನವಿಂದನಾದಿತಿ ವಚನ ಬಲಾದಯಮರ್ಥೋ ಲಭ್ಯತೇ । ಚಂದನಂ ಗೋಪೀಚಂದನಂ ವಿಂದನಂ ತಸ್ಯ ಲಾಭಃ । ತಸ್ಮಾದಿತಿ ನಿರುಕ್ತಸ್ಯಾರ್ಥಃ । ಬಿಭ್ರತ್ ಸದಾ ಧಾರಯನ್ । ಸಮುದ್ರಂ ತಪ್ತಮುದ್ರಾಸಹಿತಂ ದೇಹಂ ಚ ದರ್ಶಯನ್ । ಸಮುದ್ರಮಿತಿ ಸಮುದ್ರಾದಿಭಿಃ ಸಹಿತಂ ವಪುರ್ದರ್ಶಯನ್ನಿತಿ ವಚನಾದಯಮರ್ಥೋ ಲಭ್ಯತೇ । ಗೋಪೀಚಂದನೇನ ಚಕ್ರಾದಿಧಾರಣಸ್ಯ ಪ್ರಾಗುಕ್ತತ್ವಾದತ್ರ ತಪ್ತಮುದ್ರಾಧಾರಣಮೇವ ಲಭ್ಯತೇ । ಅನ್ಯಥಾ ಪೌನರುಕ್ತ್ಯಾತ್ । ಏವಂ ಚ ದ್ವಿವಿಧಮುದ್ರಾಧಾರಣಸ್ಯಾಪಿ ಇಯಮೇವ ಶ್ರುತಿಃಪ್ರಾಪಿಕಾ ।

ಅಪಾವಮೂರ್ಮಿಂ ಅಪಾವಮೂರ್ಮಿಮಿವ ವಿದ್ಯಮಾನಂ ಸಂಸಾರಾರಂಭಕ- ಕರ್ಮ ಬುದ್ಬುದಾಯಮಾನಂ ಸಂಸೃತಿಕಾರಂಭಕಂ ಕರ್ಮೇತಿವಚನಾತ್ । ಸಚಮಾನಃ ಚಮುಅದನ ಇತಿ ಧಾತೋಃ ಸಂಹರನ್ । ಸಚಮಾನೋ ನಿರಾಕರಣಶೀಲ ಇತಿ ವಚನಾತ್ । ತುರೀಯಂ ಧಾಮ ಪರಮಾನಂದರೂಪಮ್ । ತುರೀಯಂ ಧಾಮೇತಿವಚನಾತ್ । ಚಮೂಷತ್ ಅನಾದಿ-ಕಾಲಮರಾಭ್ಯ ಸ್ವೈಃಸ್ವೈಃ ಕ್ರಿಯಮಾಣ ಕರ್ಮರಾಶಿಷು ಸಾಕ್ಷಿತಯಾ ವಿದ್ಯಮಾನಂ ಪರಂಬ್ರಹ್ಮ । ಚಮೂಃ ಕರ್ಮಸಂಘಾಃ ಸದಿತಿ ಪರಬ್ರಹ್ಮರೂಪಂ ಭವತೀತಿ ವಚನಾತ್ । ಮಹಿಷಃ ಸಂಸಾರ್ಯಪಿ ಸನ್ ಪೂರ್ವೋಕ್ತೋ ವಿಷ್ಣುಚಕ್ರಾಂಕಿತೋ ವೈಷ್ಣವಜೀವಃ ವಿವಕ್ತಿ ವಿಶೇಷೇಣ ಜಾನಿತೇ ಅಪರೋಕ್ಷೀಕೃತ್ಯ ಪಶ್ಯತೀತ್ಯರ್ಥಃ । ಮಹಿಷಃ ಸಂಸಾರ್ಯಪಿವಕ್ತೀತಿ ಜಾನೀತ ಇತಿ ವಚನಾತ್ ।

ಊರ್ಧ್ವೋ ಗಂಧರ್ವೋ ಅಧಿನಾಕೇ ಅಸ್ಥಾ ಅಸ್ಥಾತ್ಪ್ರತ್ಯ ಜ್‌ಚತ್ರಾಬಿಭ್ರದಸ್ಯಾಯುಧಾನಿ ವಸಾನೋ ಅತ್ಕಂ ಸುರಭಿಂಟೃಶೇಕಂ ಸ್ವರ್ನನಾಮ ಜನತಪ್ರಿಯಾಣೀತಿ ನಿರುಕ್ತೋಕ್ತ ಸಮಾಖ್ಯಾ ಶ್ರುತೇರಪ್ಯ-ಯಮರ್ಥಃ ಯಃ । ಪ್ರತ್ಯಙ್ । ಪ್ರತ್ಯಕ್‌ಚೈತನ್ಯರೂಪಃ ಸಮಾಖ್ಯಾಶ್ರುತ್ಯುಕ್ತೋ । ಗೋವಿಂದ-ನಾಮಕೋ ನಾರಾಯಣಃ ಅಸ್ಯ । ಚಿತ್ರಾ ಚಿತ್ರಾಣಿ ಜ್ಞಾನ ರಕ್ಷಕಾಣಿ ವಾ ಆಯುಧಾನಿ । ಶಂಖಚಕ್ರಗದಾಪದ್ಮಾಖ್ಯಯುಧಾನಿ । ಬಿಭ್ರತ್ । ಸ್ವ ಭುಜಚತುಷ್ಟಯೇ ತತ್ಪಾಂಕರೂಪೇಣ ದಧಾನಮ್ । ಅತ್ಕಮ್ । ವ್ಯಾಪ್ತ ಸುಖಮ್ । ಸುರಭಿಮ್ । ಭಕ್ತಾನಾಮ್ ಅಭೀಷ್ಟದಾನೇ ಕಾಮಧೇನುಮ್ । ಕಮ್ । ಬ್ರಹ್ಮೇತಿವಚನಾತ್ । ಕಃ ಶಬ್ದವಾಚ್ಯ ನಾರಾಯಣಮ್ । ದೃಶೇ । ಅಪರೋಕ್ಷೀಕೃತ್ಯ ದರ್ಶನಾಯ ವಾಸನಃ ಸ್ವಹೃದಯ ಕಮಲೇ ಆವಾಸಯನ್ ಊರ್ಧ್ವಃ ಮಾನುಷಾದಿ ಜೀವರಾಶಿಭ್ಯೋ ಉತ್ಕೃಷ್ಟಃ । ಗಂಧರ್ವಃ । ಗಂಧರ್ವಲೋಕಸ್ಯ : ತತ್ವಾಭಿಮಾನಿತಯಾ ಚೇತನ ಮಾತ್ರ ಧಾರಣಶೀಲೋಕಾ । ಇಂದ್ರ ಚಂದ್ರಾದಿರೂಪ ಭಗವದ್ ಭಕ್ತಾಗ್ರೇಸರವರ್ಗಃ ನಾಕೇಸ್ವರ್ಗೇ ಅಧಿ ಅಧಿಕತಯಾ ಅಸ್ಯಾತ್ । ಸ್ಥಿತಿಮಕರೋತ್ । ತಸ್ಮೈ ದೇವವರ್ಗಾಯ ಸ್ವರ್ವಸ್ಯಾತ್ । ಸ್ಥಿತಿಮಕರೋತ್ । ತಸ್ಮೈ ದೇವವರ್ಗಾಯ ಸ್ವರ್ವಸ್ವರ್ಗ ಇವ । ಸ್ವರ್ಗಸ್ಥಿತಲೋಕೋ ಯಥಾ ತಥೇತ್ಯರ್ಥಃ । ಪ್ರಿಯಾಣಿ । ಪ್ರಿಯಭೂತ ಯಜ್ಞಾದಿ ಸತ್ಕರ್ಮಾಣಿ । ಜನತ ನಾಮ ಜನಯತ ಹಿ ಜನ ಜಗನ ಇತಿ ಧಾತೋಃ ಲೋಟೀ ಮಧ್ಯಮ ಪುರುಷ ಬಹುವಚನಂ ನಾಮೇತ್ಯನೇನ ದೇವತಾ ಪ್ರಿಯಕಾರಿತ್ವಂ ಸುಪ್ರಸಿದ್ಧಿಮಿತಿ ಸೂಚಯತಿ । ಉಭಯೋರಪಿ ಸ್ಪಷ್ಟಹರ್ಯಾಯುಧ ಪ್ರತಿಪಾದಕತ್ವಾತ್ ಇತ್ಯಪಿ ನಿಗಮೋಭವತೀತ್ಯುಕ್ತಮ್ । ಶ್ವಾರೂಪಾಪ್ರತಿಚಕ್ಷಾಣೋ ಅಸ್ಯ । ಭಾನುಃ ಶುಕ್ರೇಣ ಶೋಚಿಷಾ ವ್ಯದ್ಯೌತ್ ಪ್ರಾರೂರು ಚದ್ರೋದಸೀಮತರಾ ಶುಚಿರಿತಿ ನಿರುಕ್ತೋಕ್ತಸಮಾಖ್ಯಾ ಶ್ರುತೇರಪ್ಯಯಮರ್ಥಃ । ಅಸ್ಯ ಪರಮಾತ್ಮನಃ ಗಂಧರ್ವಃ ಗಚ್ಛತ್ಯವಗಚ್ಛತ್ಯೇಭಿಃ ತಂ ಪರಮಾತ್ಮನಾಮಿತಿ ಗಾನಿ ಚಕ್ರಶಂಖಾದೀನಿ ತಸ್ಯಾಸಾಧರಣಚಿಹ್ನಾನಿ ತೇಷಾಂ ಧರ್ವೋ ಧಾರಣಶೀಲಃ । ಗೋವಿಂದುರಾಯುಧಾನಿ ಬಿಭ್ರಾದಿತಿ ವಚನ ಸಮಾಖ್ಯಾರೂಪತ್ವಾದತ್ರಾಪ್ಯಯಮೇವಾರ್ಥೋ ಲಭ್ಯತೇ । ಅಸ್ಯ ಪರಮಾತ್ಮನಃ । ವಿಶ್ವಾ ವಿಶ್ವಾನಿ ಸ್ವಹೃದಯಗುಹಾಯಾಂ ಪ್ರವಿಷ್ಟಾನಿ । ವಿಶ ಪ್ರವೇಶನ ಇತಿ

ಧಾತೋಃ । ರೂಪಾ ರೂಪಾಣಿ ಬಿಂಬರೂಪಾಣೀತ್ಯರ್ಥಃ । ಪ್ರತಿಚಕ್ಷಾಣಃ ಅಪರೋಕ್ಷೀಕೃತ್ಯ ಪಶ್ಯನ್ । ಇದಂ ಚ ತುರೀಯಂ ಧಾಮ ವಿವಕ್ತೀತ್ಯಸ್ಯ ಸಾಕ್ಷಾತ್ ಸಮಾಖ್ಯಾರೂಪಂ, ಬಿಂಬಪರೋಕ್ಷಜ್ಞಾನಿನಾಂ ಸಂಸಾರಾರಂಭಕಕರ್ಮನಾಶಾವಶ್ಯಂಭಾವಾದಪಾಮೂರ್ಮಿಂ ಸಚಮಾನ ಇತ್ಯಸ್ಯ ಪರಂಪರಯಾ ಸಮಾಖ್ಯೇತಿ ದ್ರಷ್ಟವ್ಯಮ್ ।

ಊರ್ಧ್ವಃ ಮನುಷ್ಯಾದಿಜೀವೇಭ್ಯ ಉತ್ಕೃಷ್ಟಃ । ಭಾನುಃ ಸೂರ್ಯಃ । ಇದಂ ಚ ಶ್ಯೇನಪದೋಕ್ತಸಕಲೋತ್ತಮಜೀವಾನಾಮುಪಲಕ್ಷಣಮ್ । ಅತಸ್ತಸ್ಯೈವ ಸಮಾಖ್ಯಾರೂಪಂ ಚ । ದೇವೇಷ್ವೇವ ಚಕ್ರಾದಿಲಾಂಛನಮ್ ಪ್ರಸಿದ್ಧತ್ವಾತ್ತೇಷ್ವೇವ ತದನುಶಾಸ್ತಿ ಸಮಾಖ್ಯಾವಾಕ್ಯಮ್ । ಮನುಷ್ಯೇಷು ತು ಕೈಮುತ್ಯನ ತಿತ್ಸಿದ್ಧ್ಯತೀತಿ ಹೃದಯಮ್ । ಸಾಕ್ಷಾನ್ಮೇರುಂ- ಪರಿತೋಽಂತರಿಕ್ಷಚಾರಿತಯಾ ಶ್ಯೇನೋಪಮಾ ಸೂರ್ಯಸ್ಯೈವ ಸಂಭವತೀತ್ಯ ತಸ್ಯೈವ ಗ್ರಹಣಮ್ । ನಾಕೇ ಸ್ವರ್ಗೇ ಅಧಿಕತಯಾ ಅಸ್ಥಾತ್ ಸ್ಥಿತಿಮಕರೋತ್ । ಆಧಿಪತ್ಯಮನ್ವಭೂದಿತ್ಯರ್ಥಃ । ಅನೇನ ದೇವನಾಂ ಸ್ವಲಿಂಗವಿಧಾರಣೇನಾತ್ಮಕೃತಾನಾಮಿತಿ ಭಾಗವತೋಕ್ತ ಚಕ್ರಾದಿ ಭಗವದಾಯುಧಾಂಕಧಾರಣಂ ನ ಹಿ ದೇವಪದಪ್ರಾಪ್ತಾ ಬ್ರಹ್ಮದರ್ಶನ ವರ್ಜಿತಾ ಇತಿ ಸ್ಮೃತ್ಯುಕ್ತಮಪರೋಕ್ಷಜ್ಞಾನಂ ಚ ಸಂಗೃಹೀತಮ್ । ಏವಂ ಚ ಏತಚ್ಛ್ರುತಿದ್ವಯಸಮಾಖ್ಯಯಾಪಿ ಯೇನ ದೇವಾ ಇತ್ಯಸ್ಯಾಸ್ಮದುಕ್ತ ಏವಾರ್ಥ ಇತಿ ಜ್ಞಾತವ್ಯಮ್ । ಶುಕ್ರೇಣ ಶೋಕಘ್ನೇನ । ರೀಙ್ ಕ್ಷಯ ಇತಿ ಧಾತೋಃ । ಶೋಚಿಷಾ ಕಾಂತ್ಯಾ ವ್ಯದೌತ್ ವಿಶೇಷೇಣದ್ಯುತಿಮಾನಭೂತ್ । ನ ಕೇವಲಂ ಭಾನುಃ ಸ್ವಯಮೇವ ದ್ಯುತಿಮಾನಭೂತ್ ಕಿಂತು ತಮೇವ ಭಾಂತಮನುಭಾತಿ ಸರ್ವಮಿತಿ ಶ್ರುತ್ಯುಕ್ತರೀತ್ಯಾ ಪರಪ್ರಕಾಶವ್ಯಾಪ್ಯಪ್ಯಭೂದಿತಿ ಪ್ರದರ್ಶನಾಯ ಚರಮಚರಣ ಪ್ರವೃತ್ತಿಃ । ಶುಚಿಃ ಶುದ್ಧಃ । ಇದಂ ಚ ಭೂಮ್ಯಂತರಿಕ್ಷಸ್ಥಾಶುಚಿಪದಾರ್ಥಸ್ಪರ್ಶೇಽಪಿ ಲೇಪಾಭಾವಸೂಚನಾರ್ಥಮ್ । ಮಾತರಾ ಮಾತರೌ । ಜಗನ್ಮಾತೃಸ್ಥಾನೀಯೌ ಜಗನ್ಮಾತೃಭೂತಶ್ರೀಭೂಮ್ಯಾಖ್ಯಶ್ರೀರೂಪದ್ವಯಸನ್ನಿಧಿಯುಕ್ತೇ ವಾ । ರೋದಸೀ ದ್ಯಾವಾಪೃಥಿವ್ಯೌ । ಪ್ರಾರೂರುಚತ್ ಪ್ರಕರ್ಷೇಣ ಶೋಭಯಾಮಾಸ । ರುಚ ದೀಪ್ತಾವಿತಿ ಧಾತೋಃ । ಇದಂ ಚ ಊರ್ಧ್ವೋ ಗಂಧರ್ವ ಇತ್ಯತ್ರ ಸ್ವೋಕ್ತೋರ್ಧ್ವತ್ವಸಮರ್ಥನಾರ್ಥಮ್ । ಗ್ರಂಥಕಾರಸ್ತು ಸಮಾಖ್ಯಾ ಶ್ರುತೌ ಉತ್ತಮಾಧಿಕಾರಿಣಾಮೇವ ಪ್ರತಿಪಾದಿತತ್ವಾತ್ ಪೂಯಮಾನೇ ಪವಮಾನ ಪ್ರತಿಪಾದನಸ್ಯೈವ ನ್ಯಾಯತ್ವಾಚ್ಚ । ಅಧಿಕಾರಿ ಸರ್ವೋತ್ತಮ ಮಧ್ವವಿಷಯತಯಾ ಸಕಲಶ್ರೌತ ಪದಾನ್ಯಿಯೋಜಯತಿ । ನಿರುಕ್ತಕಾರೋಪಾತ್ತಸಮಾಖ್ಯಾಶ್ರುತ್ಯನುಸಾರಾತ್ ಮಧ್ವವಿಷಯತ್ವೇ ಸ್ವೇನ ವಕ್ಷ್ಯಮಾಣರೀತ್ಯಾ ಸಕಲಶ್ರೌತಪದಾನಾಂ ಸ್ವಾರಸಿಕಾರ್ಥಲಾಭಾಚ್ಚ ಸೂರ್ಯಸ್ಥ ವಾಯ್ವಯವತಾರಭೂತಮಧ್ವವಿಷಯತಯೈವ ಚಮೂಷದಿತಿ ಶ್ರುತಿಂ ಯೋಜಯತಿ–ಚಮೂಷ ಇತ್ಯಾದಿನಾ। ಸಾಧುಚಮ್ವಾಂಸನ್ನಿತಿ ಚ ಮೂಷದಿತಿ ಪದಸ್ಯಾರ್ಥಃ । ತಸ್ಯ ತಾತ್ಪರ್ಯಕಥನಂ ವೈಷ್ಣವೇಷು ಸಮುಜ್ಜ್ವಲನ್ನಿತಿ । ಸುಖೀ ಹರಿರಿತಿ ಶ್ಯೇನ ಪದಸ್ಯಾರ್ಥ ಕಥನಮ್ ॥ ೬೨೮ ॥

ನಯನ್ ಸುಖಭುವಂ ಸ್ವೀಯಾಂಶ್ಚಕುನಾಖ್ಯೋಽಪಿ ಸ ಪ್ರಭುಃ ।
ವಿಭೃತ್ವಾ ಧಾರಣಾಶೀಲೋ ದ್ರಪ್ಸಂಶ್ಚಿತ್ತದ್ರವಾನ್ವಿತಃ ॥ ೬೨೯ ॥

ಆಯುಧಾನಿ ಸದಾ ಬಿಭ್ರದ್ ಭುಜಕಂಠೋದರಾದಿಷು ।
ಚಕ್ರಶಂಖಗದಾಪದ್ಮಪೂರ್ವಾಣ್ಯಖಿಲವಾಕ್ಪತೇಃ ॥ ೬೩೦ ॥

ಗೋವಿಂದುರ್ಗೋಃಪತೇರ್ವಾ ಸ್ವಸ್ವಾಮಿನಃ ಸೇವಿನಾಂ ಪ್ರಭುಃ ।
ಅಪಾಂ ಜ್ಞಾನಪ್ರವಾಹಾಣಾಮೂರ್ಮಿಮೌನ್ನತ್ಯಸಂಪದಮ್ ॥ ೬೩೧ ॥

ಸಮುದ್ರಂ ವೇದಶಾಸ್ತ್ರಾಖ್ಯಂ ಸಚಮಾನಃ ಸ್ವಚೇತಸಾ ।
ಸಂಬಂಧಂ ಪ್ರಾಪಯನ್ ಮಧ್ವೋ ಮರುದಂಶೋ ಭವಾದ್ ಬಹಿಃ
॥ ೬೩೨ ॥

ಸ್ಥಿತೇಸ್ತುರ್ಯಂ ಮುಕ್ತಲೋಕಾಧಾರತ್ವಾದ್ ಧಾಮಸಂಜ್ಞಿತಮ್ ।
ಪರಂಬ್ರಹ್ಮ ವಿಶೇಷೇಣ ವಕ್ತೀತ್ಯಾಹ ಶ್ರುತಿಃ ಪರಾ ।
ಸಮವಾಯೇ ಸಚಿದ್ಧಾತುಂ ಯತೋ ವ್ಯಾಖ್ಯಾಂತಿ ಶಾಬ್ದಿಕಾಃ ॥ ೬೩೩ ॥

**ಅರ್ಥ–** ಚಮೂಷತ್ - ಸಾಧುಚಮ್ವಾಂ ಸನ್= ಸಜ್ಜನರ ಸಮೂಹದಲ್ಲಿ ಇರುವ, ವೈಷ್ಣವೇಷು= ವಿಷ್ಣುಭಕ್ತರಲ್ಲಿ, ಸಮುಜ್ವಲನ್= ಪ್ರಕಾಶಿಸುತ್ತಿರುವ, ಸುಖೀ= ಪೂರ್ಣಸುಖಿನಾದ, ಹರಿಃ= ಶ್ರೀಹರಿಯು, ಯಸ್ಯ= ಯಾವ ಮಧ್ವರಿಗೆ, ಇನಃ= ಸ್ವಾಮಿಯು, ಅಸ್ತಿ ಹಿ= ಆಗಿದ್ದಾನೋ, ಸಃ= ಆ ಯಾವ, ಶ್ಯೇನಃ= ಶ್ಯೇನನೆನಿಸಿಕೊಂಡ, ವಿಷ್ಣುಕಿಂಕರಃ= ವಿಷ್ಣುವಿನ ಸೇವಕರಾದ, ಸ್ವೀಯಾನ್= ತನ್ನ ಭಕ್ತರನ್ನು ಸುಖಭುವಂ= ಪರಮಸುಖದ ತಾಣವಾದ ಮೋಕ್ಷವನ್ನು ಕುರಿತು, ನಯನ್ = ಕರೆದುಕೊಂಡು ಹೋಗುವವರಾದ, ಅತ ಏವ= ಅದೇ ಕಾರಣಕ್ಕಾಗಿ, ಶಕುನಾಖ್ಯಃ ಅಪಿ = ಶಕುನ ಎಂಬ ಹೆಸರನ್ನೂ ಉಳ್ಳ, ಸಃ ಪ್ರಭುಃ= ಆ ಪ್ರಭುವಾದ, ವಿಭೃತ್ವಾ - ಧಾರಣಾಶೀಲಃ = ವೇದಾದಿಶಾಸ್ತ್ರಗಳ ಅರ್ಥವನ್ನು ಬಲ್ಲವರಾದ, ದ್ರಪ್ಸಃ - ಚಿತ್ತದ್ರವಾನ್ವಿತಃ= ಭಕ್ತರ ಬಗ್ಗೆ ಕರುಣೆಯುಳ್ಳ ಮನಸ್ಸುಳ್ಳ, ಗೋವಿಂದುಃ - ಅಖಿಲವಾಕ್ಪತೇಃ= ಎಲ್ಲ ವೇದಾಧಿಶಾಸ್ತ್ರಗಳಿಗೆ ಸ್ವಾಮಿಯಾದ, ವಾ= ಅಥವಾ, ಗೋಪತೇಃ= ಗೋಪಾಲಕೃಷ್ಣನ, ಆಯುಧಾನಿ - ಚಕ್ರಶಂಖಗದಾಪದ್ಮಪೂರ್ವಾಣಿ= ಚಕ್ರಶಂಖಗದಾಪದ್ಮ ಮೊದಲಾದ, ಆಯುಧಾನಿ= ಆಯುಧಗಳನ್ನು, ಭುಜಕಂಠೋದರಾದಿಷು = ತೋಳು, ಕುತ್ತಿಗೆ, ಹೊಟ್ಟೆಮುಂತಾದ ಕಡೆ, ಸದಾ= ಯಾವಾಗಲೂ, ಬಿಭ್ರತ್= ಧರಿಸಿರುವ, ಅಪಾಂ - ಜ್ಞಾನಪ್ರವಾಹಾಣಾಂ = ಜ್ಞಾನದ ಪ್ರವಾಹಗಳ, ಊರ್ಮಿಂ - ಔನ್ನತ್ಯಸಂಪದಂ = ತರಂಗದಂತೆ ಉನ್ನತವಾದ (ಶ್ರೇಷ್ಠವಾದ) ಸಂಪತ್ತುಳ್ಳ, ಸಮುದ್ರಂ–ವೇದಶಾಸ್ತ್ರಾಖ್ಯಂ= ವೇದಾದಿಶಾಸ್ತ್ರ ಎಂಬ, ಸಮುದ್ರಂ= ಸಮುದ್ರವನ್ನು ಸಚ ಮಾನಃ - ಸ್ವಚೇತಸಾ= ತನ್ನ ಮನಸ್ಸಿನಿಂದ, ಸಂಬಂಧಂ= ಸಂಬಂಧವನ್ನು ಪ್ರಾಪಯನ್ = ಹೊಂದಿಸುತ್ತಲಿರುವ, ಮಹಿಷಃ - ಸ್ವ = ತನ್ನ ಸ್ವಾಮಿನಃ=

ಆರಾಧ್ಯದೇವತೆಯಾದ ಶ್ರೀಹರಿಯ, ಸೇವಿನಾಂ = ಭಕ್ತರಾದ ಜನರಿಗೆ, ಪ್ರಭುಃ= ಅಧಿಪತಿಯಾಗಿರುವ, ಮರುದಂಶಃ =ಮುಖ್ಯಪ್ರಾಣನ ಅವತಾರಸ್ವರೂಪರಾದ, ಮಧ್ವಃ= ಮಧ್ವಾಚಾರ್ಯರು, ಭವಾತ್= ಸಂಸಾರಬಂಧನದಿಂದ, ಬಹಿಃ = ದೂರದಲ್ಲಿ, ಸ್ಥಿತೇಃ = ಇರುವುದರ ಮೂಲಕ, ಮುಕ್ತಲೋಕಾಧಾರತ್ವಾತ್= ಮುಕ್ತಜೀವರಿಗೆ ನಿಯಾಮಕನಾದ್ದರಿಂದ, ತುರ್ಯಂ ಧಾಮ ಸಂಜ್ಞಿತಂ= ತುರೀಯ ಧಾಮ ಎನಿಸಿಕೊಂಡಿರುವ, ಪರಂ ಬ್ರಹ್ಮ= ಪರಬ್ರಹ್ಮನಾದ ಶ್ರೀಹರಿಯನ್ನು, ವಿವಕ್ತಿ-ವಿಶೇಷೇಣ ವಕ್ತಿ= ವಿಶಿಷ್ಟರೀತಿಯಲ್ಲಿ ವರ್ಣಿಸುತ್ತಾರೆ. ಇತಿ= ಎಂಬುದಾಗಿ, ಪರಾ= ಪೂಯಮಾನಸೂಕ್ತವೆಂಬ ಮತ್ತೊಂದು, ಶ್ರುತಿಃ= ವೇದವು, ಆಹ= ಹೇಳುತ್ತದೆ, ಯತಃ= ಯಾವಕಾರಣದಿಂದ, ಶಾಬ್ದಿಕಾಃ= ವ್ಯಾಕರಣ ಶಾಸ್ತ್ರಜ್ಞರು, ಸಚಿದ್ಧಾತುಂ= ಷಚ ಸಮವಾಯೇ ಎಂಬ ಧಾತುವನ್ನು, ಸಮವಾಯೇ= ಸಂಬದ್ಧವನ್ನಾಗಿ ಮಾಡುವುದು ಎಂಬ ಅರ್ಥದಲ್ಲಿ, ವ್ಯಾಖ್ಯಾಂತಿ= ವ್ಯಾಖ್ಯಾನಮಾಡುತ್ತಾರೆಯೋ, ತತಃ= ಆ ಕಾರಣದಿಂದ, ಅಸ್ಮದುಕ್ತಾರ್ಥಃ= ನಾವುಹೇಳಿದ ಅರ್ಥವು, ಸಮೀಚೀನಃ ಏವ= ಯುಕ್ತವಾದದ್ದೇ, ಅಸ್ತಿ= ಆಗಿದೆ.

**ಅನುವಾದ–** ಚಮೂಷಚ್ಛ್ಯೇನಶ್ಶಕುನೋ ವಿಭೃತ್ವಾ ಗೋವಿಂದುರ್ದಪ್ಸ ಆಯುಧಾನಿ ವಿಭ್ರತ್ । ಆಪಾಮೂರ್ಮಿಂ ಸಚಮಾನಃ ಸಮುದ್ರಂ ತುರೀಯಂ ಧಾಮ ಮಹಿಷೋವಿವಕ್ತಿ ॥ ಈ ಮೇಲಿನ ವೇದವಾಕ್ಯವು ಮುದ್ರಾಧಾರಣವನ್ನು ಮತ್ತು ಮಧ್ವರು ವಾಯುವಿನ ಅವತಾರಸ್ವರೂಪವೆಂಬುದನ್ನು ಪ್ರತಿಪಾದಿಸುತ್ತಿದೆ. ಈ ವಾಯುದೇವನು ವೈಷ್ಣವಸೈನ್ಯಕ್ಕೆ ಅರ್ಥಾತ್ ವಿಷ್ಣುಭಕ್ತರಿಗೆ ಮುಂದಾಳಾಗಿದ್ದಾನೆ. ಈತನು ಶ್ಯೇನನೆಂದು ಕರೆಸಿಕೊಳ್ಳುತ್ತಾನೆ. ಶಂ - ಸುಖವು. ಶಂ ಅಸ್ಯ ಅಸ್ತೀತಿ ಶೀ - ಪೂರ್ಣಾನಂದಸ್ವರೂಪಿಯಾದ ಪರಮಾತ್ಮನು ಈ ವಾಯುದೇವನಿಗೆ ಇನ ಸ್ವಾಮಿಯಾಗಿದ್ದಾನೆ. ಮಹಾಲಕ್ಷ್ಮೀದೇವಿಯೂ ವಾಯುದೇವರಿಗೆ ಅವಾಂತರ-ಸ್ವಾಮಿನಿ - ವಿಷ್ಣುವಿನ ಬಳಿಕ ಸ್ವಾಮಿನಿಯಾಗಿದ್ದರೂ ಮುಖ್ಯಸ್ವಾಮಿಯು ವಿಷ್ಣುವೇ ಆಗಿದ್ದಾನೆ.

ಈ ವಾಯುದೇವನು ಶಕುನನೂ ಎನಿಸಿದ್ದಾನೆ. ಶಂ- ಸುಖ, ಕು- ಭೂಮಿ (ಆಶ್ರಯ) ಪರಮಸುಖತಾಣವಾದ ಮೋಕ್ಷ, ಆ ಮೋಕ್ಷಕ್ಕೆ ಭಕ್ತರನ್ನು (ನಯನಮಾಡುವುದರಿಂದ) ಕರೆದೊಯ್ಯುವುದರಿಂದ ಶಕುನನಾಗಿದ್ದಾನೆ. ವೇದಶಾಸ್ತ್ರಗಳನ್ನು ಬಲ್ಲವನಾದ್ದರಿಂದ ಮತ್ತು ನಿರ್ದುಷ್ಟತರ್ಕಗಳ ಮೂಲಕ ಅವುಗಳನ್ನು ಸಮರ್ಥಿಸುವವನಾದ್ದರಿಂದ ವಿಭೃತ್ವಾ ಎನಿಸಿದ್ದಾನೆ. ಈ ಶಬ್ದಕ್ಕೆ ಶ್ವಾಸರೂಪದಿಂದ ಜಗತ್ತನ್ನೂ ಧಾರಣೆಮಾಡುವವನೆಂದೂ ಅರ್ಥ ಹೇಳಬಹುದಾಗಿದೆ.

ಭಗವಂತನ ಆಯುಧಗಳಾದ ಸಹಸ್ರಾರ ಚಕ್ರ, ಶತಾವರ್ತಶಂಖ, ಸಹಸ್ರದಳಪದ್ಮ ಮತ್ತು ಷೋಡಶಾರಗದಾಗಳನ್ನು ಭುಜ, ಎದೆ ಇತ್ಯಾದಿ ಕಡೆಗಳಲ್ಲಿ ಧರಿಸಿದ್ದಾನೆ.

ಮತ್ತು ಈ ವಾಯುದೇವನು ಭಕ್ತರ ವಿಷಯದಲ್ಲಿ ಸದಾ ಕರುಣೆಯುಳ್ಳವನಾಗಿದ್ದಾನೆ. ನೀರಿನಲ್ಲಿ ತರಂಗಗಳಿಗೆ ಉನ್ನತಸ್ಥಾನವಿರುವಂತೆ ಜ್ಞಾನಪ್ರವಾಹದಲ್ಲಿ ವೇದಾದಿ ಸಚ್ಛಾಸ್ತ್ರಗಳಿಗೆ ಉತ್ಕೃಷ್ಟಸ್ಥಾನವಿದೆ. ಆ ಶಾಸ್ತ್ರಗಳನ್ನು ಈ ವಾಯುದೇವನು ತನ್ನ ಮನದ ಮೂಲಕ (ಸಂಬಂಧಿಸುತ್ತಿದ್ದಾನೆ) ಮನನ ಮಾಡುತ್ತಿದ್ದಾನೆ, ಅಥವಾ ಜ್ಞಾನಗಳ ಆಕರನೆನಿಸಿದ, ಜ್ಞಾನಮುದ್ರಾಸಹಿತನಾದ ವ್ಯಾಸ, ಹಯಗ್ರೀವಾದಿರೂಪದ ಭಗವಂತನನ್ನು ತನ್ನ ಮನದ ಮೂಲಕ ಧ್ಯಾನಿಸುತ್ತಿದ್ದಾನೆ ಭಗವಂತನಿಗೆ ವಾಯುದೇವನು ಮಗನೂ, ಶಿಷ್ಯನೂ ಆದ್ದರಿಂದ, ಆ ಭಗವಂತನಿಗೆ ಈತ ಸಂಬಂಧಿಯೆನ್ನಿಸಿದ್ದಾನೆ. ಜನನಮರಣಾದಿಗಳಿಂದ ಕೂಡಿದ ಈ ಸಂಸಾರಸಮುದ್ರವನ್ನು ತನ್ನ ಭಕ್ತರ ಪಾಲಿಗೆ ಇಲ್ಲದಂತೆ ಮಾಡುವವನೂ ಆಗಿದ್ದಾನೆ ಈ ವಾಯುದೇವ. ಮಹಿಷವೆಂದರೆ ಎಲ್ಲ ಜೀವಿಗಳಲ್ಲಿ ಶ್ರೇಷ್ಠ ಎಂಬ ಅರ್ಥವಾಗುವುದರಿಂದ ಇದು ವಾಯುವಿನ ಅವತಾರಸ್ವರೂಪರಾದ ಮಧ್ವರ ವರ್ಣನೆಯೇ ಆಗಿದೆ.

ಪ್ರಳಯದಲ್ಲಿ ಎಲ್ಲರಿಗೂ ನಾಶವಾದರೂ ತಾನು ನಾಶವಾಗದಿರುವುದರಿಂದ ಎಲ್ಲರಿಗೆ ಅಂತಿಮನೆಲೆಯಾದ್ದರಿಂದ ಮತ್ತು ಮುಕ್ತಜೀವರಿಗೆ ನಿಯಾಮಕನಾದ್ದರಿಂದ ತುರೀಯಂ ಧಾಮ ಎನಿಸಿದ ಭಗವಂತನನ್ನು ಈ ಮಧ್ವರು ಸಾಕ್ಷಾತ್ಕರಿಸಿಕೊಂಡವರು.

ವ್ಯಾಕರಣಶಾಸ್ತ್ರದಲ್ಲಿ ಸಚಧಾತುವಿಗೆ ಸಮವಾಯ (ಹೊಂದಿಸುವುದು, ಸಂಬಂಧ ಏರ್ಪಡಿಸುವುದು ಎಂಬ ಅರ್ಥವಿರುವುದರಿಂದ ನಾವು ಹೇಳಿದ ಅರ್ಥವು ಸಮೀಚೀನವೇ ಆಗಿದೆ.

**ಭಾವವಿಲಾಸಿನೀ–** ಶಸ್ಯಸುಖಸ್ಯ ಕುಃಭುಮಿಃ ತಾಂ ನಯತೀತಿ ಶಕುನ ಇತ್ಯರ್ಥಃ। ಬಿಭೃತ್ವೇತ್ಯಸ್ಯಾರ್ಥ ಕಥನಂ ಧಾರಣಾಶೀಲ ಇತಿ । ಬಿಭೃತ್ವನ್ ಶಬ್ದ ಇತಿ ಜ್ಞಾತವ್ಯಮ್ ॥ ೬೨೯ ॥ ಗೋವಿಂದು- ರಿತ್ಯಸ್ಯಾರ್ಥ ಕಥನಂ **ಅಖಿಲವಾಕ್ಯಪತೇರಿತಿ** ॥ ೬೩೦ ॥ ಗೋಪತೇಃ ಗೋಪಾಲಸ್ಯ ವೇತಿ ತಸ್ಯೈವ ಪದಸ್ಯಾರ್ಥಾಂತರಕಥನಮ್ । ಮಹಿಷ ಇತ್ಯಸ್ಯಾರ್ಥಕಥನಂ ಸ್ವಸ್ವಾಮಿನಃ ಸೇವಿನಾಂ ಪ್ರಭು- ರಿತಿ । ಸಚಮಾನ ಇತ್ಯಸ್ಯಾರ್ಥಕಥನಂ ಸ್ವಚೇತಸಾ ಸಂಬಂಧಂ ಪ್ರಾಪಯನ್ನಿತಿ । ತರ್ಯುಂ ತುರೀನಾಮಕಮ್ । ಸಚಮಾನ ಇತ್ಯಸ್ಯ ಮೂಲೀಭೂತಂ ಧಾತುಮಾಹ – **ಸಮವಾಯ ಇತಿ** ॥ ಅನೇನ ಸಚ ಸಮವಾಯ ಇತಿ ಧಾತುಂ ಸೂಚಯತಿ ॥ ೬೩೧-೬೩೩ ॥

**ವಿವರಣೆ–** ದ್ರಪ್ಸ ಎಂದರೆ ಕರಗುವಿಕೆ - ಮನಸ್ಸಿನ ಕರಗುವಿಕೆ - ಕರುಣೆ ಎಂದು ಅರ್ಥ. ದ್ರಪ್ಸ ಅಸ್ಯ ಅಸ್ತೀತಿ ದ್ರಪ್ಸಃ - ದ್ರಪ್ಸ ಉಳ್ಳವನು ಕರುಣಾಶಾಲಿ. ದ್ರಪ್ಸ ಶಬ್ದಕ್ಕೆ ಅರ್ಶ ಆದಿಭ್ಯೋಚ್ (ಸೂತ್ರಸಂಖ್ಯಾ 1933 (5-2-127) ಎಂಬ ಸೂತ್ರದಿಂದ ಅಚ್ ಪ್ರತ್ಯಯ ಬಂದು ನಿಷ್ಪನ್ನವಾದ ರೂಪ ದ್ರಪ್ಸ

ತುರೀಯಂ ಧಾಮ - ಮಾಂಡೂಕೋಪನಿಷತ್ ದ್ವಿತೀಯಖಂಡ ಒಂದನೇ ಶ್ಲೋಕ-ಶಿವಮದ್ವೈತಂ ಚತುರ್ಥಂ ಮನ್ಯಂತೇ.

**'ದೇವಸ್ತುರ್ಯೋ ವಿಭುಃ ಸ್ಮೃತಃ'** ಎರಡನೇ ಶ್ಲೋಕ.

**'ಹರಿಸ್ತುರೀಯರೂಪೇಣ ಮೋಕ್ಷದಃ ಸಂಪ್ರಕೀರ್ತಿತಃ'** - ಅದೇ ಶ್ಲೋಕದ ಮಾಧ್ವಭಾಷ್ಯ.

ಸಚಮಾನಃ - ಷಚ ಸಮವಾಯೇ (ಧಾತುಸಂಖ್ಯಾ - 997) ಉಭಯಪದೀ, ಭ್ವಾದಿಗಣದ ಧಾತು. ಸಮವಾಯ - ಸಂಬಂಧವೇರ್ಪಡಿಸುವುದು ಎಂದು ಅರ್ಥವಾಗುವುದರಿಂದ ತನ್ನ ಮನಸ್ಸಿನ ಮೂಲಕ ವೇದಾದಿಶಾಸ್ತ್ರಗಳೊಡನೆ ಸಂಬಂಧವಿಟ್ಟುಕೊಂಡವನೆಂದು ಅರ್ಥವಾಗುತ್ತದೆ.

ಧಾತುಗಳಿಗೆ ಅನೇಕಾರ್ಥಗಳಿರುವ ಪ್ರಯುಕ್ತ ಷಚ ಧಾತುವಿಗೆ ನಾಶ ಎಂಬ ಅರ್ಥವನ್ನೂ ಸ್ವೀಕರಿಸಿ ತನ್ನ ಭಕ್ತರ ಸಂಸಾರಬಂಧನಗಳನ್ನು ನಾಶಪಡಿಸುವವನೆಂದೂ ಅರ್ಥಹೇಳಬಹುದಾಗಿದೆ.

ಅಥವಾ ಷಚ ಸೇಚನೇ ಸೇವನೇ ಚ ಎಂಬ ಮತ್ತೊಂದು ಧಾತುವಿನಿಂದ (ಸಂಖ್ಯಾ - 163, ಭ್ವಾದಿ, ಆತ್ಮನೇಪದೀ) ಸೇವನ - ಭಕ್ಷಣ ಸಂಸಾರಬಂಧನಸಂಹಾರ ಎಂಬ ಅರ್ಥವನ್ನು ಹೇಳಬಹುದು.

**ಪೂಯಮಾನಸ್ಯ ಸೂಕ್ತಸ್ಥಾ ತನ್ಮಾಧ್ವೀಽಯಂ ಕಥಾ ಧ್ರುವಂ ।**
**ಯತಃ ಪ್ರವಚನಂ ಕುರ್ವದ್ ವಾಯೋಃ ರೂಪಂ ಶ್ರುತಿರ್ಜಗೌ ॥ ೬೩೪ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಪೂಯಮಾನಸ್ಯ ಸೂಕ್ತಸ್ಥಾ= ಪೂಯಮಾನಸೂಕ್ತದಲ್ಲಿರುವ, ಶ್ರುತಿಃ= ವೇದವಾಕ್ಯವು, ಪ್ರವಚನಂ= ವೇದಾದಿಶಾಸ್ತ್ರ ಪ್ರವಚನವನ್ನು ಕುರ್ವದ್ವಾಯೋಃ= ನಡೆಸುತ್ತಿರುವ ವಾಯುದೇವನ, ರೂಪಂ= ಸ್ವರೂಪವನ್ನು ಜಗೌ= ಸ್ತುತಿಸಿದೆಯೋ, ತತ್= ಆ ಕಾರಣದಿಂದ, ಇಯಂ= ಈ ವೇದವಾಕ್ಯದಲ್ಲಿ ಹೇಳಲ್ಪಟ್ಟಿದ್ದು, ಮಾಧ್ವೀ= ಮಧ್ವಾಚಾರ್ಯರಿಗೆ ಸಂಬಂಧಿಸಿದ, ಕಥಾ= ವರ್ಣನೆಯು, ಇತಿ ಏತತ್= ಎಂಬ ವಿಷಯವು, ಧ್ರುವಂ= ನಿಶ್ಚಿತವಾಗಿದೆ.

**ಅನುವಾದ–** **'ಚಮೂಷಚ್ಛ್ಯೇನಃ ಶಕುನಃ' ಎಂಬ ಪೂಯಮಾನಸೂಕ್ತವಾಕ್ಯವು ವೇದಾದಿಶಾಸ್ತ್ರಪ್ರವಚನವನ್ನು ಮಾಡುತ್ತಿರುವ ವಾಯುದೇವನನ್ನೂ ಹಾಡಿಹೊಗಳುತ್ತಿದೆಯಾದ್ದರಿಂದ ಈ ವೇದವಾಕ್ಯದಲ್ಲಿ ವರ್ಣಿತವಾದ ರೂಪವು ಮಧ್ವಾಚಾರ್ಯರದೆಂದೇ ಸಿದ್ಧವಾಗುತ್ತದೆ. ಏಕೆಂದರೆ ವಾಯುದೇವನ ಮೊದಲ**

ಎರಡು ಅವತಾರಗಳಾದ ಹನುಮದ್ ಭೀಮರೂಪಗಳಲ್ಲಿ ಬಲಕಾರ್ಯವಾದ ಶತ್ರುಸಂಹಾರವೇ ಹೆಚ್ಚಾಗಿ ನಡೆದಿದೆ. ಜ್ಞಾನಕಾರ್ಯವನ್ನು ವಿಶೇಷವಾಗಿ ಮಾಡಿದ ವಾಯುದೇವನ ಅವತಾರವೆಂದರೆ ಮೂರನೆಯ ಅವತಾರವಾದ ಮಧ್ವರೂಪವೇ ಆಗಿದೆ.

**ಭಾವವಿಲಾಸಿನೀ–** ಯತಃ ಪ್ರವಚನಂ ಕುರ್ವದ್ವಾಯೋರೂಪಂ ಶ್ರುತಿರ್ಜಗೌ ತತ್ ತಸ್ಮಾದಿತಿ ಪೂರ್ವೇಣಾನ್ವಯಃ ॥ ೬೩೪ ॥

ಸಕಲವೈಷ್ಣವರನ್ನೂ ಈ ಶ್ರುತಿಯು ಪ್ರತಿಪಾದಿಸುವುದರಿಂದಲೂ ಮುದ್ರಾಧಾರಣೆಗೆ ಶ್ರುತಿಸಮರ್ಥನವು ಇದೆ ಎಂದು ಹೇಳುತ್ತಿದ್ದಾರೆ-

ತಚ್ಚಮೂಷು ಸತಾಂ ಸೇಯಂ ಕಥಾ ಭಕ್ತಿಮತಾಂ ಸತಾಂ ।
ಸೇನಾಸ್ತುತೌ ಚ ಸೇನಾನೀಸ್ತುತಿರೇವ ಯತೋ ಭವೇತ್ ॥ ೬೩೫ ॥

**ಅರ್ಥ–** ಯತಃ = ಯಾವ ಕಾರಣದಿಂದ, ಸೇನಾಸ್ತುತೌ = ಸೈನ್ಯದ ಪ್ರಶಂಸೆಯನ್ನು ಮಾಡಿದಾಗ, ಚ = ಕೂಡ, ಸೇನಾನೀಸ್ತುತಿಃ ಏವ = ಸೈನ್ಯದ ನಾಯಕನ ಪ್ರಶಂಸೆಯೇ, ಭವೇತ್ = ಆಗುತ್ತದೋ, ತತಃ = ಆ ಕಾರಣದಿಂದ, ಸಾ = ಚಮೂಷಚ್ಛ್ಯೇನ ಎಂಬ ವಾಕ್ಯದಲ್ಲಿ ಹೇಳಿದ, ಇಯಂ = ಈ, ಕಥಾ = ವರ್ಣನೆಯು, ತಚ್ಚಮೂಷು = ವೈಷ್ಣವಸೈನ್ಯಗಳಲ್ಲಿ, ಸತಾಂ = ಇರುವ, ಭಕ್ತಿಮತಾಂ = ವಿಷ್ಣುಭಕ್ತರಾದ, ಸತಾಂ = ಸಜ್ಜನರ, ಕಥಾ ಏವ = ಕಥೆಯೇ, ಅಸ್ತಿ = ಆಗಿದೆ.

**ಅನುವಾದ–** ಸೈನ್ಯವೊಂದು ಮಾಡಿದ ಮಹಾಕಾರ್ಯವನ್ನು ಪ್ರಶಂಶಿಸಿದರೆ ಅದು ಆ ಸೈನ್ಯವನ್ನು ಮುನ್ನಡೆಸಿದ ಸೇನಾನಾಯಕನ ಪ್ರಶಂಸೆಯೇ ಆಗುತ್ತದೆ. ಹಾಗಾಗಿ ಚಮೂಷಚ್ಛ್ಯೇನಃ ಶಕುನಃ ಎಂಬ ಮಂತ್ರವು ವೈಷ್ಣವಸೈನ್ಯದಲ್ಲಿರುವ ವಿಷ್ಣುಭಕ್ತರಾದ ಎಲ್ಲ ಸಜ್ಜನರ ಪ್ರಶಂಸೆಯನ್ನು ಮಾಡುತ್ತಿರುವುದರಿಂದ ಆ ವೈಷ್ಣವಸೈನ್ಯದ ನಾಯಕರಾದ ಮಧ್ವರ ಪ್ರಶಂಸೆಯೇ ಆಗಿದೆ.

**ಭಾವವಿಲಾಸಿನೀ–** ಚಮೂಷು ಮಧ್ವಸೇನಾಸು ಸನ್ನಿತಿ ಜಾತ್ಯೇಕವಚನಾಭಿಪ್ರಾಯೇಣ ಸಕಲವೈಷ್ಣವೈಃ ಕ್ರಿಯಮಾಣಚಕ್ರಾದಿಧಾರಣಸ್ಯ ಶ್ರೌತತ್ವಸಿದ್ಧ್ಯರ್ಥಂ ವೈಷ್ಣವಮಾತ್ರವಿಷಯತಯಾ ವಾ ಇಯಂ ಶ್ರುತಿರ್ಯೋಜ್ಯೇತ್ಯಾಹ – **ತಚ್ಚಮೂಷ್ವಿತಿ** ॥ ತಚ್ಚಮೂಷು ಮಧ್ವಚಮೂಷು । ಪೂಯಮಾನಸೂಕ್ತೇ ಕಥಮನ್ಯಸ್ತುತಿರಿತ್ಯತ ಆಹ–**ಸೇನೇತಿ** ॥ ತತಶ್ಚಾಯಂ ಸಮುದಾಯಾರ್ಥಃ । ಚಮೂಷತ್ ವೈಷ್ಣವಸೇನಾಮಧ್ಯೇ ಗುರುತಯಾ ತಿಷ್ಠನ್, ಶೀ ಆನಂದರೂಪೀ ಪರಮಾತ್ಮ ಆಸಮ್ಯಕ್ ಇನೋ ಯಸ್ಯ ಸಃ ಶ್ಯೇನ । ಮಹಾಲಕ್ಷ್ಮ್ಯಾಃ ಅವಾಂತರಸ್ವಾಮಿತ್ವೇಽಪಿ ಮುಖ್ಯ-ಸ್ವಾಮಿತ್ವಂ ವಿಷ್ಣೋರೇವೇತಿ ದರ್ಶನಾಯೇತ್ಥಮುಕ್ತಮ್ । ಶಕುಂ ಮೋಕ್ಷಾಖ್ಯಂಸುಖಭೂಮಿಂ ನಯತೀತಿ ಶಕುನಃ । ಕುಃ ಪೃಥ್ವೀತ್ಯಭಿಧಾನಮ್ । ಬಿಭೃತ್ವಾ ವೇದಶಾಸ್ತ್ರಾದ್ಯರ್ಥಾನಾಂ ಸದಾ

ಧಾರಣಶೀಲಃ ಸತ್ತರ್ಕೈಸ್ತೇಷಾಂ ಪೋಷಕೋ ವಾ । ಶ್ವಾಸರೂಪೇಣ ಜಗದ್ಧಾರಣಶೀಲೋ ವಾ । ಗೋವಿಂದುಃ ಕೃಷ್ಣಸ್ಯ ಆಯುಧಾನಿ ಸಹಸ್ರಾರಚಕ್ರಂ ಶತಾವರ್ತಶಂಖಂ ಸಹಸ್ರದಲಪದ್ಮಂ ಷೋಡಶಾರಗದಾಂ ಚೇತಿ ಚತುರಾಯುಧಾನಿ ಭುಜದ್ವಯೇ ಉರೋಭಾಗದ್ವಯೇ ಚ । ಚತುರ್ಭುಜತ್ವೇ ತು ಸ್ವಬಾಹ್ಯಭುಜದ್ವಯೇ ಚ ಬಿಭ್ರತ್ । ದ್ರಪ್ಸಃ ಭಕ್ತೇಷು ಸರ್ವದಾ ಚಿತ್ತದ್ರವವಾನ್ । ದ್ರವಣಮೇವ ದ್ರಪ್ಸಾ ಅರ್ಶ ಆದಿಭ್ಯೋಽಜಿತಿ ವಚನಾತ್ ತದ್ವಾಂದ್ರಪ್ಸಃ । ಅಪಾಂ ಜ್ಞಾನರಸಾನಾಂ ಊರ್ಮಿಂ ಉತ್ತುಂಗತರಂಗಸ್ಥಾನೀಯೋತ್ಕರ್ಷವಂತಮ್ । ಸಮುದ್ರಂ ವೇದಶಾಸ್ತ್ರಾಖ್ಯಸಮುದ್ರಂ ಸಚಮಾನಃ ಸ್ವಮನಸಾ ಸಂಬಂಧಂ ಪ್ರಾಪಯನ್ । ಅಂತರ್ಣೀತ-ನಿಚ್ಪ್ರತ್ಯಯೋರ್ಥೋ ಲಭ್ಯತೇ । ಸ್ವಮನಸಾ ಸದಾ ತಂ ಸಮುದ್ರಂ ಸಂಬಂಧ್ನನ್ವಾ । ಅಥವಾ ಅಪಾಂ ಜ್ಞಾನರಸಾನಾಂ ಊರ್ಮಿಂ ಉತ್ಕರ್ಷವಂತಂ ಸವಮುದ್ರಂ ಜ್ಞಾನವಮುದ್ರಯಾ ಸಹಿತಂ ವೇದವ್ಯಾಸಂ ಹಯಗ್ರೀವಂ ಚ ಸಚಮಾನಃ ಮನಸಾಸಂಬಧ್ನನ್ ಸದಾ ಧ್ಯಾಯನ್ನಿತ್ಯರ್ಥಃ । ಪುತ್ರತಯಾ ಶಿಷ್ಯತಯಾ ಚ ಸಂಬಂಧ್ನನ್ವಾ । ಅಪಾಂ ಜನನಮರಣಾದಿಪ್ರವಾಹಾನಾಂ ಊರ್ಮಿಂ ಉತ್ಕರ್ಷವಂತಂ ಸಮುದ್ರಂ ಸಂಸಾರಸಮುದ್ರಂ ಸಚಮಾನೋ ನಿರಾಕುರ್ವನ್ವಾ । ಮಹಿಷಃ ಸಕಲಜೀವಾನಾಂ ಶ್ರೇಷ್ಠಃ ವಾಯೋರವತಾರ ರೂಪೋ ಮಧ್ವಃ ತುರೀಯಂ ಸರ್ವೇಷಾ-ಮವಸಾನೇ ವಿದ್ಯಮಾನಮ್ । ಧಾಮ ಸಕಲಾಧಾರಭೂತಂ ವಿಷ್ಣ್ವಾಖ್ಯಂ ಪರಂ ಬ್ರಹ್ಮ ವಿವಕ್ತಿ ವಿಶೇಷೇಣ ವಕ್ತಿ ಅಪರೇಕ್ಷೀಕೃತ್ಯ ಜಾನೀತೇ ಚ । ವೈಷ್ಣವಮಾತ್ರವಿಷಯೇತು ಚಮೂಷತ್ ವೈಷ್ಣವಸಂಘೇ ಸ್ಥಿತಃ ಶೀ ಸುಖೀ ಪರಮಾತ್ಮಾ ಆಸಮಂತಾತ್ ಜನ್ಮಜನ್ಮನಿ ಇನೋ ಯಸ್ಯ ಸ ತಥೋಕ್ತಃ । ಶಕುಂ ನಿರವಧಿಕಸುಖಭೂಮಿಂ ಪರಮಾತ್ಮಾನಂ ನಯತಿ ಯಥಾಯೋಗ್ಯಂ ಸ್ವಶಿಷ್ಯಾದಿಷು ಉಪದಿಶತೀತಿ ಶಕುನಃ । ಗೋವಿಂದುರಾಯುಧಾನಿ ಬಿಭ್ರತ್ ದ್ರಪ್ಸಃ ಯಥಾಯೋಗ್ಯಂ ಚಿತ್ತದ್ರವವಾನ್ । ಅಪಾಮೂರ್ಮಿಂ ಸಮುದ್ರಂ ಜ್ಞಾನರಸೋರ್ಮಿಮಂತಂ ವೇದಶಾಸ್ತ್ರಾಖ್ಯಸಮುದ್ರಂ ಸಚಮಾನಃ ಶ್ರವಣಮನನಾದಿನಾ ಯಥಾಯೋಗ್ಯಂ ಸಂಬಧ್ನನ್ । ಮಹಿಷಃ ಅಧಮಮಧ್ಯಮಜೀವೇಭ್ಯಃ ಶ್ರೇಷ್ಠಃ ತುರೀಯಂ ಧಾಮ ವಿವಕ್ತಿ ಅಪರೋಕ್ಷೀಕೃತ್ಯ ಜಾನೀತ ಇತಿ ಯೋಜನಾ । ನಿರುಕ್ತೋಕ್ತರೀತ್ಯಾ ವಾ ಯೋಜನಾ ।

ಜೀವೇಷ್ವಪಿ ಪಕ್ಷಿಪಶ್ವಾದಿಯೋನಿಸದ್ಭಾವದರ್ಶನಾಯ ಶ್ಯೇನಶಕುನಮಹಿಷಪದಾನಿ । ಅಥವಾ ಸಮಾಖ್ಯೆ । ಶ್ರುತ್ಯನುಸಾರೇಣ ಸಕಲೋತ್ತಮಾಧಿಕಾರಿವಿಷಯತಯಾ ಯೋಜನಾ । ತಥಾ ಹಿ ಅಪಾಂ ಜಲಾನಾಮೂರ್ಮಿಂ ಊರ್ಮಿಮಂತಂ ಸಮುದ್ರಂ ಪ್ರಸಿದ್ಧಸಮುದ್ರಂ ಸಚಮಾನಃ ಪಾನೇನ ಸಂಹರನ್ ಅಗಸ್ತ್ಯಃ ಅಭಿಮಾನಿತಯಾ ಸಂಬಧ್ನನ್ ವರುಣೋ ವಾ ನದೀರೂಪೇಣ ಸಂಬಧ್ನನ್ ಗಂಗಾದಿನದ್ಯಭಿಮಾನಿದೇವತಾಸಮೂಹೋ ವಾ । ವೇದಶಾಸ್ತ್ರಾಖ್ಯಸಮುದ್ರಮ್ ಅಭಿಮಾನಿತಯಾ ಸಂಬಧ್ನನ್ ಸರಸ್ವತೀಭಾರತ್ಯಾದಿದೇವಸ್ತ್ರೀಸಮೂಹೋ ವಾ । ಗಂಗಾಯಾಃ ಅಪಾಮೂರ್ಮಿಂ ಹರಿಚರಣಪ್ರಕ್ಷಾಲನೇನ ಪವಿತ್ರೀಕೃತ್ಯ ಸವಮುದ್ರಂ ಬಹಿರ್ಜಟಾ-ಭಸ್ಮಾದ್ಯವೈದಿಕಮುದ್ರಯಾಸಹಿತಂ ಸ್ವಪುತ್ರಂ ಶಿವಂ ಪಾವಯಿತುಂ ಸಚಮಾನಃ ಪ್ರಾಪಯನ್ ಬ್ರಹ್ಮಾ ವಾ ತವ ಶ್ರಿಯೇ ಮರುತೋ ಮರ್ಜಯಂತ ಇತಿ ಶ್ರುತೇಃ ಸ್ವಜಟಾಮಧ್ಯಪತಿತಮಪಾಂ

ಪ್ರವಾಹಂ ಭಗೀರಥಪ್ರಾರ್ಥನಯಾ ಸಮುದ್ರಂ ಪ್ರಾಪಯನ್, ಏವಮಾತ್ಮಭುವಾದಿಷ್ಟಃ ಪರಿಕ್ರಮ್ಯ ಗಿರಾಂ ಪತಿಮ್ । ಬಾಢಮಿತ್ಯಭ್ಯುಪಾಮಂತ್ರ್ಯ ವಿವೇಶ ತಪಸೇ ವನಮ್ ॥

ಇತಿ ತಪೋಹೋತೋರ್ಘನೋದಕಸಮುದ್ರಂ ಸಚಮಾನಃ । ಅಂತರ್ಗೋವಿಂದಸ್ಯಾಯುಧಾನಿ ಬಿಭ್ರಚ್ಛ್ಚನೋ ವಾ । ಅರಾಖ್ಯಂ ಣ್ಯಾಖ್ಯಂ ವಾ ಮುಕ್ತಿಸ್ಥಾನಸ್ಥಂ ಮಹಾಸಮುದ್ರಂ ಸಚಮಾನಃ ಮುಕ್ತಗಣೋ ವಾತ್ರ ಪ್ರತಿಪಾದ್ಯತ ಇತಿ ಸರ್ವೇಷಾಮಪಿ ಭಗವಚ್ಚಕ್ರಾದ್ಯಾಯುಧಾಂಕಧಾರಣೇ ಅಧಿಕಾರಂ ಸೂಚಯಿತುಂ ವಿಶಿಷ್ಯ ವಿಶೇಷ್ಯಮನಿರ್ದಿಶಂತೀತಿ ಶ್ರುತಿಃ ಉಕ್ತವಿಧಯಾ ಸರ್ವತ್ರ ಸಂಭವದ್ವಿಶೇಷಣಗಣೈರೇವ ಯತಃ ಪ್ರವೃತ್ತಾ ತಸ್ಮಾದುಕ್ತಃ ಸರ್ವೋಽಪ್ಯರ್ಥಃ ಶ್ರುತೇರಭಿಪ್ರೇತ ಏವೇತಿ ಜ್ಞಾತವ್ಯಮ್ ॥ ೬೩೫ ॥

**ವಿವರಣೆ-** ತಾಮಸ, ರಾಜಸ ಜೀವರಿಗಿಂದ ಉತ್ತಮರಾದ ಸಾತ್ವಿಕಜೀವರನ್ನೂ ಮತ್ತು ಆ ಸಾತ್ವಿಕರು ಮಾಡುವ ಮುದ್ರಾಧಾರಣೆಯನ್ನು ಈ ವೇದವಾಕ್ಯವು ವರ್ಣಿಸುತ್ತಿದೆ. ವೇದವಾಕ್ಯದಲ್ಲಿ ಸಾತ್ವಿಕಜೀವನನ್ನು ವರ್ಣಿಸುವ ಏಕವಚನವಿದ್ದರೂ, ಆ ಏಕವಚನವು ವಿಷ್ಣುಭಕ್ತರಾದ ಎಲ್ಲ ಸಾತ್ವಿಕರನ್ನೂ ಹೇಳುತ್ತಿದೆ. ಜಾತಿ - ಗುಂಪಿನಲ್ಲಿ ಅನೇಕ ಜನರಿದ್ದಾಗ ಆ ಗುಂಪು ಒಂದೇ ಎಂದು ಅಭಿಪ್ರಾಯ.

ವೇದವಾಕ್ಯಾರ್ಥ - ಚಮೂ = ವೈಷ್ಣವ ಸಂಘದಲ್ಲಿ, ಷತ್ = ಇರುವ, ಶ್ಯೇನಃ = ಪರಮಸುಖಿಯಾದ ಭಗವಂತನನ್ನೇ ಜನ್ಮಜನ್ಮದಲ್ಲಿ ಸ್ವಾಮಿಯನ್ನಾಗಿ ಪಡೆದಿರುವ, ಶಕುನಃ, ಶಕು = ನಿರವಧಿಕಸುಖದ ತಾಣವಾದ ಪರಮಾತ್ಮನನ್ನು, ನ ತಮ್ಮ ಶಿಷ್ಯರಿಗೆ ಉಪದೇಶಿಸುವ, ವಿಭೃತ್ವಾ = ಶಾಸ್ತ್ರಾರ್ಥಗಳನ್ನು ಅರಿತವನಾದ, ಗೋವಿಂದುಃ = ಭಗವಂತನ, ಆಯುಧಾನಿ = ಚಕ್ರಶಂಖಾದ್ಯಾಯುಧಗಳನ್ನು, ಬಿಭ್ರತ್ = ಧರಿಸಿರುವ, ದ್ರಪ್ಸಃ = ಶಿಷ್ಯರ ವಿಷಯದಲ್ಲಿ ಕರುಣಾಶಾಲಿಗಳಾದ ತರಂಗಗಳಂತೆ ಶ್ರೇಷ್ಠತೆಯುಳ್ಳ, ಸಮುದ್ರಂ = ವೇದಾದಿಶಾಸ್ತ್ರಗಳೆಂಬ ಸಮುದ್ರವನ್ನು, ಸಚಮಾನಃ = ಶ್ರವಣ, ಮನನಮಾಡುತ್ತಿರುವ, ಮಹಿಷಃ = ತಾಮಸ, ರಾಜಸ ಜೀವರಿಗಿಂತ ಉತ್ಕೃಷ್ಟವಾದ ಸಾತ್ವಿಕವಿಷ್ಣುಭಕ್ತಜೀವನು, ತುರೀಯಂ ಧಾಮ = ತುರೀಯ ಎನಿಸಿದ, ಮುಕ್ತರಿಗೆ ಆಶ್ರಯನಾದ ಭಗವಂತನನ್ನು, ವಿವಕ್ತಿ = ಅಪರೋಕ್ಷವಾಗಿ ತಿಳಿದುಕೊಳ್ಳುತ್ತಾನೆ.

ಜೀವರ ಸ್ವರೂಪದೇಹವೂ ಕೂಡ ಪಶು ಪಕ್ಷ್ಯಾದಿರೂಪದ್ದಾಗಿರುತ್ತದೆ ಎಂಬ ವಿಷಯನ್ನು ತಿಳಿಸಲು ಶ್ಯೇನ, ಶಕುನ ಇತ್ಯಾದಿ ಶಬ್ದಗಳನ್ನು ಶ್ರುತಿಯು ಪ್ರಯೋಗಿಸಿದೆ.

ಈ ವೇದವಾಕ್ಯವನ್ನು ಬ್ರಹ್ಮರುದ್ರಾದಿದೇವತೆಗಳು, ಋಷಿಗಳು ಮತ್ತು ಮುಕ್ತಜೀವರ ಪರವಾಗಿಯೂ ವ್ಯಾಖ್ಯಾನಿಸಬಹುದಾಗಿದೆ. ಏಕೆಂದರೆ ಈ ವಾಕ್ಯವು ನಿರ್ದಿಷ್ಟವಾಗಿ ಯಾರನ್ನೂ ಹೇಳುವಂತಹ ಶಬ್ದಗಳನ್ನು ಪ್ರಯೋಗಿಸದೇ ಎಲ್ಲರಿಗೂ ಅನ್ವಯವಾಗುವಂತಹ ವಿಶೇಷಣಗಳನ್ನೇ ಪ್ರಯೋಗಿಸಿದೆ. ಹಾಗಾಗಿ ಮೇಲೆ ಹೇಳಿದ

**ಕಾಣ್ವಾನಾಂ ಸಾ ಶತಪಥಬ್ರಾಹ್ಮಣೇ ಕಿಲ ವರ್ತತೇ ।**
**ಯದ್ ವೇದಸ್ಯ ಶಿರೋ ವಕ್ತಿ ತದೇವ ಹಿ ವಪುರ್ಮತಮ್॥ ೬೪೦ ॥**

**ತಸ್ಮಾದಿಯಂ ಚ ವಾಕ್ ಸ್ತೌತಿ ತಪ್ತಚಕ್ರಾಯುಧಾಂಕನಮ್ ।**
**ಅಚಕ್ರಧಾರಿವ್ಯಾಖ್ಯಾದಿ ಪ್ರತ್ಯಾಖ್ಯಾನಚಿಕೀರ್ಷಯಾ ॥ ೬೪೧ ॥**

**ಅರ್ಥ–** ಊರ್ಧ್ವಪುಂಡ್ರಂ= ಹಣೆಯಲ್ಲಿ ಧರಿಸುವ ನಾಮವು, ದ್ವಿರೇಖಂ= ಎರಡು ರೇಖೆಯುಳ್ಳದ್ದು ಭವತಿ= ಇರುತ್ತದೆ. ಚ= ಮತ್ತು, ವೈಷ್ಣವಃ= ವಿಷ್ಣುಭಕ್ತನು, ದ್ವಿಭುಜೇ= ಎರಡೂ ತೋಳುಗಳಲ್ಲಿ ತಪ್ತಚಕ್ರಂ= ತಪ್ತಚಕ್ರವನ್ನು ಸದಾ= ಯಾವಾಗಲೂ, ಧಾರಯತಿ= ಧರಿಸುತ್ತಾನೆ. ಇತಿ= ಹೀಗೆ, ಕಾಚನ= ಒಂದು, ವೇದವಾಕ್= ವೇದವಾಕ್ಯವು, ಆಹ= ಹೇಳುತ್ತದೆ. ಸಾ= ಆ ವೇದವಾಕ್ಯವು, ಕಾಣ್ವಾನಾಂ= ಕಾಣ್ವಶಾಖೆಯ, (ಕಾಣ್ವಶಾಖಾದವರ) ಶತಪಥಬ್ರಾಹ್ಮಣೇ= ಶತಪಥಬ್ರಾಹ್ಮಣದಲ್ಲಿ, ವರ್ತತೇ ಕಿಲ= ಇದೆಯಷ್ಟೇ. ವೇದಸ್ಯ= ವೇದದ, ಶಿರಃ= ಶಿರಃ ಸ್ಥಾನೀಯವಾದ ಉಪನಿಷತ್ತು, ಯತ್= ಏನನ್ನು, ವಕ್ತಿ = ಹೇಳುತ್ತದೋ, ತತ್ ಏವ= ಅದೇ, ವಪುರ್ಮತಂ= ಶರೀರ ಸ್ಥಾನದಲ್ಲಿರುವ ವೇದದ ಅಭಿಪ್ರಾಯವೂ ಆಗಿರುತ್ತದೆ. ತಸ್ಮಾತ್= ಆದ್ದರಿಂದ, ಇಯಂ= ಈ, ವಾಕ್ ಚ= ವೇದವಾಕ್ಯವೂ ಕೂಡ, ಅಚಕ್ರಧಾರೀ= ತಪ್ತಮುದ್ರಾಧಾರಣೆಯನ್ನು ಮಾಡದವರ, ವ್ಯಾಖ್ಯಾ ಆದಿ= ವ್ಯಾಖ್ಯಾನ ಮತ್ತು ತಪ್ತಚಕ್ರಾಂಕನವನ್ನು ಮಾಡಿಸಿಕೊಳ್ಳದಿರುವಿಕೆ ಎಂಬ ಅನಾಚಾರ ಇವೆರಡರನ್ನು ಪ್ರತ್ಯಾಖ್ಯಾನಚಿಕೀರ್ಷಯಾ= ನಿರಾಕರಣಮಾಡುವ ಅಪೇಕ್ಷೆಯಿಂದ, ತಪ್ತಚಕ್ರಾಯುಧಾಂಕನಂ = ತಪ್ತಚಕ್ರಾದಿಧಾರಣವನ್ನು, ಸ್ತೌತಿ = ಪ್ರಶಂಸೆ ಮಾಡುತ್ತಿದೆ.

ಅನುವಾದ- ದ್ವಿರೇಖಮೂರ್ಧ್ವಪುಂಡ್ರಂ ಭವತಿ ।ತಪ್ತಚಕ್ರಂ ದ್ವಿಭುಜೇ ಧಾರಯತಿ ॥ ಎಂಬ ವೇದವಾಕ್ಯವು ಕಾಣ್ವಶಾಖೆಯ ಶತಪಥಬ್ರಾಹ್ಮಣದಲ್ಲಿದೆ.

ಇದು ಈಗಲೂ ವೈದಿಕರ ಪಾಠಕ್ರಮದಲ್ಲಿ ಇದೆ. ಅದನ್ನು ಮೂಲಕಾರರು ದ್ವಿರೇಖಮೂರ್ಧ್ವಪುಂಡ್ರಂ ಎಂಬ ಶ್ಲೋಕದಿಂದ ತಿಳಿಸುತ್ತಿದ್ದಾರೆ ಮತ್ತು ದ್ವಿಭುಜೇ ಎಂಬ ಪದದಿಂದ -

ದಕ್ಷಿಣೇ ತು ಭುಜೇ ವಿಪ್ರೋ ಬಿಭೃಯಾದ್ವೈ ಸುದರ್ಶನಂ ।
ಸವ್ಯೇ ತು ಶಂಖಂ ಬಿಭೃಯಾದಿತಿ ಬ್ರಹ್ಮವಿದೋ ವಿದುಃ ॥

ಎಂಬ ಸ್ಮೃತಿವಾಕ್ಯವನ್ನೂ ತಿಳಿಸುತ್ತಿದ್ದಾರೆ.

ಸ್ಮೃತಿವಾಕ್ಯದ ಅರ್ಥ- ಬ್ರಾಹ್ಮಣನು ಬಲತೋಳಿನಲ್ಲಿ ಚಕ್ರವನ್ನು ಮತ್ತು ಎಡತೋಳಿನಲ್ಲಿ ಶಂಖವನ್ನು ಧರಿಸಬೇಕೆಂದು ಜ್ಞಾನಿಗಳು ಹೇಳುತ್ತಾರೆ.

ಚಕ್ರ, ಶಂಖಗಳೆರಡೂ ದೊರೆಯದಿದ್ದಾಗ ಚಕ್ರಧಾರಣವನ್ನೇ ಆದರೂ ಮಾಡಿಕೊಳ್ಳಬೇಕು. ಏಕೆಂದರೆ ಚಕ್ರಶಂಖಗಳಲ್ಲಿ ಚಕ್ರವೇ ಮುಖ್ಯವಾದದ್ದು ಎಂಬುದು ಶತಪಥಬ್ರಾಹ್ಮಣದ ಅಭಿಪ್ರಾಯ. ಇದೇ ಅಭಿಪ್ರಾಯವು ಹಿಂದೆ ಹೇಳಿದ ಶೃಗಾಲೋಪನಿಷತ್‌ಗೂ ಇರುವುದರಿಂದ ಅದೂ ಶೃತಚಕ್ರಧಾರೀ ಎಂದು ಮಾತ್ರ ಹೇಳಿದೆ. ಪವಿತ್ರಂ ತೇ ವಿತತಂ ಇತ್ಯಾದಿ ಸಂಹಿತಾವಾಕ್ಯಗಳೂ ಪವಿತ್ರ - ಸುದರ್ಶನಚಕ್ರಧಾರಣವನ್ನೇ ಪ್ರಶಂಸಿಸಿವೆ.

ಚಮೂಷಚ್ಛ್ಯೇನ ಎಂಬ ವೇದವಾಕ್ಯದಲ್ಲಿ ಆಯುಧಾನಿ ಬಿಭ್ರತ್ ಎಂಬಲ್ಲಿ ಆಯುಧಾನಿ ಎಂದು ಬಹುವಚನಪ್ರಯೋಗಮಾಡಿರುವುದರಿಂದ ಭಗವಂತನ ನಾಲ್ಕು ಆಯುಧಗಳಾದ ಚಕ್ರ, ಶಂಖ, ಗದಾ, ಪದ್ಮಗಲೆಲ್ಲವನ್ನೂ ಧಾರಣ ಮಾಡುವುದೂ ಶಾಸ್ತ್ರಸಂಮತವಾಗಿದೆ. ಇದಲ್ಲದೇ ಹಿಂದೆ ಹೇಳಿದ ದಕ್ಷಿಣೇತು ಭುಜೇ ವಿಪ್ರಃ ಎಂಬ ಸ್ಮೃತಿವಾಕ್ಯದನುಸಾರವಾಗಿ ಚಕ್ರ, ಶಂಖಗಳೆಂಬ ಎರಡೇ ಆಯುಧಗಳನ್ನು ಧಾರಣಮಾಡುವುದೂ ಶಾಸ್ತ್ರಸಂಮತವಾಗಿದೆ. ಹಾಗಾಗಿ ತಪ್ತಮುದ್ರಾಧಾರಣೆಯನ್ನು ಮಾಡಿಸಿಕೊಳ್ಳದಿದ್ದರೆ ದೋಷಬರುತ್ತದೆಯೆಂದು ಹೇಳುವುದಷ್ಟೇ ಶ್ರುತಿಸ್ಮೃತಿಗಳ ಉದ್ದೇಶವಾಗಿದೆ. ಚಕ್ರ, ಶಂಖ, ಗದಾ ಪದ್ಮಗಳೆಂಬ ನಾಲ್ಕೂ ತಪ್ತಮುದ್ರಾಗಳನ್ನು ಅಥವಾ ಚಕ್ರಶಂಖಗಳೆಂಬ ಎರಡೇ ತಪ್ತಮುದ್ರಾಗಳನ್ನು ಎಷ್ಟುಸಂಖ್ಯೆಯಲ್ಲಿ ಯಾವ ಭಾಗಗಳಲ್ಲಿ ಧಾರಣೆ ಮಾಡಬೇಕೆಂದು ತಮ್ಮ ತಮ್ಮ ಸಂಪ್ರದಾಯಗಳನ್ನು ಮತ್ತು ಅಪೇಕ್ಷೆಯನ್ನು ಅನುಸರಿಸಿಯೇ ಎಲ್ಲರೂ ನಿರ್ಧರಿಸಿಕೊಳ್ಳಬೇಕು.

ಸಾಹಿತ್ಯಮುದ್ರಾ ಎಂದರೆ ಶಾಸ್ತ್ರೀಯವಿಷಯಗಳನ್ನು ಸಾಹಿತ್ಯಶಾಸ್ತ್ರದ ಅಲಂಕಾರಗಳನ್ನು ಬಳಸಿ ವಿವರಿಸುವುದು. ಋಗಾದಿಸಂಹಿತಾಗಳನ್ನು ವೇದಪುರುಷನ ಶರೀರವೆಂದು ಮತ್ತು ಉಪನಿಷತ್ತನ್ನು ಆತನ ಶಿರಸ್ಸೆಂದೂ ಇಲ್ಲಿ ವರ್ಣಿಸಲಾಗಿದೆ. ತಲೆಯು ಆಲೋಚಿಸಿ ಹೇಳುವುದನ್ನು ಶರೀರವು ಅನುಸರಿಸುವುದು ಲೌಕಿಕಸಂಗತಿಗಳಲ್ಲಿ ಪ್ರಸಿದ್ಧವಾಗಿದೆ. ವೇದರಾಶಿಯಲ್ಲಿ ಮುಖ್ಯವಾದ್ದರಿಂದ ಶಿರಃಸ್ಥಾನದಲ್ಲಿರುವ ಉಪನಿಷತ್ ತಪ್ತಮುದ್ರಾಧಾರಣವನ್ನು ಸ್ಪಷ್ಟವಾಗಿ ವಿಧಾನಮಾಡಿರುವುದರಿಂದ ಶರೀರಸ್ಥಾನದಲ್ಲಿರುವ ಗೋವಿಂದುರಾಯುಧಾನಿ ಬಿಭ್ರತ್ ಎಂಬ ಸಂಹಿತಾವಾಕ್ಯವೂ ಆ ಉಪನಿಷತ್ತಿನ ವಿಷಯವನ್ನೇ ವಿಧಾನಮಾಡಬೇಕು. ಇಲ್ಲಿ ಉಪನಿಷತ್ತನ್ನು ಶಿರಸ್ಸೆಂದೂ, ಸಂಹಿತಾವನ್ನು ಶರೀರವೆಂದೂ ವರ್ಣಿಸಿರುವುದರಿಂದ ರೂಪಕ ಅಲಂಕಾರವಾಗಿದೆ.

ತಪ್ತಮುದ್ರಾಂಕನವನ್ನು ವೇದಶಾಸ್ತ್ರವಿಹಿತವೆಂದು ಒಪ್ಪದವರು ಈ ಸಂಹಿತಾವಾಕ್ಯಕ್ಕೆ ತಮ್ಮ ಕಪೋಲಕಲ್ಪಿತವೇ ಆದ ವ್ಯಾಖ್ಯಾನವನ್ನು ಮಾಡುತ್ತಾರೆ. ಮತ್ತು ತಾವೂ

ಕಾಣ್ವಾನಾಂ ಸಾ ಶತಪಥಬ್ರಾಹ್ಮಣೇ ಕಿಲ ವರ್ತತೇ ।
ಯದ್ ವೇದಸ್ಯ ಶಿರೋ ವಕ್ತಿ ತದೇವ ಹಿ ವಪುರ್ಮತಮ್॥ ೬೪೦ ॥

ತಸ್ಮಾದಿಯಂ ಚ ವಾಕ್ ಸ್ತೌತಿ ತಪ್ತಚಕ್ರಾಯುಧಾಂಕನಮ್ ।
ಅಚಕ್ರಧಾರಿವ್ಯಾಖ್ಯಾದಿ ಪ್ರತ್ಯಾಖ್ಯಾನಚಿಕೀರ್ಷಯಾ ॥ ೬೪೧ ॥

**ಅರ್ಥ–** ಊರ್ಧ್ವಪುಂಡ್ರಂ= ಹಣೆಯಲ್ಲಿ ಧರಿಸುವ ನಾಮವು, ದ್ವಿರೇಖಂ= ಎರಡು ರೇಖೆಯುಳ್ಳದ್ದು ಭವತಿ= ಇರುತ್ತದೆ. ಚ= ಮತ್ತು, ವೈಷ್ಣವಃ= ವಿಷ್ಣುಭಕ್ತನು, ದ್ವಿಭುಜೇ= ಎರಡೂ ತೋಳುಗಳಲ್ಲಿ, ತಪ್ತಚಕ್ರಂ= ತಪ್ತಚಕ್ರವನ್ನು ಸದಾ= ಯಾವಾಗಲೂ, ಧಾರಯತಿ= ಧರಿಸುತ್ತಾನೆ. ಇತಿ= ಹೀಗೆ, ಕಾಚನ= ಒಂದು, ವೇದವಾಕ್= ವೇದವಾಕ್ಯವು, ಆಹ= ಹೇಳುತ್ತದೆ. ಸಾ= ಆ ವೇದವಾಕ್ಯವು, ಕಾಣ್ವಾನಾಂ= ಕಾಣ್ವಶಾಖೆಯ, (ಕಾಣ್ವಶಾಖಾದವರ) ಶತಪಥಬ್ರಾಹ್ಮಣೇ= ಶತಪಥಬ್ರಾಹ್ಮಣದಲ್ಲಿ, ವರ್ತತೇ ಕಿಲ= ಇದೆಯಷ್ಟೇ. ವೇದಸ್ಯ= ವೇದದ, ಶಿರಃ= ಶಿರಃ ಸ್ಥಾನೀಯವಾದ ಉಪನಿಷತ್ತು, ಯತ್= ಏನನ್ನು, ವಕ್ತಿ = ಹೇಳುತ್ತದೋ, ತತ್ ಏವ= ಅದೇ, ವಪುರ್ಮತಂ= ಶರೀರ ಸ್ಥಾನದಲ್ಲಿರುವ ವೇದದ ಅಭಿಪ್ರಾಯವೂ ಆಗಿರುತ್ತದೆ. ತಸ್ಮಾತ್= ಆದ್ದರಿಂದ, ಇಯಂ= ಈ, ವಾಕ್ ಚ= ವೇದವಾಕ್ಯವೂ ಕೂಡ, ಅಚಕ್ರಧಾರೀ= ತಪ್ತಮುದ್ರಾಧಾರಣೆಯನ್ನು ಮಾಡದವರ, ವ್ಯಾಖ್ಯಾ ಆದಿ= ವ್ಯಾಖ್ಯಾನ ಮತ್ತು ತಪ್ತಚಕ್ರಾಂಕನವನ್ನು ಮಾಡಿಸಿಕೊಳ್ಳದಿರುವಿಕೆ ಎಂಬ ಅನಾಚಾರ ಇವೆರಡರನ್ನು ಪ್ರತ್ಯಾಖ್ಯಾನಚಕೀರ್ಷಯಾ= ನಿರಾಕರಣಮಾಡುವ ಅಪೇಕ್ಷೆಯಿಂದ, ತಪ್ತಚಕ್ರಾಯುಧಾಂಕನಂ = ತಪ್ತಚಕ್ರಾದಿಧಾರಣವನ್ನು, ಸ್ತೌತಿ = ಪ್ರಶಂಸೆ ಮಾಡುತ್ತಿದೆ.

ಅನುವಾದ- ದ್ವಿರೇಖಮೂರ್ಧ್ವಪುಂಡ್ರಂ ಭವತಿ ।ತಪ್ತಚಕ್ರಂ ದ್ವಿಭುಜೇ ಧಾರಯತಿ ॥ ಎಂಬ ವೇದವಾಕ್ಯವು ಕಾಣ್ವಶಾಖೆಯ ಶತಪಥಬ್ರಾಹ್ಮಣದಲ್ಲಿದೆ.

ಇದು ಈಗಲೂ ವೈದಿಕರ ಪಾಠಕ್ರಮದಲ್ಲಿ ಇದೆ. ಅದನ್ನು ಮೂಲಕಾರರು ದ್ವಿರೇಖಮೂರ್ಧ್ವಪುಂಡ್ರಂ ಎಂಬ ಶ್ಲೋಕದಿಂದ ತಿಳಿಸುತ್ತಿದ್ದಾರೆ ಮತ್ತು ದ್ವಿಭುಜೇ ಎಂಬ ಪದದಿಂದ -

ದಕ್ಷಿಣೇ ತು ಭುಜೇ ವಿಪ್ರೋ ಬಿಭೃಯಾದ್ವೈ ಸುದರ್ಶನಂ ।
ಸವ್ಯೇ ತು ಶಂಖಂ ಬಿಭೃಯಾದಿತಿ ಬ್ರಹ್ಮವಿದೋ ವಿದುಃ ॥

ಎಂಬ ಸ್ಮೃತಿವಾಕ್ಯವನ್ನೂ ತಿಳಿಸುತ್ತಿದ್ದಾರೆ.

ಸ್ಮೃತಿವಾಕ್ಯದ ಅರ್ಥ- ಬ್ರಾಹ್ಮಣನು ಬಲತೋಳಿನಲ್ಲಿ ಚಕ್ರವನ್ನು ಮತ್ತು ಎಡತೋಳಿನಲ್ಲಿ ಶಂಖವನ್ನು ಧರಿಸಬೇಕೆಂದು ಜ್ಞಾನಿಗಳು ಹೇಳುತ್ತಾರೆ.

ಚಕ್ರ, ಶಂಖಗಳೆರಡೂ ದೊರೆಯದಿದ್ದಾಗ ಚಕ್ರಧಾರಣವನ್ನೇ ಆದರೂ ಮಾಡಿಕೊಳ್ಳಬೇಕು. ಏಕೆಂದರೆ ಚಕ್ರಶಂಖಗಳಲ್ಲಿ ಚಕ್ರವೇ ಮುಖ್ಯವಾದದ್ದು ಎಂಬುದು ಶತಪಥಬ್ರಾಹ್ಮಣದ ಅಭಿಪ್ರಾಯ. ಇದೇ ಅಭಿಪ್ರಾಯವು ಹಿಂದೆ ಹೇಳಿದ ಶೃಗಾಲೋಪನಿಷತ್‌ಗೂ ಇರುವುದರಿಂದ ಅದೂ ಶೃತಚಕ್ರಧಾರೀ ಎಂದು ಮಾತ್ರ ಹೇಳಿದೆ. ಪವಿತ್ರಂ ತೇ ವಿತತಂ ಇತ್ಯಾದಿ ಸಂಹಿತಾವಾಕ್ಯಗಳೂ ಪವಿತ್ರ - ಸುದರ್ಶನಚಕ್ರಧಾರಣವನ್ನೇ ಪ್ರಶಂಸಿಸಿವೆ.

ಚಮೂಷಚ್ಛ್ಯೇನ ಎಂಬ ವೇದವಾಕ್ಯದಲ್ಲಿ ಆಯುಧಾನಿ ಬಿಭ್ರತ್ ಎಂಬಲ್ಲಿ ಆಯುಧಾನಿ ಎಂದು ಬಹುವಚನಪ್ರಯೋಗಮಾಡಿರುವುದರಿಂದ ಭಗವಂತನ ನಾಲ್ಕು ಆಯುಧಗಳಾದ ಚಕ್ರ, ಶಂಖ, ಗದಾ, ಪದ್ಮಗಲೆಲ್ಲವನ್ನೂ ಧಾರಣ ಮಾಡುವುದೂ ಶಾಸ್ತ್ರಸಂಮತವಾಗಿದೆ. ಇದಲ್ಲದೇ ಹಿಂದೆ ಹೇಳಿದ ದಕ್ಷಿಣೇತು ಭುಜೇ ವಿಪ್ರಃ ಎಂಬ ಸ್ಮೃತಿವಾಕ್ಯದನುಸಾರವಾಗಿ ಚಕ್ರ, ಶಂಖಗಳೆಂಬ ಎರಡೇ ಆಯುಧಗಳನ್ನು ಧಾರಣಮಾಡುವುದೂ ಶಾಸ್ತ್ರಸಂಮತವಾಗಿದೆ. ಹಾಗಾಗಿ ತಪ್ತಮುದ್ರಾಧಾರಣೆಯನ್ನು ಮಾಡಿಸಿಕೊಳ್ಳದಿದ್ದರೆ ದೋಷಬರುತ್ತದೆಯೆಂದು ಹೇಳುವುದಷ್ಟೇ ಶ್ರುತಿಸ್ಮೃತಿಗಳ ಉದ್ದೇಶವಾಗಿದೆ. ಚಕ್ರ, ಶಂಖ, ಗದಾ ಪದ್ಮಗಳೆಂಬ ನಾಲ್ಕೂ ತಪ್ತಮುದ್ರಾಗಳನ್ನು ಅಥವಾ ಚಕ್ರಶಂಖಗಳೆಂಬ ಎರಡೇ ತಪ್ತಮುದ್ರಾಗಳನ್ನು ಎಷ್ಟುಸಂಖ್ಯೆಯಲ್ಲಿ ಯಾವ ಭಾಗಗಳಲ್ಲಿ ಧಾರಣೆ ಮಾಡಬೇಕೆಂದು ತಮ್ಮ ತಮ್ಮ ಸಂಪ್ರದಾಯಗಳನ್ನು ಮತ್ತು ಅಪೇಕ್ಷೆಯನ್ನು ಅನುಸರಿಸಿಯೇ ಎಲ್ಲರೂ ನಿರ್ಧರಿಸಿಕೊಳ್ಳಬೇಕು.

ಸಾಹಿತ್ಯಮುದ್ರಾ ಎಂದರೆ ಶಾಸ್ತ್ರೀಯವಿಷಯಗಳನ್ನು ಸಾಹಿತ್ಯಶಾಸ್ತ್ರದ ಅಲಂಕಾರಗಳನ್ನು ಬಳಸಿ ವಿವರಿಸುವುದು. ಋಗಾದಿಸಂಹಿತಾಗಳನ್ನು ವೇದಪುರುಷನ ಶರೀರವೆಂದು ಮತ್ತು ಉಪನಿಷತ್ತನ್ನು ಆತನ ಶಿರಸ್ಸೆಂದೂ ಇಲ್ಲಿ ವರ್ಣಿಸಲಾಗಿದೆ. ತಲೆಯು ಆಲೋಚಿಸಿ ಹೇಳುವುದನ್ನು ಶರೀರವು ಅನುಸರಿಸುವುದು ಲೌಕಿಕಸಂಗತಿಗಳಲ್ಲಿ ಪ್ರಸಿದ್ಧವಾಗಿದೆ. ವೇದರಾಶಿಯಲ್ಲಿ ಮುಖ್ಯವಾದ್ದರಿಂದ ಶಿರಃಸ್ಥಾನದಲ್ಲಿರುವ ಉಪನಿಷತ್ ತಪ್ತಮುದ್ರಾಧಾರಣವನ್ನು ಸ್ಪಷ್ಟವಾಗಿ ವಿಧಾನಮಾಡಿರುವುದರಿಂದ ಶರೀರಸ್ಥಾನದಲ್ಲಿರುವ ಗೋವಿಂದುರಾಯುಧಾನಿ ಬಿಭ್ರತ್ ಎಂಬ ಸಂಹಿತಾವಾಕ್ಯವೂ ಆ ಉಪನಿಷತ್ತಿನ ವಿಷಯವನ್ನೇ ವಿಧಾನಮಾಡಬೇಕು. ಇಲ್ಲಿ ಉಪನಿಷತ್ತನ್ನು ಶಿರಸ್ಸೆಂದೂ, ಸಂಹಿತಾವನ್ನು ಶರೀರವೆಂದೂ ವರ್ಣಿಸಿರುವುದರಿಂದ ರೂಪಕ ಅಲಂಕಾರವಾಗಿದೆ.

ತಪ್ತಮುದ್ರಾಂಕನವನ್ನು ವೇದಶಾಸ್ತ್ರವಿಹಿತವೆಂದು ಒಪ್ಪದವರು ಈ ಸಂಹಿತಾವಾಕ್ಯಕ್ಕೆ ತಮ್ಮ ಕಪೋಲಕಲ್ಪಿತವೇ ಆದ ವ್ಯಾಖ್ಯಾನವನ್ನು ಮಾಡುತ್ತಾರೆ. ಮತ್ತು ತಾವೂ

**ಹೀಗೆ ಚಮೂಷತ್ ಎಂಬ ವೇದವಾಕ್ಯಕ್ಕೆ ಈ ಎಲ್ಲ ಅರ್ಥಗಳನ್ನೂ ಹೇಳಬಹುದಾಗಿದೆ-**

**ಸ್ವರೇಣ ಪ್ರಣವಾಖ್ಯೇನ ಮಂತ್ರೇಣ ಹೃದಿಗಂ ಸದಾ ।**
**ಪರತಶ್ಚ ಪರಂ ದೇವಂ ಮಹತಶ್ಚ ಮಹತ್ತರಮ್ ॥ ೬೩೬ ॥**

**ಧೃತೋರ್ಧ್ವಪುಂಡ್ರಃ ಶ್ರುತಸಚ್ಚಕ್ರಧಾರೀ ಹಯಃ ಪುಮಾನ್।**
**ವಿಷ್ಣುಂ ಧ್ಯಾಯತಿ ಸರ್ವತ್ರ ಸ ಮಹಾತ್ಮೇತಿ ಸಾಂಪ್ರತಮ್ ॥ ೬೩೭ ॥**

**ಪ್ರಸಿದ್ಧೋಪನಿಷಚ್ಚಾಹ ಶ್ರಪಾಕ ಇತಿ ಧಾತುತಃ ।**
**ತಪ್ತಚಕ್ರಾಂಕೋರ್ಧ್ವಪುಂಡ್ರಧೃತಿಸ್ತುತಿಪರಾ ಸ್ಫುಟಮ್ ॥ ೬೩೮ ॥**

**ಅರ್ಥ–** ಯಃ= ಯಾವ, ಪುಮಾನ್= ಪುರುಷನು, ಧೃತೋರ್ಧ್ವಪುಂಡ್ರಃ= ಊರ್ಧ್ವಪುಂಡ್ರವನ್ನು ಧರಿಸಿದವನಾಗಿ, ಚ= ಮತ್ತು, ಶೃತಚಕ್ರಧಾರೀ ಸನ್= ತಪ್ತಚಕ್ರಾದಿಧಾರಣೆಯನ್ನು ಮಾಡಿಕೊಂಡವನಾಗಿ, ಪ್ರಣವಾಖ್ಯೇನ= ಓಂಕಾರವೆಂಬ, ಮಂತ್ರೇಣ= ಮಂತ್ರರೂಪವಾದ, ಸ್ವರೇಣ= ಶಬ್ದದಿಂದ, ಹೃದಿಗಂ= ಹೃದಯ ಗುಹಾಂತರ್ಯಾಮಿಯಾದ, ಪರತಃ ಚ ಪರಂ= ಎಲ್ಲ ಶ್ರೇಷ್ಠವಸ್ತುಗಳಿಗಿಂತ ಶ್ರೇಷ್ಠನಾದ, ಮಹತಃ ಚ ಮಹತ್ತರಂ= ಎಲ್ಲ ದೊಡ್ಡವಸ್ತುಗಳಿಗಿಂತ ದೊಡ್ಡವನಾದ, ದೇವಂ= ಲೀಲಾದಿಗುಣವಿಶಿಷ್ಟನಾದ, ವಿಷ್ಣುಂ= ಶ್ರೀಹರಿಯನ್ನು, ಸದಾ= ಯಾವಾಗಲೂ, ಸರ್ವತ್ರ= ಎಲ್ಲಾ ಅವಸ್ಥೆಗಳಲ್ಲಿಯೂ, ಧ್ಯಾಯತಿ= ಧ್ಯಾನಮಾಡುತ್ತಾನೆಯೋ, ಸಃ = ಅವನು, ಮಹಾತ್ಮಾ= ಮಹಾಪುರುಷನು, ಇತಿ= ಎಂಬುದಾಗಿ, ತಪ್ತಚಕ್ರಾಂಕೋರ್ಧ್ವಪುಂಡ್ರಧೃತಿ–ಸ್ತುತಿಪರಾ= ತಪ್ತಮುದ್ರಾಧಾರಣೆಯ ಮತ್ತು ಊರ್ಧ್ವಪುಂಡ್ರಧಾರಣೆಯ ಪ್ರಶಂಸೆಯನ್ನು ಮಾಡುತ್ತಿರುವ, ಇಹ = ಈ ದೇಶದಲ್ಲಿ (ಸೌರಾಷ್ಟ್ರದೇಶದಲ್ಲಿ) ಸಾಂಪ್ರತಂ= ಈಗಲೂ, ಪ್ರಸಿದ್ಧಾ= ವೈದಿಕರಲ್ಲಿ ಬಳಕೆಯಲ್ಲಿರುವ, ಉಪನಿಷತ್ ಚ= ಶೃಗಾಲೋಪನಿಷತ್ ಕೂಡ, ಸ್ಫುಟಂ= ಸ್ಪಷ್ಟವಾಗಿ, ಪ್ರಾಹ= ಹೇಳುತ್ತಿದೆ. ಶ್ರಪಾಕೇ ಇತಿ ಧಾತುತಃ = ಕಾಯಿಸುವಿಕೆ ಎಂಬರ್ಥದಲ್ಲಿ ಶ್ರ ಎಂಬ ಧಾತುವಿರುವುದರಿಂದ, ಇಯಂ= ಈ ಶೃಗಾಲೋಪನಿಷತ್, ತಪ್ತಚಕ್ರಾಂಕೋರ್ಧ್ವಪುಂಡ್ರ ಧೃತಿಸ್ತುತಿಪರಾ= ತಪ್ತಮುದ್ರಾಧಾರಣೆಯ ಮತ್ತು ಊರ್ಧ್ವಪುಂಡ್ರಧಾರಣೆಯ ಪ್ರಶಂಸೆಯನ್ನು ಮಾಡುತ್ತಿದೆಯೆಂಬ ವಿಷಯವು, ಸ್ಫುಟಂ ಅಸ್ತಿ= ಸ್ಪಷ್ಟವಾಗಿದೆ.

**ಅನುವಾದ– ಧೃತೋರ್ಧ್ವಪುಂಡ್ರಶ್ಮೃತಚಕ್ರಧಾರೀ ವಿಷ್ಣುಂ ಪರಂ ಧ್ಯಾಯತಿ ಯೋ ಮಹಾತ್ಮಾ । ಸ್ವರೇಣ ಮಂತ್ರೇಣ ಸದಾ ಹೃದಿಸ್ಥಂ ಪರಾತ್ಪರಂ ಯನ್ಮಹತೋ ಮಹಾಂತಂ ॥ ಎಂಬ ಶೃಗಾಲೋಪನಿಷತ್‌ನ ವಾಕ್ಯವನ್ನು ಇಂದಿಗೂ ಸೌರಾಷ್ಟ್ರಮೊದಲಾದ ಪ್ರದೇಶಗಳ ವೈದಿಕರು ಪಠಿಸುತ್ತಾರೆ. ಈ ಮಂತ್ರವು**

ತಪ್ತಮುದ್ರಾಧಾರಣದ ಮತ್ತು ಊರ್ಧ್ವಪುಂಡ್ರಧಾರಣದ ಮಹತ್ವವನ್ನು ಪ್ರಶಂಸಿಸುತ್ತಿದೆ. ಇದನ್ನೇ ಮೂಲಕಾರರು ತಮ್ಮ ಶ್ಲೋಕದಲ್ಲಿ ಅರ್ಥತಃ ಹೇಳುತ್ತಿದ್ದಾರೆ.

**ಅರ್ಥ-** ಯಾರು ತಪ್ತಮುದ್ರಾಧಾರಣವನ್ನು ಮತ್ತು ಊರ್ಧ್ವಪುಂಡ್ರಧಾರಣವನ್ನು ಮಾಡಿಕೊಂಡು ಪರಾತ್ ಪರನಾದ ಮಹತೋ ಮಹೀಯನಾದ ಹೃದಯಗುಹಾಂತರ್ಯಾಮಿಯಾದ ವಿಷ್ಣುವನ್ನು ಪ್ರಣವಮಂತ್ರದಿಂದ ಧ್ಯಾನಿಸುತ್ತಾನೋ ಆತನು ಮಹಾತ್ಮನೇ ಆಗಿದ್ದಾನೆ.

**ಭಾವವಿಲಾಸಿನೀ–** ಇದಾನೀಂ ಧೃತೋರ್ಧ್ವಪುಂಡ್ರಃ ಶ್ರುತಚಕ್ರಧಾರೀ ವಿಷ್ಣುಂ ಪರಂ ಧ್ಯಾಯತಿ ಯೋ ಮಹಾತ್ಮಾ । ಸ್ವರೇಣ ಮಂತ್ರೇಣ ಸದಾ ಹೃದಿಸ್ಥಂ ಪರಾತ್ಪರಂ ಯನ್ ಮಹತೋ ಮಹಾಂತಮಿತಿ ಸ್ಪಷ್ಟಂ ತಪ್ತಚಕ್ರೋರ್ಧ್ವಪುಂಡ್ರಾಧಾರಣ ಪ್ರತಿಪಾದಕಂ ಸೃಗಾಲೋಪ-ನಿಷದ್ವಾಕ್ಯಮರ್ಥತೋ ಗೃಹ್ಣಾತಿ ॥ ಸ್ವರೇಣೇತಿ ॥ ಶೃಪಾಕ ಇತಿ ಧಾತೋಃ ಶ್ರುತಚಕ್ರಧಾರೀ ತಪ್ತಚಕ್ರಧಾರೀತ್ಯರ್ಥಃ । ಇಹ ಲೋಕೇ । ಇಹೇತಿ ಸದಿತಿ ಚ ಪದಂ ಛಂದೋಭಂಗ-ಪರಿಹಾರಾರ್ಥಮ್ । ಸಾಂಪ್ರತಂ ಪ್ರಸಿದ್ಧಾ । ಅದ್ಯಾಪಿ ಸೌರಾಷ್ಟ್ರದೇಶಾದೌ ವೈದಿಕೈಃ ಪಠ್ಯ-ಮಾನೇತ್ಯರ್ಥಃ ॥ ೬೩೬-೬೩೮ ॥

**ವಿವರಣೆ–** 637 ಶ್ಲೋಕದಲ್ಲಿ ಪೂರ್ವಾರ್ಧದಲ್ಲಿ ಶೃತಸಚ್ಚಕ್ರ ಎಂಬಲ್ಲಿನ ಸತ್ ಎಂಬ ಪದವು ಮತ್ತು ಧಾರೀಹ ಯಃ ಪುಮಾನ್ ಎಂಬಲ್ಲಿನ ಇಹ ಪದವು ಇವೆರಡು ಮೂಲಶ್ರುತಿವಾಕ್ಯದಲ್ಲಿ ಇಲ್ಲ. ಯುಕ್ತಿಮಲ್ಲಿಕಾದ ಶ್ಲೋಕದಲ್ಲಿ ಛಂದೋಭಂಗಪರಿಹಾರದ ಉದ್ದೇಶದಿಂದ ಅವುಗಳನ್ನು ಬಳಸಲಾಗಿದೆ. ಆದರೆ ಅವುಗಳನ್ನು ಸೇರಿಸಿಯೇ ಅರ್ಥತಾತ್ಪರ್ಯಗಳನ್ನು ಹೇಳಬಹುದಾಗಿದೆ.

ಶೃಪಾಕೇ ಎಂಬ ಧಾತುವು ಪ್ರಚಲಿತಪಾಣಿನೀಯ ಧಾತುಪಾಠದಲ್ಲಿ ಇರುವುದಿಲ್ಲ. ಶ್ರಾಪಾಕೇ ಎಂಬ ಧಾತುವಿದೆ (ಧಾತುಸಂಖ್ಯಾ -1053)ಯಾದರೂ ಆ ಧಾತುವಿನ ಕ್ತಪ್ರತ್ಯಯಾಂತರೂಪವಾದ ಶೃತ ಎಂಬ ಅರ್ಥದಲ್ಲಿ ಮಾತ್ರ ಶೃತಂ ಪಾಕೇ ಎಂಬ (ಸೂತ್ರ ಸಂಖ್ಯಾ - 3067 - 6-1-27) ಪಾಣಿನಸೂತ್ರದಿಂದ ನಿಪಾತರೂಪದಲ್ಲಿ ಹೇಳಲ್ಪಟ್ಟಿದೆ. ಹಾಗಾಗಿ ತಪ್ತಚಕ್ರವೆಂಬ ಅರ್ಥದಲ್ಲಿ ಶೃತ ಎಂಬ ರೂಪವು ಆರ್ಷಪ್ರಯೋಗವೆಂದೇ ಹೇಳಬೇಕು. ಇಂಥವೇ ಪ್ರಯೋಗಗಳು ರಾಮಾಯಣದಲ್ಲಿ ಅಯಂ ಸರ್ವಃ ಸಮಸ್ತಾಂಗಶ್ಶೃತ ಕೃಷ್ಣಮೃಗೋ ಮಯಾ, ಮತ್ತು ಭರತಮುನಿಯ ವಾಕ್ಯಗಳಲ್ಲಿ ಶೃತಮನ್ನಂ ವಿವರ್ಜಯೇತ್ ಎಂಬಲ್ಲಿ ಕಂಡು ಬರುತ್ತವೆ.

ದ್ವಿರೇಖಮೂರ್ಧ್ವಪುಂಡ್ರಂ ಚ ಭವತಿ ದ್ವಿಭುಜೇ ಸದಾ ।
ತಪ್ತಚಕ್ರಂ ಧಾರಯತೀತ್ಯಾಹ ಕಾಚನ ವೇದವಾಕ್ ॥ ೬೩೯ ॥

ಎಲ್ಲರಿಗೂ ಚಕ್ರಾದ್ಯಾಯುಧಗಳನ್ನು ಧಾರಣೆ ಮಾಡುವ ಅಧಿಕಾರವಿದೆಯೆಂದು ಸಿದ್ಧವಾಗುತ್ತದೆ.

ಅಗಸ್ತ್ಯಋಷಿಪರವಾದ ಅರ್ಥ - ಚಮೂಷತ್ = ಭಗವದ್ಭಕ್ತರ ಸಮೂಹದಲ್ಲಿರುವ, ಶ್ಯೇನಃ = ಭಗವಂತನ ದಾಸರಾದ, ಶಕುನಃ = ತಮ್ಮ ಶಿಷ್ಯರಿಗೆ ಭಗವಂತನ ಬಗ್ಗೆ ಉಪದೇಶಿಸುವ, ವಿಭೃತ್ವಾ = ವೇದಾರ್ಥವಿಶಾರದರಾದ, ಗೋವಿಂದುಃ ಆಯುಧಾನಿ ಬಿಭ್ರತ್ = ಭಗವಂತನ ಚಕ್ರಾದ್ಯಾಯುಧಗಳನ್ನು ಧರಿಸಿರುವ, ದ್ರಪ್ಸಃ = ತಮ್ಮ ಶಿಷ್ಯರ ಬಗ್ಗೆ ಕರುಣೆಯುಳ್ಳ , ಅಪಾಂ ಊರ್ಮಿಂ ಸಮುದ್ರಂ = ನೀರಿನ ತರಂಗಗಳಿಂದ ಕೂಡಿದ ಸಮುದ್ರವನ್ನು ಸಚಮಾನಃ = ತನ್ನ ಬೊಗಸೆಯಿಂದ ಕುಡಿಯುವ ಮೂಲಕ (ಸಂಹರಿಸಿದ) ಮುಗಿಸಿದ, ಮಹಿಷಃ = ಋಷಿಶ್ರೇಷ್ಠನಾದ ಅಗಸ್ತ್ಯನು,ತುರೀಯಂ ಧಾಮ ವಿವಕ್ತಿ = ಭಗವಂತನನ್ನು ಸಾಕ್ಷಾತ್ಕರಿಸಿಕೊಂಡಿದ್ದಾನೆ.

ವರುಣಪರವಾದ ಅರ್ಥ - ಚಮೂಷತ್, ಶ್ಯೇನಃ ಇತ್ಯಾದಿಪದಗಳನ್ನು ವರುಣನಿಗೂ ಅನ್ವಯಿಸಿ, ಸಮುದ್ರಂ = ಸಮುದ್ರವನ್ನು ಸಚಮಾನಃ = ಅಭಿಮಾನಿಯಾಗಿ ಸಂಬಂಧಿಸುತ್ತಿರುವ (ಪಾಲಿಸುತ್ತಿರುವ) ವರುಣನು ಭಗವತ್ಸಾಕ್ಷಾತ್ಕಾರ ಪಡೆದಂತಹವನಾಗಿದ್ದಾನೆ.

ಗಂಗಾದಿನದೀದೇವತಾ - ಶಕುನಃ = ತಮ್ಮಲ್ಲಿ ಸ್ನಾನಪಾನಾದಿಗಳನ್ನು ಮಾಡುವ ಭಕ್ತಜನರಿಗೆ ಮುಕ್ತಿಮಾರ್ಗವನ್ನು ತೋರಿಸುವ, ಸಮುದ್ರಂ = ಸಮುದ್ರವನ್ನು ಸಚಮಾನಃ = ಸೇರಿಕೊಳ್ಳುವ ಗಂಗಾನದೀದೇವತೆಗಳು ಭಗವತ್ಸಾಕ್ಷಾತ್ಕಾರಪಡೆದವರಾಗಿದ್ದಾರೆ.

ಭಾರತೀ,ಸರಸ್ವತೀ ಪರವಾದ ಅರ್ಥ - ಅಪಾಂ ಊರ್ಮಿಂ ಸಮುದ್ರಂ = ವೇದಾದಿಶಾಸ್ತ್ರವೆಂಬ ಸಮುದ್ರಕ್ಕೆ (ಸಮುದ್ರವನ್ನು) ಸಚಮಾನಃ = ಅಭಿಮಾನಿಯಾಗಿರುವ ಪ್ರಯುಕ್ತ ಸಂಬಂಧಿಯಾಗಿರುವ, ಭಾರತೀ, ಸರಸ್ವತೀ ಮೊದಲಾದ ದೇವತಾಸ್ತ್ರೀಸಮುದಾಯವು ಭಗವದಪರೋಕ್ಷಿಯಾಗಿದೆ.

ಚತುರ್ಮುಖ ಬ್ರಹ್ಮ - ಅಪಾಂ = ಗಂಗಾನದಿಯ ಜಲದ, ಊರ್ಮಿಂ = ತರಂಗವನ್ನು (ತರಂಗಗಳಿಂದ ಕೂಡಿದ ಪ್ರವಾಹವನ್ನು) ಹರಿಯಪಾದಗಳನ್ನು ತೊಳೆಯುವ ಮೂಲಕ ಪವಿತ್ರಗೊಳಿಸಿ, ಸಮುದ್ರಂ = ಅಂತರಂಗದಲ್ಲಿ ವೈಷ್ಣವೋತ್ತಮನಾಗಿದ್ದರೂ ಬಹಿರಂಗದಲ್ಲಿ ಜಟಾ ಭಸ್ಮಾದಿ ಅವೈದಿಕ ಚಿಹ್ನೆ - ಮುದ್ರೆಗಳನ್ನು ಧರಿಸಿರುವ ತನ್ನ ಮಗನಾದ ಶಿವನನ್ನು ಪಾವನಗೊಳಿಸಲಿಕ್ಕಾಗಿ, ಸಚಮಾನಃ = ಭಗೀರಥನ ಪ್ರಾರ್ಥನಾನುಸಾರವಾಗಿ ಹಿಂದೆ ಹೇಳಿದ ಪವಿತ್ರಗಂಗಾಜಲವನ್ನು ಹರನ ಮುಡಿಯಲ್ಲಿ ಬಂದು ಬಿದ್ದ ಬಳಿಕ ಭೂಲೋಕಕ್ಕೆ ಸಾಗುವಂತೆ ಮಾಡಿದ ಚತುರ್ಮುಖನು ಭಗವತ್ಸಾಕ್ಷಾತ್ಕಾರವುಳ್ಳವನಾಗಿದ್ದಾನೆ.

ಶಿವಪರವಾದ ಅರ್ಥ - ತವ ಶ್ರಿಯೇ ಮರುತೋ ಮರ್ಜಯಂತ ಎಂಬ ಶ್ರುತಿಯಲ್ಲಿ ವರ್ಣಿಸಿದಂತೆ ಅಪಾಂ ಊರ್ಮಿಂ = ತನ್ನ ಜಟೆಯಲ್ಲಿ ಬಂಧಿತಳಾಗಿದ್ದ ಗಂಗಾನದಿಯನ್ನು ಭಗೀರಥನ ಪ್ರಾರ್ಥನೆಯಂತೆ, ಸಮುದ್ರಂ = ಸಮುದ್ರವನ್ನು (ಸಮುದ್ರದ ಕಡೆಗೆ) ಸಚಮಾನಃ = ಹರಿಯಲು ಬಿಟ್ಟು

ಅಥವಾ

ಏವಮಾತ್ಮಭುವಾऽऽದಿಷ್ಟಃ ಪರಿಕ್ರಮ್ಯ ಗಿರಾಂ ಪತಿಂ ।
ಬಾಢಮಿತ್ಯಭ್ಯುಪಾಮಂತ್ರ್ಯ ವಿವೇಶ ತಪಸೇ ವನಂ ॥ (ಭಾಗವತ ೩-೧೨-೨೦)

(ಅರ್ಥ - ತಪಸ್ಸನ್ನು ಮಾಡೆಂದು ಚತುರ್ಮುಖನಿಂದ ಆದೇಶಿಸಲ್ಪಟ್ಟ ಶಿವನು ತಪಸ್ಸಿಗಾಗಿ ಅಪಾಂ ಊರ್ಮಿಂ ಸಮುದ್ರಂ = ಘನೋದಕಸಮುದ್ರವನ್ನು ಕುರಿತು ಸಾಗಿದ), ಬಹಿರಂಗದಲ್ಲಿ ಅವೈದಿಕ ಚಿಹ್ನೆಗಳುಳ್ಳವನಾದರೂ ಅಂತರಂಗದಲ್ಲಿ ಭಗವಂತನ ಚಕ್ರಾದ್ಯಾಯುಧಗಳನ್ನು ಧರಿಸಿದ ಶಿವನು ಭಗವಂತನ ಸಾಕ್ಷಾತ್ಕಾರವುಳ್ಳವನಾಗಿದ್ದಾನೆ.

ಮೇಲಿನ ಭಾಗವತದ ಶ್ಲೋಕದ ಉತ್ತರಾರ್ಧದಲ್ಲಿ ವನ ಶಬ್ದಕ್ಕೆ ಜಲ ಎಂಬ ಅರ್ಥವನ್ನು ಹೇಳಿದರೆ ಮಾತ್ರ ಸುರೋತ್ತಮೀಯಟೀಕಾದಲ್ಲಿರುವ ತಪಸ್ಸಿಗಾಗಿ ಘನೋದಕಸಮುದ್ರಕ್ಕೆ ಸಾಗಿದ ಎಂದು ಹೇಳಿಕೆಗೆ ಹೊಂದಾಣಿಕೆಯಾಗುತ್ತದೆ. ವಿಜಯಧ್ವಜೀಯ ಭಾಗವತವ್ಯಾಖ್ಯಾನದಲ್ಲಿ ಹಾಗೆಯೇ ಹೇಳಲಾಗಿದೆ.

ಮುಕ್ತಜೀವಪರವಾದ ಅರ್ಥ - ಸಮುದ್ರಂ= ಮುಕ್ತರ ಸ್ಥಾನವಾದ ಶ್ವೇತದ್ವೀಪದಲ್ಲಿರುವ, ಲಕ್ಷ್ಮೀರೂಪಗಳಾದ ಅರ ಮತ್ತು ಣ್ಯ ಗಳೆಂಬ ಸಮುದ್ರದಂತಹ (ಸರೋವರಗಳನ್ನು ) ಸರೋವರಗಳ, ಸಚಮಾನಃ ಸಂಬಂಧವನ್ನು ಪಡೆದು ಮುಕ್ತಜೀವಗಣವು ಭಗವದಪರೋಕ್ಷಿಯಾಗಿದೆ.

ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ (ಛಾಂದೋಗ್ಯೋಪನಿಷತ್ ಐದನೆಯ ಖಂಡ - 8-5-3)

ಪರಸ್ಯ ಬ್ರಹ್ಮಣೋ ಲೋಕೇ ಶ್ವೇತದ್ವೀಪಾಭಿಧೇ ಪರೇ ।
ಅರಣ್ಯೌ ಚಾರ್ಣವೌ ದಿವ್ಯೌ ಚಿದಾನಂದರಸಾತ್ಮಕೌ ॥
(ಛಾಂದೋಗ್ಯ ಭಾಷ್ಯ ಐದನೆಯ ಖಂಡ)

ಬ್ರಹ್ಮಸೂತ್ರಭಾಷ್ಯ - ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ - ದಹರಾಧಿಕರಣ.

ಬ್ರಹ್ಮಸೂತ್ರ - ಓಂ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ಓಂ (1-3-15)

ತಪ್ತಮುದ್ರಾಂಕನವನ್ನು ಮಾಡಿಸಿಕೊಳ್ಳುವುದಿಲ್ಲ. ಅಂಥವರ ವ್ಯಾಖ್ಯಾನ ಮತ್ತು ತಪ್ತಮುದ್ರಾಂಕನದ ಅಧಾರಣವೆಂಬ ಅನಾಚಾರ ಇವೆರಡನ್ನೂ ಖಂಡಿಸಿ ತಪ್ತಮುದ್ರಾಂಕನವನ್ನು ವಿಧಾನಮಾಡುವ ತಾತ್ಪರ್ಯ ಗೋವಿಂದುರ್ದೃಪ್ತ ಆಯುಧಾನಿ ಬಿಭೃತ್ ಎಂಬ ಈ ಸಂಹಿತಾವಾಕ್ಯಕ್ಕೆ ಇದೆ.

**ಭಾವವಿಲಾಸಿನೀ**– ದ್ವಿರೇಖಮೂರ್ಧ್ವಪುಂಡ್ರಂ ಚೇತ್ಯನೇನ ದ್ವಿರೇಖಮೂರ್ಧ್ವಪುಂಡ್ರಂ ಭವತಿ ತಪ್ತಂ ಚಕ್ರಂ ದ್ವಿಭುಜೇ ಧಾಯತೀತಿ ಕಾಣ್ವಾನಾಂ ಶತಪಥಾಖ್ಯಬ್ರಾಹ್ಮಣೇ ಅದ್ಯಾಪಿ ವೈದಿಕೈಃ ಪಠ್ಯಮಾನಂ ಊರ್ಧ್ವಪುಂಡ್ರತಪ್ತಚಕ್ರಧಾರಣೇ ತಾತ್ಪರ್ಯದ್ಯೋತನಾಯ ಏಕಪ್ರಕಾರೇಣೈವಾ-ಸಕೃದಭ್ಯಸ್ತಂ ವಾಕ್ಯಂ ಗೃಹ್ಣಾತಿ– **ಧಾಯಯತೀತಿ** ॥ ಧಾರಯತೀತ್ಯರ್ಥಃ । ದ್ವಿಭುಜ ಇತ್ಯನೇನ । ಉಭಯಲಾಭೇ ಚಕ್ರಲಾಂಛನಸ್ಯೈವ ಮುಖ್ಯತ್ವಾತ್ ತದ್ಧಾರಣಮೇವ ವಿಹಿತಮಿತಿ ಸೂಚಿತಮ್ । ಅತ ಏವ ಪೂರ್ವಾಪ್ಯುಪನಿಷತ್ ಶ್ರುತಚಕ್ರಧಾರೀತ್ಯೇವಾಹ । ಸಂಹಿತಾವಾಕ್ಯಾನ್ಯಪಿ ಪವಿತ್ರಪದ-ವಾಚ್ಯ ಸುದರ್ಶನಾಧಾರಣಮೇವ ಸ್ತುವಂತಿ । ಗೋವಿಂದುರಾಯುಧಾನಿ ಬಿಭ್ರದಿತಿ ವಚನಾ-ಚ್ಚತುರಾಯುಧಧಾರಣಮಪಿ ನ್ಯಾಯಮ್ ।

ದಕ್ಷಿಣೇ ತು ಭುಜೇ ವಿಪ್ರೋ ಬಿಭೃಯಾದ್ವೈ ಸುದರ್ಶನಮ್ । ಸವ್ಯೇ ತು ಶಂಖಂ ಬಿಭೃಯಾದಿತಿ ಬ್ರಹ್ಮವಿದೋ ವಿದುಃ ॥ ಇತಿ ಸ್ಮೃತ್ಯನುಸಾರೇಣಾಯುಧದ್ವಯಧಾರಣಮಪಿ ವಿಹಿತಮ್ । ಅತಃ ಶ್ರುತಿಸ್ಮೃತೀನಾಂ ತಪ್ತಚಕ್ರಾಂಕರಹಿತ ಪುರುಷನಿಂದನ ಏವ ಮಹಾನ್ ಭರಃ । ಧಾರಣಂ ತು ಯಥಾರುಚಿ ಕರ್ತವ್ಯಮಿತಿ ಭಾವಃ । ಸಾಹಿತ್ಯಮುದ್ರಾಯಾ ಸಂಹಿತೋಪನಿಷದೋರೈಕಾರ್ಥ್ಯಂ ಸಂಪಾದಯತಿ–ಯದಿತಿ ॥ ವೇದಸ್ಯ ಶಿರಃ ಉಪನಿಷತ್ । ವಪುರ್ಮತಂ ವಪುಷಃ ವಪುಃ-ಸ್ಥಾನೀಯಾಯಾಃ ಸಂಹಿತಾಯಾಃ ಮತಮಭಿಮತಮ್ । ಲೋಕೇ ಹಿ ಶಿರಸಾ ಯದ್ದಕ್ಷಿ ತದೇವಂ ಹಸ್ತಪಾದಾದಿಕಮನುಕರೋತಿ । ಅತೋ ವೇದೇಽಪಿ ಮುಖ್ಯತಯಾ ಶಿರಃ ಸ್ಥಾನೀಯೋಪನಿಷದಾ ಸ್ಪಷ್ಟಂ ಯತ್ತಪ್ತಚಕ್ರಧಾರಣಂ ವಿಹಿತಂ ತದೇವ ಗೋವಿಂದುರಾಯುಧಾನಿ ಬಿಭ್ರಾದಿತಿ ಸಂಹಿತಾ-ವಾಕ್ಯೇನಾಪಿ ವಿಧಾತವ್ಯಂ ನಾನ್ಯತ್ ವಾಕ್ಯ ಭೇದ ಪ್ರಸಂಗಾತ್ । ಅತೋಽತ್ರಾಪಿ ಮುಖ್ಯ-ತತ್ತಪ್ತಾಯುಧಾನಾಂ ಧಾರಣಮೇವಾಭಿಪ್ರೇತಮಿತಿ ಭಾವಃ । ಇಯಂ ವಾಕ್ ಗೋವಿಂದು-ರ್ದೃಪ್ತ ಆಯುಧಾನೀತಿ ವಾಕ್ । ಅಚಕ್ರಾಧಾರಿವ್ಯಾಖ್ಯಾದಿ ಪ್ರತ್ಯಾಖ್ಯಾನಿಚಿಕೀರ್ಷಯಾ ತಪ್ತ ಚಕ್ರಾಂಕಮಕುರ್ವತಃ ಪುರುಷಸ್ಯ ಕಪೋಲಕಲ್ಪಿತಂ ಯತ್ಕಿಂಚಿದ್ವ್ಯಾಖ್ಯಾದಿ । ಆದಿಪದೇನ ತಪ್ತಚಕ್ರಾಂಕಾಧಾರಣಾಖ್ಯಾನಾಚಾರೋಽಪಿಗೃಹ್ಯತೇ । ತಸ್ಯ ಪ್ರತ್ಯಖ್ಯಾನಚಿಕೀರ್ಷಯಾ ಯದ್ವಾ ಅಚಕ್ರಧಾರಿಣಾ ಯದ್ವೇದಶಾಸ್ತ್ರವ್ಯಾಖ್ಯಾನಧ್ಯಾನಾದಿಕೃತಂ ತನ್ನಿರಾಕರಣೇಚ್ಛಯಾ ವಾ ॥
॥ ೬೩೯-೬೪೦ ॥

ಅತ್ರಾಪಿ ಚ ಪವಿತ್ರಂ ಇತಿ ವಾಗ್ವಾಯುಗಂ ಹರಿಮ್ ।
ಸ್ತುವಂತೀ ತಪ್ತಚಕ್ರಾಂಕಧಾರಣಂ ವಕ್ತಿ ಸುಸ್ಫುಟಮ್ ॥ ೬೪೨ ॥

**ಅರ್ಥ–** ಅತ್ರ ಅಪಿ= ಪೂಯಮಾನಸೂಕ್ತದಲ್ಲಿಯೂ, ಪವಿತ್ರಂ ತೇ ಇತಿ= ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಎಂಬ, ವಾಕ್= ವೇದವಾಕ್ಯವು, ವಾಯುಗಂ= ವಾಯ್ವಂತರ್ಯಾಮಿಯಾದ, ಹರಿಂ= ಶ್ರೀಹರಿಯನ್ನು ಸ್ತುವಂತೀ= ಸ್ತುತಿಸುತ್ತಾ, ತಪ್ತಚಕ್ರಾಂಕಧಾರಣಂ= ತಪ್ತಮುದ್ರಾಧಾರಣವನ್ನು ಸುಸ್ಫುಟಂ= ಸ್ಪಷ್ಟವಾಗಿ, ವಕ್ತಿ= ಹೇಳುತ್ತಿದೆ.

**ಅನುವಾದ-** ಪೂಯಮಾನಸೂಕ್ತದಲ್ಲಿರುವ

ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।
ಅತಪ್ತತನೂರ್ನತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ಸಮಾಶತ ॥

ಎಂಬ ವೇದವಾಕ್ಯವನ್ನು ಮೂಲಕಾರರು ಹೇಳುತ್ತಿದ್ದಾರೆ. ಈ ವಾಕ್ಯವು ವಾಯ್ವಂತರ್ಯಾಮಿಯಾದ ಶ್ರೀಹರಿಯನ್ನು ಸ್ತುತಿಸುತ್ತಿದೆ ಮತ್ತು ಚಕ್ರಧಾರಣವನ್ನು ಸಂದೇಹಕ್ಕೆ ಆಸ್ಪದವಿಲ್ಲದಂತೆ ವರ್ಣಿಸುತ್ತಿದೆ.

ವೇದವಾಕ್ಯದ ಅರ್ಥ - ಬ್ರಹ್ಮಣಸ್ಪತೇ = ವೇದಗಳ ಅಧಿಪತಿ ಅಥವಾ ಚತುರ್ಮುಖನ ಸ್ವಾಮಿಯಾದ ನಾರಾಯಣನೇ, ತೇ = ನಿನ್ನ, ಪವಿತ್ರಂ = ಸುದರ್ಶನಚಕ್ರವು, ವಿತತಂ = ಜಗತ್ತಿನೆಲ್ಲೆಡೆ ವ್ಯಾಪಿಸಿದೆ. (ಸುದರ್ಶನಚಕ್ರವು ತಾನೇ ಜಗತ್ತೆಲ್ಲವನ್ನೂ ವ್ಯಾಪಿಸಿಲ್ಲ, ಹೊರತು ಅದರ ಪ್ರಭೆಯು ಎಲ್ಲೆಡೆ ಹರಡಿದೆ. ಆದ್ದರಿಂದ ಮಾತ್ರವೇ ಈ ಚಕ್ರವು ಸರ್ವತ್ರವ್ಯಾಪ್ತವೆನಿಸಿದೆ. ಸೂರ್ಯನ ಪ್ರಭೆಯು ಎಲ್ಲಡೆ ಹರಡಿರುವುದರಿಂದಲೇ ಸೂರ್ಯಮಂಡಲವು ಸರ್ವತ್ರ-ವ್ಯಾಪ್ತವೆನಿಸಿರುವಂತೆ, ಈ ವಿಶೇಷಾಂಶವನ್ನು ತಿಳಿಸಲೆಂದೇ ವಿ ಎಂಬ ಉಪಸರ್ಗವನ್ನು ತತ ಎಂಬ ಪದದೊಂದಿಗೆ ಬಳಸಲಾಗಿದೆ.) ಪ್ರಭುಃ = ಸರ್ವಸಮರ್ಥನಾದನೀನು, ವಿಶ್ವತಃ = ಎಲ್ಲೆಡೆ ಇರುವ ಎಲ್ಲ ಜೀವಿಗಳ, ಗಾತ್ರಾಣಿ = ಶರೀರಗಳನ್ನು, ಪರ್ಯೇಷಿ = ಎಲ್ಲಕಡೆಯಿಂದ ವ್ಯಾಪಿಸಿಕೊಂಡಿರುವಿ. (ಎಲ್ಲ ಜೀವಿಗಳ ಶರೀರಗಳಲ್ಲೂ ಸುದರ್ಶನಚಕ್ರಧಾರಿಯಾದ ಭಗವಂತನು ಅಂತರ್ಯಾಮಿಯಾಗಿ ಇರುವುದರಿಂದ ಆತನ ಕೈಯಲ್ಲಿರುವ ಚಕ್ರವೂ ಎಲ್ಲಡೆ ವ್ಯಾಪಿಸಿದೆ ಎಂದರ್ಥ.)

ಅತಪ್ತತನೂಃ= ಆ ತಪ್ತ-ಚಕ್ರದತಾಪವನ್ನು ಪಡೆಯದಿರುವ ಶರೀರವುಳ್ಳ, ಆದ್ದರಿಂದಲೇ, ಆಮಃ= (ಹಸಿಯಾದ ಗಡಿಗೆಯಂತೆ) ತಾಪವೆಂಬ ಸಂಸ್ಕಾರವನ್ನು ಪಡೆಯದವನು, ತತ್= ಆ ಮೋಕ್ಷವನ್ನು, ನ ಅಶ್ನುತೇ = ಹೊಂದಲಾರನು.

ನ ತದಾಮೋ + ಅಶ್ನುತೇ ಎಂಬಲ್ಲಿ ಏಙಃ ಪದಾಂತಾದತಿ ಎಂಬ ಸೂತ್ರ (ಸೂತ್ರಸಂಖ್ಯಾ ೮೬-೬-೧-೨೦೯) ಪ್ರಕಾರ ಪೂರ್ವರೂಪಸಂಧಿ

ಯಾಗಬೇಕಿತ್ತು. ಆ ಸಂಧಿಯನ್ನು ಮಾಡದಿರುವ ಉದ್ದೇಶ ಹೀಗಿದೆ - ಸಂಧಿಯೆಂದರೆ ಎರಡು ಅಕ್ಷರಗಳ ನಿಕಟವಾದ ಸಂಬಂಧ. ಅಂತಹ ಸಂಬಂಧವು ಮೋ ಮತ್ತು ಅಗಳ ನಡುವೆ ಆಗಿಲ್ಲ. ತಪ್ತಮುದ್ರಾಧಾರಣವೆಂಬ ಸಂಸ್ಕಾರವನ್ನು ಹೊಂದದವನಿಗೆ ಮೋಕ್ಷಸುಖದೊಂದಿಗೆ ಸಂಬಂಧವು (ಮೋಕ್ಷಸುಖವನ್ನು ಸವಿಯು ಯೋಗವು) ಸರ್ವಥಾ ಆಗುವುದಿಲ್ಲವೆಂಬುದನ್ನು ತೋರಿಸಲು ಮೋ ಮತ್ತು ಅ ಗಳ ನಡುವೆ ಸಂಬಂಧ - ಸಂಧಿಯನ್ನೂ ಮಾಡಲಾಗಿಲ್ಲ.

ಮೋಕ್ಷಸುಖವೆಂಬ ಕಾರ್ಯಕ್ಕೆ ತಪ್ತಮುದ್ರಾಧಾರಣವೆಂಬುದು ಕಾರಣವಾಗಿದೆ. ಕಾರಣವಿಲ್ಲದಿದ್ದರೆ ಕಾರ್ಯವೂ ಇರುವುದಿಲ್ಲವೆಂಬ ವ್ಯತಿರೇಕವನ್ನು ಅತಪ್ತತನೂರ್ನತದಾಮೋ ಅಶ್ನುತೇ ಎಂಬ ವಾಕ್ಯದಿಂದ ಹೇಳಿಯಾಯಿತು. ಕಾರಣವಿದ್ದರೆ ಕಾರ್ಯವೂ ಆಗಿಯೇ ತೀರುತ್ತದೆಂಬ ಅನ್ವಯವನ್ನು ಹೇಳಿದರೆ ತಪ್ತಮುದ್ರಾಂಕನವು ಮೋಕ್ಷಸುಖಕ್ಕೆ ಕಾರಣವೆಂಬುದು ಸುಸ್ಪಷ್ಟವಾಗಿ ಸಿದ್ಧವಾಗುತ್ತದೆ. ಅದಕ್ಕಾಗಿ ಅನ್ವಯವನ್ನು ಶೃತಾಸ ಇದ್ವಹಂತಸ್ತತ್ಸಮಾಶತ ಎಂಬ ವಾಕ್ಯದಿಂದ ಹೇಳಲಾಗುತ್ತಿದೆ.

ಶೃತಾಸಃ= (ಶೃತಾಃ)= ಪಾಕವನ್ನು ಪಡೆದ ಭುಜವುಳ್ಳವರು, ಭುಜದಲ್ಲಿ ತಪ್ತಸುದರ್ಶನದ ಚಿಹ್ನೆಯಿದ್ದವರು, ಇತ್= ಹೀಗೆ ತಪ್ತಮುದ್ರೆಗಳನ್ನು ಧರಿಸಿದಂತೆಯೇ, ವಹಂತಃ= ಗೋಪೀಚಂದನಾದಿಗಳಿಂದ ಚಕ್ರಾದಿಮುದ್ರೆಗಳನ್ನು ಧರಿಸಿದವರಾಗಿ, ತತ್= ಮೋಕ್ಷಸುಖವನ್ನು, ಸಮಾಶತ = ಪೂರ್ಣವಾಗಿ ಅನುಭವಿಸಿದರು.

**ಭಾವವಿಲಾಸಿನೀ–** ಅತ್ರಾಪಿ ಪೂಯಮಾನೇऽಪಿ । ಪವಿತ್ರಂತ ಇತಿ ವಾಗಿತ್ಯನೇನ ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ । ಅತಪ್ತತನೂರ್ನತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ಸಮಾಶತೇತಿ ಶ್ರುತಿಂ ಗೃಹ್ಣಾತಿ। ಅಯಮರ್ಥಃ। ಹೇ ಬ್ರಹ್ಮಣಸ್ಪತೇ ವೇದಾನಾಂ ಪತೇ ಚತುರ್ಮುಖಬ್ರಹ್ಮಣಸ್ಪತೇ ವಾ । ನಾರಾಯಣ ! ತೇ ಪವಿತ್ರಂ ಸುದರ್ಶನಂ ವಿತತಂ ಜಗತಿ ವಿಶೇಷೇಣ ವ್ಯಾಪ್ತಂ ಸೂರ್ಯಮಂಡಲವತ್ ಪ್ರಭಯಾ ವ್ಯಾಪ್ತಿರ್ನ ಕಿಂತು ಸ್ವರೂಪೇಣ ವ್ಯಾಪ್ತಿರಿತಿ ಸೂಚನಾಯ ವೀತ್ಯುಪಸರ್ಗಃ। ತತ್ರ ನಿಮಿತ್ತಂ ಪ್ರಭುರಿತ್ಯಾದಿ। ಪ್ರಭುಸ್ತ್ವಂ ವಿಶ್ವತಃ ಗಾತ್ರಾಣಿ ಪ್ರಾಣಿನಾಂ ಶರೀರಾಣಿ ಪರ್ಯೇಷಿ ಪರಿತಃ ಪ್ರಾಪ್ನೋಷಿ ವ್ಯಾಪ್ನೋಷೀತ್ಯರ್ಥಃ। ಸುದರ್ಶನಧಾರಿಣಸ್ತವ ಸರ್ವಶರೀರೇಷು ಅಂತರ್ಯಾಮಿತಯಾ ವ್ಯಾಪ್ತತ್ವಾತ್ತವ ಕರಸ್ಥಂ ಸುದರ್ಶನಮಪಿ ಸರ್ವತ್ರ ವ್ಯಾಪ್ತಮಿತಿ ಭಾವಃ ।

ಅಸ್ತು ಭಗವತೋ ಭಗವತ್ಸುದರ್ಶಸ್ಯ ಚ ವ್ಯಾಪ್ತತ್ವಂ ತಥಾಪಿ ಪ್ರಕೃತೇ ಕಿಮಾಯಾತಮಿತ್ಯತ ಉಕ್ತಮ್ ॥ **ಅತಪ್ತತನೂರಿತ್ಯಾದಿ** ॥ ತೇನ ಚಕ್ರೇಣಾತಪ್ತಾ । ಬಾಹುಮೂಲೇ ತಾಪರಿಹಿತಾ ತನುರ್ಯಸ್ಯ ಸೋऽತಪ್ತತನುಃ । ತಾಪೇ ಕರಣಂ ಕಿಂಚಿದ್ವಕ್ತವ್ಯಂ, ತಚ್ಚ ಪ್ರಾಕ್ ಸುದರ್ಶನಸ್ಯ

ಪ್ರಸ್ತುತತ್ವೇನ ಶಿಷ್ಟಾಚಾರ ಬಲೇನ ತೇನಾತಪ್ತತನುರಿತಿ ಸ್ಮೃತಿ ಸಮಾಖ್ಯಯಾ ಚ ತಪ್ತ ಸುದರ್ಶನಮೇವ ವಕ್ತವ್ಯಮ್ । ಚ ತಸ್ಯೈವ ಕರಣತಯಾ ಸಂಬಂಧೋ ಯುಕ್ತೋ ನ ತ್ವನ್ಯಸ್ಯೇತಿ ಭಾವಃ । ಅತ ಏವಾಽಽಮಃ ತಾಪಾಖ್ಯಸಂಸ್ಕಾರರಹಿತಃ ಪುರುಷಃ ತತ್ ಮೋಕ್ಷಸುಖಂ ನಾಶ್ನುತೇ। ವಿಷ್ಣುಚಕ್ರಾಂಕರಹಿತಸ್ಯ ವೈಕುಂಠಂಸುಖಾನುಭವೇನ ಸಹ ಸರ್ವಥಾ ಸಂಧಾನಾಭಾವ- ದರ್ಶನಾಯ ವಿಸಂಧಿಕರಣಮ್ । ಸುದರ್ಶನಧಾರಣಸ್ಯ ಮೋಕ್ಷಸುಖಾಶನಂ ಪ್ರತಿಕರಣತ್ವ- ನಿರ್ಣಯಾಯ ವ್ಯತಿರೇಕವ್ಯಾಪ್ತಿಮುಕ್ತ್ವಾ ಅನ್ವಯಮಪ್ಯಾಹ । ಶ್ರುತಾಸ ಇತ್ಯಾದಿನಾ । ಶ್ರುತಾಸಃ ಚಕ್ರೇಣ ಪಕ್ವಭುಜಾಃ । ಭುಜೇ ತಪ್ತಸುದರ್ಶನಾಂಕಸಹಿತಾ ಇತ್ಯರ್ಥಃ । ಇತ್ ಇತ್ಥಂ ತಪ್ತ- ಸುದರ್ಶನಾಂಕವದೇವ ವಹಂತಃ ಗೋಪೀಚಂದನಾದಿನಾ ಧಾರಯಂತಶ್ಚ ವೈಷ್ಣವಜನಾಃ ತನ್ಮೋಕ್ಷಸುಖಂ ಸಮಾಶತ ಸಮ್ಯಗಭಕ್ಷಯಂತ । ಅಶೂಭಕ್ಷಣ ಇತಿ ಧಾತೋಃ । ಆಸತೇತಿ ಬಹುವಚನಾಂತಪದವಿ ದ್ರಷ್ಟವ್ಯಮ್ । ಸಮ್ಯಗನ್ವಭೂವನ್ನಿತ್ಯರ್ಥಃ । ಅಶ್ನುವತೇತಿ ವಕ್ತವ್ಯೇ ಆಶತೇತ್ಯಲೌಕಿಕಪದಪ್ರಯೋಗಃ, ಸಾಂಸಾರಿಕ ಸುಖಾಶನವತ್ ನೇದಂ ಭೇದಘಟಿತಮಶನಂ ಕಿಂತು ಸ್ವರೂಪಭೂತಸುಖಸ್ಯೈವ ವಿಶೇಷಶಕ್ತ್ಯಾಽಶನಮಿತಿ ಲೋಕವೈಲಕ್ಷಣ್ಯಪ್ರದರ್ಶನಾಯ ಅವಿಕೃತ- ಸುಖಾಶನದ್ಯೋತನಾಯ ವಾ ಯಥಾಸ್ಥಿತಧಾತುಜಮೇವ ಪದಂ ಯುಕ್ತಮ್ । ಚಕ್ರಾಂಕಧಾರಣೇ ಸತಿ ಮೌಕ್ತಸುಖಾವಶ್ಯಂಭಾವಾತ್ ತದಭಾವೇ ತದಭಾವಾಚ್ಚ ಮೋಕ್ಷ- ಸುಖಾಶನಂ ಪ್ರತ್ಯಾದೌ ತದೇವಾ ಸಾಧಾರಣಕಾರಣಮಿತಿ ಭಾವಃ । ಜೀವಾನಾಂ ಸ್ವರೂಪ- ಭೂತದೇಹೇಷ್ವಪಿ ಸುದರ್ಶನಧಾರಿಣಸ್ತವ ಬಿಂಬರೂಪತಯಾ ವ್ಯಾಪ್ತತ್ವಾತ್ ಬಿಂಬ- ಸಾರೂಪ್ಯಾಖ್ಯಮೋಕ್ಷಮಭೀಪ್ಸತಾಂ ಸ್ವರೂಪಭೂತದೇಹೇ ಚಕ್ರಾಂಕಸ್ಯಾವಶ್ಯಕತ್ವಾತ್ ತದನು- ಸಾರೇಣೈವ ಬಾಹ್ಯದೇಹಸ್ಯಾಪಿ ಸತ್ತ್ವೌಚಿತ್ಯಾತ್ ತದನುಮಾಪಕತಾಯ ಬಾಹ್ಯದೇಹೇಽಪಿ ತಪ್ತಸುದರ್ಶನಾಂಕಕರಣಮಾವಶ್ಯಕಮಿತಿ ಸೂಚನಾಯ ಪ್ರಭುರ್ಗಾತ್ರಾಣಿ ಪರ್ಯೇಷೀ- ತ್ಯುಕ್ತಮ್ ॥ ೬೪೨ ॥

**ವಿವರಣೆ-** ಸುರೋತ್ತಮೀಯಟೀಕಾದಲ್ಲಿ ಹೇಳಿರುವ ಅಶೂ ಭಕ್ಷಣೇ ಎಂಬ ಧಾತುವು ಪ್ರಚಲಿತಪಾಣಿನೀಯಪಾಠದಲ್ಲಿ ಇಲ್ಲ. ಅಲ್ಲಿ ಧಾತುಸಂಖ್ಯೆ 1265 - ಅಶೂ ವ್ಯಾಪ್ತೌ ಸಂಘಾತೇ ಚ (ಆತ್ಮನೇ ಪದ) ಮತ್ತು ಧಾತುಸಂಖ್ಯೆ 1524 - ಅಶಭೋಜನೇ (ಪರಸ್ಮೈಪದ) ಎಂಬ ಎರಡೇ ಧಾತುಗಳು ಇವೆ. ಆದರೆ ಅನುಭವಿಸುವಿಕೆ ಎಂಬರ್ಥದಲ್ಲಿ ಆತ್ಮನೇಪದಿ ಅಶಧಾತುವಿನ ಪ್ರಯೋಗಗಳು ವೈದಿಕಸಾಹಿತ್ಯಗಳಲ್ಲಿ ಹೇರಳವಾಗಿ ಲಭ್ಯ ಇವೆ.

ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ - ಮಹಾಭಾರತ

ಆಸತ ಎಂಬ ರೂಪವು ಆಸ ಉಪವೇಶನೇ (ಧಾತುಸಂಖ್ಯಾ - 1021) ಧಾತುವಿನ ಲಜ್ ಲಕಾರದ ಪ್ರಥಮಪುರುಷ ಏಕವಚನ ರೂಪವಾಗಿರುವಂತೆ ಅಶೂಧಾತುವಿನ ಲಜ್‌ಲಕಾರದ ಪ್ರಥಮಪುರುಷ ಬಹುವಚನರೂಪವು ಆಶ್ನುವತ ಎಂದು ಆಗಬೇಕು.

ಅಲೌಕಿಕಸಾಹಿತ್ಯ (ಆರ್ಷಸಾಹಿತ್ಯ)ದ ಪ್ರಯೋಗವಾಗಿರುವ ಆಶತ (ಸಮಾಶತ) ಎಂದು ಈ ವೇದವಾಕ್ಯದಲ್ಲಿ ಪ್ರಯೋಗಿಸಲಾಗಿದೆ. ಅದರ ಉದ್ದೇಶ ಹೀಗಿದೆ - ಜೀವನು ಸಂಸಾರಾವಸ್ಥೆಯಲ್ಲಿ ತನ್ನ ಸ್ವರೂಪಕ್ಕಿಂತ ಭಿನ್ನವಾದ, ಮನೋವೃತ್ತಿರೂಪವಾದ, ದುಃಖಮಿಶ್ರಿತಸುಖವನ್ನು ಅನುಭವಿಸುತ್ತಾನೆ. ಆದರೆ ಮುಕ್ತಿಯಲ್ಲಿ ಆತ ದುಃಖಮಿಶ್ರಿತ-ವಲ್ಲದ, ಮನೋವೃತ್ತಿರೂಪವಲ್ಲದ, ತನ್ನ ಸ್ವರೂಪಭೂತಸುಖವನ್ನು ಅನುಭವಿಸುತ್ತಾನೆ. ಈ ವೈಲಕ್ಷಣ್ಯವನ್ನು ತಿಳಿಸಲು ಆಶತ ಎಂಬ ಅಲೌಕಿಕಪದವನ್ನು ಬಳಸಲಾಗಿದೆ.

ಹೀಗೆ ತಪ್ತಮುದ್ರಾಧಾರಣಮಾಡಿಸಿಕೊಂಡವರಿಗೆ ಮುಕ್ತಿಸುಖವು ತಪ್ಪದೇ ಸಿಗುವುದರಿಂದ ಮತ್ತು ಮಾಡಿಸಿಕೊಳ್ಳದಿರುವವರಿಗೆ ಮುಕ್ತಿಸುಖವು ದೊರೆಯವುದೇ ಇಲ್ಲವಾದ್ದರಿಂದ ತಪ್ತಮುದ್ರಾಧಾರಣವು ಮೋಕ್ಷಸುಖಾನುಭವಕ್ಕೆ ಮೊಟ್ಟಮೊದಲ-ನೆಯದಾದ ಮತ್ತು ಅಸಾಧಾರಣವಾದ ಕಾರಣವಾಗಿದೆ. (ಮುಮುಕ್ಷುಗಳಾದವರು ಎಲ್ಲ ಬಗೆಯಧರ್ಮಾಚರಣಗಳಿಗೂ ಪೂರ್ವಭಾವಿಯಾದ ಅಧಿಕಾರವನ್ನು ಗಳಿಸಿಕೊಳ್ಳಲು ಮೊದಲು ತಪ್ತಮುದ್ರಾಧಾರಣಮಾಡಿಸಿಕೊಳ್ಳಬೇಕು ಎಂದು ಅರ್ಥ.)

ದೇವತೆಗಳಿಂದ ಪ್ರಾರಂಭಿಸಿ ಮನುಷ್ಯನವರೆಗೆ ಮುಮುಕ್ಷುಗಳಾದ ಎಲ್ಲ ಜೀವರೂ ಧರ್ಮಾಚರಣದ ಅರ್ಹತೆಗಾಗಿ ತಪ್ತಮುದ್ರೆಗಳನ್ನು ಮತ್ತು ಗೋಪೀಚಂದನ ಮುದ್ರೆಗಳನ್ನು ಧರಿಸಲೇಬೇಕು. ಅವರಲ್ಲಿ ಸಾರೂಪ್ಯಮುಕ್ತಿಯೋಗ್ಯಜೀವರು ತಪ್ತಮುದ್ರಾಂಕನ ಮಾಡಿಸಿಕೊಳ್ಳುವುದಕ್ಕೆ ಮತ್ತೊಂದು ಕಾರಣವಿದೆ -

ಎಲ್ಲ ಜೀವರ ಸ್ವರೂಪದೇಹಗಳಲ್ಲೂ ಭಗವಂತನ ವಿಭಿನ್ನ ಬಿಂಬರೂಪಗಳಿವೆ. ಸಾರೂಪ್ಯಮುಕ್ತಯೋಗ್ಯಜೀವರ ಸ್ವರೂಪದೇಹಗಳಲ್ಲಿ ಭಗವಂತನ ಚಕ್ರಧಾರಿಗಳಾದ ಬಿಂಬರೂಪಗಳೇ ಇವೆ. ಚಕ್ರಧಾರಿಯಾದ ಭಗವಂತನಿದ್ದಾನೆಂದರೆ ಅವನ ಕೈಯಲ್ಲಿ ಇರುವ ಚಕ್ರವೂ (ಚಕ್ರದ ಅಂಕನವೂ) ಆ ಸಾರೂಪ್ಯಮುಕ್ತಿಯೋಗ್ಯಜೀವರ ಸ್ವರೂಪದೇಹಗಳಲ್ಲಿ ಇದೆ ಎಂದೇ ಅರ್ಥವಾಗುತ್ತದೆ. ಸ್ವರೂಪದೇಹವೇ ಹೀಗಿದ್ದಮೇಲೆ ಅದಕ್ಕನುಸಾರವಾಗಿಯೇ ಬಾಹ್ಯದೇಹವೂ ಇರುವುದು ಉಚಿತವಾಗಿದೆ.

ಚಕ್ರಾಂಕಿತವಾದಸ್ವರೂಪದೇಹಕ್ಕೆ ಚಕ್ರಾಂಕಿತವಾದ ಬಾಹ್ಯದೇಹವು ಅನುಮಾಪಕವಾಗಿದೆ ಎಂಬ ಹಿನ್ನೆಲೆಯಲ್ಲಿ ಆ ಸಾರೂಪ್ಯಮುಕ್ತಿಯೋಗ್ಯಜೀವರೂ ಕೂಡ ಬಾಹ್ಯದೇಹಕ್ಕೆ ತಪ್ತಮುದ್ರಾಂಕನವನ್ನು ಮಾಡಿಸಿಕೊಳ್ಳಬೇಕೆಂಬುದನ್ನು ಸೂಚಿಸಲು ವೇದವಾಕ್ಯವು ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ಹೇಳಿದೆ.

ಆ ಅನುಮಾನ ಹೀಗಿದೆ - ವಿಮತಃ ಚಕ್ರಾಂಕಿತ ಸ್ವರೂಪದೇಹವಾನ್ ಸಾರೂಪ್ಯಮುಕ್ತಿಯೋಗ್ಯತ್ವೇ ಸತಿ ಚಕ್ರಾಂಕಿತ ಬಾಹ್ಯದೇಹವತ್ತ್ವಾತ್. ಅನುಮಾನದ ಅರ್ಥ- ವಿಮತಿಗೆ ವಿಷಯೀಭೂತನಾದ ಜೀವನು (ಪಕ್ಷ) ಚಕ್ರಾಂಕಿತವಾದ

ಸ್ವರೂಪದೇಹವುಳ್ಳವನಾಗಿದ್ದಾನೆ (ಸಾಧ್ಯ) ಸಾರೂಪ್ಯಮುಕ್ತಿಯೋಗ್ಯನಾಗಿದ್ದು (ಹೇತು-ವಿಶೇಷಣ) ಚಕ್ರಾಂಕಿತವಾದ ಬಾಹ್ಯದೇಹವುಳ್ಳವನಾದ್ದರಿಂದ (ಹೇತು) ಸಾರೂಪ್ಯ-ಮುಕ್ತಿಯೋಗ್ಯೇತರ ಜೀವರಲ್ಲಿ ವ್ಯಭಿಚಾರಪರಿಹಾರಕ್ಕಾಗಿ ಹೇತುವಿಶೇಷಣ ಬೇಕು.

ಬ್ರಹ್ಮಣೋ ವೇದರಾಶೀನಾಂ ಪತೇ ಲಕ್ಷ್ಮೀಪತೇ ತವ ।
ಪವಿತ್ರಹಸ್ತಗಂ ಚಕ್ರಂ ವ್ಯಾಪ್ತಂ ಸರ್ವತ್ರ ಸರ್ವದಾ ॥ ೬೪೩ ॥★

ಪ್ರಭುಸ್ತ್ವಂ ದೇಹಿ ಗಾತ್ರಾಣಿ ಯತಃ ಪರ್ಯೇಷಿ ವಿಶ್ವತಃ ।
ಚಕ್ರವ್ಯಾಪ್ತೌ ಹೇತುಭೂತಾ ಚಕ್ರಿವ್ಯಾಪ್ತಿರಿತೀರಿತಾ ।
ನಾನ್ಯತ್ಪವಿತ್ರಂ ಪ್ರಾಣ್ಯಂಗವ್ಯಾಪಿ ನಾಪಿ ಜಗತ್ತ್ರಯೇ ॥ ೬೪೪ ॥

ತೇನಾತಪ್ತತನೂರಾಮಃ ಪಾಕಹೀನೋಽಶ್ನುತೇ ನ ತತ್ ।
ಆಮುಷ್ಮಿಕಫಲಂ ಯದ್ಧಿ ಪ್ರಸಿದ್ಧಂ ಮೋಕ್ಷಸಂಜ್ಞಿತಮ್ ॥ ೬೪೫ ॥

ಶೃತಾಸಸ್ತೇನ ಪಕ್ವಾಂಗಾ ವಹಂತಶ್ಚ ದಿನೇ ದಿನೇ ।
ಗೋಪೀಚಂದನತೋ ಭಕ್ತಾಸ್ತತ್ಸಮೇತ್ಯ ಸಮಾಶತ ।
ಇತ್ಯರ್ಥಂ ವಾಗಿಯಂ ಸ್ಪಷ್ಟಮಾಚಷ್ಟ ಕಿಲ ವೈಷ್ಣವೀ ॥ ೬೪೬ ॥

**ಅರ್ಥ—** ಬ್ರಹ್ಮಣಃ-ವೇದರಾಶೀನಾಂ= ವೈದಿಕಸಾಹಿತ್ಯದ, ಪತೇ= ಪ್ರತಿಪಾದ್ಯನಾದ್ದರಿಂದ ಅಧಿಪತಿಯಾದವನೇ ಅಥವಾ, ಬ್ರಹ್ಮಣಃ= ಲಕ್ಷ್ಮೀದೇವಿಗೆ, ಪತೇ= ಪತಿಯಾದ ನಾರಾಯಣನೇ, ತವ= ನಿನ್ನ, ಪವಿತ್ರಹಸ್ತಗಂ= ಪವಿತ್ರವಾದ ಕೈಯಲ್ಲಿರುವ, ಚಕ್ರಂ= ಸುದರ್ಶನಚಕ್ರವು, ಸರ್ವತ= ಎಲ್ಲೆಡೆ, ಸರ್ವದಾ= ಯಾವಾಗಲೂ, ವ್ಯಾಪ್ತಂ= ವ್ಯಾಪ್ತವಾಗಿದೆ., ಯತಃ= ಯಾವ ಕಾರಣದಿಂದ, ಪ್ರಭುಃ= ಸರ್ವಸಮರ್ಥನಾದ, ತ್ವಂ= ನೀನು, ದೇಹಿಗಾತ್ರಾಣಿ= ಎಲ್ಲ ಜೀವಿಗಳ ಶರೀರಗಳನ್ನು ವಿಶ್ವತಃ= ಎಲ್ಲೆಡೆಯಿಂದಲೂ, ಪರ್ಯೇಷಿ= ವ್ಯಾಪಿಸಿಕೊಂಡಿದ್ದೀಯೋ, ತತಃ= ಆ ಕಾರಣದಿಂದ, ಚಕ್ರಿವ್ಯಾಪ್ತಿಃ= ಚಕ್ರಧರನಾದ ಭಗವಂತನ ವ್ಯಾಪ್ತಿಯು, ಚಕ್ರವ್ಯಾಪ್ತೌ= ಸುದರ್ಶನಚಕ್ರವು ಎಲ್ಲಡೆ ವ್ಯಾಪಿಸಿರುವಲ್ಲಿ (ವ್ಯಾಪಿಸಿರುವುದಕ್ಕೆ), ಹೇತುಭೂತಾ= ಕಾರಣೀಭೂತವಾಗಿದೆ, ಇತಿ= ಎಂಬುದಾಗಿ, ಈರಿತಾ= ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಪವಿತ್ರಂ= ಪವಿತ್ರಶಬ್ದದಿಂದ ವಾಚ್ಯವಾದ, ಅನ್ಯತ್= ದಶಾಪವಿತ್ರಮೊದಲಾದ ಬೇರೆಯ ವಸ್ತುಗಳು (ವಸ್ತುವು), ಪ್ರಾಣಿ = ಎಲ್ಲ ಜೀವಿಗಳ, ಅಂಗ= ಶರೀರದಲ್ಲಿ ವ್ಯಾಪಿ= ವ್ಯಾಪಿಸಿಕೊಂಡಿರುವಂತಹದ್ದು ನ= ಆಗಿಲ್ಲ ತೇನ= ಪವಿತ್ರಂ ತೇ ಎಂಬ ವೇದವಾಕ್ಯದ ಪೂರ್ವಾರ್ಧದಲ್ಲಿ ಪವಿತ್ರಂ ಎಂಬ ಪದದಿಂದ ಹೇಳಲ್ಪಟ್ಟ ಸುದರ್ಶನಚಕ್ರದಿಂದ, ಅತಪ್ತ= ತಾಪಕ್ಕೆ ಒಳಗಾಗದ, ತನೂಃ= ಶರೀರವುಳ್ಳ, ಅತಃ ಏವ =

ಆದ್ದರಿಂದಲೇ, ಆಮಃ - ಪಾಕಹೀನಃ = ಸಕಲಧರ್ಮಕಾರ್ಯಗಳಿಗೆ ಪ್ರಾಥಮಿಕ ಅರ್ಹತೆಯಾದ ಸಂಸ್ಕಾರದಿಂದ ಹೀನನಾದ ವ್ಯಕ್ತಿಯು, ಯತ್= ಯಾವ, ಪ್ರಸಿದ್ಧಂ = ಪ್ರಸಿದ್ಧವಾಗಿರುವ, ಮೋಕ್ಷಸಂಜ್ಞಿತಂ= ಮೋಕ್ಷವೆಂಬ ಹೆಸರಿನ, ಆಮುಷ್ಮಿಕ= ಪರಲೋಕದ, ಫಲಂ = ಪುರುಷಾರ್ಥವು, ಅಸ್ತಿ ಹಿ= ಇದೆಯೋ, ತತ್= ಅದನ್ನು ನ ಅಶ್ನುತೇ= ಪಡೆಯುವುದಿಲ್ಲ. ಶೃತಾಸಃ - ತೇನ ಪಕ್ವಾಂಗಾಃ, ತೇನ= ಆ ಸುದರ್ಶನಚಕ್ರದಿಂದ, ಶೃತ - ಪಕ್ವ = ತಾಪಕ್ಕೊಳಗಾದ, ಅಂಗಾಃ= ಭುಜಾದಿ ಅಂಗಗಳುಳ್ಳ, ಚ= ಮತ್ತು, ದಿನೇ ದಿನೇ= ಪ್ರತಿದಿನವೂ, ಗೋಪೀಚಂದನತಃ= ಗೋಪೀಚಂದನದಿಂದ, ತಂ= ಆ ಸುದರ್ಶನಚಕ್ರವನ್ನು ವಹಂತಃ = ಧಾರಣೆಮಾಡಿರುವ, ಭಕ್ತಾಃ= ಭಕ್ತರು, ತತ್= ಆ ಮೋಕ್ಷವೆಂಬ ಸ್ಥಾನವನ್ನು ಸಮೇತ್ಯ= ಹೊಂದಿ, ಸಮಾಶತ= ಸುಖವನ್ನು ಅನುಭವಿಸಿದರು, ಇತಿ= ಎಂಬ, ಅರ್ಥಂ = ಅರ್ಥವನ್ನು, ಇಯಂ= ಈ, ವೈಷ್ಣವೀ= ವಿಷ್ಣುವನ್ನು ಸ್ತುತಿಸುತ್ತಿರುವ, ವಾಕ್= ವೇದವಾಕ್ಯವು, ಸ್ಪಷ್ಟಂ= ಸಂಶಯಕ್ಕೆ ಎಡೆಯಿಲ್ಲದಂತೆ, ಆಚಷ್ಟ ಕಿಲ= ಹೇಳಿತಷ್ಟೇ!

**ಅನುವಾದ-** ಸಕಲವೇದಗಳಿಂದ ಪ್ರತಿಪಾದ್ಯನೇ, ಲಕ್ಷ್ಮೀಪತಿಯಾದ ಹರಿಯೇ ನಿನ್ನ ಪವಿತ್ರವಾದ ಕರಕಮಲದಲ್ಲಿರುವ ಚಕ್ರವು ಯಾವಾಗಲೂ ಎಲ್ಲೆಡೆಯೂ ವ್ಯಾಪಿಸಿಕೊಂಡಿದೆ. ಸರ್ವಸಮರ್ಥನಾದ ನೀನು ಎಲ್ಲ ಜೀವಿಗಳ ಶರೀರಗಳಲ್ಲಿ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವಿ. ಹೀಗೆ ಚಕ್ರಧರನಾದ ನಿನ್ನ ವ್ಯಾಪ್ತಿಯು, ನಿನ್ನ ಕೈಯಲ್ಲಿರು ಸುದರ್ಶನಚಕ್ರವೂ ಎಲ್ಲೆಡೆ, ವ್ಯಾಪಿಸಿಕೊಂಡಿರಲಿಕ್ಕೆ ಕಾರಣವಾಗಿದೆ. ಈ ವೇದವಾಕ್ಯದಲ್ಲಿ ಪವಿತ್ರವು ಎಲ್ಲೆಡೆ ವ್ಯಾಪಿಸಿಕೊಂಡಿದೆಯೆಂದು ಹೇಳಲಾಗಿದೆ. ಪವಿತ್ರ ಪದದಿಂದ ವಾಚ್ಯಗಳಾಗಿರುವ ದಶಾಪವಿತ್ರ ಮೊದಲಾದವುಗಳು ಎಲ್ಲ ಜೀವಿಗಳ ಶರೀರಗಳಲ್ಲಿಯಾಗಲೀ ಮೂರುಲೋಕಗಳಲ್ಲಿ ಆಗಲೀ ವ್ಯಾಪಿಸಿಕೊಂಡಿಲ್ಲ. ಹಾಗಾಗಿ ಎಲ್ಲೆಡೆ ವ್ಯಾಪಿಸಿಕೊಂಡಿರುವ ಪವಿತ್ರವೆಂದರೆ ತನ್ನ ಸ್ಪರ್ಶದಿಂದ ಎಲ್ಲರನ್ನೂ ಪುನೀತಗೊಳಿಸುವ ಸುದರ್ಶನಚಕ್ರವೇ ಆಗಬೇಕು. ಅಂತಹ ತಪ್ತಸುದರ್ಶನಮುದ್ರೆಯನ್ನು ಧಾರಣೆಮಾಡದವನು ಸಂಸ್ಕಾರಹೀನ ಎನಿಸುವ ಪ್ರಯುಕ್ತ ಯಾವ ಧಾರ್ಮಿಕಕ್ರಿಯೆಗೂ ಅರ್ಹನಾಗುವುದಿಲ್ಲ. ಹಾಗಾಗಿ ಪರಲೋಕದ ಪುರುಷಾರ್ಥವೆನಿಸಿದ ಮೋಕ್ಷವನ್ನೂ ಪಡೆಯಲಾರ.

ಆಗತಾನೇ ನಿರ್ಮಿತವಾದ, ಬೆಂಕಿಯಲ್ಲಿ ಕಾಯಿಸಲ್ಪಡದ ಗಡಿಗೆಯು ಆಮಕುಂಭವೆನಿಸಿಕೊಳ್ಳುತ್ತದೆ. ಅದು ನೀರಿನ ಸಂಗ್ರಹ, ಅಡಿಗೆ ಮುಂತಾದ ಯಾವ ಕಾರ್ಯಕ್ಕೂ ಉಪಯುಕ್ತವೆನಿಸುವುದಿಲ್ಲ. ಬೆಂಕಿಯಲ್ಲಿ ಕಾಯಿಸಲ್ಪಟ್ಟ ಬಳಿಕವೇ ಆ ಗಡಿಗೆಯು ಕೆಲಸಕ್ಕೆ ಉಪಯುಕ್ತವಾಗುವಂತೆ ತಪ್ತಮುದ್ರಾಧಾರಣವೆಂಬ ಸಂಸ್ಕಾರವನ್ನು ಪಡೆಯದವನು ಧರ್ಮಾಚರಣಮಾಡಲಿಕ್ಕೆ ಬೇಕಾದ ಅರ್ಹತೆಯೇ ಇಲ್ಲದವನೆನಿಸಿ ಮೋಕ್ಷವನ್ನೂ ಪಡೆಯಲಾರನು. ಯಾರು ತಪ್ತಮುದ್ರಾಂಕನವನ್ನು

ಮಾಡಿಸಿಕೊಂಡು ಗೋಪೀಚಂದನದ ಮೂಲಕವೂ ಪಂಚಮುದ್ರೆಗಳನ್ನು ಧಾರಣಮಾಡುವರೋ ಅವರು ಮೋಕ್ಷಸುಖವನ್ನು ಪಡೆಯುವರೆಂದು ಈ ಶ್ರುತಿಯು ಭಗವಂತನ ಸ್ತುತಿಯೊಂದಿಗೆ ಮುದ್ರಾಧಾರಣದ ಮಹತ್ತ್ವವನ್ನು ಸಂಶಯಕ್ಕೆ ಎಡೆಯಿಲ್ಲದೆಂತೆ ಪ್ರತಿಪಾದಿಸುತ್ತಿದೆ.

**ಭಾವವಿಲಾಸಿನೀ–** ಏತದೇವಾಭಿಪ್ರೇತ್ಯಾಹ – ಬ್ರಹ್ಮಣ ಇತ್ಯಾದಿನಾ ॥ ೬೪೩ ॥ ಇತಿ ಹೇತುಃ ಈರಿತಾ ಶ್ರುತೌ ಕಥಿತಾ । ಅನ್ಯಾತ್ ದಶಾಪವಿತ್ರಾದಿಕಮ್ । ಪ್ರಾಣ್ಯಂಗವ್ಯಾಪಿ ನ ಜಗತ್ರಯೀ ವ್ಯಾಪ್ಯಪಿ ನೇತಿ ಸಂಬಂಧಃ ॥ ೬೪೪ ॥ ತೇನ ಪೂತೇನ ಪೂರ್ವಾರ್ಧೋಕ್ತಸುದರ್ಶನೇನ । ಅತಪ್ತಯನೂಃ ಅತ ಏವ ಆಮಃ । ಯತ್ ಮೋಕ್ಷಸಂಜ್ಞಿತಮಾಮುಷ್ಮಿಕಫಲಂ ಲೋಕೇ ಪ್ರಸಿದ್ಧಿಂ ತದಿತಿ ಸಂಬಂಧಃ । ತದ್ವಿತಿ ಸಾಮಾನ್ಯೇನೋಕ್ತಾವಪಿ ಮೋಕ್ಷಸುಖಸ್ಯೈವ ಪ್ರಾಪ್ತಿಸೂಚನಾಯ ಪ್ರಸಿದ್ಧಮಿತ್ಯುಕ್ತಮ್ । ಪ್ರಸಿದ್ಧತ್ವಾತ್ ತಸ್ಯೈವ ತತ್‌ಪದೇನ ಗ್ರಹಣಮಿತಿ ಭಾವಃ ॥ ೬೪೫ ॥ ಗೋಪೀಚಂದನತೋ ವಂಹತ ಇತಿ ಸಂಬಂಧಃ । ತತ್ ಮೋಕ್ಷಸುಖಂ ಸಮೇತ್ಯ ಸಮಾಶತ ಸಮ್ಯಗಶ್ನುತ ಮೋಕ್ಷಸುಖಾಶನಂ ಕುರ್ವತಃ ವೈಕುಂಠಾದಿಲೋಕೇಷು ತಿಷ್ಠಂತೀತಿ ಭಾವಃ॥೬೪೬॥

**ವಿವರಣೆ–** ಪವಿತ್ರ ಶಬ್ದ - ಪೂಞ್ ಪವನೇ ಧಾತು (ಧಾತುಸಂಖ್ಯಾ - 1483) ವಿಗೆ ಪುವಃ ಸಂಜ್ಞಾಯಾಂ ಎಂಬ ಸೂತ್ರ (ಪಾಣಿನಿಸೂತ್ರಸಂಖ್ಯಾ - 3166 - 3-2-185) ದಿಂದ ಇತ್ರ ಪ್ರತ್ಯಯ ಎಂಬ ಪವಿತ್ರ ಶಬ್ದವು ಹುಟ್ಟಿದೆ. ತನ್ನ ಸ್ಪರ್ಶದಿಂದ ಪವಿತ್ರಗೊಳಿಸುವಂತಹದು ಎಂದು ಅರ್ಥ. ಬಂಗಾರ, ಬೆಳ್ಳಿ, ದರ್ಭೆ, ದಾರ ಇತ್ಯಾದಿಗಳಿಂದ ರಚಿಸಲ್ಪಡುವ ಬೆರಳು, ಕಂಠ ಮುಂತಾದೆಡೆ ಧರಿಸಲ್ಪಡುವುಗಳೆಲ್ಲವೂ ಪವಿತ್ರವೆನಿಸಿಕೊಳ್ಳುತ್ತವೆ.

ದಶಾಪವಿತ್ರ - ಮೇಲೆ ಹೇಳಿದ ಎಲ್ಲ ಪವಿತ್ರಗಳಿಗಿಂತ ವಿಭಿನ್ನವಾದ ಯಜ್ಞಗಳಲ್ಲಿ ಉಪಯೋಗಿಸಲ್ಪಡುವ, ಬಟ್ಟೆಯ ತುಂಡೇ ದಶಾಪವಿತ್ರವೆನಿಸಿದೆ. ದಶಾಪವಿತ್ರೇಣ ಗ್ರಹಂ ಸಮ್ಮಾರ್ಷ್ಟಿ (ದಶಾಪವಿತ್ರದಿಂದ ಗ್ರಹ - ಸೋಮರಸವಿರುವ ಮಣ್ಣಿನ ಪಾತ್ರಕ್ಕೆ ಮಾರ್ಜನಮಾಡುತ್ತಾರೆ.) ಎಂದು ಶ್ರುತಿ ಹೇಳುತ್ತದೆ.

ದಶಾಪವಿತ್ರಂ ನಾಮ ಸೋಮಪಾವನಾರ್ಥಃ ವಾಸಃ ಖಂಡಃ - ಮೀಮಾಂಸಾಕೋಶಃ

ಈ ದಶಾಪವಿತ್ರವನ್ನು ಹವಿರ್ಧಾನಶಕಟ (ಬಂಡಿ)ದ ಮೇಲೆ ಹಾಕಿದ ಬಳಿಕ ಆ ದಶಾಪವಿತ್ರದಿಂದ ಸೋಮರಸವಿರುವ ಪಾತ್ರೆಯನ್ನು ಶುದ್ಧಗೊಳಿಸಲಾಗುತ್ತದೆ. ಇದರ ಬಗ್ಗೆ ಹೆಚ್ಚಿನ ವಿಷಯವು ಮೀಮಾಂಸಾಶಾಸ್ತ್ರದಲ್ಲಿ ಲಭ್ಯವಿದೆ.

**ತದೇಷಾ ಪೂಯಮಾನಸ್ಯ ಸೂಕ್ತಸ್ಥಾ ವಾಯುಗಂ ಹರಿಮ್ ।**
**ಸ್ತೌಕಿ ವಾಯುಮತಸ್ಥಾನಾಂ ಧರ್ಮಸ್ತವನತತ್ಪರಾ ॥ ೬೪೭ ॥**

**ವಾಯೋಃ ಸೂಕ್ತಂ ವದೇದ್ ವಾಯುಂ ವಾಯುಗಂ ವಾ ಹರಿಂ ವದೇತ್ ।**
**ವದೇದ್ವಾ ವಾತರಶನಮುನಿಧರ್ಮಂ ಸುನಿರ್ಮಲಮ್ ॥ ೬೪೮ ॥**

**ಅರ್ಥ**– ತದ್= ಆದ್ದರಿಂದ, ಪೂಯಮಾನಸ್ಯ ಸೂಕ್ತಸ್ಥಾ= ಪೂಯಮಾನ ಸೂಕ್ತಗತವಾದ, ಏಷಾ= ಪವಿತ್ರಂತೇ ಎಂಬ ಮಂತ್ರವು, ವಾಯುಮತಸ್ಥಾನಾಂ= ವಾಯುಮತದಲ್ಲಿರುವವರ ಧರ್ಮಸ್ತವನತತ್ಪರಾ= ಧರ್ಮವನ್ನು ಸ್ತೋತ್ರ ಮಾಡುವ ತಾತ್ಪರ್ಯವುಳ್ಳದ್ದಾಗಿ, ವಾಯಗಂ ಹರಿಂ= ವಾಯ್ವಂತರ್ಯಾಮಿಯಾದ ಹರಿಯನ್ನು, ಸ್ತೌತಿ= ಸ್ತೋತ್ರ ಮಾಡುತ್ತದೆ, ವಾಯೋಃ ಸೂಕ್ತಂ= ವಾಯುಸೂಕ್ತವು, ವಾಯುಂ= ವಾಯುವನ್ನು, ವದೇತ್= ಹೇಳುತ್ತದೆ. ವಾ= ಅಥವಾ, ವಾಯುಗಂ ಹರಿಂ= ವಾಯ್ವಂತರ್ಯಾಮಿಯಾದ ಹರಿಯನ್ನು, ವದೇತ್= ಹೇಳುತ್ತದೆ. ವಾ= ಅಥವಾ, ಸುನಿರ್ಮಲಂ= ಪರಮಪವಿತ್ರವಾದ, ವಾತರಶನಮುನಿಧರ್ಮಂ= ದಿಗಂಬರ ಅವಧೂತ ಧರ್ಮವನ್ನು, ವದೇತ್= ಹೇಳುತ್ತದೆ.

**ಅನುವಾದ**– ಆದ್ದರಿಂದ ಪೂಯಮಾನ ಸೂಕ್ತಗತವಾದ ಪವಿತ್ರಂತೇ ಎಂಬ ಮಂತ್ರವು ವಾಯುಮತದಲ್ಲಿರುವವರ ಧರ್ಮವನ್ನು ಸ್ತೋತ್ರ ಮಾಡುವ ತಾತ್ಪರ್ಯವುಳ್ಳದ್ದಾಗಿ ವಾಯ್ವಂತರ್ಯಾಮಿಯಾದ ಹರಿಯನ್ನು ಸ್ತೋತ್ರ ಮಾಡುತ್ತದೆ. ವಾಯುಸೂಕ್ತವು ವಾಯುವನ್ನಾಗಲೀ, ಅಥವಾ ವಾಯ್ವಂತ- ರ್ಯಾಮಿಯಾದ ಹರಿಯನ್ನಾಗಲೀ ಅಥವಾ ಪರಮ ಪವಿತ್ರವಾದ ವೈಷ್ಣವರ ಅವಧೂತ ಧರ್ಮವನ್ನಾಗಲೀ ಹೇಳುತ್ತದೆ.

**ಭಾವವಿಲಾಸಿನೀ**– ತತ್ ತಸ್ಮಾತ್ । ಏಷಾ ಪವಿತ್ರಂತ ಇತಿವಾಕ್ । ವಾಯುಗಂ ಹರಿಮಿತಿ ಪೂಯಮಾನಪ್ರಕರಣವಿರೋಧಪರಿಹಾರಾರ್ಥಮ್ । ಮುಮುಕ್ಷಮಾತ್ರಕಥನೇಽಪಿ ಪೂಯಮಾನ ಪ್ರಕರಣವಿರೋಧಪರಿಹಾರಾಯ ವಾಯುಮತಸ್ಥಾನಾಮಿತ್ಯುಕ್ತಮ್ । ಉಪಲಕ್ಷಣಂ ಚೈತತ್ । ಶುತೌ ಶ್ರುತಾಸ ಇತಿ ಬಹುವಚನಪ್ರಯೋಗಾತ್ ವಾಯೋರಪ್ಯತ್ರ ಪ್ರತಿಪಾದ್ಯತ್ವಸಂಭವಾನ್ನ ಪ್ರಕರಣವಿರೋಧ ಇತ್ಯಪಿ ದ್ರಷ್ಟವ್ಯಮ್ । ಅತ ಏವಾತಪ್ತತನೂರಿತಿ ಪ್ರಾಗೇಕವಚನಾಂತಪದೇನ ಪ್ರಸ್ತಾವೇಽಪಿ ತದುಲ್ಲಂಘ್ಯ ಬಹುವಚನಾಂತಪದೇನ ಪ್ರಸ್ತುತಿಃ । ಕಿಮರ್ಥಂ ತರ್ಹಿ ಪೂರ್ವಮಪ್ಯೇಕವಚನಾಂತಪದೇನ ಪ್ರಸ್ತುತಿರಿತಿ ಚೇತ್ ಸತ್ಯಂ ತಾಪಾ ಭಾವೇ ಮೋಕ್ಷಸುಖಾನಶನೇ ಚ ಮಾಯಿನಾಮೇವಾಯೋಗ್ಯತ್ವಾತ್ ತದ್ರೀತ್ಯಾ ತದುಕ್ತೈಕಜೀವವಾದಸ್ಯಾಪ್ಯನುವಾದಾಯೇತಿ ಬ್ರೂಮಃ । ಸರ್ವೇಷಾಮನುವಾದಾನರ್ಹತಯಾ ವಾ ತೇಷ್ವೇಕಸ್ಯ ಗ್ರಹಣಮ್ । ದಶಾಪವಿತ್ರಪರತಯಾ ವ್ಯಾಖ್ಯಾನೇ ತು ವಿಶೇಷೇಣ ವ್ಯಾಪ್ತತ್ವಾನುಪಪತ್ತಿಃ । ಸೋಮರಸಸಂಗ್ರಾಹಕಮೃಣ್ಮಯಪಾತ್ರೇ ಗಾತ್ರಪದಪ್ರಯೋಗಾಯೋಗಃ ಸೋಮರಸೇ ಪ್ರಭುತ್ವಾಯೋಗಃ। ಅತಪ್ತತನುರಿತ್ಯಸ್ಯ ಪ್ರಕೃತಾನುಪಯೋಗಃ । ತತ್ರ ತನೂಪದೇನ ಶರೀರಗ್ರಹಣೇನ ಗಾತ್ರಪದೇನಾಪಿ ತಸ್ಯೈವ ಗ್ರಹಣಮ್ । ಅನ್ಯಥಾ ಪ್ರಾಯಪಾಠವಿರೋಧ ಇತಿ ದೂಷಣಾನಿ ದ್ರಷ್ಟವ್ಯಾನಿ । ದಶಾಪವಿತ್ರೇ ಮಂತ್ರನಿಯೋಗಸ್ಯ ತು ಗತಿರುಕ್ತೈವ ॥ ೬೪೭-೬೪೮ ॥

**ವಿವರಣೆ–** ಮುಮುಕ್ಷುಗಳೆಲ್ಲರನ್ನೂ ಸ್ತೋತ್ರ ಮಾಡುತ್ತದೆ ಎಂದು ಹೇಳಲು ವಾಯು ಮತದವರನ್ನು ಎಂದು ಹೇಳಿದ್ದಾರೆ. ಇದು ಉಪಲಕ್ಷಣ. ಶೃತಾಸಃ ಎಂಬಲ್ಲಿರುವ ಬಹುವಚನವೂ ಇದನ್ನೇ ಸೂಚಿಸುವುದರಿಂದ ಪ್ರಕರಣವಿರೋಧವಿಲ್ಲವೆಂದು ತಿಳಿಯಬೇಕು. ಆದ್ದರಿಂದಲೇ ಮೊದಲು ಏಕವಚನಾಂತ ಅತಪ್ತತನೂ ಎಂಬ ಪದದಿಂದ ಪ್ರಸ್ತಾವ ಮಾಡಿದ್ದರೂ ಇಲ್ಲಿ ಶೃತಾಸಃ ಎಂದು ಬಹುವಚನವನ್ನು ಪ್ರಯೋಗ ಮಾಡಿದ್ದಾರೆ. ಮೊದಲಾದರೂ ಏಕವಚನ ಪ್ರಯೋಗವನ್ನು ಮಾಡಿರುವ ಉದ್ದೇಶ ಪರರ ಏಕಜೀವವಾದವನ್ನು ಅನುವಾದ ಮಾಡುವುದಾಗಿದೆ. ದಶಾಪವಿತ್ರದ ಪರವಾಗಿ ವ್ಯಾಖ್ಯಾನ ಮಾಡಿದರೆ ಅದಕ್ಕೆ ವಿತತಂ ಎಂದು ಹೇಳಿದ ವ್ಯಾಪ್ತತ್ವವು ಕೂಡುವುದಿಲ್ಲ. ಸೋಮರಸವನ್ನು ಇಡುವ ಪಾತ್ರೆಯಲ್ಲಿ ಗಾತ್ರಶಬ್ದವೂ ಕೂಡುವುದಿಲ್ಲ. ಸೋಮರಸದಲ್ಲಿ ಅತಪ್ತತನು ಎನ್ನುವುದು ಪ್ರಕೃತಕ್ಕೆ ಅಸಂಗತವಾಗುತ್ತದೆ.ಅಲ್ಲಿ ತನು ಪದದಿಂದ ಶರೀರವನ್ನು ತೆಗೆದುಕೊಂಡರೆ ಗಾತ್ರ ಪದದಿಂದಲೂ ಶರೀರವನ್ನೇ ತೆಗೆದುಕೊಳ್ಳಬೇಕಾದ ಪ್ರಸಂಗ. ಇಲ್ಲದಿದ್ದರೆ ಪ್ರಾಯಪಾಠವಿರೋಧ ಮೊದಲಾದ ದೋಷಗಳನ್ನು ಗಮನಿಸಬೇಕು. ದಶಾಪವಿತ್ರದಲ್ಲಿ ಮಂತ್ರವಿನಿಯೋಗಕ್ಕೆ ಗತಿಯು ಮೊದಲೇ ಹೇಳಲ್ಪಟ್ಟಿದೆ.

ಬ್ರಹ್ಮಾಸ್ತ್ರರೂಪಗಾಯತ್ರೀ ಶತ್ರೋಃ ಸಂಹಾರಕರ್ಮಣಿ ।
ನಿಯುಕ್ತೇತ್ಯೇವ ಕಿಂ ವಕ್ತಿ ರಿಪುಸೇನಾಪ್ರಣಾಶನಮ್ ॥ ೬೪ ॥

**ಅರ್ಥ–** ಬ್ರಹ್ಮಾಸ್ತ್ರರೂಪಗಾಯತ್ರೀ= ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲು ಉಪಯೋಗಿಸಲ್ಪಡುವ ಮಂತ್ರದರೂಪದಲ್ಲಿರುವ ಗಾಯತ್ರಿಯು, ಶತ್ರೋಃ = ಶತ್ರುವಿನ, ಸಂಹಾರಕರ್ಮಣಿ= ಕೊಲ್ಲುವ ಕ್ರಿಯೆಯಲ್ಲಿ, ನಿಯುಕ್ತಾ= ವಿನಿಯೋಗಿಸಲ್ಪಡುತ್ತದೆ. ಇತಿ ಏವ= ಎಂಬ ಕಾರಣಕ್ಕಾಗಿಯೇ, ರಿಪುಸೇನಾಪ್ರಣಾಶನಂ = ಶತ್ರುಸೈನ್ಯದ ಸಂಹಾರವೆಂಬ ಅರ್ಥವನ್ನು ವಕ್ತಿ ಕಿಂ?= ಹೇಳುತ್ತದೇನು?

**ಅನುವಾದ–** ಯಾವ ಮಂತ್ರವನ್ನು ಯಾವ ಕ್ರಿಯೆಯನ್ನು ಮಾಡುವಾಗ ವಿನಿಯೋಗಿಸಲಾಗುತ್ತದೆಯೋ ಆ ಕ್ರಿಯೆಯೇ (ವಿಷಯವೇ) ಆ ಮಂತ್ರದ ಅರ್ಥವಾಗುತ್ತದೆ ಎಂಬ ನ್ಯಾಯವಿರುವುದರಿಂದ ಪವಿತ್ರಂತೇ ಎಂಬ ಮಂತ್ರವನ್ನು ದಶಾಪವಿತ್ರಾದಿಗಳೇ ಆ ಮಂತ್ರಕ್ಕೆ ಅರ್ಥವಾಗಬೇಕು. ಹಾಗಾಗಿ ಈ ಮಂತ್ರವು ಸುದರ್ಶನಚಕ್ರ ಮತ್ತು ಅದನ್ನು ಧರಿಸಿದ ಭಗವಂತನನ್ನು ಸ್ತುತಿಸುತ್ತದೆ ಎನ್ನುವುದು ಹೇಗೆ? ಎಂಬ ಪ್ರಶ್ನೆಯು ಸರಿಯಲ್ಲ. ಏಕೆಂದರೆ, ಈ ನ್ಯಾಯಕ್ಕೆ - ಗಾಯತ್ರೀ ಮಂತ್ರದಲ್ಲೇ ವ್ಯಭಿಚಾರವಿದೆ. ಬ್ರಹ್ಮಾಸ್ತ್ರವನ್ನು ಪ್ರಯೋಗಿಸಲು ಗಾಯತ್ರೀ ಮಂತ್ರವನ್ನೇ ವಿನಿಯೋಗಿಲಾಗುತ್ತದೆ. ಹಾಗೆಂದು ಗಾಯತ್ರೀಮಂತ್ರಕ್ಕೆ ಶತ್ರುಸೈನ್ಯದ ಸಂಹಾರವೇ ಅರ್ಥವೆಂದು ಹೇಳುವುದು ಉಚಿತವೇ? ಆದ್ದರಿಂದ ಈ ನ್ಯಾಯವೇ ನಿರ್ದುಷ್ಟವಲ್ಲವಾದ್ದರಿಂದ ದಶಾಪವಿತ್ರಾದಿಗಳಲ್ಲಿ ಈ ಮಂತ್ರವನ್ನು

ವಿನಿಯೋಗಿಸಿದರೂ ಸುದರ್ಶನ ಚಕ್ರ ಮತ್ತು ಚಕ್ರಧಾರಿಯಾದ ಭಗವಂತನನ್ನು ಈ ಮಂತ್ರವು ವರ್ಣಿಸುತ್ತದೆಯೆಂದು ಹೇಳುವಲ್ಲಿ ಯಾವ ಬಾಧಕವೂ ಇಲ್ಲ.

**ಭಾವವಿಲಾಸಿನೀ–** ಯತ್ರ ಮಂತ್ರಸ್ಯ ವಿನಿಯೋಗಃ ಸ ಏವ ಮಂತ್ರಸ್ಯಾರ್ಥ ಇತ್ಯಿ ನ್ಯಾಯಸ್ಯಾನ್ಯತ್ರಾಪಿ ವ್ಯಭಿಚಾರಮಾಹ – **ಬ್ರಹ್ಮಾಸ್ತ್ರೇತಿ** ॥ ಬ್ರಹ್ಮಾಸ್ತ್ರರೂಪಗಾಯತ್ರೀ ಬ್ರಹ್ಮಾಸ್ತ್ರ-ಮಂತ್ರರೂಪಗಾಯತ್ರೀತ್ಯರ್ಥಃ । ಬ್ರಹ್ಮಾಸ್ತ್ರಮುಖೇನ ರಿಪುಸೇನಾಸಂಹಾರೇ ವಿನಿಯುಕ್ತಾಯಾ ಗಾಯತ್ರ್ಯಾಃ ರಿಪುಸೇನಾಸಂಹಾರಪ್ರತಿಪಾದಕತ್ವಾಭಾವಾದ್ಯತ್ರ ವಿನಿಯೋಗಃ ಸ ಏವ ಮಂತ್ರಾರ್ಥ ಇತಿ ನ್ಯಾಯೋऽತ್ರಾಪಿ ವ್ಯಭಿಚರತ ಇತಿ ಭಾವಃ ॥ ೬೪೯ ॥

**ಸುದರ್ಶನಸ್ಯ ಮೀಮಾಂಸಾ ದ್ರಷ್ಟವ್ಯಾ ವಿಸ್ತರಾರ್ಥಿಭಿಃ ।**
**ಉಪಕರ್ತುಃ ಪ್ರತಿಕೃತೇರಶಕ್ತ್ಯೇಹಾಪಿ ತತ್ಕಥಾ ।**
**ಅತೋऽಸ್ಮದುಕ್ತ ಏವಾರ್ಥ ಇತಿ ಸರ್ವಂ ಮನೋರಮಮ್ ॥ ೬೫೦ ॥**

**ಅರ್ಥ–** ವಿಸ್ತರಾರ್ಥಿಭಿಃ = ತಪ್ತಮುದ್ರಾಧಾರಣದ ಮಹತ್ವದ ಬಗ್ಗೆ ಹೆಚ್ಚಿನ ವಿಷಯವನ್ನು ಅರಿಯಲು ಅಪೇಕ್ಷಿಸುವವರಿಂದ, ಸುದರ್ಶನಸ್ಯ ಮೀಮಾಂಸಾ = ನಾವೇ ರಚಿಸಿದ ಸುದರ್ಶನಮೀಮಾಂಸಾ ಎಂಬ ಗ್ರಂಥವು, ದ್ರಷ್ಟವ್ಯಾ = ನೋಡಲ್ಪಡಬೇಕು. ಉಪಕರ್ತುಃ = ನಮಗೆ ದೊಡ್ಡ ಅನುಗ್ರಹಮಾಡಿ ಉಪಕಾರಮಾಡಿರುವ ಸುದರ್ಶನರೂಪೀ ಭಗವಂತನಿಗೆ, ಪ್ರತಿಕೃತೇಃ = ಸ್ತೋತ್ರವೊಂದರ ಹೊರತಾಗಿ ಬೇರೆ ಯಾವುದೇ ಉಪಕಾರವನ್ನು ಮಾಡುವಲ್ಲಿ ಅಶಕ್ತ್ಯಾ= ನಮಗೆ ಶಕ್ತಿಯಿಲ್ಲದಿರುವುದರಿಂದ, ಇಹ ಅಪಿ = ಈ ಯುಕ್ತಿಮಲ್ಲಿಕಾದಲ್ಲಿಯೂ ಕೂಡ, ತತ್ಕಥಾ = ಆ ಸುದರ್ಶನರೂಪೀ ಭಗವಂತನ ವರ್ಣನೆಯು, (ನಮ್ಮಿಂದ) ಕೃತಾ = ಮಾಡಲ್ಪಟ್ಟಿದೆ. ಅತಃ = ಆದುದರಿಂದ, ಅಸ್ಮದುಕ್ತಃ = ನಮ್ಮಿಂದ ಹೇಳಲ್ಪಟ್ಟ ಅರ್ಥ ಏವ = ಅರ್ಥವೇ, ಶ್ರುತೇಃ = ವೇದವಾಕ್ಯದ, ಅರ್ಥಃ = ಅರ್ಥವು ಆಗಿದೆ, ಇತಿ = ಎಂಬ ಕಾರಣದಿಂದ, ಸರ್ವಂ = ಎಲ್ಲ ವಿಷಯಗಳ ಪ್ರತಿಪಾದನೆಯು, ಮನೋರಮಂ = ರಮಣೀಯವಾಗಿದೆ.

**ಅನುವಾದ–** ತಪ್ತಮುದ್ರಾಧಾರಣದ ಮಹತ್ವದ ಬಗ್ಗೆ ಹೆಚ್ಚಿನ ವಿಷಯಗಳನ್ನು ತಿಳಿಯಲು ಅಪೇಕ್ಷೆಯಿರುವ ಜಿಜ್ಞಾಸುಗಳು ಸುದರ್ಶನಮೀಮಾಂಸಾ ಎಂಬ ಗ್ರಂಥವನ್ನು ನೋಡಬೇಕು ಎಂದು ವಾದಿರಾಜರು ಹೇಳುತ್ತಿದ್ದಾರೆ. ಸುದರ್ಶನಮೀಮಾಂಸಾ ಎಂಬ ಗ್ರಂಥವನ್ನು ತಪ್ತಮುದ್ರಾಧಾರಣದ ಮಹತ್ತ್ವವನ್ನು ಪ್ರತಿಪಾದಿಸಲಿಕ್ಕಾಗಿಯೇ ರಾಜರು ರಚಿಸಿದ್ದಾರೆ, ಈ ಯುಕ್ತಿಮಲ್ಲಿಕಾಗ್ರಂಥದಲ್ಲಿಯೂ ಆ ವಿಷಯವನ್ನು ವರ್ಣಿಸಿರುವುದೇತಕ್ಕೆ ಎಂಬ ಶಂಕೆಗೆ ಸಮಾಧಾನವನ್ನೂ ಅವರೇ ಹೇಳುತ್ತಿದ್ದಾರೆ.

ನಾವು ಮಾಡಿದ ಸುದರ್ಶನಜಪಮುಂತಾದವುಗಳಿಗೆ ಮೆಚ್ಚಿದ ಭಗವಂತನು ನಮಗೆ ಎಲ್ಲ ಇಷ್ಟಾರ್ಥಗಳನ್ನೂ ಕರುಣಿಸಿ ಉಪಕರಿಸಿದ್ದಾನೆ. ಆತ ಮಾಡಿದ ಉಪಕಾರಕ್ಕೆ

ಪ್ರತಿಯಾಗಿ ಸ್ತುತಿ, ನಮಸ್ಕಾರಗಳನ್ನು ಹೊರತುಪಡಿಸಿ ಬೇರೆ ಯಾವ ಉಪಕಾರವನ್ನು ಮಾಡಲು ನಮಗೆ ಶಕ್ತಿಯಿಲ್ಲ, ಹಾಗಾಗಿ ಸುದರ್ಶನ-ಮೀಮಾಂಸಾಗ್ರಂಥವನ್ನು ಪ್ರತ್ಯೇಕವಾಗಿ ನಾವೇ ರಚಿಸಿದ್ದರೂ ಸುದರ್ಶನ-ರೂಪೀಭಗವಂತನ ಸ್ತುತಿ, ನಮಸ್ಕಾರಗಳನ್ನು ಪುನಃ ಪುನಃ ಮಾಡುವ ಉದ್ದೇಶದಿಂದ ಈ ಯುಕ್ತಿಮಲ್ಲಿಕಾದಲ್ಲಿಯೂ ಆ ವಿಷಯವನ್ನು ಪ್ರತಿಪಾದಿಸುತ್ತಿದ್ದೇನೆ.

**ಭಾವವಿಲಾಸಿನೀ–** ಪವಿತ್ರಂ ಬ್ರಹ್ಮಣಸ್ತ್ವಂ ಲೋಕವ್ಯಾಪ್ತಂ ಸುದರ್ಶಮ್ । ತೇನಾತಪ್ತಾ-ತನೂರ್ಯೇಷಾಂ ತೇ ನ ಯಾಂತಿ ಹರೇಃ ಪದಮಿತಿ ಏತಚ್ಛ್ರುತಿವ್ಯಾಖ್ಯಾನರೂಪಪದ್ಮಪುರಾಣ-ವಚನಾನುಕೂಲ್ಯಾದಪಿ ಸ್ವೋಕ್ತ ಏವ ಶ್ರುತ್ಯರ್ಥೋ‌ಽ ನ ತ್ವನ್ಯ ಇತಿ ಯುಕ್ತೇರಪಿ ಸೂಚನಾಯ ಸ್ವಕೃತಸುದರ್ಶನಮೀಮಾಂಸಾತಿದೇಶಃ । ಸುದರ್ಶನಮೀಮಾಂಸಾಯಾಃ ಪೃಥಕ್ಕೃತತ್ವೇ ಕಿಮತ್ರಾಪಿ ತನ್ಮೀಮಾಂಸಯೇತ್ಯತ ಆಹ – **ಉಪಕರ್ತುರಿತಿ** ॥ ಉಪಕರ್ತೃಃ ಸ್ವಸ್ಯೋಪಕರ್ತುಃ ಸುದರ್ಶನದೇವಸ್ಯ ಸುದರ್ಶನಮಂತ್ರೋಪಾಸ್ತ್ಯಾ ಸ್ವಸ್ಯ ಸಕಲಾಭೀಷ್ಟಸಿದ್ಧೇರ್ಜಾತತ್ವಾದುಪಕರ್ತುರಿತ್ಯುಕ್ತಮ್ । ಪ್ರತಿಕೃತೇಃ ಸ್ತುತಿವ್ಯತಿರಿಕ್ತಪ್ರತ್ಯುಪಕಾರಸ್ಯ ಅಶಕ್ತ್ಯಾ ಕರ್ತುಂ ಶಕ್ಯಭಾವೇನ ಇಹಾಪಿ ಯುಕ್ತಿಮಲ್ಲಿಕಾಯಾಮಪಿ । ತತ್ಕಥಾ ಸುದರ್ಶನಕಥಾ । ಸ್ವೋಪಕಾರಕಸುದರ್ಶನದೇವಸ್ಯ ತದುಪಕಾರಸದೃಶಪ್ರತ್ಯುಪಕಾರಕರಣೇ ಶಕ್ಯಭಾವಾತ್ ವಾರಂ ವಾರಂ ಸ್ತುತಿರ್ವಾ ಕರ್ತವ್ಯೇ-ತ್ಯಾಶಯೇನಾತ್ರಾಪಿ ತತ್ಕಥೇತಿ ಭಾವಃ ॥ ೬೫೦ ॥

**ವಿವರಣೆ–** ಪವಿತ್ರಂ ಬ್ರಹ್ಮಣಸ್ತತ್ತ್ವಂ ಲೋಕವ್ಯಾಪ್ತಂ ಸುದರ್ಶನಂ ।
ತೇನಾತಪ್ತತನೂರ್ಯೇಷಾಂ ನ ತೇ ಯಾಂತಿ ಹರೇಃ ಪದಂ ॥

ಎಂದು ಪದ್ಮಪುರಾಣವು ಈ ಪೂಯಮಾನಸೂಕ್ತದ ಅರ್ಥವನ್ನೇ ಹೇಳಿದೆ. ಈ ಪುರಾಣವಾಕ್ಯದ ಬೆಂಬಲವಿರುವುದರಿಂದಲೂ ಆ ಶ್ರುತಿಗೆ ನಾವು ಹೇಳಿದ ಅರ್ಥವೇ ಸಮೀಚೀನವಾಗಿದೆ ಎಂದು ತಿಳಿಸಲು ಮೂಲಕಾರರು ಸುದರ್ಶನಮೀಮಾಂಸಾದ ಅತಿದೇಶವನ್ನು ಮಾಡಿದ್ದಾರೆ.

ಅತಿದೇಶ - ಅತಿದೇಶವೆಂದರೆ ಒಂದೆಡೆ ಹೇಳಿದ ವಿಷಯವನ್ನು ಮತ್ತೊಂದೆಡೆ ಅನ್ವಯಿಸಿಕೊಳ್ಳುವುದು. ಜಿಜ್ಞಾಸುಗಳು ಈ ಯುಕ್ತಿಮಲ್ಲಿಕಾಗ್ರಂಥವನ್ನು ಅಧ್ಯಯನಮಾಡಿದಂತೆ ಸುದರ್ಶನಮೀಮಾಂಸಾಗ್ರಂಥವನ್ನೂ ಅಧ್ಯಯನಮಾಡಬೇಕು ಎಂದು ಅರ್ಥ.

**ಅತೋ ವೇದೇನ ವೇದಾಂತವಚನೇನ ಚ ಮಾನಿತಮ್ ।**
**ಸರ್ವೈರ್ಮಾನ್ಯಂ ಮತಮಿದಂ ಮಾನನೀಯೋ ಗುರುಶ್ಚ ನಃ ॥ ೬೫೧ ॥**

**ಅರ್ಥ–** ಅತಃ= ಆದ್ದರಿಂದ, ವೇದೇನ= ವೇದದಿಂದ, ವೇದಾಂತ ವಚನೇನ ಚ= ಮತ್ತು ವೇದಾಂತ ವಚನದಿಂದ, ಮಾನಿತಂ= ಸಮ್ಮಾನಿತವಾದ, ಇದಂ ಮತಂ= ಈ ಮತವು, ಸರ್ವೈಃ

ಮಾನ್ಯಂ= ಎಲ್ಲರಿಂದಲೂ ಸನ್ಮಾನಿಸಲ್ಪಡಬೇಕು. ನಃ ಗುರುಶ್ಚ= ನಮ್ಮ ಗುರುಗಳಾದ ಮಧ್ವಾಚಾರ್ಯರೂ, ಮಾನನೀಯಃ= ಪೂಜಿಸಲ್ಪಡಬೇಕು.

**ಅನುವಾದ–** ಆದ್ದರಿಂದ ವೇದದಿಂದಲೂ ಮತ್ತು ವೇದಾಂತವಚನದಿಂದಲೂ ಸಮ್ಮಾನಿತವಾದ ಈ ಮತವು ಎಲ್ಲರಿಂದಲೂ ಸಮ್ಮಾನಿಸಲ್ಪಡಬೇಕು. ನಮ್ಮ ಗುರುಗಳಾದ ಮಧ್ವಾಚಾರ್ಯರೂ ಪೂಜಿಸಲ್ಪಡಬೇಕು.

**ಭಾವವಿಲಾಸಿನೀ–** ಅತಃ ಪೂರ್ವೋಕ್ತಪ್ರಕಾರಾತ್ । ಇದಂ ಮತಂ ತತ್ತ್ವವಾದಿಮತಮ್ ॥೬೫೧॥

**ಯದ್‌ವಾಯೋಃ ಪವಮಾನಸ್ಯ ಪೂಯಮಾನಾಭಿದಸ್ಯ ಚ ।**
**ಸೂಕ್ತಸ್ಥರ್ಚಾಮಿಯಂ ಚರ್ಚಾ ತದ್ ವಾಯಸ್ತುತಿರೇವ ನಃ ॥ ೬೫೨ ॥**

**ಅರ್ಥ–** ಯತ್= ಯಾವ ಕಾರಣದಿಂದ, ಪವಮಾನಸ್ಯ= ಪವಮಾನನ, ಪೂಯಮಾನಾಭಿದಸ್ಯ= 'ಪೂಯಮಾನ' ಎಂಬ ಹೆಸರಿನ, ಸೂಕ್ತಸ್ಥರ್ಚಾಂ–ಸೂಕ್ತಸ್ಥ= ಸೂಕ್ತದಲ್ಲಿರುವ, ಋಚಾಂ= ಮಂತ್ರಗಳ, ಇಯಂ ಚರ್ಚಾ= ಈ ಚರ್ಚೆಯು, ವಾಯೋಃ ಏವ= ವಾಯುದೇವರದ್ದೇ (ಚರ್ಚಾ= ಚರ್ಚೆಯು), ತತ್ (ತಸ್ಮಾತ್)= ಆ ಕಾರಣದಿಂದ, ಇಯಂ ಚರ್ಚಾ – ಈ ಮೀಮಾಂಸೆಯು, ನಃ= ತತ್ತ್ವವಾದಿಗಳಾದ ನಮಗೆ, ವಾಯುಸ್ತುತಿಃ ಏವ= ನಮ್ಮ ಗುರುಗಳಾದ ವಾಯುದೇವರ ಸ್ತುತಿಯೇ ಆಗಿದೆ.

**ಅನುವಾದ–** ಸುದರ್ಶನ ಚಕ್ರದ ಮಹಾತ್ಮೆಯನ್ನು ತಿಳಿಸುವ 'ಪವಿತ್ರಂತೇ' ಎಂಬ ಪೂಯಮಾನ ಸೂಕ್ತದಲ್ಲಿರುವ ಮಂತ್ರಗಳು ಪವಮಾನ ಸೂಕ್ತದಲ್ಲಿರುವ 'ಪ್ರಧಾರಾ ಮಧ್ವಃ' ಮೊದಲಾದ ಮಂತ್ರಗಳು ವಾಯುದೇವರ ಮಹಿಮಾ ಪ್ರತಿಪಾದಕವಾದ ಚರ್ಚೆಯಾಗಿದೆ. ಇಂತಹ ಎರಡೂ ಸೂಕ್ತಗಳಲ್ಲಿ ಚರ್ಚಿತವಾದುದು. ದ್ವೈತ-ಮತಾನುಯಾಯಿಗಳಾದ ನಮಗೆ ಮುಖ್ಯವಾಗಿ ವಾಯುಸ್ತುತಿಯೇ ಆಗಿದೆ.

**ಭಾವವಿಲಾಸಿನೀ–** ಯದ್ಯಸ್ಮಾತ್ ಪವಮಾನಸ್ಯ ಪೂಯಮಾನಾಭಿಧಸ್ಯ ಚ ಸೂಕ್ತಸ್ಥರ್ಚಾಮಿಯಂ ಚರ್ಚಾ ವಾಯೋರೇವ ಚರ್ಚಾ । ತತ್ ತಸ್ಮಾದಿಯಂ ಚರ್ಚಾ ನಃ ವಾಯುಸ್ತುತಿರೇವೇತಿ ಸಂಬಂಧಃ । ವಾಯುಸ್ತುತೇರುಕ್ತ ಋಕ್ಚಾಚಾರ್ಯಾಶ್ಚ ಏಕವಾಕ್ಯತಾಯಾಃ ಪ್ರಾಕ್ ಪ್ರದರ್ಶಿತತ್ವಾದಿತಿ ಭಾವಃ ॥ ೬೫೨ ॥

**ವಿವರಣೆ–** ಪವಮಾನ ಮತ್ತು ಪೂಯಮಾನ ಸೂಕ್ತಗಳಲ್ಲಿ ಪ್ರತಿಪಾದಿತವಾದ ವಿಷಯಗಳೇ ವಾಯುಸುತ್ತಿಯಲ್ಲಿ ಪ್ರತಿಪಾದಿತವಾಗಿದೆ ಎಂಬುದನ್ನು 'ಷಷ್ಟೇಷ್ಟಕೇಂತಿಮಾಧ್ಯಾಯೇ' ಎಂಬ ಫಲಸೌರಭದ 499ನೇ ಶ್ಲೋಕದಲ್ಲಿಯೂ 'ಸಿಂಹಂ ನ ಸಂತೇತಿ ವಾಕ್ಚ ಮಧ್ವಸ್ಯ ಚರಿತಂ ಜಗೌ' ಫಲಸೌರಭದ 560, 561 ಮೊದಲಾದ ಶ್ಲೋಕಗಳಲ್ಲಿ 'ದೂರ ಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ಭೂರಿಭಾಗ್ಯೈಃ' ಎಂಬ ಶ್ಲೋಕದಲ್ಲಿ

ಹೇಳಿರುವ ನರಸಿಂಹದೇವರ ಶಿಷ್ಯತ್ವವು ಮತ್ತು ಸರ್ವದೇವೋತ್ತಮತ್ವವೇ ಮೊದಲಾದ ವಿಷಯಗಳು ಪ್ರತಿಪಾದಿತವಾಗಿದೆ ಎಂದು ಆಯಾಯಾ ಶ್ಲೋಕವ್ಯಾಖ್ಯಾನಗಳಲ್ಲಿ ತಿಳಿಸಲಾಗಿದೆ.

**ಸ್ಪಷ್ಟಂ ಮಧ್ವಾಭಿಧಾನಾಂಕಾಃ ಸಪ್ತರ್ಚೋಽತ್ರ ವಿಚಾರಿತಾಃ ।**
**ಅಷ್ಟರ್ಚಃ ತಚ್ಚರಿತ್ರಾಂಕಾಃ ಚಕ್ರಾಂಕೈಕಾ ಹರಸ್ಯವಾಕ್ ॥ ೬೫೩ ॥**

**ಅರ್ಥ–** ಅತ್ರ= ಈ ವೇದವಾಕ್ಯಸಮೂಹಗಳಲ್ಲಿ ಸ್ಪಷ್ಟಂ= ಸ್ಪಷ್ಟವಾಗಿ ಮದ್ವಾಭಿದಾನಾಂಕಾಃ= ಮಧ್ವ ಎಂಬ ಹೆಸರಿನಿಂದ ಕೂಡಿದ, ಸಪ್ತರ್ಚಃ= ಸಮಧ್ವ ಆಯುವತೇ, ಉನ್ಮಧ್ವ ಊರ್ಮಿಃ= ಮೊದಲಾದ ಏಳು ಋಕ್ಕುಗಳು, ವಿಚಾರಿತಾಃ= ವಿಚಾರ ಮಾಡಲ್ಪಟ್ಟಿವೆ. ತಚ್ಚರಿತ್ರಾಂಕಾಃ= ಆ ವಾಯುದೇವರ ರೂಪಗಳ ಚರಿತ್ರೆಯನ್ನೊಳಗೊಂಡ, ಅಷ್ಟರ್ಚಃ= ಪ್ರಸೇನಾನೀಹ ಪ್ರಾವೀವಿಪತ್, ಸೋಮಃ ಪವತೇ ಇತ್ಯಾದಿ ಮಂತ್ರಗಳು ಚಕ್ರಾಂಕಾ= ಚಕ್ರಧಾರಣೆಯನ್ನು ಪ್ರತಿಪಾದಿಸುವ, ಹರಸ್ಯ= ಶ್ರೀರುದ್ರದೇವನ, ಏಕಾವಾಕ್= ಒಂದು ಮಾತು, ವಿಚಾರಿತಾಃ= ವಿಚಾರ ಮಾಡಲ್ಪಟ್ಟಿವೆ.

**ಅನುವಾದ–** ಈ ಹಿಂದೆ ಒಟ್ಟು ವಾಯುದೇವರ ಮಹಿಮಾಪ್ರತಿಪಾದಕವಾದ ಅನೇಕ ಮಂತ್ರಗಳ ಅರ್ಥವನ್ನು ನಿರೂಪಿಸುತ್ತಾ ವಾಯುದೇವರ ಸ್ತೋತ್ರವನ್ನು ಮಾಡಿದ್ದಾರೆ. ಅದರಲ್ಲಿ ನೇರವಾಗಿ ಮಧ್ವ ಎಂಬ ಹೆಸರನ್ನು ಮಂತ್ರದಲ್ಲಿ ಹೇಳಲಾಗಿದೆ. ಅಂತಹ ಸಮಧ್ವ ಆಯುವತೇ, ಉನ್ಮಧ್ವ ಊರ್ಮಿಃ, ವಿದ್ವಾನ್ ಮಧ್ವಃ, ಮಧ್ವೋ ಅಂಶುಃ ಇತ್ಯಾದಿ ಏಳು ಮಂತ್ರಗಳು ಹಾಗೆಯೇ ಮಧ್ವ ಎಂಬ ಹೆಸರಿಲ್ಲದಿದ್ದರೂ ಅವರ ಚರಿತ್ರೆಯನ್ನು ಪ್ರತಿಪಾದಿಸುವ 'ಪ್ರಸೇನಾನೀ ಪ್ರಾವೀವಿಪತ್' 'ಬ್ರಹ್ಮಾದೇವಾನಾಂ' ಇತ್ಯಾದಿ ಎಂಟು ಮಂತ್ರಗಳು ಚಕ್ರ ಚಿಹ್ನೆಯನ್ನು ಧಾರಣೆ ಮಾಡಬೇಕೆಂದು ಪ್ರತಿಪಾದಿಸುವ ರುದ್ರದೇವರ ವಾಕ್ಯವು ಮತ್ತು ಕಾಣ್ವಶಾಖೆಯ ಶತಪಥಃಬ್ರಾಹ್ಮಣದಲ್ಲಿ ಹೇಳಿರುವ 'ದ್ವಿರೇಖಮೂರ್ಧ್ವ ಪುಂಡ್ರಂ' ಎಂಬ ವಾಕ್ಯವೂ ವಿಚಾರಿಸಲ್ಪಟ್ಟಿವೆ.

**ಭಾವವಿಲಾಸಿನೀ–** ಸಪ್ತರ್ಚಃ ಸಮಧ್ವ ಆಯುವತೇ, ಉನ್ಮಧ್ವ ಊರ್ಮಿಃ, ವಿದ್ವಾನ್ ಮಧ್ವಃ ಮಧ್ವೋ ಅಂಶುಃ ಸಿಂಹನ್ನಸಂತಂ ಮಧ್ವೋ ಅಯಾಸಂ, ಪ್ರಧಾರಾಮಧ್ವಃ, ಅಸ್ಮಭ್ಯಮಿದಂವಿಂದ್ರಯುರ್ಮಧ್ವ ಇತಿ ಸಪ್ತರ್ಚಃ । ಅಷ್ಟರ್ಚಃ । ಪ್ರಸೇನಾನೀಃ ಪ್ರಾವೀವಿಪತ್, ಸೋಮಃ ಪವತೇ ಬ್ರಹ್ಮಾ ದೇವಾನಾಂ, ಯೇನ ದೇವಾಃ ಪವಿತ್ರೇಣ, ಯತ್ತೇ ಪವಿತ್ರಮರ್ಚಿಷಿ, ಚಮೂಷಚ್ಛ್ಯೇನ, ಪವಿತ್ರಂತ ಇತಿ ಪ್ರಧಾನಭೂತಾ ಅಷ್ಟರ್ಚಃ । ಅಪೂರ್ವ್ಯಃ ಈಕ್ಷೇಣ್ಯಾಸ ಇತಿ । ಆದ್ಯಾಂತಯೋರ್ಮಿಲಿತ್ವಾ ಏಕಾ ಋಕ್ ಅಜೀತಯೇ, ಅಹತಯೇ, ಊರ್ಧ್ವೋ ಗಂಧರ್ವಃ, ಪ್ರಜಾಪತ್ಯಮ್, ಉಭಾಭ್ಯಾಂ ದೇವಸವಿತಃ, ತ್ರಿಭಿಷ್ಟ್ವಂ ದೇವಸವಿತಃ ಇತಿ

ಅಂಗಭೂತಾಷ್ಟಋಚಃ । ತಥಾ ಚಾಂಗಭೂತಾ ಋಗ್ಭಿಃಸಹ ತಚ್ಚರಿತ್ರಾಂಕಾಃ ಮಧ್ವಚರಿತ್ರವರ್ಣನಪರಾಃ ಚತುರ್ದಶ ಋಚಃ ಪೂರ್ವೋಕ್ತಸಪ್ತಶ್ರುತಿವತ್ ಸ್ಪಷ್ಟಮಧ್ವ-ನಾಮಾಂಕಾಭಾವೇಽಪಿ ಮಧ್ವಸ್ಯ ಚರಿತ್ರಂ ಮಧ್ವಪ್ರಥಮಾವತಾರದ್ವಯಚರಿತ್ರಂ ಮಧ್ವಮೂಲ-ರೂಪಚರಿತ್ರಂ ತಪ್ತಮುದ್ರಾಧಾರಣಾಖ್ಯಮಧ್ವಾಚಾರಂ ಚ ವಾಯುಸ್ತುತಾವಿವ ವರ್ಣಯತೀತ್ಯರ್ಥಃ । ಏವಂ ಚ ಮಿಲಿತ್ವಾ ಪವಮಾನೇ ಪೂಯಮಾನೇ ಚ ಮಧ್ವಗುಣ-ಪ್ರತಿಪಾದಿಕಾ ಋಚಃ ಏಕವಿಂಶತಿ ಸಂಖ್ಯಾತಾಃ । ಚಕ್ರಾಂಕಾ ಚಕ್ರಸ್ಯ ಅಂಕಃ ಚಿಹ್ನಂಪ್ರತಿಪಾದನ-ಮಿತ್ಯರ್ಥಃ। ಯಸ್ಯಾಃ ಸಾ। ಹರಸ್ಯ ವಾಗಿತ್ಯುಪಲಕ್ಷಣಮ್। ಕಾಣ್ವಾನಾಂ ಶತಪಥಬ್ರಾಹ್ಮಣವಚನಂ ಚ ಗ್ರಾಹ್ಯಮ್ ॥ ೬೫೩ ॥

**ವಾಯುಸ್ತುತೌ ಚ ಮಧ್ವಾಖ್ಯಾ ಸಕೃದೇವ ಪ್ರಕಾಶಿತಾ ।**
**ಅಸಕೃತ್ ಮಧ್ವಸನ್ನಾಮ್ನೀ ಸೇಯಂ ವಾಯೋರ್ಮಹಾಸ್ತುತಿಃ ॥ ೬೫೪ ॥**

**ಅರ್ಥ–** ವಾಯುಸ್ತುತೌ ಚ= ವಾಯುಸ್ತುತಿಯಲ್ಲಿಯಾದರೂ, ಮಧ್ವಾಖ್ಯಾ= ಮಧ್ವ ಎಂಬ ನಾಮವು, ಸಕೃದ್ ಏವ 'ಮಧ್ವಾಖ್ಯಂ ಮಂತ್ರಸಿದ್ಧಂ' ಎಂಬ ಒಂದೇ ಶ್ಲೋಕದಲ್ಲಿ ಮಾತ್ರ, ಪ್ರಕಾಶಿತಾ= ಉಲ್ಲೇಖಿತವಾಗಿದೆ, ಅಸಕೃತ್= ಅನೇಕ ಬಾರಿ ಉಪಯೋಗಿಸಿರುವ, ಮಧ್ವಸನ್ನಾಮ್ನೀ= ಮಧ್ವ ಎಂಬ ಉತ್ತಮನಾಮವುಳ್ಳ, ಸಾ ಇಯಂ= ಈ ಪವಮಾನ ಪೂಯಮಾನ ಸೂಕ್ತದಲ್ಲಿರುವ, ಋಕ್ಸಮೂಹವು, ವಾಯೋಃ= ವಾಯುದೇವರ, ಮಹಾಸ್ತುತಿಃ= ಮಹಾಸ್ತುತಿಯೇ ಆಗಿದೆ.

**ಅನುವಾದ–** ತ್ರಿವಿಕ್ರಮ ಪಂಡಿತಾಚಾರ್ಯ ವಿರಚಿತ ವಾಯುಸ್ತುತಿಯಲ್ಲಿ 'ಮಧ್ವಾಖ್ಯಂ ಮಂತ್ರಸಿದ್ಧಂ ಕಿಮುತ' ಎಂಬ ಒಂದೇ ಒಂದು ಶ್ಲೋಕದಲ್ಲಿ ಮಧ್ವ ಎಂಬ ಉತ್ತಮವಾದ ಪದವನ್ನು ಬಳಸಿದ್ದಾರೆ. ಆದರೆ ಈ ಹಿಂದೆ ಹೇಳಿರುವ ಪವಮಾನಾದಿ ಸೂಕ್ತದಲ್ಲಿರುವ ಮಂತ್ರಗಳಲ್ಲಿಯಾದರೂ ಅನೇಕ ಬಾರಿ ಶ್ರೇಷ್ಠವಾದ ಮಧ್ವ ಎಂಬ ಪದವು ಇರುವುದರಿಂದ ಈ ಮಂತ್ರಗಳು ವಾಯುದೇವನ ಸ್ತುತಿಪರವೂ ಮಹಿಮಾದಿ ದ್ಯೋತಕವು ಆಗಿ ವಾಯುಸ್ತುತಿಗಿಂತಲೂ ಉತ್ತಮವಾಗಿದೆ.

ಹಿಂದಿನ ಶ್ಲೋಕಗಳಲ್ಲಿ ಪವಮಾನ ಮತ್ತು ಪೂಯಮಾನ ಸೂಕ್ತಗಳು ಪ್ರಸಿದ್ಧವಾದ ವಾಯುಸ್ತುತಿಗೆ ಸಮಾನವಾಗಿದೆ ಎಂದು ಹೇಳಿ, ಈಗ ಅದಕ್ಕಿಂತಲೂ ಈ ಸೂಕ್ತಗಳು ಅಧಿಕವಾಗಿವೆ ಎಂಬುದನ್ನು ಹೇಳುತ್ತಿದ್ದಾರೆ. ವಾಯುಸ್ತುತೌ ಎಂಬುದಾಗಿ 'ವಾಯುಸ್ತುತಿಯಲ್ಲಿ' ಮಧ್ವಾಖ್ಯಂ ಮಂತ್ರಸಿದ್ಧಂ ಎಂಬ ಶ್ಲೋಕದಲ್ಲಿ ಮಾತ್ರ ಒಂದು ಬಾರಿ 'ಮಧ್ವ' ಎಂಬ ಪದ ಇದೆ. ಆದರೆ ನಾವು ಈ ಹಿಂದೆ ಹೇಳಿರುವ ಸಪ್ತರ್ಚಃ ಸಮಧ್ವ ಆಯುವತೇ, ವಿದ್ವಾನ್ ಮಧ್ವಃ ಇತ್ಯಾದಿ ೭ ಶ್ರುತಿಗಳಲ್ಲಿ ೭ ಬಾರಿ 'ಮಧ್ವ' ಎಂಬ ಸಮೀಚೀನವಾದ ಪದ ಇದೆ. ಶ್ಲೋಕದಲ್ಲಿರುವ

'ಸೇಯಂ' ಎಂಬ ಪದಕ್ಕೆ ಪವಮಾನ ಮತ್ತು ಪೂಯಮಾನವೆಂಬ ವೇದಮಂತ್ರಗಳು ಎಂದರ್ಥ.

**ಭಾವವಿಲಾಸಿನೀ–** ಪೂರ್ವಂ ಪವಮಾನಪೂಯಮಾನಸೂಕ್ತಯೋಃ ಪ್ರಸಿದ್ಧ ವಾಯುಸ್ತುತಿ-ಸಾಮ್ಯಮುಕ್ತಮ್ । ಇದಾನೀಂ ತತೋಽಪ್ಯತಿಶಯಮಾಹ – **ವಾಯುಸ್ತುತೌ ಚೇತಿ** ॥ ಸಕೃತ್ ಮಧ್ವಾಖ್ಯಂ ಮಂತ್ರಸಿದ್ಧಮಿತಿ ಶ್ಲೋಕೇ ಏಕವಾರಮ್ । ಅಸಕೃತ್ ಉಕ್ತವಿಧಯಾ ಸಪ್ತಶ್ರುತಿಷು ಸಪ್ತವಾರಂ, ಮಧ್ವನಾಮ್ನೀ ಮಧ್ವ ಇತಿ ಸಮೀಚೀನನಾಮವತೀ । ಸೇಯಂ ಪವಮಾನ-ಪೂಯಮಾನಸೂಕ್ತಾವ್ಯಋಜ್‌ಮಂಡಲೀ ॥ ೬೫೪ ॥

ಇದಂ ತೇ ಪಾತ್ರಮಿತ್ಯೃಕ್ಷ ಮಧ್ವಂ ಸ್ತೌತ್ಯಷ್ಟಮೇಽಷ್ಟಕೇ ।
ಶತಕ್ರತೋ ಬಹುಜ್ಞಾನ ಪರಮೈಶ್ವರ್ಯ ಹೇ ಹರೇ ॥ ೬೫೫ ॥

ಇಂದ್ರಾಖ್ಯಾ ತೇ ಸನೇ ದಾನೇ ಯೋಗ್ಯವಿತ್ತಾನಿ ಯಸ್ಯ ತತ್ ।
ಸನವಿತ್ತಂ ಜ್ಞಾನಭಕ್ತಿವಿರಕ್ತ್ಯಾದಿಗುಣೋರ್ಜಿತಮ್ ॥ ೬೫೬ ॥

ಇದಂ ಮಧ್ವಾಭಿದಂ ಪಾತ್ರಂ ಸನ್ನಿಧಾನಪದಂ ಧ್ರುವಮ್ ।
ನ ಚೇದೇತಾದೃಶಜ್ಞಾನಪೂರ್ತಿರತ್ರ ಕುತೋ ಭವೇತ್ ॥ ೬೫೭ ॥

**ಅರ್ಥ–** ಇದಂತೇ ಪಾತ್ರಮಿತಿ= ಇದಂ ತೇ ಪಾತ್ರಂ ಎಂಬ, ಋಕ್ಷ - ಮಂತ್ರವು ಸಹ, ಮಧ್ವಂ= ಶ್ರೀ ಮಧ್ವರನ್ನು, ಅಷ್ಟಮೇ ಅಷ್ಟಕೇ= ಎಂಟನೇ ಅಷ್ಟಕದಲ್ಲಿ (ವೇದದಲ್ಲಿ), ಸ್ತೌತಿ= ಸ್ತುತಿಸುತ್ತಿದೆ, ಶತಕ್ರತೋ= ಶತಕ್ರತೋ ಎಂದರೆ, ಬಹುಜ್ಞಾನ ಪರಮೈಶ್ವರ್ಯ= ಅಪರಿಮಿತವಾದ ಜ್ಞಾನ ಮತ್ತು ಪರಮೈಶ್ವರ್ಯಗಳುಳ್ಳ, ಹೇ ಹರೇ ಎಲೈ= ಶ್ರೀ ಹರಿಯೇ, ತೇ - ನಿನಗೆ, ಇಂದ್ರಾಖ್ಯಾ= ಇಂದ್ರನೆಂಬ ಹೆಸರಿದೆ, ಸನೇ= ಸನೇ ಎಂದರೆ, ದಾನೇ= ದಾನದಲ್ಲಿ ಎಂದು ಅರ್ಥ, ಯೋಗ್ಯವಿತ್ತಾನಿ= ಯೋಗ್ಯವಾದ ಧನವು, ಯಸ್ಯ= ಯಾರಿಗಿದೆಯೋ, ತತ್= ಅಂತಹ ಪಾತ್ರವು, ಸನವಿತ್ತಂ= ಸನವಿತ್ತವೆಂದು ಅನಿಸುವುದು, ಜ್ಞಾನಭಕ್ತಿ ವಿರಕ್ತ್ಯಾದಿಗುಣೋರ್ಜಿತಂ= ಜ್ಞಾನ,ಭಕ್ತಿ, ವೈರಾಗ್ಯವೇ ಮೊದಲಾದ ಗುಣಗಳಿಂದ, ಉತ್ಕೃಷ್ಟವಾದ (ತತ್= ಅದು), ಇದಂ= ಈ ಪಾತ್ರವು, ಮಧ್ವಾಬಿಧಂ= ಮಧ್ವ ಎಂಬ ಹೆಸರುಳ್ಳದ್ದು, ಪಾತ್ರಂ= ಪಾತ್ರವೆಂದರೆ, ಸನ್ನಿಧಾನಪದಂ= ಸನ್ನಿಧಾನಕ್ಕೆ ಯೋಗ್ಯವಾದ ಸ್ಥಾನವು, ನ ಚೇತ್= ಹಾಗಲ್ಲದಿದ್ದರೆ (ಪರಮಾತ್ಮನ ಸನ್ನಿಧಾನಕ್ಕೆ ಪಾತ್ರರಲ್ಲದಿದ್ದರೆ) ಅತ್ರ= ಈ ಮಧ್ವರಲ್ಲಿ, ಏತಾದೃಶ ಜ್ಞಾನಪೂರ್ತಿಃ= ಇಂತಹ ಅಪರಿಮಿತ ಪೂರ್ಣಜ್ಞಾನವು, ಕುತಃ= ಯಾವ ಕಾರಣದಿಂದ, ಭವೇತ್= ಆದೀತು?

**ಅನುವಾದ–** ಈ ಶ್ಲೋಕದಲ್ಲಿ ಮಧ್ವರ ವಿಷಯವಾದ ಸ್ತೋತ್ರವು ಋಗ್ವೇದದ ಎಂಟನೆಯ ಅಷ್ಟಕದಲ್ಲಿ 'ಇದಂತೇ ಪಾತ್ರಂ' ಎಂಬ ಮಂತ್ರದಲ್ಲಿ ವರ್ಣಿತವಾಗಿದೆ ಎಂದು ತಿಳಿಸುತ್ತಿದ್ದಾರೆ.

ಎಲ್ಲೆ ಪರಿಪೂರ್ಣಜ್ಞಾನ ಮತ್ತು ಪರಮೈಶ್ವರ್ಯಸಂಪನ್ನನಾದ ಇಂದ್ರನಾಮಕನಾದ ಪರಮಾತ್ಮನೇ 'ಜ್ಞಾನಭಕ್ತಿವೈರಾಗ್ಯವೇ ಮೊದಲಾದವುಗಳಿಂದ ಪ್ರಕೃತವಾದುದನ್ನೇ ಸನವಿತ್ತ ಎಂದು ಕರೆಯುತ್ತಾರೆ. ಇಂತಹ ಸನವಿತ್ತ ಎಂದು ಹೆಸರುಳ್ಳ ಈ ಮಧ್ವರು ನಿನ್ನ ಸನ್ನಿಧಾನಕ್ಕೆ ಪೂರ್ಣಪಾತ್ರರು. ಇಲ್ಲದೇ ಹೋದರೆ ಅವರಲ್ಲಿ ಇಂತಹ ಅಪರಿಮಿತಿವಾದ ಅನ್ಯಾದೃಶವಾದ ಜ್ಞಾನವಾದರೂ ಎಲ್ಲಿಂದ ಬಂದಿತು? ಪರಮಜ್ಞಾನ ಸಂಪನ್ನನಾದ ಶ್ರೀಹರಿಯ ಮುಖ್ಯ ಸನ್ನಿಧಾನಕ್ಕೆ ಪಾತ್ರರಾದವರು ಮಧ್ವರು ಎಂದು ಅರ್ಥ.

**ಭಾವವಿಲಾಸಿನೀ–** ಇದಂ ತೇ ಪಾತ್ರಮಿತ್ಯನೇನ ಇದಂ ತೇ ಪಾತ್ರಂ ಸನವತ್ತಿಮಿಂದ್ರ ಪಿಬಾವ ಸೋಮಮೇನಾ ಶತಕ್ರತೋ । ಪೂರ್ಣ ಆಹಾವೋ ಮದಿರಸ್ಯ ಮಧ್ವೋ ಯಂ ವಿಶ್ವ ಇದಭಿ ಹರ್ಯಂತಿ ದೇವಾ ಇತಿ ಶ್ರುತಿಂ ಗೃಹ್ಣಾತಿ । ಇದಂ ಚ ಇಂದ್ರನಾಮಕಪರಮಾತ್ಮನಂ ಪ್ರತಿ ವೇದ-ಪುರುಷಸ್ಯ ವಚನಮ್ । ಅಯಮರ್ಥಃ । ಹೇ ಶತಕ್ರತೋ ಅಪರಿಮಿತಜ್ಞಾನಪರಿಪೂರ್ಣ ! ಇಂದ್ರ ಪರಮೈಶ್ವರ್ಯ ಸಂಪನ್ನ ಪರಮಾತ್ಮನ್ । ಸನೇ ಸ್ವಭಕ್ತೇಭ್ಯೋ ರುದ್ರಾದಿಭ್ಯೋ ದಾನೇ ಯೋಗ್ಯಾನಿ ವಿತ್ತಾನಿ ಜ್ಞಾನಭಕ್ತಿವೈರಾಗ್ಯಾದೀನಿ ಯಸ್ಯ ತತ್ ಸನವಿತ್ತಮ್ । ಅಲೌಕಿಕದಿವ್ಯ-ಜ್ಞಾನಭರಿತಮಿತ್ಯರ್ಥಃ । ಇದಂ ಉಪರಿ ವಕ್ಷ್ಯಮಾಣಂ ಮಧ್ವಾಚಾರ್ಯಾಖ್ಯಂ ತೇ ತವ ಪಾತ್ರಂ ಸನ್ನಿಧಾನಯೋಗ್ಯಂ ಸ್ಥಾನಂ, ಮುಖ್ಯಪ್ರಾಣರೂಪೇ ಲೋಕಗುರೌ ಮಧ್ವಾಚಾರ್ಯೇ ತ್ವಂ ಸದಾಸನ್ನಿಹಿತೋऽಸೀತ್ಯರ್ಥಃ । ಯ ಏವಾಯಂ ಮುಖ್ಯಪ್ರಾಣಃ ತಮುದ್ಗೀಥಮುಪಾಸಾಂಚಕ್ರಿರ ಇತಿ ಶ್ರುತೇಃ । ಅನ್ಯಥಾऽಲೌಕಿಕಮನ್ಯೇಷ್ವ- ವಿದ್ಯಮಾನಮಿದಂ ಜ್ಞಾನಂ ತತ್ರೈವ ಕಥಂ ಸ್ಯಾದಿತಿ ಸೂಚನಾಯ ಸನವಿತ್ತಮಿತ್ಯುಕ್ತಮ್ ।

ಏನಾ ಏನೇನ ಸರ್ವಪ್ರಾಣಿಷು ಪ್ರೇರಕತಯಾ ಸ್ಥಿತೇನಾನೇನ ದತ್ತಂ ಸೋಮಂ ಸೋಮರಸಂ ಪಿಬ ಸೋಮಪಾಯಿನಾಂ ಮುಖೇ ಸ್ಥಿತ್ವಾ ಸೀತ್ಕಾರವಾಯುರೂಪೇಣಾನೇನ ಮುಖಾಂತಃ-ಪ್ರವೇಶಿತಂ ಸೋಮರಸಂ ವಾ ಪಿಬ । ಅಗ್ನ್ಯಂತರ್ಯಾಮಿತಯಾ ಸ್ಥಿತೇನಾನೇನ ಏತೇನ್ ಮುಖಾಖ್ಯಪಾತ್ರೇಣೇತ್ಯರ್ಥಃ । ಪಿಬೇತಿ ವಾ । ಸರ್ವಂ ಸ ಪೂತಮಶ್ನಾತಿ ಸ್ವದಿತಂ ಮಾತರಿಶ್ವನೇತಿ ಶ್ರುತೇಃ, ರಸಂ ದಾಸಸ್ಯ ಜಿಹ್ವಾಯಾಮಶ್ನಾತಿ ಕಮಲೋದ್ಭವೇತಿ ಸ್ಮೃತೇಶ್ಚ । ಇದಂಪದೇನ ಪರಾಮೃಷ್ಟಃ ಕ ಇತ್ಯತ ಆಹ – **ಪೂರ್ಣ ಆಹಾವೋ ಮದಿರಸ್ಯ ಮಧ್ವ ಇತಿ ॥** ಮದಿರಸ್ಯ ಮತ್ತಃ ಇರಂ ಈರಣಂ ಯಸ್ಯ ತಸ್ಯ ವೇದೋತ್ಪನ್ನಜ್ಞಾನಸ್ಯೇತ್ಯರ್ಥಃ । ಮತ್ಮಥನಂ ವೇದಶಾಸ್ತ್ರಾಣಾಂ ಪರ್ಯಾಲೋಚನಮಿತ್ಯರ್ಥಃ । ತದುತ್ಪನ್ನಜ್ಞಾನಸ್ಯ ವಾ । ಪೂರ್ಣಃ ಸಂಪೂರ್ಣಃ । ಮದಿರೇಣೇತಿ ವಕ್ತವ್ಯಂ ಮದಿರಸ್ಯೇತಿ ಷಷ್ಠೀ ತಸ್ಯ ಜ್ಞಾನಸ್ಯ ಪವಮಾನರೂಪಮಧ್ವಸಂಬಂಧಸ್ಯಾಪಿ ಜ್ಞಾಪನಾರ್ಥಮ್ । ಅನಂತ- ವೇದೋತ್ಪನ್ನ ಜ್ಞಾನೇನ ಸಂಪೂರ್ಣ ಇತ್ಯರ್ಥಃ । ಆಸಮಂತಾತ್ ಹಾವಃ ತಸ್ಯ ಜ್ಞಾನಸ್ಯ ಹವನಂ ತತ್ತದ್ಯೋಗ್ಯಯಾನುಸಾರೇಣ ದಾನಂ ಯಸ್ಯ ಸಃ ಆಹಾವಃ ಜ್ಞಾನಯಜ್ಞೇ ಸ್ಥಿತ್ವಾ ಜ್ಞಾನಾಖ್ಯರಸಸ್ಯ ಭೂಮಿಸ್ಥಮುಷ್ಯಾದಿಶಿಷ್ಯ ಪ್ರವಿಶಷ್ಯೇಷು ಹವನಕರ್ತಾ

**ವೇರ್ಥಃ ಹೂ ದಾನಾದಾನಯೋರಿತಿ ಧಾತೋಃ ದಾನಕರ್ತಾ ಇತ್ಯರ್ಥಃ। ಯೋ ಮಧ್ವಃ ಇದಂ ತೇ ಪಾತ್ರಮಿತಿ ಪೂರ್ವೇಣ ಸಂಬಂಧಃ।**

**ನ ಕೇವಲಂ ಭೂಮಿಸ್ಥಶಿಷ್ಯೇಷ್ವೇವ ಜ್ಞಾನದಾತಾ ಮಧ್ವಃ ಕಿಂತು ಸ್ವರ್ಗಸ್ಥದೇವೇಷ್ವಪೀತ್ಯಾಹ – ಯಮಿತಿ ॥ ಯಂ ಮಧ್ವಂ ವಿಶ್ವೇದೇವಾಃ ಇತ್ ಇತ್ಥಂ ಋಷ್ಯಾದಿಶಿಷ್ಯವದೇವ ಅಭಿ ಅಭಿತಃ ಹರ್ಯಂತಿ ಜ್ಞಾನರಸಸಂಗ್ರಹಾಯ ಪ್ರಾಪ್ನುವಂತಿ। ಯಂ ಅಭಿತಃ ಸ್ವಸಭಾಸು ವ್ಯವಹರಂತಿ ವಾ ಅಭಿತಃ ವೇದಶಾಸ್ತ್ರಾದಿಷು ವಿದ್ಯಮಾನಾನ್ ಯದ್ಗುಣಾನೇವ ಸಮಾಹಂತಿ ವಾ। ಶಿವ-ಮುಖ್ಯೈರೇಕತೋ ದೇವವೃಂದೈಃ ಶುಕಮುಖ್ಯೈರನ್ಯತಃ ಸನ್ಮುನೀಂದ್ರೈರಿತಿ ವಚನಾತ್ ॥೬೫೫॥**

**ಇಮಮೇವಾರ್ಥಂ ಪ್ರಪಂಚಯತಿ। ಶತಕ್ರತವಿತ್ಯಾದಿನಾ ॥ ಪರಮೈಶ್ವರ್ಯೇತಿ ಇಂದ್ರಾಖ್ಯೇತ್ಯ-ಸ್ಯೋಪಪಾದಕಮ್ ॥ ೬೫೬-೬೫೭ ॥**

**ವಿವರಣೆ–** 'ಇದಂ ತೇ ಪಾತ್ರಂ' ಎನ್ನುವುದರಿಂದ ಇದಂ ತೇ ಪಾತ್ರಂ ಸನವಿತ್ತಮಿಂದ್ರ ಪಿಬಾ ಸೋಮಮೇನಾ ಶತಕ್ರತೋ। ಪೂರ್ಣ ಆಹಾವೋ ಮದಿರಸ್ಯ ಮಧ್ವೋ ಯಂ ವಿಶ್ವ ಇದಭಿ ಹರ್ಯಂತಿ ದೇವಾಃ' ಎಂಬ ಶ್ರುತಿಯನ್ನು ತೆಗೆದುಕೊಳ್ಳಬೇಕು. ಇದು ವೇದಪುರುಷನು ಇಂದ್ರನಾಮಕ ಹರಿಯನ್ನು ಕುರಿತು ಹೇಳಿರುವ ಮಾತು. ಈ ಶ್ರುತ್ಯರ್ಥವು - ಹೇ ಶತಕ್ರತೋ ಅಪರಿಮಿತಜ್ಞಾನಪೂರ್ಣನೇ ಇಂದ್ರ. ಪರಮೈಶ್ವರ್ಯ ಸಂಪನ್ನನಾದ ಈ ಹರಿಯೇ! ಸನೇದಾನದಲ್ಲಿ ಎಂದು ಅರ್ಥ. ಅಂದರೆ ತನ್ನ ಭಕ್ತರಾದ ರುದ್ರಾದಿಗಳಿಗೆ ಕೊಡಲು ಯೋಗ್ಯವಾದ ಸಂಪತ್ತುಗಳು ಎಂದರೆ ಜ್ಞಾನಭಕ್ತಿ ವೈರಾಗ್ಯ ಮೊದಲಾದವುಗಳು, ಯಾರಿಗೆ ಇದೆಯೇ, ಅದು ಸನವಿತ್ತ ಅರ್ಥಾತ್ ಅಲೌಕಿಕವಾದ ದಿವ್ಯ ಜ್ಞಾನಭರಿತ ಎಂದು, ಇದಂ - ಅಂದರೆ, ಮುಂದೆ ಹೇಳುವ ಮಧ್ವರೆಂಬುವರೇ, ತೇ - ನಿನಗೆ, ಪಾತ್ರಂ - ಸನ್ನಿಧಾನಕ್ಕೆ ಯೋಗ್ಯವಾದ ಸ್ಥಾನವು, ಮುಖ್ಯಪ್ರಾಣ ರೂಪರಾದ ಲೋಕಗುರುಗಳಾದ ಶ್ರೀಮಧ್ವರಲ್ಲಿಯೇ ನೀನು ಸದಾ ವಾಸವಾಗಿರುವಿ ಎಂದು ಅರ್ಥ. 'ಯ ಏವಾಯಂ ಮುಖ್ಯಪ್ರಾಣಃ ತಂ ಉದ್ಗೀಥಮುಪಾಸಾಂ ಚಕ್ರಿರೇ' ಎಂಬ ಉಪನಿಷತ್ತು ಇದನ್ನೇ ಪ್ರತಿಪಾದನೆ ಮಾಡುತ್ತಿದೆ. ಶ್ರೀಹರಿಯ ಆವಾಸಸ್ಥಾನರು ಮಧ್ವರು ಆಗದಿದ್ದರೆ, ಅಲೌಕಿಕವಾದ ಇತರರಲ್ಲಿಯೂ ಇಲ್ಲದಿರುವ ರುದ್ರಾದಿಗಳಿಗೆ ಉಪದೇಶಕವಾದ ಈ ಜ್ಞಾನವು ಆ ಮಧ್ವರಲ್ಲಿಯೇ ಹೇಗೆ ಬಂದಿತು ಎಂಬುದನ್ನು ಸೂಚಿಸಲು 'ಸನವಿತ್ತಂ' ಎಂದು ಹೇಳಿದ್ದಾರೆ. ರುದ್ರಾದಿಗಳಿಗೆ ಕೊಡಲು ಯೋಗ್ಯವಾದ ಜ್ಞಾನಭಕ್ತಿ ವೈರಾಗ್ಯಾದಿಗಳುಳ್ಳವರು ಎಂದು ಸನವಿತ್ತ ಎಂಬ ಶಬ್ದದ ಅರ್ಥ.

ಏನ ಏನೇನ - ಎಲ್ಲಾ ಪ್ರಾಣಿಗಳಲ್ಲಿ ಪ್ರೇರಕರಾಗಿ ನಿಂತಿರುವ ವಾಯುದೇವರಿಂದ, ಕೊಡಲ್ಪಟ್ಟ ಸೋಮಂ - ಸೋಮರಸವನ್ನು, ಪಿಬ - ಪಾನಮಾಡು, ಸೋಮಪಾನ ಮಾಡುವವರ ಮುಖದಲ್ಲಿದ್ದು ಮುಖದೊಳಗೆ ಪ್ರವಿಷ್ಟವಾದ ವಾಯುರೂಪದಿಂದ ಸೋಮರಸವನ್ನು ಪಾನ ಮಾಡು ಎಂದರೆ ಅಗ್ನ್ಯಂತರ್ಯಾಮಿಯಾಗಿರುವ ವಾಯುವಿನ

**ಅವನೇ, ತಾನೇ ಇಟ್ಟ ರಸವನ್ನು ಪೂರ್ಣನಾದರೂ, ಅವನಿಗೆ ಪ್ರಿಯರಾದ ಮಧ್ವರು ಕೊಟ್ಟದ್ದರಿಂದ ಅವನು ಸ್ವೀಕರಿಸುವನು ಅಥವಾ ನಿನ್ನ ಪ್ರೀತಿಪಾತ್ರರಾದ ಮಧ್ವರು ಉಪದೇಶಿಸಿದ ಜ್ಞಾನದ ಸಾರಭಾಗವನ್ನು ಪಾನ ಮಾಡು. ಅಂದರೆ ವಾಯುದೇವರ ಸ್ತೋತ್ರದಿಂದ ಸಂತುಷ್ಟನಾಗು ಎಂದು ಅರ್ಥ.**

**ಭಾವವಿಲಾಸಿನೀ– ತತ್ ಪ್ರಿಯಾತ್ ತವ ಸೋಮರಸಾರ್ಪಕ ಮುಖ್ಯಪ್ರಾಣೋ ಪ್ರಿಯಾತ್ ॥ ೬೫ ॥**

**ವಿವರಣೆ–** ತತ್ಪ್ರಿಯಾತ್ ಎಂದರೆ ಸೋಮರಸವನ್ನು ಅರ್ಪಣೆ ಮಾಡುವ ಮುಖ್ಯಪ್ರಾಣನಲ್ಲಿ ಪ್ರೀತಿಯುಳ್ಳವನಾದ್ದರಿಂದ ಎಂದು ಅರ್ಥ.

**ಯೋಽಯಂ ಮಧ್ವೋ ಮಧ್ವನಾಮಾ ಮದಿರಸ್ಯ ಮದೀರಣಾತ್ ।**
**ಜಾತಸ್ಯ ವೇದಶಾಸ್ತ್ರಾದೇಃ ಮಥನಾದುದಿತಸ್ಯ ವಾ ॥ ೬೬೦ ॥**

**ಜ್ಞಾನಸ್ಯ ಪೂರ್ಣಃ ಸಂಪೂರ್ಣಃ ಕೇವಲಂ ಕರಣಂ ನ ತತ್ ।**
**ತತ್ಸಂಬಂಧ್ಯಪಿ ತಜ್ಜ್ಞಾನಂ ತದ್ಗುಣಸ್ಯಾಪಿ ಬೋಧನಾತ್ ॥ ೬೬೧ ॥**

**ಇತಿ ಜ್ಞಾಪಯಿತುಂ ಷಷ್ಠೀ ತಚ್ಚ ಯೋಗಿಷು ಸರ್ವತಃ ।**
**ಜುಹ್ವದಾಹಾವನಾಮಾ ಸನ್ ವರ್ತತೇ ವ್ಯಾಸಸನ್ನಿಧೌ ॥ ೬೬೨ ॥**

**ಅರ್ಥ–** ಯಃ ಅಯಂ= ಈ ಯಾವ, ಮಧ್ವಃ= ಮಧ್ವಾಚಾರ್ಯರು, ಮದಿರಸ್ಯ= ಮದೀರಣಾತ್= ನನ್ನ(ಭಗವಂತನ) ಪ್ರೇರಣೆಯಿಂದ, ಜಾತಸ್ಯ= ಅಂದರೆ ಜ್ಞಾನದಿಂದ, ವಾ= ಅಥವಾ, ವೇದಶಾಸ್ತ್ರದಲ್ಲಿ= ವೇದವೇದಾಂತಗಳ, ಮಥನಾತ್= ಕಡೆಯುವುದರಿಂದ (ವೇದಶಾಸ್ತ್ರಗಳನ್ನು ಪರ್ಯಾಲೋಚನೆಯಿಂದ), ಉದಿತಾತ್= ಹುಟ್ಟಿದ, ಜ್ಞಾನಸ್ಯ= ಜ್ಞಾನದಿಂದ, ಪೂರ್ಣಃ= ಸಂಪೂರ್ಣಃ= ಸಂಪೂರ್ಣರಾದವರು, (ಶಾಸ್ತ್ರಪರ್ಯಾಲೋಚನೆಯಿಂದುಂಟಾದ ಸಂಪೂರ್ಣಜ್ಞಾನವುಳ್ಳವರು), ತತ್= ಈ ಶಾಸ್ತ್ರೋತ್ಪನ್ನ ಜ್ಞಾನವು ನ ಕೇವಲಂ ಕರಣಂ= ಸಾಧನ ಮಾತ್ರವಲ್ಲ (ಕಿಂತು), ತದ್ಗುಣಸ್ಯಾಪಿ= ಪವಮಾನ, ಪೂಯಮಾನ ಸೂಕ್ತಗಳಲ್ಲಿ ಹೇಳಿರುವ ಆ ವಾಯುದೇವರ ಗುಣಗಳನ್ನೂ, ಬೋಧನಾತ್= ತಿಳಿಸುವುದರಿಂದ, ತತ್ಸಂಬಂಧ್ಯಪಿ= ವಾಯುದೇವರಿಗೆ ಸಂಬಂಧಿಸಿರುವಂಥದ್ದು ಕೂಡ, ತಜ್ಜ್ಞಾನಂ= ಈ ಜ್ಞಾನವನ್ನು ಇತಿ= ಈ ರೀತಿಯಾಗಿ, ಜ್ಞಾಪಯಿತುಂ= ತಿಳಿಸುವುದಕ್ಕಾಗಿ, ಷಷ್ಠೀ – ಷಷ್ಠೀವಿಭಕ್ತಿಯು ಇದೆ, ಚ= ಮತ್ತು, ತತ್= ಆ ಜ್ಞಾನವನ್ನು, ಸರ್ವತಃ= ಎಲ್ಲಾ ಕಡೆಯಲ್ಲಿರುವ, ಯೋಗಿಷು= ಜ್ಞಾನವನ್ನು ಬಯಸುವ ಯೋಗಿಗಳಲ್ಲಿ, ಜುಹ್ವತ್ ಹೋಮದ್ರವ್ಯದಂತೆ ಹೋಮಮಾಡುವವರಾಗಿ (ಉಪದೇಶ ಮಾಡಿ), ಆಹಾವನಾಮಾ

ಆಹಾವ ಎಂಬ ಹೆಸರುಳ್ಳವರಾಗಿ, ವ್ಯಾಸ ಸನ್ನಿಧೌ= ಶ್ರೀವೇದವ್ಯಾಸರ ಎದುರಿನಲ್ಲಿ ವರ್ತತೇ= ಈಗಲೂ ಇರುತ್ತಾರೆ.

**ಅನುವಾದ–** ಶ್ರೀಮಧ್ವಾಚಾರ್ಯರಿಗೆ 'ಮಧ್ವ' ಎಂಬ ಹೆಸರಿದೆ, ಏಕೆಂದರೆ ವೇದವ್ಯಾಸರಿಂದ ಪ್ರೇರಿತವಾದ ಜ್ಞಾನವುಳ್ಳವರು ಅಥವಾ ವೇದಶಾಸ್ತ್ರಗಳ ಪರ್ಯಾಲೋಚನೆಯಿಂದ ಉಂಟಾದ ಜ್ಞಾನವುಳ್ಳವರು. ಆದ್ದರಿಂದ ಇವರಿಗೆ ಮಧ್ವಃ ಎಂದು ಮತ್ತು 'ಪೂರ್ಣಃ' - ಜ್ಞಾನಪೂರ್ಣರೂ ಎಂದು ಕರೆಯುತ್ತಾರೆ. ಮಂತ್ರದಲ್ಲಿ ಮದಿರೇಣ - ಎಂಬುದಾಗಿ ತೃತೀಯಾ ವಿಭಕ್ತಿ ಬರಬೇಕಿತ್ತು ಮದಿರಸ್ಯ ಎಂಬುದಾಗಿ ಷಷ್ಠೀ ವಿಭಕ್ತಿ ಇದೆ. ಅದರ ಅಭಿಪ್ರಾಯ ವಾಯುದೇವರು ಕೇವಲ ಜ್ಞಾನದಿಂದ ಪೂರ್ಣರಾದವರಲ್ಲ ಕಿಂತು ಅವರ ಗುಣಗಳು ಪವಮಾನ ಪೂಯಮಾನಾದಿ ಸೂಕ್ತಗಳಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ ಎಂದು ಷಷ್ಠೀ ವಿಭಕ್ತಿಯು ವೇದೋಕ್ತಗುಣಗಳ ಸಂಬಂಧವನ್ನು ವಾಯುದೇವರಿಗೆ ಹೇಳುತ್ತದೆ. ಆದ್ದರಿಂದಲೂ ಪೂರ್ಣರು ಎಂದು ತಿಳಿಸುತ್ತಿದೆ. ಈ ಮಧ್ವರೂಪಿ ವಾಯುದೇವರು ಬದರಿಕಾಶ್ರಮದಲ್ಲಿ ವ್ಯಾಸಸನ್ನಿಧಾನದಲ್ಲಿ ಸನಕಾದಿ ಮುನಿಗಳಲ್ಲಿ ಜ್ಞಾನವನ್ನು ಉಪದೇಶ ಮಾಡುತ್ತಿದ್ದಾರೆ. ಆದ್ದರಿಂದ ಇವರಿಗೆ 'ಆಹಾವ' ಎಂದು (ಎಲ್ಲ ಕಡೆಯಲ್ಲಿಯು ಜ್ಞಾನ ದಾನವನ್ನು ಮಾಡುವವರು) ಹೆಸರು ಎಂದು ವಿವರಿಸುತ್ತಿದ್ದಾರೆ.

**ಭಾವವಿಲಾಸಿನೀ–** ತದ್ಗುಣಸ್ಯ ಮುಖ್ಯಪ್ರಾಣಗುಣಸ್ಯ ಬೋಧನಾತ್ ಪವಮಾನಾದೌ ಬೋಧನಾತ್ । ಷಷ್ಠೀ ಮದಿರಸ್ಯೇತಿ ಷಷ್ಠೀ । ತತ್ ಜ್ಞಾನಯಜ್ಞೇ ಸೋಮರಸಸ್ಥಾನೀಯಂ ಜ್ಞಾನಂ ಜುಹ್ವತ್ ಹವನಂ ಕರ್ವನ್ । ಅತ ಏವ ಆಹಾವನಾಮಾ ಆಸಮಂತಾತ್ ಯೋಗಿಷು ಜ್ಞಾನರಸಂ ಜುಹೋತೀತಿ ವ್ಯುತ್ಪತ್ತ್ಯಾಪ್ಯಾಹಾವನಾಮೇತಿ ಗ್ರಾಹ್ಯಮ್ ॥ ೬೬೦-೬೬೨ ॥

**ವಿವರಣೆ–** ಶ್ಲೋಕದಲ್ಲಿರುವ ತದ್ಗುಣಸ್ಯ ಎಂಬ ಪದಕ್ಕೆ ಮುಖ್ಯಪ್ರಾಣದೇವರ ಗುಣಗಳನ್ನು ಎಂದು ಅರ್ಥ. ಪವಮಾನಾದಿ ಸೂಕ್ತಗಳಲ್ಲಿ ವಾಯುದೇವರ ಮಹಿಮಾದಿಗಳನ್ನು ಪ್ರತಿಪಾದನೆ ಮಾಡಿರುವುದರಿಂದ ಎಂದು ಅರ್ಥ.

ತತ್- ಜ್ಞಾನವನ್ನು ದಾನಮಾಡುವುದರಿಂದ ಅಂದರೆ ಜ್ಞಾನಯಜ್ಞದಲ್ಲಿ ಸೋಮರಸ ಸ್ಥಾನೀಯವಾದ ಜ್ಞಾನವನ್ನು ಉಪದೇಶವನ್ನು ಮಾಡುವುದರಿಂದ 'ಆಹಾವ' ಎಂದು ಹೆಸರು ವಾಯುದೇವರಿಗೆ, ಆ - ಸಮಂತಾತ್ ಯೋಗಿಷು ಜ್ಞಾನರಸಂ ಜುಹೋತೀತಿ ವ್ಯುತ್ಪತ್ತಿಯಿಂದ ಸಿದ್ಧವಾಗುತ್ತದೆ.

**ಮುನಿಮಾತ್ರಗುರುರ್ನಾಸೌ ಇದಿತ್ಥಂ ಯಮಭಿಸ್ಥಿತಾಃ ।**
**ಹರ್ಯ್ಯಂತಿ ಮನಸಾಽಽಕೃಷ್ಯ ಧ್ಯಾಯಂತಿ ಸಕಲಾಃ ಸುರಾಃ ॥ ೬೬೩ ॥**

ವೇದ್ಯತ್ವಾತ್ ಗುಣತ್ರಯ ವಿಧರೋಭವನ್ ಚಕ್ಷುರಾದಿ ಪ್ರತ್ಯಕ್ಷೇಣ ನ ಜಾತಂ ಶಕ್ಯ ಇತ್ಯರ್ಥಃ। ನನು ವೇದೇನ ಭಗವದಜ್ಞಾನಂಭವತು ಕಿಮನುಮಾನೇನ ಇತಿ ಚೇತ್ ನ। ಚತುರ್ಮುಖ ಬ್ರಹ್ಮಣಿ ಸ್ಥಿತಜ್ಞಾನ ವಿಶೇಷಸ್ಯ ಭಗವದನುತ್ಪನ್ನತ್ವಾನುಮಾನಾಭಾವೇ ಬ್ರಹ್ಮಣ ಏವ ಸರ್ವೇಶ್ವರತ್ವಭ್ರಾಂತ್ಯಾ ವೇದಸ್ಯಾಪಿ ತದ್ವಿಷಯತ್ವ ಭ್ರಮೇಣಾನ್ಯಥಾಸಿದ್ಧತ್ವಾತ್ । ಅತೋ ಬ್ರಹ್ಮನಿಷ್ಠಜ್ಞಾನವಿಶೇಷೇಣ ಭಗವದನುಮಾನಾವಶ್ಯಂಭಾವಾತದವಶ್ಯಂ ಬ್ರಹ್ಮನಿಷ್ಠಜ್ಞಾನಂ ಭಗವತ್ ಸನ್ನಿಧಾನೋತ್ಪನ್ನಂ ಭವೇದಿತಿ ಶ್ಲೋಕಾರ್ಥಃ। ಅತಃ ಶ್ರುತಿರಪಿ ಜ್ಞಾನವಿಶೇಷಭರಿತತ್ವಾನ್ ಮಧ್ವಾಚಾರ್ಯ ಶರೀರಂ ಭಗವತ್ ಸನ್ನಿಧಾನಪಾತ್ರತ್ವೇನ ವರ್ಣಯತಿ ॥ ೬೫೮ ॥

**ವಿವರಣೆ–** 'ಸತ್ವಂ ನ ಚೇತ್' ಎಂಬುವುದರಿಂದ ಭಾಗವತ ಶ್ಲೋಕವನ್ನು ಸೂಚಿಸಿದ್ದಾರೆ. ಸತ್ವಂ ನ ಚೇತದ್ಧಾತರಿದಂ ನಿಜಂ ಭವೇತ್ ವಿಜ್ಞಾನಮಜ್ಞಾನ **'ಭಿದಾಪಮಾರ್ಜನಮ್ । ಗುಣಪ್ರಕಾಶೈರನುಮೀಯತೇ ಭವಾನ್ ಪ್ರಕಾಶತೇ ಯಸ್ಯ ಚ ಯೇನ ವಾऽಗುಣಃ ॥'** ಎಂಬ ಭಾಗವತದಲ್ಲಿರುವ ಬ್ರಹ್ಮದೇವರ ವಾಕ್ಯವನ್ನು ತೆಗೆದುಕೊಳ್ಳಬೇಕು. ಈ ಭಾಗವತದ ಮಾತಿಗೆ ಅನುಗುಣವಾಗಿ ಶ್ರುತಿಯು ಪ್ರವೃತ್ತವಾಗಿದೆ ಎಂದರ್ಥ. ಈ ಶ್ಲೋಕಾಭಿಪ್ರಾಯವು ಹೀಗಿದೆ:-

ಅಜ್ಞಾನಭಿದಾಪಮಾರ್ಜನಂ - ಅಜ್ಞಾನವಿಪರೀತಜ್ಞಾನಗಳನ್ನು ಹೋಗಲಾಡಿಸುವ, ಸತ್ವಂ - ಸಾತ್ವಿಕ ಗುಣಸ್ವರೂಪವಾದ, ಇದಂ - ನನ್ನಲ್ಲಿರುವ (ಬ್ರಹ್ಮದೇವರಲ್ಲಿರುವ) ವಿಜ್ಞಾನಂ-ವಿಶಿಷ್ಟವಾದ ಜ್ಞಾನವು, ಅಂದರೆ ದೇವರನ್ನು ಬಿಟ್ಟು ಉಳಿದ ವಿಷಯಗಳಲ್ಲಿ ಆಲೋಚಿಸಿದರೆ ಸರ್ವವಿಷಯಕವಾದ ಮನೋವೃತ್ತಿ ರೂಪವಾದ ಜ್ಞಾನವು, ನಿಜಂ - ನಿನ್ನ ವಿಶೇಷ ಸನ್ನಿಧಾನದಿಂದುಂಟಾದದ್ದು ನ ಚೇತ್ - ಆಗಿಲ್ಲದಿದ್ದರೆ (ನನ್ನದೇ) ಭವೇತ್ - ಆಗುತ್ತದೆ.

ಪ್ರಕಾಶತೇ ಯಸ್ಯ ಚ ಯೇನ ವಾ ಗುಣಃ ಎಂಬುವಲ್ಲಿರುವ 'ಯತ್' ಶಬ್ದವನ್ನು ಅನ್ವಯಕ್ಕಾಗಿ ಇಲ್ಲಿಯೂ ಇಟ್ಟುಕೊಳ್ಳಬೇಕು. ಮತ್ತು ಇಲ್ಲಿರುವ 'ಯತ್' ಶಬ್ದವು 'ಕಿಂ' ಎಂಬ ಅರ್ಥದಲ್ಲಿ ಬಳಸಿದ್ದಾರೆ. ಹಾಗೆಯೇ, ಹೇ ಧಾತಃ - ಎಲ್ಲರ ಸಂರಕ್ಷಕವಾದ ಪರಮಾತ್ಮನೇ, ಭವಾನ್ - ನೀನು, ಗುಣಪ್ರಕಾಶೈಃ - ಬ್ರಹ್ಮಾದಿದೇವತೆಗಳಲ್ಲಿರುವ ಗುಣಗಳನ್ನು ಪ್ರಕಾಶಗೊಳಿಸುವ ಧರ್ಮಗಳಿಂದ, ಅನುಮೀಯತೇ ಯೇನ - ಯಾವ ಮನುಷ್ಯನಿಂದ ಅನುಮಾನಿಸಲ್ಪಡುತ್ತೀಯೇ? ಅಂದರೆ ನೀನು ಯಾವ ಅನುಮಾನದಿಂದಲೂ ವೇದ್ಯನಲ್ಲ.

ಇದಂ ಜ್ಞಾನಂ ಕೇನಚಿತ್ ಪುರುಷೇಣೋಪದಿಷ್ಟಂ ಅನಿತ್ಯಜ್ಞಾನತ್ವೇ ಸತಿ ಅತಿಶಯಿತಜ್ಞಾನತ್ವಾತ್ । ವ್ಯತಿರೇಕೇಣ ಭಗವಜ್‌ಜ್ಞಾನವತ್, ಲೌಕಿಕ ಘಟಾದಿ ಜ್ಞಾನವತ್ ವಾ ಎಂಬ ಅನುಮಾನದಿಂದ, ಬ್ರಹ್ಮಾದಿಗಳಲ್ಲಿರುವ ವಿಶಿಷ್ಟವಾದ ಅನ್ಯಾದೃಶವಾದ ಜ್ಞಾನವನ್ನು ಕಂಡು ಇಂತಹ ಜ್ಞಾನವು ಇವರಲ್ಲಿ ಇರಬೇಕಾದರೆ (ಬರಬೇಕಾದರೆ) ಅವರು ಭಗವಂತನ ಸನ್ನಿಧಾನಕ್ಕೆ ಪರಮ ಮುಖ್ಯಪಾತ್ರರು ಎಂದು ಊಹಿಸುತ್ತಾರೆ.

**ಅನುಮಾನದ ಅಭಿಪ್ರಾಯ–** ಬ್ರಹ್ಮಾದಿಗಳ ಜ್ಞಾನವು ಯಾರಿಂದಲೋ ಉಪದಿಷ್ಟವಾದದ್ದು ಯಾರು ಜ್ಞಾನವನ್ನು ಉಪದೇಶವನ್ನು ಮಾಡಿದವನೋ ಅವನೇ ಪರಮಾತ್ಮ ಅಂದರೆ ಪರಮಾತ್ಮನ ಅನುಗ್ರಹದಿಂದ ಬ್ರಹ್ಮದೇವರಿಗೆ ಇಂತಹ ಜ್ಞಾನವು ಉಂಟಾಗಿದೆ ಎಂದರ್ಥ.

ಕಣ್ಣು ಮೊದಲಾದ ಇಂದ್ರಿಯಗಳಿಂದಲೇ ಭಗವಜ್ಜ್ಞಾನವು ಉಂಟಾಗುತ್ತಾ ಇದ್ದರೂ, ಅನುಮಾನದಿಂದಲೇ ಸಾಧನೆ ಮಾಡಿದ್ದು ಏಕೆ ಎಂಬ ಪ್ರಶ್ನೆಗೆ ಉತ್ತರವಾಗಿ : ಪ್ರಕಾಶತೇ ಎಂಬುದಾಗಿ ಹೇಳಿದ್ದಾರೆ. ಅಗುಣಃ ಸತ್ವಾದಿಗುಣರಹಿತನಾದ ನೀನು ಯಸ್ಯ - ಯಾವ ಪುರುಷನಿಗೆ ಯೇನ - ಯಾವ ಸಾಧನದಿಂದ, ಪ್ರಕಾಶತೇ - ತಿಳಿಯಲ್ಪಡುತ್ತೀ. ಪ್ರತ್ಯಕ್ಷದಿಂದ ತಿಳಿಯಲ್ಪಡುವುದಿಲ್ಲ. ಆದ್ದರಿಂದ ಬ್ರಹ್ಮನಲ್ಲಿರುವ ವಿಶಿಷ್ಟಜ್ಞಾನದಿಂದ ಭಗವಂತನನ್ನು ಅನುಮಾನ ಮಾಡಲೇ ಬೇಕಾದ್ದರಿಂದ ಭಗವಂತನ ಸನ್ನಿಧಾನಕ್ಕೆ ಪಾತ್ರರಾಗಿದ್ದಕ್ಕೆಯೆ ಬ್ರಹ್ಮದೇವನಿಗೆ ವಿಶಿಷ್ಟ ಜ್ಞಾನವುಂಟು ಎಂದು ತಿಳಿಯುತ್ತದೆ. ಶ್ಲೋಕಸಂವಾದದಿಂದ ಶ್ರುತಿಯು ಕೂಡ ಅನ್ಯಾದೃಶವಾದ ಜ್ಞಾನವುಳ್ಳವರಾದ್ದರಿಂದಲೇ ಮಧ್ವಾಚಾರ್ಯರೂ ಭಗವಂತನ ಸನ್ನಿಧಾನಕ್ಕೆ ಪಾತ್ರರಾದವರು ಎಂದು ಹೇಳುತ್ತಿದೆ.

**ಏನಾನೇನ ಪ್ರಾಣತಯಾ ಸರ್ವತ್ರವ್ಯಾಪಿನಾಽರ್ಪಿತಮ್ ।**
**ಸೋಮಂ ಯಜ್ಞರಸಂ ಸರ್ವಂ ಪಿಬ ಪೂರ್ಣೋಽಪಿ ತತ್ಪ್ರಿಯಾತ್ ।**
**ಜ್ಞಾನಯಜ್ಞರಸಂ ದಿವ್ಯಜ್ಞಾನಾಖ್ಯಂ ರಸಮೇವ ವಾ ॥ ೬೫ ॥**

**ಅರ್ಥ–** ಪ್ರಾಣತಯಾ= ಪ್ರಾಣರೂಪದಿಂದ, ಸರ್ವತ್ರವ್ಯಾಪಿನಾ= ಎಲ್ಲೆಡೆಯಲ್ಲಿಯೂ ವ್ಯಾಪ್ತನಾದ ಶ್ರೀಹರಿಯಿಂದಲೇ, ಅರ್ಪಿತಂ= ಇಡಲ್ಪಟ್ಟ ಸೋಮಂ= ಸೋಮವೆಂಬ, ಯಜ್ಞರಸಂ= ಯಜ್ಞದಲ್ಲಿ ಬಳಸುವ ರಸವನ್ನು, ಸರ್ವಂ= ಎಲ್ಲವನ್ನು, ಏನ ಅನೇನ= ಈ ಮುಖ್ಯಪ್ರಾಣದಿಂದ, ಪಿಬ= ಪಾನ ಮಾಡು, ಪೂರ್ಣೋಽಪಿ= (ನೀನು) ಪೂರ್ಣನಾಗಿದ್ದರೂ, ತತ್ಪ್ರಿಯಾತ್= ವಾಯುದೇವರಲ್ಲಿ ವಿಶೇಷ ಪ್ರೀತಿ ಇರುವುದರಿಂದ, ಪಿಬ= ಪಾನ ಮಾಡು, ವಾ= ಅಥವಾ, ಜ್ಞಾನಯಜ್ಞರಸಂ= ಜ್ಞಾನಯಜ್ಞದಲ್ಲಿ ಸಾರಭೂತವಾದ, ದಿವ್ಯಜ್ಞಾನಾಖ್ಯಂ= ದಿವ್ಯಜ್ಞಾನವೆಂಬ ರಸಮೇವ= ಸಾರಭಾಗವನ್ನೇ, (ಪಿಬ= ಪಾನಮಾಡು).

**ಅನುವಾದ–** 'ಇದಂ ತೇ ಪಾತ್ರಂ' ಎಂಬ ಶುತ್ಯರ್ಥವನ್ನೇ ವಿವರಿಸುತ್ತಿದ್ದಾರೆ. ಸರ್ವವ್ಯಾಪಿಯಾದ ಪರಮಾತ್ಮನೇ ಪ್ರಾಣರೂಪದಿಂದ ವಾಯುದೇವರಲ್ಲಿ ಇದ್ದುಕೊಂಡು ಎಲ್ಲ ಕೆಲಸಗಳನ್ನು ಮಾಡಿಸುತ್ತಾನೆ. ಹಾಗೆಯೇ ಪರಮಾತ್ಮನೇ ಯಜ್ಞದಲ್ಲಿ ಸೋಮರಸವನ್ನು ಪಾನ ಮಾಡುತ್ತಾನೆ. ಆ ಸೋಮರಸವನ್ನು ವಾಯುದೇವರು ನೀಡಿರುತ್ತಾರೆ. ವಾಯುದೇವರಲ್ಲಿ ರಸವನ್ನು ತುಂಬಿರುವವನು

ಮುಖವೆಂಬ ಪಾತ್ರೆಯಿಂದ ಸೋಮರಸವನ್ನು ಪಾನಮಾಡು ಎಂದರ್ಥ. ಇದನ್ನೇ 'ಸರ್ವಂ ಸಪೂತಂ ಅಶ್ನಾತಿ ಸ್ವದಿತಂ ಮಾತರಿಶ್ವನಾ' ಎಂಬ ಶ್ರುತಿಯು, 'ರಸಂ ದಾಸಸ್ಯ ಜಿಹ್ವಾಯಾಮಶ್ನಾತಿ ಕಮಲೋದ್ಭವ' ಎಂಬ ಸ್ಮೃತಿಯೂ ಪ್ರತಿಪಾದಿಸುತ್ತದೆ.

'ಇದಂ ತೇ ಪಾತ್ರಂ' ಎಂಬ ಶ್ರುತಿಯಲ್ಲಿರುವ ಇದಂ ಎಂಬ ಪದದಿಂದ ಯಾರನ್ನು ಪರಾಮರ್ಶೆ ಮಾಡಬೇಕು ಎಂಬುದನ್ನು 'ಪೂರ್ಣ ಆಹಾವೋ ಮದಿರಸ್ಯ ಮಧ್ವ' ಎಂಬ ಉತ್ತರಾರ್ಧದ ವಾಕ್ಯದಿಂದ ನಿರೂಪಿಸುತ್ತಾರೆ. ಅದರ ಅರ್ಥ ಹೀಗಿದೆ :- ಮದಿರಸ್ಯ ಮತ್ತಃ - ನನ್ನಿಂದ (ವೇದಪುರುಷನಿಂದ) ಉಂಟಾದ, ಇರಸ್ಯ - ಜ್ಞಾನದ, ಅರ್ಥಾತ್ ವೇದೋತ್ಪನವಾದ ಜ್ಞಾನದ (ಜ್ಞಾನದಿಂದ) ಅಥವಾ ಮತ್ - ಮಥನಂ ವೇದಶಾಸ್ತ್ರಗಳ ಪರ್ಯಾಲೋಚನೆಯಿಂದ, ವೇದಶಾಸ್ತ್ರಾಧ್ಯಯನ, ವಿಚಾರ ವಿನಿಮಯವೇ ಮೊದಲಾದವುಗಳಿಂದ ಉಂಟಾದ ಜ್ಞಾನದ (ಜ್ಞಾನದಿಂದ) ಪೂರ್ಣಃ - ಸಂಪೂರ್ಣನಾದ, ಮದಿರೇಣ ಪೂರ್ಣಃ ಎಂದು ವೇದೋತ್ಪನ್ನವಾದ ಜ್ಞಾನದಿಂದ ಪೂರ್ಣನಾದವನು ಎಂದು ಹೇಳಬೇಕಾದಲ್ಲಿ ಮದಿರಸ್ಯ ಎಂದು ಷಷ್ಠಿ ವಿಭಕ್ತಿಯನ್ನು ಹೇಳಿದ್ದು ಸರಿಯಾಗಿದೆ. ಏಕೆಂದರೆ 'ಏಕಶತಂ ಷಷ್ಠ್ಯರ್ಥಾಃ' ಎಂಬ ಮಾತಿನಿಂದ ನೂರು ಅರ್ಥಗಳು ಷಷ್ಠಿ ವಿಭಕ್ತಿಗೆ ಇವೆ ಎಂದು ತಿಳಿಯುತ್ತದೆ. ಹಾಗೆ ಪ್ರಕೃತದಲ್ಲಿ 'ಮದಿರಸ್ಯ' ಎಂದು ಷಷ್ಠೀ ವಿಭಕ್ತಿಯು ಸಂಬಂಧಸಾಮಾನ್ಯವಾಚಕವಾಗಿದೆ. ಆದ್ದರಿಂದ ವೇದೋತ್ಪನ್ನವಾದ ಜ್ಞಾನಕ್ಕೆ ಪವಮಾನ ಮತ್ತು ಪೂಯಮಾನ ರೂಪಿಯಾಗಿ ಮಧ್ವಾಚಾರ್ಯರ ಸಂಬಂಧವನ್ನು ಹೇಳುತ್ತದೆ. ಷಷ್ಠಿ ವಿಭಕ್ತಿಯನ್ನು ಹೇಳಿದ್ದರಿಂದ 'ಅನಂತವೇದೋತ್ಪನ್ನವಾದ ಜ್ಞಾನದಿಂದ ಪರಿಪೂರ್ಣರಾದವರು ಮಧ್ವರು' ಎಂದರ್ಥವು ತಿಳಿಯುತ್ತದೆ.

ಆಹಾವಃ - ಆ ಸಮತಾತ್ - ಎಲ್ಲ ಕಡೆಯಲ್ಲಿಯು, ಹಾವಃ - ಹವನಃ - ದಾನವು, ಯಾರಿಗೋ ಅರ್ಥಾತ್ ಆ ವೇದೋತ್ಪನ್ನಜ್ಞಾನವನ್ನು ಆಯಾಯ ಯೋಗ್ಯತೆಗಳಿಗೆ ಅನುಗುಣವಾಗಿ ದಾನವನ್ನು ಮಾಡಿದರೋ, ಅಂದರೆ ಜ್ಞಾನಯಜ್ಞದಲ್ಲಿ ಇದ್ದುಕೊಂಡು ಜ್ಞಾನವೆಂಬ ರಸವನ್ನು ಭೂಮಿಯ ಮೇಲಿರುವ ಋಷ್ಯಾದಿ ಶಿಷ್ಯ ಪ್ರಶಿಷ್ಯರಿಗೆ ವಿತರಿಸುವವರು ಯಾರೋ ಅವರೇ, ಯಃ ಮಧ್ವ ಆ ಯಾವ ಮಧ್ವಾಚಾರ್ಯರೇ, ಇದಂತೇ ಪಾತ್ರಂ ಎಂಬುವಲ್ಲಿ 'ಇದಂ' ಎಂಬ ಪದದಿಂದ ವಾಚ್ಯರಾದವರು ಅವರೇ ಎಂದು ಹಿಂದಿನ ವಾಕ್ಯಕ್ಕೆ ಅನ್ವಯಿಸಬೇಕು.

ಕೇವಲ ಭೂಮಿಯಲ್ಲಿರುವ ಶಿಷ್ಯರಿಗೆ ಮಾತ್ರ ಜ್ಞಾನದಾತೃಗಳಲ್ಲ ಈ ಮಧ್ವರು, ಕಿಂತು ಸ್ವರ್ಗದಲ್ಲಿರುವ ದೇವಾನುದೇವತೆಗಳಿಗೂ ಜ್ಞಾನದಾತೃಗಳು ಎಂಬುದನ್ನು 'ಯಂ' ಇತ್ಯಾದಿ ಭಾಗವು ಹೇಳುತ್ತಿದೆ.

ಯಂ - ಯಾವ ಮಧ್ವಾಚಾರ್ಯರನ್ನು ವಿಶ್ವೇ - ಎಲ್ಲಾ ದೇವತೆಗಳು, ಇತ್ - ಈ ರೀತಿಯಾಗಿ ಅಂದರೆ ಋಷ್ಯಾದಿ ಶಿಷ್ಯರಂತೆಯೇ, ಅಭಿ - ಸುತ್ತಲೂ ಹರ್ಯಂತಿ

- ಜ್ಞಾನರಸವನ್ನು ಪಡೆಯುವುದಕ್ಕಾಗಿ ಬಂದಿರುವವರೋ, ಎಂದರೆ ತಮ್ಮ ಸಭೆಗಳಲ್ಲಿ ಮಧ್ವರನ್ನು ಸುತ್ತುವರಿದು ಅವರಿಂದ ಜ್ಞಾನೋಪದೇಶವನ್ನು ಪಡೆಯುತ್ತಾರೆ ಅಥವಾ ಮಧ್ವರಿಗೆ ಸಂಬಂಧಪಟ್ಟ ವೇದಶಾಸ್ತ್ರಗಳಲ್ಲಿ ಹೇಳಿರುವ ಗುಣಗಳನ್ನು ಚಿಂತಿಸುತ್ತಿರುತ್ತಾರೆ ಎಂಬ ಈ ವಿಷಯವನ್ನೇ ಶಿವಮುಖ್ಯೈಃ ಏಕತೋ ದೇವವೃಂದ್ಯಃ ಶುಕಮುಖ್ಯೈರೇಕತೋ ಸನ್ಮುನೀಂದ್ರೈಃ ಎಂದು ಮಾತು ತಿಳಿಸುತ್ತದೆ.

**ಸ ತ್ವಂ ನ ಚೇದಿತಿ ಪ್ರೋಕ್ತಂ ದೇವವಾಕ್ಯಮನುಸ್ಮರ ॥ ೬೫೮ ॥**

**ಅರ್ಥ–** 'ಸತ್ವಂ ನ ಚೇದಿತಿ'= ಸತ್ವಂ ನ ಚೇತ್ ಎಂದು ಪ್ರೋಕ್ತಂ= ಭಾಗವತದಲ್ಲಿ ಹೇಳಲ್ಪಟ್ಟ ದೇವವಾಕ್ಯಂ= ಬ್ರಹ್ಮದೇವರ ವಾಕ್ಯವನ್ನು ಅನುಸ್ಮರ= ಸ್ಮರಿಸು.

**ಅನುವಾದ–** ಈ ಹಿಂದೆ ಹೇಳಿರುವ 'ಇದಂತೇ' ಎಂಬ ಶುತ್ಯರ್ಥವನ್ನೇ ಹೇಳುವ 'ಸತ್ವಂ ನ ಚೇತ್' ಎಂಬ ಭಾಗವತದಲ್ಲಿರುವ ಬ್ರಹ್ಮದೇವರು ಹೇಳಿರುವ ಶ್ಲೋಕವನ್ನು ಸ್ಮರಿಸು.

**ಭಾವವಿಲಾಸಿನೀ–** ಸತ್ವಂ ನ ಚೇದಿತಿ ಪ್ರೋಕ್ತಮಿತ್ಯನೇನ, ಸತ್ವಂ ನ ಚೇದ್ಧಾತರಿದಂ ನಿಜಂ ಭವೇತ್ ವಿಜ್ಞಾನಮಜ್ಞಾನಭಿದಾಪಮಾರ್ಜನಮ್ । ಗುಣಪ್ರಕಾಶೈರನುಮೀಯತೇ ಭವಾನ್ ಪ್ರಕಾಶತೇ ಯಸ್ಯ ಚ ಯೇ ನ ವಾ ಗುಣಃ ॥

ಇತಿ ಭಾಗವತಸ್ಥಬ್ರಹ್ಮವಾಕ್ಯಂ ಗೃಹ್ಣಾತಿ। ಉಕ್ತಭಾಗವತ- ವಚನಾನುಸಾರೇಣ ಶ್ರುತಿರಪಿ ಪ್ರವೃತ್ತೇತಿ ಭಾವಃ । ಅಯಂ ಶ್ಲೋಕಾರ್ಥಃ । ಅಜ್ಞಾನಭಿದಾಪಮಾರ್ಜನಮ್ ಅಜ್ಞಾನವಿಪರೀತ-ಜ್ಞಾನನಾಶನಮ್ । ಸತ್ವಂ ಸತ್ವಗುಣಾತ್ಮಕಮ್ । ಇದಂ ಬ್ರಹ್ಮಣಿ ಮಯಿ ವಿದ್ಯಮಾನಂ ವಿಜ್ಞಾನಂ ವಿಶಿಷ್ಟಂ ಈಶ್ವರಾದನ್ಯತ್ರಾಲೋಚನೇ ಸತಿ ಸರ್ವವಿಷಯಂ ಜ್ಞಾನಂ ಮನೋವೃತ್ತಿರೂಪಜ್ಞಾನಂ ನಿಜಂ ತವ ಸನ್ನಿಧಾನಾಜ್ಜಾತಮ್। ನ ಚೇತ್ ಗುಣಪ್ರಕಾಶೈಃ ಬ್ರಹ್ಮಾದಿಷು ವಿದ್ಯಮಾನಗುಣಪ್ರಕಾಶೈಃ ಭವಾನ್ ಯೇನ ಕೇನ ಪುರುಷೇಣಾನುಮೀಯತೇ । ನ ಕೇನಾಪ್ಯನುಮೀಯತ ಇತ್ಯರ್ಥಃ। ಯಚ್ಚಬ್ದೋಽತ್ರ ಕಿಂಶಬ್ದಾರ್ಥೇ । ಉಪರಿ ಕಥ್ಯಮಾನಂ ಯೇನೇತಿಪದಮತ್ರಾಪಿ ಸಂಬಧ್ಯತೇ । ಅನ್ಯಥಾ ಅನ್ವಯಸ್ಯಾಪೂರ್ಣತ್ವಾತ್ ।

ಇದಂ ಜ್ಞಾನಂ ಕೇನಚಿತ್‌ಪುರುಷವಿಶೇಷೇಣೋಪದಿಷ್ಟಮ್, ಅನಿತ್ಯಜ್ಞಾನತ್ವೇ ಸತ್ಯತಿಶಯಿತ-ಜ್ಞಾನತ್ವಾತ್ ವ್ಯತಿರೇಕೇಣ ಭಗವತ್ ಜ್ಞಾನವತ್, ಲೌಕಿಕಘಟಾದಿಜ್ಞಾನವದ್ವೇತಿ ಬ್ರಹ್ಮಾದಿಷು ವಿದ್ಯಮಾನಜ್ಞಾನವಿಶೇಷಂ ದೃಷ್ಟ್ವಾ ಯತಸ್ತವಾನುಮಾನಂ ಕುರ್ವಂತಿ ಅತಸ್ತತ್ ಜ್ಞಾನಂ ತ್ವತ್ ಸನ್ನಿಧಾನೋತ್ಪನ್ನಂ ಭವೇತ್ ।

ನನು ಚಕ್ಷುರಾದಿನೈವ ಭಗವತ್‌ಜ್ಞಾನಂ ಭವೇತ್ ಕಿಮನುಮಾನೇನೇತ್ಯತ ಉಕ್ತಮ್ ॥ **ಪ್ರಕಾಶತ ಇತ್ಯಾದಿನಾ** ॥ ಅಗುಣಃ ಸತ್ವಾದಿಗುಣರಹಿತೋ ಭವಾನ್ ಯಸ್ಯ ಕಸ್ಯ ಪುರುಷಸ್ಯ, ಯೇನ ಕೇನ ಸಾಧನೇನ ಪ್ರಕಾಶತೇ । ನ ಕೇನಾಪೀತ್ಯರ್ಥಃ । ಸತ್ವಾದಿಗುಣತ್ರಯಾತ್ಮಕಜಗತ ಏವ ಪ್ರತ್ಯಕ್ಷ-

**ಅರ್ಥ–** ಅಸೌ= ಈ ಮಧ್ವಾಚಾರ್ಯರು, ಮುನಿಮಾತ್ರಗುರುಃ ನ= ಋಷ್ಯಾದಿಗಳಿಗೆ ಮಾತ್ರ ಜ್ಞಾನವನ್ನು ಉಪದೇಶಮಾಡುವವರಲ್ಲ ಇತ್ ಇತ್ಥಂ= ಇದು ಹೀಗಿದೆ (ಏಕೆಂದರೆ) ಅಭಿಸ್ಥಿತಾಃ= ಎಲ್ಲಾ ಕಡೆಯಿರುವ, ಸಕಲಾಃ= ಎಲ್ಲಾ ಸುರಾಃ= ದೇವತೆಗಳು, ಯಂ=ಯಾವ ಮಧ್ವರೂಪಿಯಾದ ವಾಯುದೇವರನ್ನು ಮನಸಾ= ತಮ್ಮ ಮನಸ್ಸಿನಿಂದ, ಆಕೃಷ್ಯ= ಹಿಡಿದಿಟ್ಟುಕೊಂಡು (ಮನಸ್ಸಿನಲ್ಲಿ ಸ್ಥಾಪನೆಮಾಡಿಕೊಂಡು) ಹರ್ಯಂತಿ= ಹರ್ಯತಿ ಎಂದರೆ, ಧ್ಯಾಯಂತಿ= ಧ್ಯಾನಮಾಡುತ್ತಾರೆ.

**ಅನುವಾದ– ಶುತ್ಯರ್ಥವನ್ನು ವಿವರಿಸುತ್ತಿದ್ದಾರೆ. ಈ ಮಧ್ವರೂಪಿ ಪ್ರಾಣದೇವರು, ಕೇವಲ ಸನಕಾದಿಗಳಿಗೆ ಜ್ಞಾನವನ್ನು ಉಪದೇಶ ಮಾಡುವವರಲ್ಲ. ಕಿಂತು ರುದ್ರಾದಿ ಎಲ್ಲಾ ದೇವತೆಗಳಿಗೂ ಜ್ಞಾನವನ್ನು ಉಪದೇಶ ಮಾಡುತ್ತಾರೆ. ಆದ್ದರಿಂದಲೇ ಎಲ್ಲಾ ದೇವತೆಗಳು ಈ ಮಧ್ವರನ್ನು ತಮ್ಮ ಮನಸ್ಸಿನಲ್ಲಿ ಚಿಂತಿಸುತ್ತಾರೆ.**

**ಭಾವವಿಲಾಸಿನೀ– ಆಕೃಷ್ಯ ಸ್ವಹೃದಯಗುಹಾಂ ಪ್ರತ್ಯಾಕೃಷ್ಯ । ಹರ್ಯಂತೀತ್ಯಸ್ಯಾರ್ಥ ಕಥನಂ ಧ್ಯಾಯಂತೀತಿ । ಗುಣೋಪಸಂಹಾರಾತ್ಮಕಧ್ಯಾನಸ್ಯ ಹೃಞ್‌ಧಾತ್ವರ್ಥತ್ವ ಸಂಭವಾದಿತಿ ಭಾವಃ ॥ ೬೬೩ ॥**

**ವಿವರಣೆ–** ಆಕೃಷ್ಯ ಎಂದರೆ ತಮ್ಮ ಹೃದಯಯಲ್ಲಿಟ್ಟುಕೊಂಡು, ಹರ್ಯಂತಿ ಎಂಬುದರ ಅರ್ಥವೇ ಧ್ಯಾಯಂತಿ ಎಂಬುದಾಗಿ/ ಹರ್ಯಂತಿ ಎಂಬುದು ಹೃಞ್ - ಹರಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ವೈದಿಕರೂಪ. ಇಲ್ಲಿ ಹೃಞ್ ಧಾತುವಿಗೆ ಧ್ಯಾನ ಎಂಬುದಾಗಿ ಅರ್ಥವನ್ನು ಹೇಳಿದ್ದಾರೆ. ಅದು ಹೇಗೆಂದರೆ ದೇವತೆಗಳು ವಾಯುದೇವರ ಗುಣಗಳನ್ನು ಧ್ಯಾನ ಮಾಡಿ ಉಪಸಂಹಾರ ಮಾಡಿಕೊಳ್ಳುತ್ತಾರೆ. ಇದೇ ಧ್ಯಾನ. ಆದ್ದರಿಂದ ಹರ್ಯಂತಿ ಎಂದರೆ ಧ್ಯಾಯಂತಿ ಎಂಬ ಅರ್ಥವು ಸರಿಯಾಗಿದೆ.

**ಅಭಿತೋ ವಾ ವ್ಯಾಹರಂತಿ ತಮೀದೃಕ್ಸುಗುಣಂ ಸುರಾಃ ।**
**ಯದ್ವಾಽಭಿತಃ ಪ್ರಾಪ್ನುವಂತಿ ಚೇಪ್ಸಯಾ ಶಾಸ್ತ್ರಸಂಪದಾಮ್ ॥ ೬೬೪ ॥**

**ಅರ್ಥ–** ವಾ= ಅಥವಾ, ಸುರಾಃ= ದೇವತೆಗಳು, ತಂ= ಆ ಮಧ್ವರೂಪಿ ಪ್ರಾಣದೇವರನ್ನು, ಈದೃಕ್ಸುಗುಣಂ= ಇಂತಹ ಸಕಲಗುಣಪರಿಪೂರ್ಣರು ಎಂದು, ಅಭಿತಃ= ಎಲ್ಲಾ ಕಡೆಗಳಲ್ಲಿಯೂ, ವ್ಯಾಹರಂತಿ= ಹೇಳುತ್ತಾರೆ, ಯದ್ವಾ= ಅಥವಾ, ಶಾಸ್ತ್ರಸಂಪದಾಂ= ಶಾಸ್ತ್ರಸಂಪತ್ತಿನ, ಈಪ್ಸಯಾ= ಜಾನೇಚ್ಛೆಯಿಂದ, ಅಭಿತಃ= ಮಧ್ವರ ಸುತ್ತಲೂ, ಪ್ರಾಪ್ನುವಂತಿ= ಹೊಂದುತ್ತಾರೆ.

**ಅನುವಾದ–** ಶ್ರುತಿಯಲ್ಲಿರುವ 'ಹರ್ಯಂತಿ' ಎಂಬ ಪದದ ಅರ್ಥವನ್ನು ವಿವರಿಸುತ್ತಿದ್ದಾರೆ. ಎಲ್ಲಾ ದೇವತೆಗಳು 'ವಾಯುದೇವರು ರುದ್ರಾದಿಗಳಿಗೆ ಮತ್ತು

ಸನಕಾದಿ ಋಷಿಗಳಿಗೆ ಜ್ಞಾನೋಪದೇಶಕರು. 'ಇಂತಹ ಅಪರಿಮಿತವಾದ ಜ್ಞಾನವು ಅವರಲ್ಲಿರುವ ಪರಮಾತ್ಮನ ಸನ್ನಿಧಾನದಿಂದ ಉಂಟಾಗಿದ್ದು' ಎಂದು ಮೂರ್ಲೋಕದಲ್ಲೆಲ್ಲಾ ಹಾಡಿ ಹೊಗಳುತ್ತಿದ್ದಾರೆ. ಈ ಅರ್ಥದಲ್ಲಿ ಹರ್ಯಂತಿ - ವ್ಯಾಹರಂತಿ (ಹೇಳುತ್ತಿದ್ದಾರೆ) ಎಂದರ್ಥ. ಅಥವಾ ವೇದಶಾಸ್ತ್ರಗಳಲ್ಲಿ ಹೇಳಿರುವ ಎಲ್ಲಾ ದೇವತೆಗಳೂ ಪರಮಾತ್ಮನ ಜ್ಞಾನವನ್ನು ಪಡೆಯುವುದಕ್ಕಾಗಿ ವಾಯುದೇವರನ್ನು ಹೊಂದಿದರು ಎಂದು ಅಭಿಪ್ರಾಯ. ಈ ಅರ್ಥದಲ್ಲಿ ಹರ್ಯಂತಿ ಎಂದರೆ ಪ್ರಾಪ್ನುವಂತಿ (ಹೊಂದಿದರು) ಎಂದರ್ಥ.

**ಭಾವವಿಲಾಸಿನೀ–** ಹರ್ಯಂತೀತಿ ಚಾಂದಸಪದಂ, ವ್ಯಾಹರಂತಿ ಅಭಿಲಪಂತಿ। ಅತ್ರಾಪಿ ಹೃಞ್ ಧಾತ್ವರ್ಥತ್ವಂ ಘಟಯಿತುಂ ವ್ಯಾಹರಂತೀತ್ಯುಕ್ತಮ್ । ಈಪ್ಸಯ ಜ್ಞಾನೇಚ್ಛಯಾ ॥ ೬೬೪ ॥

**ವಿವರಣೆ–** ಹರ್ಯಂತಿ ಎಂಬುದು ವೈದಿಕ ಪ್ರಯೋಗ. ವ್ಯಾಹರಂತಿ ಎಂದರೆ ಅಭಲಪಂತಿ ಅಂದರೆ ಹೇಳುವರು ಎಂದರ್ಥ. ಇಲ್ಲಿಯೂ ಹಿಂದಿನ ಶ್ಲೋಕದಂತೆ 'ಹೃಞ್' ಧಾತುವಿನ ಅರ್ಥವನ್ನು ಕೂಡಿಸುವುದಕ್ಕಾಗಿ ವ್ಯಾಹರಂತಿ ಎಂಬುದಾಗಿ ಹೇಳಿದ್ದು ಹೃಞ್ ಧಾತುವು ಅಭಿಲಪನಾರ್ಥದಲ್ಲಿ (ಮಾತನಾಡುವಿಕೆ) ಎಂಬ ಅರ್ಥದಲ್ಲಿ ಇದೆ ಎಂಬುದಕ್ಕೆ ರಾಮಾಯಣದ ರಾಮನ ಮಾತೇ ಪ್ರಮಾಣ.

**ಹರ್ಯನ್ನುಷಸಮಿತ್ಯಾದೌ ಪ್ರಾಪ್ತ್ಯರ್ಥೋऽಸ್ತಿ ಯತೋ ಹೃಞಃ ।**
**ಅನ್ಯಾರ್ಥಶೂನ್ಯಾ ವಾಗೇಷಾ ಕಿಂ ನ ಬ್ರೂತೇ ಗುರುಂ ಮಮ ॥ ೬೬೫ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಹೃಞಃ= ಹೃಞಧಾತುವು ಹರ್ಯನ್ನುಷಸಂ ಇತ್ಯಾದೌ= ಹರ್ಯನ್ನುಷಸಮರ್ಚಯಃ= ಇತ್ಯಾದಿ ವೇದಮಂತ್ರಗಳಲ್ಲಿ, ಪ್ರಾಪ್ತ್ಯರ್ಥಃ= ಪ್ರಾಪ್ತಿ ಎಂಬ ಅರ್ಥವುಳ್ಳದ್ದಾಗಿ, ಅಸ್ತಿ= ಇದೆಯೋ ಆದ್ದರಿಂದ, ಅನ್ಯಾರ್ಥಶೂನ್ಯಾ= ಬೇರೆ ಅರ್ಥವಿಲ್ಲದ, ಏಷಾ ವಾಕ್= ಈ ವಾಕ್ಯವು, ಮಮ ಗುರುಂ= ನನ್ನ ಗುರುಗಳಾದ ಶ್ರೀ ಮಧ್ವಾಚಾರ್ಯರನ್ನು ಬ್ರೂತೇ ನ ಕಿಂ= ಹೇಳುವುದಿಲ್ಲವೇನು?

**ಅನುವಾದ–** 'ಹರ್ಯಂತಿ' ಎಂಬ ಪದವು ಪ್ರಾಪ್ತಿ ಎಂಬ ಅರ್ಥದಲ್ಲಿದೆ ಎಂದು ವಿವರಿಸುತ್ತಾರೆ. ಹೃಞ್ ಧಾತುವು ಪ್ರಾಪ್ತಿ ಎಂಬ ಅರ್ಥದಲ್ಲಿದೆ. ಏಕೆಂದರೆ 'ಹರ್ಯನ್ನುಷಸಂ' ಎಂಬ ವೇದವಾಕ್ಯದಲ್ಲಿ ಹರ್ಯನ್ ಎಂಬ ಪದವನ್ನು ಪ್ರಾಪ್ತಿ ಎಂಬ ಅರ್ಥದಲ್ಲಿ ಹೇಳಿದ್ದಾರೆ. ಆದ್ದರಿಂದ 'ಹರ್ಯಂತಿ' ಎಂಬ ವೇದವಾಕ್ಯವು ಬೇರೆ ಅರ್ಥದಲ್ಲಿಯೇ ಇಲ್ಲ, ಈ ವಾಕ್ಯವು ನಮ್ಮ ಗುರುಗಳನ್ನು ಹೇಳುವುದಿಲ್ಲವೇನು?

**ಭಾವವಿಲಾಸಿನೀ–** ಹರ್ಯನ್ನಿತ್ಯಸ್ಯ ಪ್ರಾಪ್ತ್ಯರ್ಥತ್ವೇ ವೈದಿಕಪ್ರಯೋಗಂ ದರ್ಶಯತಿ- ಹರ್ಯನ್ನುಷಸಮಿತ್ಯಾದಾವಿತಿ ॥ ಅನೇನ ಹರ್ಯನ್ನುಷಸಮರ್ಚಯಃ ಸೂರ್ಯಂ

ಹರ್ಯನ್ನರೋಚಯಃ । ವಿದ್ವಾಂಶ್ಚಿಕಿತ್ವಾನ್ ಹರ್ಯಶ್ವವರ್ಧಸ ಇಂದ್ರವಿಶ್ವಾ ಅಭಿಶ್ರಿಯ ಇತಿ ಶ್ರುತಿಂ ಗೃಹ್ಣಾತಿ। ಅಯಮರ್ಥಃ। ಹೇ ಹರ್ಯಶ್ವ ಹರಿದ್ವರ್ಣಾಶ್ವಸಮೇತ। ಇಂದ್ರ ಇಂದ್ರನಾಮಕ-ಪರಮೈಶ್ವರ್ಯ ಸಂಪನ್ನ ಪರಮಾತ್ಮನ್ ವಿದ್ವಾನ್ ! ಸರ್ವಜ್ಞಃ ಚಿಕಿತ್ವಾನ್ ಜಗತ್ ಸೃಷ್ಟ್ಯಾದಿಕಂ ಕುರ್ವಂಸ್ತ್ವಂ ಉಷಸಂ ಉಷಃ ಕಾಲಂ ಹರ್ಯನ್ ಪ್ರಾಪ್ನುವನ್ । ಅರ್ಚಯಃ ಸ್ನಾನಸಂಧ್ಯಾ-ವಂದನಾದಿನಾ ಭಗವತ್ಪೂಜಾಂ ಸಜ್ಜನಮುಖೇನ ಅಕಾರಯಃ । ಸೂರ್ಯಂ ಉಷಃ ಕಾಲೋಪರಿ ಉದ್ಯಂತಮಾದಿತ್ಯಂ ಹರ್ಯನ್ ಪ್ರಾಪ್ನುವನ್ । ತದ್ಬಿಂಬೇ ಸನ್ನಿಧಾನಂ ಕುರ್ವನ್ನಿತ್ಯರ್ಥಃ । ವಿಶ್ವಾಃ ಸಮಸ್ತಾಃ ಅಭಿ ಅಭಿತೋ ವಿದ್ಯಮಾನಾಃ ಶ್ರಿಯಃ ನಾನಾಶ್ರೀಮತಃ ಸಪ್ತದ್ವೀಪಾನ್ ದಿಶೋ ವಾ ವರ್ಧಸೇ ತತ್ರತ್ಯಸಜ್ಜನಾನಾಮಭಿವೃದ್ಧಯೇ ಅರೋಚಯಃ ಪ್ರಾಕಾಶಯಃ । ಸೂರ್ಯೇ ಸ್ಥಿತ್ವಾಸ್ವ ಮರೀಚಿಭಿಃ ಸಕಲಂ ಜಗದಭಾಸಯ ಇತ್ಯರ್ಥಃ । ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ । ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮಿತಿ ಸ್ಮೃತೇಃ । ಏವಂ ಚ ಏತಚ್ಛ್ರುತಿಸಮಾಖ್ಯಾಯಾ ಹರ್ಯಂತೀ-ತ್ಯತ್ರಾಪಿ ಪ್ರಾಪ್ನುವಂತೀತ್ಯರ್ಥೋ ಘಟತ ಇತಿ ಭಾವಃ ॥ ೬೬೫ ॥

**ವಿವರಣೆ–** ಹರ್ಯನ್ ಎಂಬ ಪದವು ಪ್ರಾಪ್ತಿ ಎಂಬ ಅರ್ಥದಲ್ಲಿದೆ ಎಂಬುದಕ್ಕೆ ವೈದಿಕ ಪ್ರಯೋಗವನ್ನು ತಿಳಿಸುತ್ತಿದ್ದಾರೆ.

ಹರ್ಯನ್ನುಷಸಮರ್ಚಯಃ ಸೂರ್ಯಂ ಹರ್ಯನ್ನರೋಚಯಃ ।
ವಿದ್ವಾಂಶ್ಚಿಕಿತ್ವಾನ್ ಹರ್ಯಶ್ವ ವರ್ಧಸ್ವ ಇಂದ್ರ ವಿಶ್ವಾ ಅಭಿಶ್ರಿಯಃ ॥

ಎಂಬ ಶ್ರುತಿಯನ್ನು ತೆಗೆದುಕೊಳ್ಳಬೇಕು.

**ಶ್ರುತ್ಯರ್ಥವು ಹೀಗಿದೆ-** ಹೇ ಹರ್ಯಶ್ವ- ಹಸಿರು ಬಣ್ಣದ ಕುದುರೆಗಳಿಂದ ಕೂಡಿದ, ಇಂದ್ರ - ಪರಮೈಶ್ವರ್ಯಸಂಪನ್ನನಾದ ಇಂದ್ರನಾಮಕನಾದ ದೇವರೇ! ವಿದ್ವಾನ್ - ಸರ್ವಜ್ಞನಾದ ಚಿಕಿತ್ವಾನ್ - ಜಗತ್ಸೃಷ್ಟ್ಯಾದಿಗಳನ್ನು ಮಾಡುತ್ತಿರುವ ತ್ವಂ - ನೀನು, ಉಷಸಂ - ಉಷಃಕಾಲವನ್ನು ಹರ್ಯನ್ - ಹೊಂದುವವನಾಗಿ, ಅರ್ಚಯಃ - ಸ್ನಾನ ಸಂಧ್ಯಾವಂದನಾದಿಗಳಿಂದ ಭಗವಂತನ ಪೂಜೆಯನ್ನು ಸಜ್ಜನರಿಂದ ಮಾಡಿಸುವಿ.

ಸೂರ್ಯಂ- ಉಷಃಕಾಲದ ನಂತರ ಪ್ರಕಾಶಿಸುವ ಸೂರ್ಯನನ್ನು ಹರ್ಯನ್ - ಹೊಂದುವವನಾಗಿ (ಅಂತಹ ಸೂರ್ಯನಲ್ಲಿ ಸನ್ನಿಹಿತನಾಗಿದ್ದುಕೊಂಡು), ವಿಶ್ವಾಃ ಅಂದರೆ, ಎಲ್ಲಾ ಅಭಿ ಅಂದರೆ ಸುತ್ತಲೂ ಇರುವ, ಶ್ರಿಯಃ - ಅನೇಕ ಸಂಪದ್ಭರಿತವಾದ ಸಪ್ತ ದ್ವೀಪಗಳನ್ನು ಅಥವಾ ಹತ್ತು ದಿಕ್ಕುಗಳನ್ನು ವರ್ಧಸೇ ಅಂದರೆ ಅಲ್ಲಿರುವ ಸಜ್ಜನರ ಅಭಿವೃದ್ಧಿಗಾಗಿ, ಅರೋಚಯಃ ಅಂದರೆ ಪ್ರಕಾಶಗೊಳಿಸುವಿ.

ಶ್ರುತಿಯು ಅಭಿಪ್ರಾಯಃ ಪರಮಾತ್ಮನೇ! ಸರ್ವಜ್ಞನಾದ ನೀನು ಸೂರ್ಯನಲ್ಲಿ ಇದ್ದು ಕೊಂಡು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾ ಸೂರ್ಯೋದಯವಾಗುವ ಸಮಯದಲ್ಲಿ

ಸಜ್ಜನರಿಂದ ಅವರಿಗನುಗುಣವಾದ ಸ್ನಾನಸಂಧ್ಯಾವಂದನೆ, ಭಗವತ್ಪೂಜೆ ಮೊದಲಾದ ವಿಹಿತಕರ್ಮಗಳನ್ನು ಮಾಡಿಸುತ್ತೀಯೆ ಮತ್ತು ಸಜ್ಜನರಿಗೆ ಅನುಗ್ರಹಮಾಡುವುದಕ್ಕಾಗಿ ಸಪ್ತದ್ವೀಪಗಳನ್ನೂ ಎಲ್ಲಾ ದಿಕ್ಕುಗಳನ್ನೂ ಸಂಪದ್ಭರಿತವನ್ನಾಗಿ ಮಡುತ್ತಿರುವಿ.

ದೇವರ ಸರ್ವಾಂತರ್ಯಾಮಿತ್ವವನ್ನು ಭಗವದ್ಗೀತೆ 15ನೇ ಅಧ್ಯಾಯದ

**ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಂ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಂ ॥**

-ಎಂಬಲ್ಲಿ ಕೃಷ್ಣಪರಮಾತ್ಮ ಅರ್ಜುನನಿಗೆ ಹೀಗೆ ಉಪದೇಶವನ್ನು ಮಾಡಿದ್ದಾರೆ.

ಹಾಗಾದರೆ 'ಇದಂತೇ ಪಾತ್ರಂ' ಎಂಬ ಶ್ರುತಿಯಲ್ಲಿ ಹೇಳಿರುವ 'ಹರ್ಯಂತಿ' ಎಂಬ ಪದಕ್ಕೆ 'ಪ್ರಾಪ್ನುವಂತಿ' ಅಂದರೆ 'ಹೊಂದುವರು' ಎಂಬ ಅರ್ಥವು ಸಮಂಜಸವಾಗಿದೆ ಏಕೆಂದರೆ 'ಹರ್ಯನ್ ಉಷಸಂ ಅರ್ಚಯಃ' ಎಂಬ ಶ್ರುತಿಯಲ್ಲಿಯೂ 'ಹರ್ಯನ್' ಎಂಬ ಪದಕ್ಕೆ 'ಪ್ರಾಪ್ನುವನ್' ಅಂದರೆ 'ಹೊಂದಿದವನಾಗಿ' ಎಂಬ ಅರ್ಥವನ್ನು ಹೇಳಿದ್ದಾರೆ. ಈ ಶ್ರುತಿಯ ಸಮಾಖ್ಯಾ ಇರುವುದರಿಂದ ಹೃಇ್ ಧಾತುವು 'ಪ್ರಾಪ್ತಿ' ಎಂಬ ಅರ್ಥದಲ್ಲಿದೆ ಎಂದು ಹೇಳಿದ್ದು ಸಮಂಜಸವಾಗಿದೆ.

**ಮಧ್ವೋ ವೋ ನಾಮೇತಿ ವಾಕ್ಚ ಮರುತ್ಸೂಕ್ತೇ ತಮುಜ್ಜಗೌ ॥ ೬೬೬ ॥**

**ಅರ್ಥ–** ತಂ= ಆ ಮಧ್ವಾಚಾರ್ಯರನ್ನು, ಮಧ್ವೋ ವೋ ನಾಮ= ಮಧ್ವೋ ವೋ ನಾಮ ಎಂಬ ಶ್ರುತಿಯೂ, ಮರುತ್ಸೂಕ್ತೇ= ಮರುತ್ಸೂಕ್ತದಲ್ಲಿ ಉಜ್ಜಗೌ= ಅತಿಶಯಸ್ಪಷ್ಟವಾಗಿ ಕೀರ್ತಿಸುತ್ತದೆ.

**ಅನುವಾದ–** ಮರುತ್ಸೂಕ್ತದಲ್ಲಿ ಬರುವ 'ಮಧ್ವೋ ವೋ ನಾಮ ಮಾರುತಂ ಯಜತ್ರಾಃ' ಎಂಬ ವಾಕ್ಯವೂ ಕೂಡ ಆಚಾರ್ಯ ಮಧ್ವರನ್ನು ಉತ್ಕೃಷ್ಟವಾಗಿ ವರ್ಣಿಸುತ್ತಿದೆ.

**ಭಾವವಿಲಾಸಿನೀ–** ಆಚಾರ್ಯವಿಷಯೇ ಅತಿಸ್ಪಷ್ಟಂ ಶ್ರುತ್ಯಂತರ ಚಾಹ – **ಮಧ್ವೋ ವ ಇತಿ ॥** ತಂ ಮಧ್ವಮ್ । ಅನೇನ ಮಧ್ವೋ ವೋ ನಾಮ ಮಾರುತಂ ಯಜತ್ರಾಃ ಪ್ರಯಜ್ಞೇಷು ಶವಸಾ ಸಾಮದಂತಿ । ಯೇ ರೇಜಯಂತಿ ರೋದಸೀ ಚಿದುರ್ವೀಪಿನ್ವಂತ್ಯುತ್ಸಂ ಯದಯಾಸುರುಗ್ರಾ ಇತಿ ಶ್ರುತಿಂ ಸಂಗೃಹ್ಣಾತಿ । ಅಯಮರ್ಥಃ । ಯದ್ಯಸ್ಮಾತ್ ಉಗ್ರಾಃ ಬಾಹುಯುದ್ಧೇ ವಾಗ್ಯುದ್ಧೇ ಚಾತ್ಯುಗ್ರಾಃ ಹೇ ಹನೂಮದ್ಭೀಮ ಮಧ್ವರೂಪಾವಾಯೋರವತಾರಾಃ ! ಉರ್ವೀ ಉರ್ವೀಂ ಭೂಮಿಮಿತ್ಯರ್ಥಃ । ಸುಪಾಂಸುಲುಗಿತಿ ಸೂತ್ರಾತ್ । ಅಯಾಸುಃ ಆಜಗ್ಮುಃ । ತತ್ತಸ್ಮಾತ್ ಉತ್ಸಂ ಸ್ವಚರಣ ಕಮಲೇಉತ್ಸುಕಂ ಪುರುಷಂ ಪಿನ್ವಂತಿ ಸಕಲಭಾಗ್ಯಸೇಚನಂ ಕೃತ್ವಾ ರಕ್ಷಂತಿ । ಪಿನ್ವಸೇಚನ ಇತಿ ಧಾತೋಃ । ಸ್ವಸತ್ಯಲೋಕಂ ವಿಹಾಯ ಭೂಮಿಂ ಪ್ರತ್ಯಾಗಮನಾದ್ಭೂಮಿಸ್ಥ-ಸಜ್ಜನರಕ್ಷತ್ವಂ ಮುಖ್ಯಪ್ರಾಣಸ್ಯ ಅವತಾರಾಃ ಸುಪ್ರಸಿದ್ಧಾ ಭವಿಷ್ಯಂತೀತಿ ಕಾಣ್ವೋಕ್ತಿಸತ್ಯ-

ಹರ್ಯನ್ನರೋಚಯಃ । ವಿದ್ವಾಂಶ್ಚಿಕಿತ್ವಾನ್ ಹರ್ಯಶ್ವವರ್ಧಸ ಇಂದ್ರವಿಶ್ವಾ ಅಭಿಶ್ರಿಯ ಇತಿ ಶ್ರುತಿಂ ಗೃಹ್ಣಾತಿ। ಅಯಮರ್ಥಃ। ಹೇ ಹರ್ಯಶ್ವಹರಿದ್ವರ್ಣಾಶ್ವಸಮೇತ। ಇಂದ್ರ ಇಂದ್ರನಾಮಕ- ಪರಮೈಶ್ವರ್ಯ ಸಂಪನ್ನ ಪರಮಾತ್ಮನ್ ವಿದ್ವಾನ್ ! ಸರ್ವಜ್ಞಃ ಚಿಕಿತ್ವಾನ್ ಜಗತ್ ಸೃಷ್ಟ್ಯಾದಿಕಂ ಕುರ್ವಂಸ್ತ್ವಂ ಉಷಸಂ ಉಷಃ ಕಾಲಂ ಹರ್ಯನ್ ಪ್ರಾಪ್ನುವನ್ । ಅರ್ಚಯಃ ಸ್ನಾನಸಂಧ್ಯಾ- ವಂದನಾದಿನಾ ಭಗವತ್ಪೂಜಾಂ ಸಜ್ಜನಮುಖೇನ ಅಕಾರಯಃ । ಸೂರ್ಯಂ ಉಷಃ ಕಾಲೋಪರಿ ಉದ್ಯಂತಮಾದಿತ್ಯಂ ಹರ್ಯನ್ ಪ್ರಾಪ್ನುವನ್ । ತದ್ಬಿಂಬೇ ಸನ್ನಿಧಾನಂ ಕುರ್ವನ್ನಿತ್ಯರ್ಥಃ। ವಿಶ್ವಾಃ ಸಮಸ್ತಾಃ ಅಭಿ ಅಭಿತೋ ವಿದ್ಯಮಾನಾಃ ಶ್ರಿಯಃ ನಾನಾಶ್ರೀಮತಃ ಸಪ್ತದ್ವೀಪಾನ್ ದಿಶೋ ವಾ ವರ್ಧಸೇ ತತ್ರತ್ಯಸಜ್ಜನಾನಾಮಭಿವೃದ್ಧಯೇ ಅರೋಚಯಃ ಪ್ರಾಕಾಶಯಃ । ಸೂರ್ಯೇ ಸ್ಥಿತ್ವಾಸ್ವ ಮರೀಚಿಭಿಃ ಸಕಲಂ ಜಗದಭಾಸಯ ಇತ್ಯರ್ಥಃ । ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ । ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮಿತಿ ಸ್ಮೃತೇಃ। ಏವಂ ಚ ಏತಚ್ಛ್ರುತಿಸಮಾಖ್ಯಾಯಾ ಹರ್ಯಂತೀ- ತ್ಯತ್ರಾಪಿ ಪ್ರಾಪ್ನುವಂತೀತ್ಯರ್ಥೋ ಘಟತ ಇತಿ ಭಾವಃ ॥ ೬೬೫ ॥

**ವಿವರಣೆ–** ಹರ್ಯನ್ ಎಂಬ ಪದವು ಪ್ರಾಪ್ತಿ ಎಂಬ ಅರ್ಥದಲ್ಲಿದೆ ಎಂಬುದಕ್ಕೆ ವೈದಿಕ ಪ್ರಯೋಗವನ್ನು ತಿಳಿಸುತ್ತಿದ್ದಾರೆ.

ಹರ್ಯನ್ನುಷಸಮರ್ಚಯಃ ಸೂರ್ಯಂ ಹರ್ಯನ್ನರೋಚಯಃ ।
ವಿದ್ವಾಂಶ್ಚಿಕಿತ್ವಾನ್ ಹರ್ಯಶ್ವ ವರ್ಧಸ್ವ ಇಂದ್ರ ವಿಶ್ವಾ ಅಭಿಶ್ರಿಯಃ ॥

ಎಂಬ ಶ್ರುತಿಯನ್ನು ತೆಗೆದುಕೊಳ್ಳಬೇಕು.

**ಶುತ್ಯರ್ಥವು ಹೀಗಿದೆ-** ಹೇ ಹರ್ಯಶ್ವ- ಹಸಿರು ಬಣ್ಣದ ಕುದುರೆಗಳಿಂದ ಕೂಡಿದ, ಇಂದ್ರ - ಪರಮೈಶ್ವರ್ಯಸಂಪನ್ನನಾದ ಇಂದ್ರನಾಮಕನಾದ ದೇವರೇ! ವಿದ್ವಾನ್ - ಸರ್ವಜ್ಞನಾದ ಚಿಕಿತ್ವಾನ್ - ಜಗತ್ಸೃಷ್ಟ್ಯಾದಿಗಳನ್ನು ಮಾಡುತ್ತಿರುವ ತ್ವಂ - ನೀನು, ಉಷಸಂ - ಉಷಃಕಾಲವನ್ನು ಹರ್ಯನ್ - ಹೊಂದುವವನಾಗಿ, ಅರ್ಚಯಃ - ಸ್ನಾನ ಸಂಧ್ಯಾವಂದನಾದಿಗಳಿಂದ ಭಗವಂತನ ಪೂಜೆಯನ್ನು ಸಜ್ಜನರಿಂದ ಮಾಡಿಸುವಿ.

ಸೂರ್ಯಂ- ಉಷಃಕಾಲದ ನಂತರ ಪ್ರಕಾಶಿಸುವ ಸೂರ್ಯನನ್ನು ಹರ್ಯನ್ - ಹೊಂದುವವನಾಗಿ (ಅಂತಹ ಸೂರ್ಯನಲ್ಲಿ ಸನ್ನಿಹಿತನಾಗಿದ್ದುಕೊಂಡು), ವಿಶ್ವಾಃ ಅಂದರೆ, ಎಲ್ಲಾ ಅಭಿ ಅಂದರೆ ಸುತ್ತಲೂ ಇರುವ, ಶ್ರಿಯಃ - ಅನೇಕ ಸಂಪದ್ಭರಿತವಾದ ಸಪ್ತ ದ್ವೀಪಗಳನ್ನು ಅಥವಾ ಹತ್ತು ದಿಕ್ಕುಗಳನ್ನು ವರ್ಧಸೇ ಅಂದರೆ ಅಲ್ಲಿರುವ ಸಜ್ಜನರ ಅಭಿವೃದ್ಧಿಗಾಗಿ, ಅರೋಚಯಃ ಅಂದರೆ ಪ್ರಕಾಶಗೊಳಿಸುವಿ.

ಶ್ರುತಿಯು ಅಭಿಪ್ರಾಯಃ ಪರಮಾತ್ಮನೇ! ಸರ್ವಜ್ಞನಾದ ನೀನು ಸೂರ್ಯನಲ್ಲಿ ಇದ್ದು ಕೊಂಡು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾ ಸೂರ್ಯೋದಯವಾಗುವ ಸಮಯದಲ್ಲಿ

ಸಜ್ಜನರಿಂದ ಅವರಿಗನುಗುಣವಾದ ಸ್ನಾನಸಂಧ್ಯಾವಂದನೆ, ಭಗವತ್ಪೂಜೆ ಮೊದಲಾದ ವಿಹಿತಕರ್ಮಗಳನ್ನು ಮಾಡಿಸುತ್ತೀಯೆ ಮತ್ತು ಸಜ್ಜನರಿಗೆ ಅನುಗ್ರಹಮಾಡುವುದಕ್ಕಾಗಿ ಸಪ್ತದ್ವೀಪಗಳನ್ನೂ ಎಲ್ಲಾ ದಿಕ್ಕುಗಳನ್ನೂ ಸಂಪದ್ಭರಿತವನ್ನಾಗಿ ಮಡುತ್ತಿರುವಿ.

ದೇವರ ಸರ್ವಾಂತರ್ಯಾಮಿತ್ವವನ್ನು ಭಗವದ್ಗೀತೆ 15ನೇ ಅಧ್ಯಾಯದ

**ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಂ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಂ ॥**

-ಎಂಬಲ್ಲಿ ಕೃಷ್ಣಪರಮಾತ್ಮ ಅರ್ಜುನನಿಗೆ ಹೀಗೆ ಉಪದೇಶವನ್ನು ಮಾಡಿದ್ದಾರೆ.

ಹಾಗಾದರೆ 'ಇದಂತೇ ಪಾತ್ರಂ' ಎಂಬ ಶ್ರುತಿಯಲ್ಲಿ ಹೇಳಿರುವ 'ಹರ್ಯಂತಿ' ಎಂಬ ಪದಕ್ಕೆ 'ಪ್ರಾಪ್ನುವಂತಿ' ಅಂದರೆ 'ಹೊಂದುವರು' ಎಂಬ ಅರ್ಥವು ಸಮಂಜಸವಾಗಿದೆ ಏಕೆಂದರೆ 'ಹರ್ಯನ್ ಉಷಸಂ ಅರ್ಚಯಃ' ಎಂಬ ಶ್ರುತಿಯಲ್ಲಿಯೂ 'ಹರ್ಯನ್' ಎಂಬ ಪದಕ್ಕೆ 'ಪ್ರಾಪ್ನುವನ್' ಅಂದರೆ 'ಹೊಂದಿದವನಾಗಿ' ಎಂಬ ಅರ್ಥವನ್ನು ಹೇಳಿದ್ದಾರೆ. ಈ ಶ್ರುತಿಯ ಸಮಾಖ್ಯಾ ಇರುವುದರಿಂದ ಹ್ಯಞ್ ಧಾತುವು 'ಪ್ರಾಪ್ತಿ' ಎಂಬ ಅರ್ಥದಲ್ಲಿದೆ ಎಂದು ಹೇಳಿದ್ದು ಸಮಂಜಸವಾಗಿದೆ.

## ಮಧ್ವೋ ವೋ ನಾಮೇತಿ ವಾಕ್ಚ ಮರುತ್ಸೂಕ್ತೇ ತಮುಜ್ಜಗೌ ॥ ೬೬೬ ॥

**ಅರ್ಥ–** ತಂ= ಆ ಮಧ್ವಾಚಾರ್ಯರನ್ನು ಮಧ್ವೋ ವೋ ನಾಮ= ಮಧ್ವೋ ವೋ ನಾಮ ಎಂಬ ಶ್ರುತಿಯೂ, ಮರುತ್ಸೂಕ್ತೇ= ಮರುತ್ಸೂಕ್ತದಲ್ಲಿ ಉಜ್ಜಗೌ= ಅತಿಶಯಸ್ಪಷ್ಟವಾಗಿ ಕೀರ್ತಿಸುತ್ತದೆ.

**ಅನುವಾದ–** ಮರುತ್ಸೂಕ್ತದಲ್ಲಿ ಬರುವ 'ಮಧ್ವೋ ವೋ ನಾಮ ಮಾರುತಂ ಯಜತ್ರಾಃ' ಎಂಬ ವಾಕ್ಯವೂ ಕೂಡ ಆಚಾರ್ಯ ಮಧ್ವರನ್ನು ಉತ್ಕೃಷ್ಟವಾಗಿ ವರ್ಣಿಸುತ್ತಿದೆ.

**ಭಾವವಿಲಾಸಿನೀ–** ಆಚಾರ್ಯವಿಷಯೇ ಅತಿಸ್ಪಷ್ಟಂ ಶ್ರುತ್ಯಂತರ ಚಾಹ – **ಮಧ್ವೋ ವ ಇತಿ ॥** ತಂ ಮಧ್ವಮ್ । ಅನೇನ ಮಧ್ವೋ ವೋ ನಾಮ ಮಾರುತಂ ಯಜತ್ರಾಃ ಪ್ರಯಜ್ಞೇಷು ಶವಸಾ ಸಾಮದಂತಿ । ಯೇ ರೇಜಯಂತಿ ರೋದಸೀ ಚಿದುರ್ವೀಪಿನ್ವಂತ್ಯುತ್ಸಂ ಯದಯಾಸುರುಗ್ರಾ ಇತಿ ಶ್ರುತಿಂ ಸಂಗೃಹ್ಣಾತಿ । ಅಯಮರ್ಥಃ । ಯದ್ಯಸ್ಮಾತ್ ಉಗ್ರಾಃ ಬಾಹುಯುದ್ಧೇ ವಾಗ್ಯುದ್ಧೇ ಚಾತ್ಯುಗ್ರಾಃ ಹೇ ಹನೂಮದ್ಭೀಮ ಮಧ್ವರೂಪಾವಾಯೋರವತಾರಾಃ ! ಉರ್ವೀ ಉರ್ವೀಂ ಭೂಮಿಮಿತ್ಯರ್ಥಃ । ಸುಪಾಂಸುಲುಗಿತಿ ಸೂತ್ರಾತ್ । ಅಯಾಸುಃ ಆಜಗ್ಮುಃ । ತತ್‌ತಸ್ಮಾತ್ ಉತ್ಸಂ ಸ್ವಚರಣ ಕಮಲೇಉತ್ಸುಕಂ ಪುರುಷಂ ಪಿನ್ವಂತಿ ಸಕಲಭಾಗ್ಯಸೇಚನಂ ಕೃತ್ವಾ ರಕ್ಷಂತಿ । ಪಿನ್ವಸೇಚನ ಇತಿ ಧಾತೋಃ । ಸ್ವಸತ್ಯಲೋಕಂ ವಿಹಾಯ ಭೂಮಿಂ ಪ್ರತ್ಯಾಗಮನಾದ್ಭೂಮಿಸ್ಥ-ಸಜ್ಜನರಕ್ಷತ್ವಂ ಮುಖ್ಯಪ್ರಾಣಸ್ಯ ಅವತಾರಾಃ ಸುಪ್ರಸಿದ್ಧಾ ಭವಿಷ್ಯಂತೀತಿ ಕಾಣ್ವೋಕ್ತಿಸತ್ಯ-

ಕರಣಾತ್ಮಾಣ್ವರಕ್ಷಕತ್ವಂ ಚ ಸುಪ್ರಸಿದ್ಧಮಭೂದಿತಿ ಭಾವಃ । ಯೇ ಕೇಚಿತ್ ಏವ । ಉರ್ವೀ ಉರ್ವ್ಯೌ ಉತ್ಕೃಷ್ಟೇ ರೋದಸೀ ದ್ಯಾವಾಪೃಥಿವ್ಯೌ । ರೇಜಯಂತಿ ರಾಜಯಂತಿ ಸ್ವಚರಿತ್ರೇಣ ಕಾಂತ್ಯಾ ಚ ಪ್ರಕಾಶಯಂತೀತ್ಯರ್ಥಃ । ಸ್ವದಿವ್ಯ ಚರಿತ್ರೇಣಾಪಿ ಅಸುರಜನಮೋಹನಾಯ ಸ್ವಬಂಧನಸರ್ಪಬಂಧನಾದಿನಾ ಕದಾಚಿಚ್ಛಕ್ತಿಗೂಹನಂ ಕಾಂತೇಶ್ಚ ಬಹುಶೋಽಪ್ರಕಾಶನಂ ಸೂಚಯಿತುಂ ರೇಜಯಂತೀತ್ಯಲೌಕಿಕಪದಪ್ರಯೋಗಃ । ಹೇ ಮರುತಃ ತೇಷ್ವವತಾರೇಷು ಮರುದ್ಗಣಾಗ್ರಗಣ್ಯತ್ವಾತ್ ವಃ ಸಂಬಂಧೀ ಯಃ ಮಧ್ವೋ ನಾಮ ಮಧ್ವಾಖ್ಯಾವತಾರಃ ತಂ ಮಾರುತಂ ಮುಖ್ಯಪ್ರಾಣಕುಮಾರಂ ಮಧ್ವಾಖ್ಯಾವತಾರಂ ಯಜತ್ರಾಃ ಯಾಜಕಾಃ ಯಜ್ಞರಕ್ಷಕಾಃ ಯಜಮಾನಾದ್ಯಾಃ ಋತ್ವಿಜಃ ಸಭ್ಯಾಶ್ಚ ಯಜ್ಞೇಷು ಕ್ರಿಯಮಾಣೇಷು ಸತ್ಸು ಶವಸಾ ಕಠಿಣ-ಬ್ರಾಹ್ಮಣಖಂಡಾರ್ಥ ಕಥನರೂಪಕರ್ಮನಿರ್ಣಯಾಖ್ಯಗ್ರಂಥಶ್ರವಣಜನಿತಸುಖೇನ ಪ್ರಮದಂತಿ ಪ್ರಕರ್ಷೇಣ ಸಂತೋಷಂ ಕುರ್ವತೀತಿ । ಛಂದಃಖಂಡಾರ್ಥವಾದಿಜಿತಕುಮತಿಕುಲ ಇತ್ಯಣು-ಮಧ್ವವಿಜಯವಚನಾತ್ ಪ್ರಸಿದ್ಧೋಽಯಮರ್ಥಃ ॥ ೬೭೬ ॥

**ವಿವರಣೆ–**

'ಮಧ್ವೋ ವೋ ನಾಮ ಮಾರುತಂ ಯಜತ್ರಾಃ ಪ್ರಯಜ್ಞೇಷು ಶವಸಾ ಮದಂತಿ।
ಯೇ ರೇಜಯಂತಿ ರೋದಸೀ ಚಿದುರ್ವೀ ಪಿನ್ವಂತ್ಯುತ್ಸ ಯದಯಾಸುರುಗ್ರಾಃ ॥'

ಎಂಬ ಮುಖ್ಯಪ್ರಾಣನ ಮಹಿಮೆಯನ್ನು ವರ್ಣಿಸುವ ವೇದವಾಕ್ಯಕ್ಕೆ ಅರ್ಥ ಹೀಗಿದೆ: ಹೇಗೆ ಹನುಮ ಭೀಮ ಮಧ್ವರೇ! ನೀವು ಬಾಹುಯುದ್ಧ ವಾಗ್ಯುದ್ಧದಲ್ಲಿಯೂ ಉಗ್ರರಾಗಿದ್ದೀರಿ. ನೀವು ಭುವಿಯಲ್ಲಿ ಅವತರಿಸಿ ನಿಮ್ಮ ಪಾದಕಮಲಗಳನ್ನು ಆಶ್ರಯಿಸಿದ ಭಕ್ತಜನರ ಮೇಲೆ ಎಲ್ಲ ರೀತಿಯ ಭಾಗ್ಯಗಳ ಮಳೆಯನ್ನೇ ಕರೆದು ಅವರನ್ನು ರಕ್ಷಿಸಿದ್ದೀರಿ. ಈ ನಿರ್ದಿಷ್ಟರೂಪಗಳೇ ಆಕಾಶ ಮತ್ತು ಪೃಥಿವೀಗಳನ್ನು ತಮ್ಮ ಚರಿತ್ರೆಯಿಂದ ಮತ್ತು ಕಾಂತಿಯಿಂದ ಬೆಳಗಿಸಿವೆ. ಹೇ ಮುಖ್ಯಪ್ರಾಣನ ಅವತಾರಸ್ವರೂಪರಾದವರೇ! ನಿಮ್ಮಲ್ಲೊಂದಾದ ಮಧ್ವರೂಪವು ಕಠಿಣಗಳಾದ ಬ್ರಾಹ್ಮಣದ ಭಾಗಗಳಿಗೆ ಅರ್ಥಗಳನ್ನು ವಿವರಿಸುವ ಕರ್ಮನಿರ್ಣಯವೆಂಬ ಗ್ರಂಥವನ್ನು ರಚಿಸಿದೆ. ಈ ಗ್ರಂಥದ ಶ್ರವಣವನ್ನು ಮಾಡಿದ, ಯಜಮಾನ-ಋತ್ವಿಜರು-ಸಭಾಸದರು ಮತ್ತು ಬ್ರಹ್ಮಾ ಮೊದಲಾದ ಯಜ್ಞದಲ್ಲಿ ನಡೆಯುವಾಗ ಬಹಳ ಸಂತೋಷವನ್ನು ವ್ಯಕ್ತಮಾಡುತ್ತಾರೆ.

**ವಿಶೇಷಾಂಶ–** ಕಣ್ವೋಕ್ತಿಯ ಸತ್ಯತೆ : ತಪಸ್ಸಿನಲ್ಲಿದ್ದ ಕಣ್ವಋಷಿಗಳಿಗೆ ಸಂಚರಿಸುತ್ತಿದ್ದ ಮುಖ್ಯಪ್ರಾಣನಿಂದ ಆಕಸ್ಮಿಕವಾಗಿ ಅಪಚಾರವಾದಾಗ ಕಣ್ವರು 'ನೀನು ಮೂಲರೂಪದಿಂದ ಪ್ರಸಿದ್ಧನಾಗುವುದೇ ಬೇಡ. ನಿನ್ನ ಅವತಾರರೂಪಗಳಿಗೇ ಪ್ರಸಿದ್ಧಿ ಸಿಗಲಿ' ಮುಖ್ಯಪ್ರಾಣನಿಗೆ ಶಾಪವಿತ್ತರು. ಆ ಋಷಿಗಳ ಶಾಪವನ್ನು ಸತ್ಯಮಾಡಲೆಂದೇ ವ್ಯಾಸವಾಲ್ಮೀಕಿ ಮೊದಲಾದ ತಮ್ಮ ಭಾರತರಾಮಾಯಣಾದಿ ಗ್ರಂಥಗಳಲ್ಲಿ ಮೂಲರೂಪವೇ ಮುಖ್ಯಪ್ರಾಣನ ಮಹಿಮೆಯನ್ನು ವಿಶೇಷವಾಗಿ ವರ್ಣಿಸಲಿಲ್ಲ, ಹೊರತು ಹನುಮಭೀಮಾದಿ ಅವತಾರರೂಪಗಳ ಮಹತ್ತ್ವವನ್ನೇ

ವರ್ಣಿಸಿದ್ದಾರೆ. ಹಾಗೆಯೇ ಮುಖ್ಯಪ್ರಾಣನೂ ಸತ್ಯಲೋಕದಿಂದ ಇಳಿದು ಭೂಮಿಯಲ್ಲಿ ಅವತರಿಸಿ ಕಣ್ವರ ಮಾತನ್ನು ರಕ್ಷಿಸಿದನು. ಈ ಕಣ್ವಶಾಪದ ವೃತ್ತಾಂತದ ಕಥೆ ಷಟ್‌ಪ್ರಶ್ನೋಪನಿಷತ್‌ನ ವಾದಿರಾಜೀಯ ಟಿಪ್ಪಣಿಯಲ್ಲಿ ಬಂದಿದೆ.

ಶ್ರುತಿಯಲ್ಲಿ ಉರ್ವೀ ಎಂದು ಇದೆ. ಆದರೆ ಇದು ದ್ವಿತೀಯಾ ವಿಭಕ್ತಿ ರೂಪವೇ. ಸುಪಾಂ ಸುಲುಕ್ ಎಂಬ ಸೂತ್ರದಿಂದ ದ್ವಿತೀಯಾ ವಿಭಕ್ತಿಯ ಲೋಪವಾಗಿದೆ.

ಪಿನ್ವಂತಿ ಎಂದರೆ ರಕ್ಷಿಸುತ್ತದೆ. ಪಿವಿ, ಮಿವಿ ಮುಂತಾದ ಧಾತುವನ್ನು ಸೇಚನ ಎಂಬರ್ಥದಲ್ಲಿ ಪ್ರಯೋಗಿಸಲಾಗುವುದೆಂದು ಶಬ್ದಶಾಸ್ತ್ರವು ಹೇಳುತ್ತದೆ. ಆದ್ದರಿಂದ ಸೇಚನ ಎಂದರೆ ಇಷ್ಟಾರ್ಥಗಳನ್ನು ಸುರಿಸುವುದು ಎಂಬ ಅರ್ಥವನ್ನು ತಿಳಿಯಬೇಕು.

ಈ ಶ್ಲೋಕದಲ್ಲಿ ಸೂಚಿಸಿರುವ ಶ್ರುತಿಯನ್ನೇ ವಾದಿರಾಜರು ತಮ್ಮ ಮುಂದಿನ ಶ್ಲೋಕಗಳಲ್ಲಿ ವ್ಯಾಖ್ಯಾನಿಸುತ್ತಾರೆ.

**ಯದ್ಯತೋ ಮುಖ್ಯಮರುತೋ ವೈರ್ಯುಗ್ರಾ ಯೇ ಕುಮಾರಕಾಃ ।**
**ಅಯಾಸುರ್ಭೂತಲಂ ಭೀಮಹನೂಮನ್ಮಧ್ವನಾಮಕಾಃ ॥ ೬೬೭ ॥**

**ಯೇಚಿದೇವ ಜಗತ್ಯುರ್ವ್ಯಾ ರೋದಸ್ಯೌ ಪೃಥಿವೀಂ ದಿವಮ್ ।**
**ರೇಜಯಂತಿ ಚರಿತ್ರೇಣ ರಾಜಯಂತಿ ಯುಗೇ ಯುಗೇ ॥ ೬೬೮ ॥**

**ಪಿನ್ವಂತಿ ಪಾಲಯಂತ್ಯುತ್ಸಂ ಉತ್ಸುಕಂ ಸ್ವಪದಾಂಬುಜೇ ।**
**ಪಿವಿಂ ಮಿವಿಂಚ ಯದ್ಧಾತುಂ ಸೇಚನೇರ್ಥೇಽನುಶಾಸತೇ ।**
**ಪಾಲನಂ ಚಾಖಿಲೈರಿಷ್ಟೈಸ್ಸೇಚನಂ ಯದ್ವಿದುರ್ಬುಧಾಃ ॥ ೬೬೯ ॥**

**ಅರ್ಥ–** ಯತ್ (ವೇದವಾಕ್ಯದಲ್ಲಿರುವ ಶಬ್ದ)= ಯತಃ= ಯಾವ ಕಾರಣದಿಂದ, (ಉಗ್ರಾಃ (ವೈದಿಕಶಬ್ದ))= ವೈರ್ಯುಗ್ರಾಃ= ಶತ್ರುಭಯಂಕರರಾದ ಯೇ (ವೈದಿಕಶಬ್ದ)= ಯಾವ ಮುಖ್ಯಮರುತಃ= ಮುಖ್ಯಪ್ರಾಣನ, ಕುಮಾರಕಾಃ= ಪುತ್ರರಾದ (ಅವತಾರಸ್ವರೂಪರಾದ), ಭೀಮಹನೂಮನ್ಮಧ್ವನಾಮಕಾಃ= ಭೀಮಸೇನ, ಹನುಮಂತ ಮಧ್ವರೆಂಬುವವರು ಇದ್ದಾರೆಯೋ, ತೇ= ಅವರು, ಭೂತಲಂ= ಭೂಮಂಡಲವನ್ನು ಕುರಿತು, ಅಯಾಸುಃ= ಬಂದರು. ಯೇಚಿತ್ ಏವ= ಈ ರೂಪಗಳೇ, ಜಗತಿ= ಲೋಕದಲ್ಲಿ ಉರ್ವೀ (ವೈದಿಕಪದ)= ಉರ್ವ್ಯಾ ರೋದಸ್ಯೌ= ಪೃಥಿವೀಂ= ಭೂಮಿಯನ್ನು ಮತ್ತು, ದಿವಂ= ಆಕಾಶವನ್ನು (ಸ್ವರ್ಗವನ್ನು), ರೇಜಯಂತಿ (ವೈದಿಕಪದ)= ಚರಿತ್ರೇಣ= ತಮ್ಮ ಚರಿತೆಯಿಂದ, ಯುಗೇ ಯುಗೇ= ಪ್ರತಿಯುಗದಲ್ಲಿಯೂ, ರಾಜಯಂತಿ= ಬೆಳಗಿಸುತ್ತಾರೆ.

(ತತಃ= ಅನಂತರ) ಸ್ವಪದಾಂಬುಜೇ= ತನ್ನ ಪಾದಕಮಲದಲ್ಲಿ, ಉತ್ಸಂ (ವೈದಿಕ ಪದ) ಉತ್ಸುಕಂ= ಉತ್ಸಾಹವುಳ್ಳ ಭಕ್ತರನ್ನು, ಪಿನ್ವಂತಿ (ವೈದಿಕ ಪದ) ಪಾಲಯಂತಿ= ಸಕಲಸೌಭಾಗ್ಯವನ್ನು ಕೊಟ್ಟು ಕಾಪಾಡುತ್ತಾರೆ. ಯತ್= ಯಾವ ಕಾರಣದಿಂದ, ಪಿವಿಂ ಚ

ಮಿವಿಂ ಚ= ಪಿವಿ ಮತ್ತು ಮಿವಿ, ಧಾತುಂ= ಧಾತುವನ್ನು, ಸೇಚನಾರ್ಥೇ= ಸುರಿಸುವುದು ಎಂದು ಅರ್ಥದಲ್ಲಿ ಅನುಶಾಸತೇ= ವ್ಯಾಕರಣಶಾಸ್ತ್ರದಲ್ಲಿ ಹೇಳುತ್ತಾರೆ. ಯತ್= ಯಾವಕಾರಣದಿಂದ, ಬುಧಾಃ= ಶಾಸ್ತ್ರಜ್ಞರು, ಪಾಲನಂ ಚ= ಪಾಲನವೆಂದರೆ, ಅಖಿಲೈಃ= ಸಕಲ, ಇಷ್ಟೈಃ= ಇಷ್ಟಗಳಿಂದ, ಸೇಚನಂ= ಸುರಿಸುವುದು (ಪ್ರೋಕ್ಷಣಮಾಡುವುದು ಎಂದು) ವಿದುಃ= ತಿಳಿಯುವರು.

**ಅನುವಾದ–** ಮುಖ್ಯಪ್ರಾಣನ ಅವತಾರಸ್ವರೂಪರಾದ, ಶತ್ರುಗಳಿಗೆ ಭಯಂಕರರೆನಿಸಿದ ಹನುಮ, ಭೀಮ, ಮಧ್ವರು ಭೂಮಿಗೆ ಬಂದು ತಮ್ಮ ಚರಿತ್ರೆಯಿಂದ ಭೂಮಿ ಮತ್ತು ಆಕಾಶಗಳನ್ನು ಪ್ರತಿಯೊಂದು ಯುಗದಲ್ಲಿಯೂ ಬೆಳಗಿಸುತ್ತಾರೆ ಮತ್ತು ಪಾದಕಮಲದಲ್ಲಿ ಆಸಕ್ತರಾದ ಭಕ್ತರ ಸಕಲಾಭೀಷ್ಟಗಳನು ಪೂರೈಸುವ ಮೂಲಕ ಅವರನ್ನು ಕಾಪಾಡುತ್ತಾರೆ ಪಿವಿ ಮತ್ತು ಮಿವಿ ಧಾತುಗಳಿಗೆ ಸೇಚನ ಅರ್ಥಾತ್ ಸುರಿಸುವುದು ಎಂಬ ಅರ್ಥವಿದೆ. ಜ್ಞಾನಿಗಳ ದೃಷ್ಟಿಯಲ್ಲಿ ಪಾಲನವೆಂದರೆ ಎಲ್ಲ ಅಭೀಷ್ಟಗಳನ್ನು ಕೊಡುವುದೇ ಆಗಿದೆ.

**ಭಾವವಿಲಾಸಿನೀ–** ಇಮಮೇವಾರ್ಥಮಭಿಪ್ರೇತ್ಯಾಹ – **ಯದಿತಿ** ॥ ಯದಿತ್ಯಸ್ಯೈವಾರ್ಥ ಕಥನಂ ಯತ ಇತಿ ॥ ೬೬೭-೬೬೮ ॥ ಪಿನ್ವಂತೀತ್ಯತಃ ಪೂರ್ವ್ಯಂ ತತ ಇತಿ ಗ್ರಾಹ್ಯಮ್ । ಯದ್ ಯಸ್ಮಾತ್ ॥ ೬೬೯ ॥

**ವಿವರಣೆ–** ಮಧ್ವೋವೋ ನಾಮ ಎಂಬ ಶ್ರುತಿಯು ಋಗ್ವೇದದಲ್ಲಿಯೂ ಬಂದಿದೆ - ಮಂಡಲ - 7, ಸೂಕ್ತ - 57, ಮಂತ್ರ -1 ರಲ್ಲಿ ಬಂದಿದೆ. ಇನ್ನು ಕೃಷ್ಣಯಜುರ್ವೇದದಲ್ಲಿ ಕಣ್ವಋಷಿಗಳು ಈ ಮಂತ್ರದ ದೃಷ್ಟಾರರು.

ಬಲಜ್ಞಾನಾಖ್ಯಕಾರ್ಯೇಷು ತೇಷು ಪುತ್ರೇಷು ಹೇಽನಿಲಾಃ ।
ಮರುತೋ ವಃ ಪ್ರಿಯಂ ಮಧ್ವೋ ನಾಮ ಮಾರುತಮದ್ಭುತಮ್ ॥ ೬೭೦ ॥

ಯಜತ್ರಾ ಯಾಜಕಾಃ ಸರ್ವೇ ಯಜ್ಞೇಷೂಕ್ತಿವಿಶಾರದಮ್ ।
ಸುಖೇನ ಭರಿತಾಃ ಸಂತೋ ದೃಷ್ಟ್ವಾ ಶ್ರುತ್ವಾ ಚ ತದ್ವಚಃ ।
ಪ್ರಮದಂತಿ ಪ್ರಹೃಷ್ಯಂತಿ ಕರ್ಮನಿರ್ಣಯಕೋವಿದಮ್ ॥ ೬೭೧ ॥

**ಅರ್ಥ–** ಹೇ ಅನಿಲಾಃ= ಹೇ ವಾಯುಪುತ್ರರೇ, ಬಲಜ್ಞಾನಾಖ್ಯಕಾರ್ಯೇಷು= ಬಲಕಾರ್ಯ ಜ್ಞಾನಕಾರ್ಯಗಳಲ್ಲಿ (ಪ್ರವೃತ್ತರಾದ), ತೇಷು ಪುತ್ರೇಷು= ಆ ವಾಯುಪುತ್ರರಲ್ಲಿ, ಮರುತಃ= ಮುಖ್ಯಪ್ರಾಣನಿಗೆ, ವಃ (ವೈದಿಕಶಬ್ದ)= ನಿಮಗೆ ಕೂಡ, ಪ್ರಿಯಂ= ಪ್ರೀತಿಪಾತ್ರವಾದ, ಅದ್ಭುತಂ= ಅದ್ಭುತವಾದ, ಮಾರುತಂ (ವೈದಿಕಶಬ್ದ)= ಮುಖ್ಯಪ್ರಾಣನ ಅವತಾರಸ್ವರೂಪವಾದ, ಉಕ್ತಿವಿಶಾರದಂ= ವೇದೋಕ್ತಿಗಳ ವಿವರಣದಲ್ಲಿ

ಪ್ರವೀಣವಾದ ಕರ್ಮನಿರ್ಣಯಕೋವಿದಂ= ಕರ್ಮದ ವಾಸ್ತವಸ್ವರೂಪವನ್ನು ನಿರ್ಣಯಿಸುವುದರಲ್ಲಿ ನಿಪುಣವಾದ, ಮಧ್ವಃ ನಾಮ (ವೈದಿಕಶಬ್ದ)= ಮಧ್ವ ಎಂದೆನಿಸಿದ ರೂಪವನ್ನು, ಸರ್ವೇ= ಎಲ್ಲ, ಯಜತ್ರಾಃ (ವೈದಿಕಶಬ್ದ)= ಯಾಜಕಾಃ= ಯಜ್ಞದಲ್ಲಿ ಭಾಗವಹಿಸಿದ ವ್ಯಕ್ತಿಗಳು ಪ್ರಯಜ್ಞೇಷು (ವೈದಿಕಶಬ್ದ)= ಯಜ್ಞೇಷು= ಯಜ್ಞಗಳಲ್ಲಿ, ದೃಷ್ಟ್ವಾ= ನೋಡಿ, ಚ= ಮತ್ತು, ತದ್ವಚಃ= ಆ ಮಧ್ವರೂಪದ ಮಾತನ್ನು, ಶ್ರುತ್ವಾ= ಕೇಳಿ, ಶವಸಾ= (ವೈದಿಕಶಬ್ದ)= ಸುಖೇನ= ಆನಂದದಿಂದ ಭರಿತಾಃ ಸಂತಃ= ತುಂದಿಲರಾಗಿ, ಪ್ರಮದಂತಿ (ವೈದಿಕಶಬ್ದ) ಪ್ರಹೃಷ್ಯಂತಿ= ತುಷ್ಟರಾಗುತ್ತಾರೆ.

**ಅನುವಾದ–** ಹೇ ವಾಯುದೇವರೇ! ನಿಮ್ಮ ಅವತಾರಗಳು ಬಲಕಾರ್ಯ ಮತ್ತು ಜ್ಞಾನಕಾರ್ಯಗಳನ್ನು ಮಾಡಿವೆ. ಅವುಗಳಲ್ಲಿ ನಿಮಗೆ ಪ್ರಿಯವಾದ ಮಧ್ವರೂಪವು ಯಜ್ಞಕ್ಕೆ ಸಂಬಂಧಿಸಿದ ವೇದವಾಕ್ಯಗಳನ್ನು ವಿವರಿಸುವುದರಲ್ಲಿ ಮತ್ತು ಯಜ್ಞದ ಪ್ರಕ್ರಿಯೆಗಳನ್ನು ನಿರ್ಧರಿಸುವುದರಲ್ಲಿ ಪ್ರವೀಣವಾಗಿದೆ. ಯಜ್ಞದಲ್ಲಿ ಭಾಗವಹಿಸುವ ಋತ್ವಿಜ, ಯಜಮಾನ ಮೊದಲಾದವರು ಮಧ್ವರನ್ನು ನೋಡಿ ಅವರ ಮಾತನ್ನು ಕೇಳಿ ಆನಂದಭರಿತರಾಗಿದ್ದಾರೆ.

**ಭಾವವಿಲಾಸಿನೀ–** ಮಧ್ವೋನಾಮ ಮಧ್ವ ಇತಿ ನಾಮವಾನ್ ಯಃ ತಮ್ ॥ ೬೭೦, ೬೭೧ ॥

**ಇತಿ ಶ್ರುತಿರ್ಯಚ್ಚರಿತ್ರಂ ವಕ್ತ್ಯತ್ರೈವ ಪ್ರಚಾರಿತಮ್ ।**
**ಸ ಮಧ್ವೋ ವೈದಿಕಾಚಾರ್ಯಃ ಸಿದ್ಧಃ ಸದ್ವಿದ್ವದಗ್ರಣೀಃ ॥ ೬೭೨ ॥**

**ಅರ್ಥ–** ಇತಿ= ಹೀಗೆಂದು, ಶ್ರುತಿಃ= ಶ್ರುತಿಯು, ಅತ್ರ ಏವ= ಈ ಭೂಲೋಕದಲ್ಲಿಯೇ, ಪ್ರಚಾರಿತಂ= ಪ್ರಸಿದ್ಧವಾದ, ಯಚ್ಚರಿತ್ರಂ= ಯಾರ ಚರಿತ್ರವನ್ನು, ವಕ್ತಿ= ವರ್ಣಿಸುತ್ತದೋ, ಸಃ= ಅವರು ವೈದಿಕಾಚಾರ್ಯಃ= ವೇದಜ್ಞರಲ್ಲಿ ಶ್ರೇಷ್ಠರಾದ ಆಚಾರ್ಯರಾದ ಸದ್ವಿದಗ್ರಣೀಃ= ಸಚ್ಛಾಸ್ತ್ರಪ್ರವೀಣರಲ್ಲಿ, ಅಗ್ರಗಣ್ಯರಾದ ಮಧ್ವಃ= ಮಧ್ವಾಚಾರ್ಯರೆಂದು, ಸಿದ್ಧಃ= ಸಿದ್ಧರಾಗಿದ್ದಾರೆ.

**ಅನುವಾದ–** ಈ ಜಗತ್ತಿನಲ್ಲಿ ಪ್ರಸಿದ್ಧವಾದ ಯಾರ ಚರಿತ್ರೆಯನ್ನು 'ಮಧ್ವೋ ವೋ ನಾಮ' ಎಂಬ ವೇದವಾಕ್ಯವು ಕೊಂಡಾಡುತ್ತಿದೆಯೋ ಅವರು ವೈದಿಕಾಚಾರ್ಯ-ರೆಂದೂ ಮಹಾಪಂಡಿತರಲ್ಲಿಯೇ ಮುಖ್ಯರಾದ ಮಧ್ವಾಚಾರ್ಯರೆಂದು ಸಿದ್ಧವಾಗುತ್ತದೆ. ಶ್ರುತಿಯಲ್ಲಿ ಹೇಳಲ್ಪಟ್ಟ ಮಧ್ವರು ನಮ್ಮ ಗುರುಗಳಾದ ಮಧ್ವಾಚಾರ್ಯರೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅತ್ರ ಭೂಲೋಕ ಏವ ॥ ೬೭೨ ॥

**ವಿವರಣೆ–** 'ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ ನರೋ ಯತ್ರ ದೇವಯವೋ ವದಂತಿ। ಉರುಕ್ರಮಸ್ಯ ಸಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ॥'

(ಋಗ್ವೇದ 1-154, 155) ಭಗವಂತನ ಪಾದೋದಕವು ಸಕಲ ಶ್ರುತಿಸ್ಮೃತ್ಯಭಿಮಾನಿ ದೇವತೆಗಳಿಗೆ ಮತ್ತು ತತ್ಪ್ರವರ್ತಕಮುನಿಗಳಿಗೆ ಪ್ರಿಯವಾಗಿದೆ. ಈ ತೀರ್ಥವನ್ನು ಪಾನಮಾಡಿ ಬ್ರಹ್ಮಾದಿದೇವತೆಗಳೂ ಪಾನಮಾಡಿ ಸಂತೋಷಪಡುತ್ತಾರೆ; ಅದನ್ನೇ ಮನುಷ್ಯನಾದ ನಾನೂ ಪಾನ ಮಾಡುತ್ತೇನೆ. ದೇವಾದಿದೇವತೆಗಳಿಗೆ ಇದು ಹರ್ಷಕರವೆಂದ ಮೇಲೆ ಮನುಷ್ಯರಿಗೂ ಹರ್ಷಕರವೆಂಬುದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ ಮತ್ತು ಎಲ್ಲ ವೈಷ್ಣವರಿಗೂ ಈ ತೀರ್ಥಪ್ರಾಶನವು ವಿಹಿತವೆಂದು ಸಿದ್ಧವಾಗುತ್ತದೆ. ಪರಮಾತ್ಮನ ಪಾದಕಮಲದಲ್ಲಿ ಆಸಕ್ತರಾದ ಮಧ್ವಾಚಾರ್ಯರೂ ಎಲ್ಲ ದೇವತೆಗಳಂತೆಯೇ ಆ ತೀರ್ಥದ ಪ್ರಾಶನವನ್ನು ಮಾಡಿ ತ್ರಿವಿಕ್ರಮರೂಪಿಭಗವಂತನಿಗೆ ಮಗನಾಗಿ ಶಿಷ್ಯನಾಗಿ ಬಂಧುವೆನಿಸಿದ್ದಾರೆ.

**ತದಸ್ಯೇತಿ ಶ್ರುತೌ ಪ್ರೋಕ್ತೋ ವಿಷ್ಣೋಸ್ತು ಪರಮೇ ಪದೇ ।**
**ಉತ್ಸ ಔತ್ಸುಕ್ಯವಾನ್ ಮಧ್ವಃ ಕೋವಾ ಸಿದ್ಧೋ ನಿಗದ್ಯತಾಮ್ ।**
**ಮಧ್ವಶ್ರುತೇರ್ವಿಷ್ಣುಭಕ್ತಿಲಿಂಗಾಚ್ಚಾಸೌ ಗುರುರ್ಹಿನಃ ॥ ೬೭೩ ॥**

**ಅರ್ಥ–** ತದಸ್ಯೇತಿ ಶ್ರುತೌ= ತದಸ್ಯ ಪ್ರಿಯಮಭಿ ಎಂಬ ಶ್ರುತಿಯಲ್ಲಿ, ಪ್ರೋಕ್ತ= ಪ್ರತಿಪಾದ್ಯನಾದ, ವಿಷ್ಣೋಃ= ಶ್ರೀಮಹಾವಿಷ್ಣುವಿನ, ಪರಮೇ= ಅತ್ಯುತ್ತಮವಾದ, ಪದೇ= ಪಾದದಲ್ಲಿ, ಉತ್ಸಃ - ಔತ್ಸುಕ್ಯವಾನ್= ಉತ್ಸಾಹವುಳ್ಳ, ಮಧ್ವಃ= ಶ್ರೀಮಧ್ವರು, ಕೋವಾ ಸಿದ್ಧಃ= ಬೇರೆ ಯಾರು ಎಂದು ಸಿದ್ಧರಾದಾರು? ನಿಗದ್ಯತಾಂ= ಹೇಳಲ್ಪಡಲಿ. ಮಧ್ವಶ್ರುತೇಃ= ಮಧ್ವ ಎಂಬ ಈ ಶ್ರುತಿಯಿಂದಲೂ, ವಿಷ್ಣುಭಕ್ತಿಲಿಂಗಾತ್ ಚ= ವಿಷ್ಣುವಿನಲ್ಲಿ ಅಸದೃಶ ಭಕ್ತಿರೂಪ ಲಿಂಗದಿಂದಲೂ, ಅಸೌ= ಇವರು, ನಃ= ನಮ್ಮ ಗುರುಃ ಹಿ= ಗುರುಗಳಾದ ಪೂರ್ಣಪ್ರಜ್ಞರಷ್ಟೇ!

**ಅನುವಾದ–** ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ಎಂಬ ಮಂತ್ರದಲ್ಲಿ ಪರಮಾತ್ಮನ ವಿಷ್ಣುರೂಪದಲ್ಲಿ ಅತ್ಯಂತ ಆಸಕ್ತರಾದ ಮಧ್ವರೂಪಿ ವಾಯುದೇವರನ್ನು ವರ್ಣಿಸಲಾಗಿದೆ. ಹೀಗೆ ಶ್ರುತಿಸಿದ್ಧವಾದ ವಿಷ್ಣುಭಕ್ತಿಯುಕ್ತರಾದವರು ಬೇರೆ ಯಾರಾಗಲೂ ಸಾಧ್ಯವಿಲ್ಲ. ಹೀಗೆ ವಿಷ್ಣುಭಕ್ತಿಲಿಂಗದಿಂದಲೂ ಮಧ್ವರೆಂದರೆ ನಮ್ಮ ಗುರುಗಳಾದ ಪೂರ್ಣಪ್ರಜ್ಞರೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತದಸ್ಯೇತಿ ಶ್ರುತಾವಿತ್ಯನೇನ ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ । ಉರುಕ್ರಮಸಯ ಸಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ಇತಿ ಶ್ರುತಿಂ ಗೃಹ್ಣಾತಿ । ಅಯಮರ್ಥಃ । ಪ್ರಿಯಂ ಸಕಲಶ್ರುತಿಸ್ಮೃತೀನಾಂ ತತ್ ಪ್ರವರ್ತಕಮನೀನಾಂ ಚ ಹರ್ಷಕರಂ, ತತ್ ಅಕಾಲೇ ಮೃತ್ಯುಮಥನಮಿತ್ಯಾದೌ ಪ್ರಸಿದ್ಧಮ್ । ಅಸ್ಯ ನಾರಾಯಣಸ್ಯ ಅಭಿಪಾಥಃ ಅಭಿತಃ ಸರ್ವಾಂಗೇಷು ಸಂಬದ್ಧಂ ಪಾಥ ಉದಕಂ

ಶಿರಆದಿಸರ್ವಾಂಗೇಷ್ವಭಿಷಿಕ್ತಂ ತೀರ್ಥೋದಕಮಿತ್ಯರ್ಥಃ । ನರಃ ಅಹಂ ಅಶ್ಯಾಂ ಪಾನಂ ಕುರ್ಯಾಮ್ । ಅಂತಃಶುದ್ಧೇರೇವ ಮುಖ್ಯತ್ವಾದಶ್ಯಾಂಮಿತ್ಯುಕ್ತಮ್ । ಯತ್ರ ವಿಷ್ಣ್ವಂಗ ಸಂಬಂಧೇನಾತಿ ಪಾವಿತತೀರ್ಥೇ । ದೇವಯವಃ ಬ್ರಹ್ಮರುದ್ರಾದ್ಯಾದೇವಾಃ ವೈದಿಕೋ ದೇವ-ಪದಪರ್ಯಾಯೋ ದೇವಯುಶಬ್ದೋಽಯಮ್ । ದೇವಂ ನಾರಾಯಣಂ ಪರಿವಾರತಯಾ ಸದಾ ಯುಂಜಂತೀತಿ ವ್ಯುತ್ಪತ್ತ್ಯಾ ವಾ ದೇವಯವಃ । ಮದಂತಿ ಹರ್ಷಂ ಕುರ್ವಂತಿ । ದೇವಾನಾಮಪಿ ಪಾನಾದಿನಾ ಹರ್ಷಕರೇ ವಿಷ್ಣುಪಾದೋದಕೇ ಮನುಷ್ಯಾಣಾಂ ಕೈಮುತ್ಯ-ದ್ಯೌತನಾಯೇದಮುದಿತಮ್ । ಏವಂ ಚ ಬ್ರಹ್ಮಾದಿ ಮನುಷ್ಯಾಂತ ಸಕಲವೈಷ್ಣವಾನಾಂ ವಿಷ್ಣು-ಪಾದೋದಕಪ್ರಾಶನಂ ವಿಹಿತಮಿತಿ ಶ್ರುತೇರಭಿಪ್ರಾಯಃ । ಅತ ಏವ ಅಶ್ಯಾಮಿತಿ ಲುಙ್ । ದೇವಾನಾಂ ವಿಷ್ಣುಪಾದೋದಕಸೇವನಂ ಪ್ರತ್ಯಕ್ಷೇಣ ದರ್ಶಯಿತುಂ ಸಕಲದೇವೋತ್ತಮ-ಮುಖ್ಯಪ್ರಾಣಾವತಾರಮಧ್ವಸ್ಯ ವಿಷ್ಣುಪಾದೋದಕೇ ಪ್ರೀತಿಂ ಪ್ರತಿಪಾದಯಿತುಂ ಶ್ರುತೇ-ರುತ್ತರಾರ್ಧಂ ಪ್ರವೃತ್ತಮ್ । ಪರಮೇ ಉತ್ತಮೇ ವಿಷ್ಣೋಃ ನಾರಾಯಣಸ್ಯ ಪದೇ ಪಾದೇ । ಉತ್ಸ ಉತ್ಸುಕಃ ಸಃ ಪ್ರಸಿದ್ಧಃ ಮಧ್ವಃ ಮಧ್ವಮುನಿಃ ಇತ್ಥಾ ಇತ್ಥಂ ಪೂರ್ವೋಕ್ತರೀತ್ಯಾ ವಿಷ್ಣುಪಾದೋದಕಪ್ರಾಶನೇನ ಉರುಕ್ರಮಸ್ಯ ಉತ್ಕೃಷ್ಟಪಾದವಿಕ್ಷೇಪಸಹಿತಸ್ಯ ತ್ರಿವಿಕ್ರಮಸ್ಯ ಬಂಧುರ್ಹಿ । ಪುತ್ರತಯಾ ಶಿಷ್ಯತಯಾ ಬಂಧುರ್ಜಾತೋಹಿ । ಹೀತ್ಯನೇನಾಸ್ಮಿನ್ನರ್ಥೇ ಶ್ರುತಿಸ್ಮೃತಿಪ್ರಸಿದ್ಧಿಂ ದರ್ಶಯತಿ । ಏತದೇವಾಭಿಪ್ರೇತ್ಯಾಹ – **ವಿಷ್ಣೋರಿತ್ಯಾದಿನಾ** ॥ ಅಸೌ ಶ್ರುತೇರುತ್ತರಾರ್ಧೋಕ್ತಃ ಗುರುರ್ಹಿ ವೈಷ್ಣವಾಚಾರ್ಯಭೂತಃ ಪ್ರರ್ಣಪ್ರಜ್ಞಾಚಾರ್ಯೋ ಹೀತ್ಯರ್ಥಃ । ಹಿಶಬ್ದೇನ ಲಿಂಗಶ್ರುತ್ಯೋಸ್ತತ್ಯೈವ ಪ್ರಸಿದ್ಧಿಂ ಸೂಚಯತಿ ॥ ೬೭೩ ॥

**ವಿವರಣೆ–** 'ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ । ಉರುಕ್ರಮಸ್ಯ ಸಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ॥' (ಋಗ್ವೇದ 1-154, 155) ಭಗವಂತನ ಪಾದೋದಕವು ಸಕಲ ಶ್ರುತಿಸ್ಮೃತ್ಯಭಿಮಾನಿ ದೇವತೆಗಳಿಗೆ ಮತ್ತು ತತ್ತ್ವಪ್ರವರ್ತಕಮುನಿಗಳಿಗೆ ಪ್ರಿಯವಾಗಿದೆ. ಈ ತೀರ್ಥವನ್ನು ಪಾನಮಾಡಿ ಬ್ರಹ್ಮಾದಿದೇವತೆಗಳೂ ಪಾನಮಾಡಿ ಸಂತೋಷಪಡುತ್ತಾರೆ; ಆದನ್ನೇ ಮನುಷ್ಯನಾದ ನಾನೂ ಪಾನ ಮಾಡುತ್ತೇನೆ. ದೇವಾಧಿದೇವತೆಗಳಿಗೆ ಇದು ಹರ್ಷಕರವೆಂದಮೇಲೆ ಮನುಷ್ಯರಿಗೂ ಹರ್ಷಕರವೆಂಬುದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ ಮತ್ತು ಎಲ್ಲ ವೈಷ್ಣವರಿಗೂ ಈ ತೀರ್ಥಪ್ರಾಶನವು ವಿಹಿತವೆಂದು ಸಿದ್ಧವಾಗುತ್ತದೆ. ಪರಮಾತ್ಮನ ಪಾದಕಮಲದಲ್ಲಿ ಆಸಕ್ತರಾದ ಮಧ್ವಾಚಾರ್ಯರೂ ಎಲ್ಲ ದೇವತೆಗಳಂತೆಯೇ ಆ ತೀರ್ಥದ ಪ್ರಾಶನವನ್ನು ಮಾಡಿ ತ್ರಿವಿಕ್ರಮರೂಪಿಭಗವಂತನಿಗೆ ಮಗನಾಗಿ ಶಿಷ್ಯನಾಗಿ ಬಂಧುವೆನಿಸಿದ್ದಾರೆ.

ಯತಃ ಶ್ರುತ್ಯೋರುಕ್ರಮಸ್ಯ ಸಹಿ ಬಂಧುರಿತೀರ್ಯತೇ ।
ತತಸ್ತಂ ಸಾ ಗುರುಂ ಮುಖ್ಯಪ್ರಾಣರೂಪಂ ನ್ಯರೂರುಪತ್ ॥ ೬೭೪ ॥

**ಅರ್ಥ–** ಯತಃ= ಯಾವಕಾರಣದಿಂದ, ಶ್ರುತ್ಯಾ = ಶ್ರುತಿಯಿಂದ, ಉರುಕ್ರಮಸ್ಯ= ತ್ರಿವಿಕ್ರಮರೂಪಿ ವಿಷ್ಣುವಿನ, ಬಂಧುಃ= ಬಂಧುವು (ಪುತ್ರತ್ವ ಅಥವಾ ಶಿಷ್ಯತ್ವಗಳಿಂದ) ಸ ಹಿ= ಮಧ್ವರೇ, ಇತಿ= ಎಂದು, ಈರ್ಯತೇ= ನಿರೂಪಿತವಾಗಿದೆಯೋ, ತತಃ= ಆದ್ದರಿಂದ, ಮುಖ್ಯಪ್ರಾಣರೂಪಂ= ಮುಖ್ಯಪ್ರಾಣರೂಪರಾದ, ತಂ= ಆ ಮಧ್ವರನ್ನೇ, ಸಾ= ಆ ಪ್ರಸಿದ್ಧವಾದ ಶ್ರುತಿಯು, ನ್ಯರೂರುಪತ್= ನಿರೂಪಿಸಿದೆ.

**ಅನುವಾದ–** ತದಸ್ಯ ಪ್ರಿಯಮಭಿಪಾಥೋ ಎಂಬ ಶ್ರುತಿಯು ಪಾದೋದಕವನ್ನು ಪಾನ ಮಾಡುವ ವ್ಯಕ್ತಿಯನ್ನು ತ್ರಿವಿಕ್ರಮರೂಪಿ ಶ್ರೀಹರಿಯ ಮುಖ್ಯಬಂಧುವೆಂದು ಪುತ್ರನಾಗಿಯೂ ಶಿಷ್ಯನಾಗಿಯೂ ಅತಿ ಸಮೀಪದ ಬಂಧುತ್ವವನ್ನು ಪ್ರತಿಪಾದಿಸಿರುವುದರಿಂದ ಆ ವ್ಯಕ್ತಿಯು ಮುಖ್ಯಪ್ರಾಣನ ಅವತಾರರಾದ ನಮ್ಮ ಮುಖ್ಯಗುರುಗಳಾದ ಮಧ್ವರೇ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ನಿಮಿತ್ತಂತಾರಂ ಚಾಹ – **ಯತ ಇತಿ** ॥ ಸಾ ಶ್ರುತಿಃ ॥ ೬೭೪ ॥

ಯಸ್ಮಿನ್ ಸ್ಥಿತೇ ಸ್ಥಿತೋಽಹಂ ಸ್ಯಾಂ ಯದ್ಗತೌ ಚ ಗತೋಽಸ್ಮ್ಯಹಮ್ ।
ತಂ ಸ್ರಕ್ಷ್ಯಾಮೀತಿ ಮನ್ವಾನಃ ಪ್ರಾಣಂ ಸೋಽಸೃಜತ ಪ್ರಭುಃ ॥ ೬೭೫ ॥

ಇತ್ಯಾಹೋಪನಿಷದ್ ಯಸ್ಮಾತ್ ತಸ್ಮಾತ್ ಪ್ರಿಯಕುಮಾರಕಃ ।
ಪ್ರಾಣ ಏವ ಹರೇರ್ಬಂಧುಃ ಸ ಏವಾತ್ರಾಪಿ ಕೀರ್ತ್ಯತೇ ॥ ೬೭೬ ॥

**ಅರ್ಥ–** ಯಸ್ಮಿನ್ ಸ್ಥಿತೇ= ಯಾರು ಇರುತ್ತಿರಲು, ಅಹಂ= ನಾನು, ಸ್ಥಿತಃ ಸ್ಯಾಂ= ಇರುವವನಾಗುತ್ತೇನೆಯೋ, ಯದ್ಗತೌ ಚ= ಯಾರ ಬಹಿರ್ಗಮನವಾದರೆ, ಅಹಂ= ನಾನು, ಗತೋಽಸ್ಮಿ= ಹೋಗುವವನಾಗುತ್ತೇನೆಯೋ, ತಂ= ಅಂತಹವನನ್ನು, ಸ್ರಕ್ಷ್ಯಾಮಿ= ಸೃಷ್ಟಿ ಮಾಡುತ್ತೇನೆ, ಇತಿ= ಹೀಗೆಂದು, ಮನ್ವಾನಃ= ಆಲೋಚಿಸುವವನಾಗಿ, ಪ್ರಭುಃ= ಇಚ್ಛಾನುಸಾರಸೃಷ್ಟಿಯಲ್ಲಿ ಸಮರ್ಥನಾದ, ಸಃ= ಆ ಪರಮಾತ್ಮನು, ಪ್ರಾಣಂ= ಮುಖ್ಯಪ್ರಾಣನನ್ನು, ಅಸೃಜತ= ಸೃಷ್ಟಿಮಾಡಿದನು.

ಯಸ್ಮಾತ್= ಯಾವ ಕಾರಣದಿಂದ, ಉಪನಿಷತ್= ಷಟ್ಪ್ರಶ್ನೋಪನಿಷತ್, ಇತ್ಯಾಹ= ಹೀಗೆಂದು ಹೇಳಿದೆಯೋ, ತಸ್ಮಾತ್= ಆ ಕಾರಣದಿಂದ, ಪ್ರಾಣಃ ಏವ= ಮುಖ್ಯಪ್ರಾಣನೇ, ಪ್ರಿಯಕುಮಾರಕಃ= ಭಗವಂತನ ಪ್ರಿಯಪುತ್ರನು. ಸಃ ಏವ= ಆ ಪ್ರಾಣನೇ ಹರೇಃ= ಶ್ರೀಹರಿಯ, ಬಂಧುಃ= ಬಂಧುವೆಂದು, ಅತ್ರಾಪಿ= ಈ ಶ್ರುತಿಯಲ್ಲಿಯೂ, ಕೀರ್ತ್ಯತೇ= ಹೇಳಲ್ಪಡುತ್ತಾನೆ.

**ಅನುವಾದ–** ಯಾರು ಇದ್ದರೆ ನಾನೂ ಇರುವೆನೋ, ಯಾರು ನಿರ್ಗಮಿಸಿದರೆ ನಾನೂ ನಿರ್ಗಮಿಸುವೆನೋ ಅಂತಹವನನ್ನು ನಾನು ಸೃಷ್ಟಿಸುತ್ತೇನೆ ಎಂದು ಆಲೋಚಿಸಿದ

ಭಗವಂತನನ್ನು ಮುಖ್ಯಪ್ರಾಣನನ್ನು ಸೃಷ್ಟಿಸಿದನು ಎಂದು ಷಟ್‌ಪ್ರಶ್ನೋಪನಿಷತ್‌ನಲ್ಲಿ ಹೇಳಿರುವುದರಿಂದ ಭಗವಂತನ ಪ್ರಿಯಪುತ್ರನೂ ಬಂಧುವೂ ಆ ಮುಖ್ಯಪ್ರಾಣನೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ನನು ವಿಷ್ಣುಬಂಧತ್ವೋಕ್ತಾವಪಿ ಮುಖ್ಯಪ್ರಾಣಸ್ಯೈವಾತ್ರ ಕುತಃ ಪ್ರಾಪ್ತಿರಿತ್ಯತ ಆಹ – ಯಸ್ಮಿನ್ನಿತಿ ॥ ಅನೇನ ಕಸ್ಮಿನ್ನವಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್‌ಸ್ಥಿತೇ ಪ್ರತಿಷ್ಠಾಸ್ಯಾಮೀತಿ ಸಪ್ರಾಣಮಸೃಜತೇತಿ ಶ್ರುತಿಂ ಗೃಹ್ಣಾತಿ । ಅತ್ರ ಉರುಕ್ರಮಸ್ಯ ಸಹಿ ಬಂಧುರಿತಿ ಶ್ರುತೌ ॥ ೬೭೫-೬೭೬ ॥

**ವಿವರಣೆ–** ಕಸ್ಮಿನ್ನ್ವಹಮುತ್ಕ್ರಾಂತೇ ಉತ್ಕ್ರಾಂತೋ ಭವಿಷ್ಯಾಮಿ ।
ಕಸ್ಮಿನ್ ಪ್ರತಿಷ್ಠಿತೇ ಪ್ರತಿಸ್ಥಾಸ್ಯಾಮೀತಿ ಸ ಪ್ರಾಣಮಸೃಜತ ॥

ಎಂಬ ಷಟ್ಪ್ರಶ್ನೋಪನಿಷತ್ತಿನ ವಾಕ್ಯ ಇದು.

ಮುಖ್ಯಸ್ಯೈವ ಗ್ರಾಹ್ಯತಯಾ ತಥಾ ಶ್ರೌತಸಮಾಖ್ಯಯಾ ।
ಹಿ ಶಬ್ದೋದಿತಯಾ ವಿದ್ವತ್ಪ್ರಸಿದ್ಧ್ಯಾ ಚಾಪರೋ ನ ಸಃ ॥ ೬೭೭ ॥

**ಅರ್ಥ–** ಮುಖ್ಯಸ್ಯೈವ= ಮುಖ್ಯರಾದವರನ್ನೇ, ಗ್ರಾಹ್ಯತಯಾ= ಗ್ರಹಿಸಬೇಕಾದುದು ಉಚಿತವಾದ್ದರಿಂದ, ತಥಾ= ಹಾಗೆ, ಶ್ರೌತಸಮಾಖ್ಯಯಾ= ಕಸ್ಮಿನ್ನ್ವಹಂ ಉತ್ಕ್ರಾಂತೇ ಎಂಬ ಶ್ರುತಿಯ ಸಂವಾದವೂ ಇರುವುದರಿಂದ, ಹಿ ಶಬ್ದೋದಿತಯಾ= ಹಿ ಎಂಬ ಶಬ್ದದಿಂದ ಹೇಳಲ್ಪಡುವ, ವಿದ್ವತ್ಪ್ರಸಿದ್ಧ್ಯಾ ಚ= ವಿದ್ವಜ್ಜನರಲ್ಲಿ ಪ್ರಸಿದ್ಧಿ ಇರುವುದರಿಂದಲೂ, ಸಃ= ಮುಖ್ಯಪ್ರಾಣನೇ (ಮುಖ್ಯಬಂಧುವು) ಅಪರಃ ನ = ಬೇರೆ ಯಾರೂ ಇಲ್ಲ.

**ಅನುವಾದ–** ಶ್ರೀಹರಿಯ ಅನೇಕ ಬಂಧುಗಳಲ್ಲಿ ಮುಖ್ಯಬಂಧುವನ್ನೇ ಗ್ರಹಿಸುವುದು ಉಚಿತವಾದ್ದರಿಂದ, ಷಟ್ಪ್ರಶ್ನೋಪನಿಷತ್‌ನ ಸಂವಾದವಿರುವುದರಿಂದಲೂ, ಪೂರ್ಣಪ್ರಜ್ಞರೇ ಮಧ್ವರೆಂದು ವಿದ್ವಜ್ಜನರಲ್ಲಿ ಪ್ರಸಿದ್ಧಿಯಿರುವುದರಿಂದಲೂ ಶ್ರುತಿಯಿಂದ ವರ್ಣಿತರಾದ ಮಧ್ವರೆಂದರೆ ಮಧ್ವಾಚಾರ್ಯರೇ ಆಗಿದ್ದಾರೆ. ಶ್ರುತಿಯು ಪ್ರತಿಪಾದಿಸುವ ಮಧ್ವರು ನಮ್ಮ ಪೂರ್ಣಪ್ರಜ್ಞರೇ ಎಂಬಲ್ಲಿ ಹೀಗೆ ಮೂರು ನಿಮಿತ್ತಗಳಿವೆ ಎಂದರ್ಥ.

**ಭಾವವಿಲಾಸಿನೀ–** ತತ್ರ ನಿಮಿತ್ತತ್ರಯಂ ಸಂಗೃಹ್ಯಾಹ – ಮುಖ್ಯಸ್ಯೇತಿ ॥ ಅನ್ಯೇಷಾಂ ಬಂಧೂನಾಂ ಸದ್ಭಾವೇಽಪಿ ಮುಖ್ಯಸ್ಯ ಮುಖ್ಯಬಂಧೋರೇವ ಗ್ರಾಹ್ಯತೇತ್ಯರ್ಥಃ । ಶ್ರೌತಸಮಾಖ್ಯಯಾ ಕಸ್ಮಿನ್ನ್ವಹಮಿತಿ ಸಮಾಖ್ಯಯೇತ್ಯರ್ಥಃ । ವಿದ್ವತ್‌ಪ್ರಸಿದ್ಧ್ಯಾ ಪೂರ್ಣಪ್ರಜ್ಞಸ್ಯೈವ ಮಧ್ವವತ್ ಪ್ರಸಿದ್ಧ್ಯೇತ್ಯರ್ಥಃ ॥ ೬೭೭ ॥

ದೇವಾನಾಂ ಪ್ರಾಯಪಠಿತೋ ದೇವಶ್ರೇಷ್ಠೋ ಭವೇದಯಮ್ ।
ಧರ್ಮನಿರ್ಣಯಭೂಮಿತ್ವಾದ್ ಬಂಧುತ್ವಾಚ್ಚ ಮಹಾಪ್ರಭೋಃ ॥ ೬೭೮ ॥

**ಅರ್ಥ–** ದೇವಾನಾಂ= ದೇವತೆಗಳ (ಮಧ್ಯದಲ್ಲಿ), ಪ್ರಾಯಪಠಿತಃ= ಬಹಳವಾಗಿ ಮುಖ್ಯಪ್ರಾಣನೇ ಪಠಿತನಾಗಿರುವುದರಿಂದ, ಅಯಂ= ಈ ಮುಖ್ಯಪ್ರಾಣನೇ, ಮಹಾಪ್ರಭೋಃ= ಮಹಾಪ್ರಭುವಾದ ಶ್ರೀಮನ್ನಾರಾಯಣನ, ಬಂಧುತ್ವಾತ್= ಮುಖ್ಯಬಂಧುವು ಆದ್ದರಿಂದಲೂ, ಧರ್ಮನಿರ್ಣಯಭೂಮಿತ್ವಾತ್= ಧರ್ಮಾಧರ್ಮಗಳ ನಿರ್ಣಯ, ದೇವಶ್ರೇಷ್ಠಃ ಭವೇತ್= ದೇವಶ್ರೇಷ್ಠನಾಗಿದ್ದಾನೆ.

**ಅನುವಾದ– ಎಲ್ಲ ದೇವತೆಗಳಲ್ಲಿಯೂ ಮುಖ್ಯಪ್ರಾಣನೇ ಶ್ರುತಿಗಳಿಂದ ಬಹಳವಾಗಿ ವರ್ಣಿತನಾಗಿದ್ದಾನೆ. ಈತನೇ ಧರ್ಮ, ಕರ್ಮಗಳ ನಿರ್ಣಾಯಕನಾಗಿದ್ದಾನೆ ಮತ್ತು ಮಹಾಪ್ರಭುವೆನಿಸಿದ ಶ್ರೀಮನ್ನಾರಾಯಣನಿಗೆ ಹಿರಿಯ ಬಂಧವೂ ಆಗಿದ್ದಾನೆ. ಆದ್ದರಿಂದ ಈತನೇ ದೇವಶ್ರೇಷ್ಠನಾಗಿದ್ದಾನೆ.**

**ಭಾವವಿಲಾಸಿನೀ–** ನಿಮಿತ್ತಾಂತರಂ ಚಾಹ – **ದೇವಾನಾಮಿತಿ** ॥ ಧರ್ಮನಿರ್ಣಯ ಭೂಮಿತ್ವಾತ್। ತೀರ್ಥಪಾನಾದಿ ವೈಷ್ಣವ ಧರ್ಮನಿರ್ಣಯ ಭೂಮಿತ್ವಾತ್ । ಇತ್ಥೇತಿ ಪದಾತ್ ಪೂರ್ವೋಕ್ತತೀರ್ಥಪಾನಪರಾಮರ್ಶಿ ಪದಾತ್ ॥ ೬೭೮-೬೭೯ ॥

**ಕಿಂಚೇತ್ಥೇತಿ ಪದಾದ್ಯತ್ರ ದೇವಾದೇವಯುಸಂಜ್ಞಿತಾಃ ।**
**ಯದ್ ಯುಂಜಂತಿ ಪರಂ ದೇವಂ ಪರಿವಾರತಯಾ ಸದಾ ।**
**ಮದಂತಿ ತತ್ರ ವಿಷ್ಣ್ವಂಗಾಭಿಷಿಕ್ತೇ ತೀರ್ಥಪಾಥಸಿ ॥ ೬೭೯ ॥**

**ನಿತ್ಯಂ ಸೋಶನವಾನ್ ಪ್ರೋಕ್ತಸ್ತೇನ ಚಾನಂದತೀರ್ಥತಾಮ್ ।**
**ಸ್ಪಷ್ಟೀಕರೋತಿ ವೇದೋಸೌ ತಸ್ಯ ಮಧ್ವಾಖ್ಯಯೋಗಿನಃ ॥ ೬೮೦ ॥**

**ಅರ್ಥ–** ಕಿಂಚ= ಅದಲ್ಲದೇ, ಯತ್= ಯಾವ ಕಾರಣದಿಂದ, ಪರಂ ದೇವಂ= ದೇವಶ್ರೇಷ್ಠನಾದ ಶ್ರೀಹರಿಯನ್ನು, ಪರಿವಾರತಯಾ= ಪರಿವಾರರೂಪದಿಂದ, ಸದಾ= ಯಾವಾಗಲೂ, ಯುಂಜಂತಿ= ಸುತ್ತುವರಿದಿರುತ್ತಾರೋ, ತತ್= ಆ ಕಾರಣದಿಂದ, ದೇವಯುಸಂಜ್ಞಿತಾಃ= ದೇವಯುಗಳೆಂದು ಕರೆಯಲ್ಪಡುವ, ದೇವಾಃ= ದೇವತೆಗಳು, ಯತ್ರ= ಎಲ್ಲಿ (ಯಾವುದನ್ನು ಪಾನಮಾಡಿ), ಮದಂತಿ= ಸಂತೋಷಿಸುತ್ತಾರೋ, ತತ್ರ= ಅದೇ, ವಿಷ್ಣ್ವಂಗಾಭಿಷಿಕ್ತೇ= ಪರಮಾತ್ಮನ ಅಂಗಾಂಗಗಳಲ್ಲಿ ಅಭಿಷಿಕ್ತವಾದ, ತೀರ್ಥಪಾಥಸಿ= ತೀರ್ಥೋದಕದಲ್ಲಿ, ಸಃ= ಮಧ್ವರು, ನಿತ್ಯಂ= ಯಾವಾಗಲೂ, ಅಶನವಾನ್= ಪ್ರಾಶನವುಳ್ಳವರೆಂದು, ಇತ್ಥಾ ಇತಿ ಪದಾತ್= ಇತ್ಥಾ ಎಂಬ ಪದದಿಂದ, ಪ್ರೋಕ್ತಃ= ವರ್ಣಸಲ್ಪಟ್ಟಿದ್ದಾರೆ. ತೇನ ಚ= ಆ ಕಾರಣದಿಂದಲೂ, ಅಸೌ ವೇದಃ= 'ತದಸ್ಯಪ್ರಿಯಮಭಿಪಾಥೋ' ಎಂಬ ವೇದವಾಕ್ಯವು, ತಸ್ಯ= ಆ, ಮಧ್ವಾಖ್ಯಯೋಗಿನಃ=

ಮಧ್ವರೆಂಬಯೋಗಿಗಳಿಗೆ, ಆನಂದತೀರ್ಥತಾಂ= ಆನಂದತೀರ್ಥರೆಂಬ ಹೆಸರನ್ನು, ಸೃಷ್ಟೀಕರೋತಿ= ಸೃಷ್ಟೀಕರಿಸುತ್ತದೆ.

**ಅನುವಾದ–** ಶ್ರೀಮನ್ನಾರಾಯಣನ ಪರಿವಾರರೂಪದಿಂದ ಆತನೊಂದಿಗೆ ಇರುವುದರಿಂದ ದೇವತೆಗಳಿಗೆ ದೇವಯುಗಳೆಂಬ ಹೆಸರಿದೆ. ಅಂಥ ಬ್ರಹ್ಮಾದಿ ದೇವತೆಗಳೆಲ್ಲರೂ ಪರಮಾತ್ಮನ ತೀರ್ಥದ ಪ್ರಾಶನವನ್ನು ಮಾಡುತ್ತಾರೆ. 'ತದಸ್ಯ ಪ್ರಿಯಮಭಿಪಾಥೋ' ಎಂಬ ವೇದವಾಕ್ಯವು ಇತ್ಥಾ ಎಂಬ ಪದದಿಂದ ಪೂರ್ಣಪ್ರಜ್ಞರೂ ಆ ತೀರ್ಥಪ್ರಾಶನವನ್ನು ನಿತ್ಯಮಾಡುವವರೆಂದು ಹೇಳುತ್ತದೆ ಮತ್ತು ಆ ಕಾರಣದಿಂದ ಆ ಮಧ್ವರನ್ನೇ ಆನಂದತೀರ್ಥರೆಂದೂ ಸ್ಪಷ್ಟೀಕರಿಸುತ್ತಿದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ ತಸ್ಮಾತ್ ದೇವಯುಸಂಜ್ಞಿತಾ ಇತಿ ಸಂಬಂಧಃ । ತತ್ರ ವಿಷ್ಣುಪಾದೋದಕೇ । ಸ ಮಧ್ವಃ ನಿತ್ಯಮಶನವಾನ್‌ಪ್ರೋಕ್ತಃ । ತೇನ ಕಾರಣೇನ । ಅಸೌ ಸಹಿ ಬಂಧುರಿತ್ಥೇತಿ ವೇದಃ । ತಸ್ಯ ಮಧ್ವಾಖ್ಯಯೋಗಿನಃ ಆನಂದತೀರ್ಥತಾಂ ಸ್ಪಷ್ಟೀ- ಕರೋತೀತಿ ಸಂಬಂಧಃ ॥ ೬೭೯-೬೮೦ ॥

**ವಿವರಣೆ–** ಇದರ ಮೂಲಕ ರಾಜರು ವಾಯುದೇವರಿಂದ ಉಪಕೃತರಾಗಿದ್ದೇವೆ. ಆದ್ದರಿಂದ ಪ್ರತಿಯೊಬ್ಬ ಮಾನವನಿಗೆ ಅವರ ತೀರ್ಥಪ್ರಾಶನವೂ ಅತ್ಯಾವಶ್ಯಕ ಎಂದು ತಿಳಿಸುತ್ತಿದ್ದಾರೆ.

ಆನಂದರೂಪಸ್ಯ ಹರೇಸ್ತೀರ್ಥಂ ಯಸ್ಯ ಸ ಏವ ಹಿ ।
ಆನಂದತೀರ್ಥನಾಮಾ ಸ್ಯಾತ್ತಸ್ಮಾಚ್ಚಾಸ್ಮದ್ಗುರುರ್ಭವೇತ್ ।
ಅತಃಶ್ರುತಿರಿಯಂ ಸೂತೇ ಮಧ್ವರೂಪಂ ಗುರುಂ ಮಮ ॥ ೬೮೧ ॥

**ಅರ್ಥ–** ಆನಂದರೂಪಸ್ಯ= ಆನಂದಸ್ವರೂಪನಾದ, ಹರೇಃ= ಶ್ರೀಹರಿಯ, ತೀರ್ಥಂ= ಪಾದೋದಕವು, ಯಸ್ಯ= ಯಾರಿಗೆ ಇದೆಯೋ, ಸಃ ಏವ= ಅವರೇ, ಆನಂದತೀರ್ಥನಾಮಾ= ಆನಂದತೀರ್ಥನಾಮಕರು, ಸ್ಯಾತ್ ಹಿ= ಆಗುವರಷ್ಟೆ, ತಸ್ಮಾತ್ ಚ= ಆದ್ದರಿಂದಲೂ, ಸಃ= ಆ ಆನಂದತೀರ್ಥರು, ಅಸ್ಮದ್ಗುರುಃ=ನಮ್ಮ ಗುರುಗಳು, ಭವೇತ್= ಆಗುವರು. ಅತಃ = ಆದ್ದರಿಂದ, ಇಯಂ ಶ್ರುತಿಃ= ಈ ಶ್ರುತಿಯು, ಮಮ= ನನ್ನ ಮಧ್ವರೂಪಂ= ಮಧ್ವರೂಪರಾದ, ಗುರುಂ= ಗುರುಗಳನ್ನು, ಸೂತೇ= ಪ್ರಸವಿಸುತ್ತದೆ. (ಶ್ರುತ್ಯಭಿಮಾನಿ ಲಕ್ಷ್ಮೀದೇವಿಯ ಪ್ರಿಯಕುಮಾರನಾದ ವಾಯುದೇವರನ್ನೇ ಪ್ರತಿಪಾದಿಸುತ್ತದೆ.)

**ಅನುವಾದ–** ಆನಂದರೂಪನಾದ ಹರಿಯತೀರ್ಥವು ಯಾರಿಗೆ ಇದೆಯೋ (ಯಾರು ಅದನ್ನು ಪ್ರಾಶನಮಾಡುವರೋ) ಅವರೇ ಆನಂದತೀರ್ಥರೆನಿಸುತ್ತಾರೆ ಮತ್ತು

ಅವರೇ ನಮ್ಮ ಗುರುಗಳಾಗಿದ್ದಾರೆ. ಆದ್ದರಿಂದ 'ತದಸ್ಯಪ್ರಿಯಮಭಿಪಾಥೋ' ಎಂಬ ಶ್ರುತಿಯು ನಮ್ಮ ಮಧ್ವರೆಂಬ ಗುರುಗಳನ್ನು ಪ್ರಸವಿಸುತ್ತದೆ (ಪ್ರತಿಪಾದಿಸುತ್ತದೆ).

**ಭಾವವಿಲಾಸಿನೀ–** ಇತ್ಥೇತಿ ಪದೇನ ವಿಷ್ಣುಪಾದೋದಕಸೇವಿತ್ವಸೂಚನೇಽಪಿ ಕಥಂ ಭವದಭಿಮತಾನಂದತೀರ್ಥಸ್ಯೈವ ಲಾಭ ಇತ್ಯತ ಆಹ – ಆನಂದರೂಪಸ್ಯೇತಿ ॥ ತಸ್ಮಾತ್ ಉಕ್ತರೀತ್ಯಾ ಇತ್ಥಂ ಪದಸತ್ತ್ವಾಚ್ಚ ಇತ್ಥೇತಿ ಪದೇನ ಉತ್ತರಾರ್ಧೋಕ್ತಮಧ್ವಸ್ಯ ವಿಷ್ಣುಪಾದತೀರ್ಥಸೇವಿತ್ವಸ್ಯ ಸೂಚನಾತ್ ತಚ್ಚ ಆನಂದರೂಪಸ್ಯ ಹರೇಃ ಸಾಕ್ಷಾಚ್ಚರಣತೀರ್ಥಂ ಯಸ್ಯಾ ಸಾವಿತಿ ವ್ಯುತ್ಪತ್ತ್ಯಾ ಆನಂದತೀರ್ಥಪದವಾಚ್ಯೇ ಅಸ್ಮದ್ಗುರಾವೇವ ಸಂಭವತೀತಿ ಭಾವಃ । ಇಯಂ ಶ್ರುತಿಃ ಶ್ರುತ್ಯಭಿಮಾನಿಮಹಾಲಕ್ಷ್ಮ್ಯಾಃ ಮತ್ಕುಮಾರಮಧ್ವಸ್ಯೈವಾತ್ರ ಪ್ರತಿಪಾದನಂ ಭವೇದಿತಿ ಬಹುವಿಧನಿರವಕಾಶಯುಕ್ತೇಃ ಸೂಚನಾಯ ಸೂತ ಇತ್ಯುಕ್ತಮ್ ॥ ೬೮೧ ॥

**ವಿವರಣೆ–** ಶ್ರುತಿಗೆ ಅಭಿಮಾನಿನಿಯಾದ ಮಹಾಲಕ್ಷ್ಮೀದೇವಿಯು ನನ್ನ ಸುಪುತ್ರನಾದ ಮುಖ್ಯಪ್ರಾಣನ ಪ್ರತಿಪಾದನವೇ ಈ ಶ್ರುತಿಯಿಂದ ಆಗಬೇಕೆಂಬ ಅಭಿಪ್ರಾಯವುಳ್ಳವಳಾಗಿದ್ದಾಳೆ ಇತ್ಯಾದಿ ಬಹುವಿಧಾನಗಳಾದ ನಿರವಕಾಶ ಯುಕ್ತಿಗಳನ್ನು ಸೂಚಿಸಲು ಪ್ರಸವಿಸುವಳೆಂಬ ಅರ್ಥದ ಸೂತೇ ಎಂಬ ಪದವನ್ನು ಹೇಳಲಾಗಿದೆ.

ಇನ್ನು ಮುಂದೆ ವಾಯುದೇವರ ಪ್ರಸಿದ್ಧಸೂಕ್ತವಾದ ಬಳಿತ್ಥಾಸೂಕ್ತದಲ್ಲಿ ಅವರ ಅವತಾರವಾದ ಮಧ್ವರೂಪದ ವರ್ಣನೆಯಿದೆ ಎಂದು ತೋರಿಸುತ್ತಿದ್ದಾರೆ-

ಬಳಿತ್ಥೇತಿ ಶ್ರುತಿರ್ವಾಯೋರ್ದೇವಸ್ಯ ಪ್ರಥಮಂ ವಪುಃ ।
ದ್ವಿತೀಯಂ ಚ ತೃತೀಯಂ ಚ ವಕ್ತಿವಾಕ್ಯತ್ರಯೇ ಕ್ರಮಾತ್ ॥ ೬೮೨ ॥

**ಅರ್ಥ–** ಬಳಿತ್ಥಾ ಇತಿ ಶ್ರುತಿಃ= ಬಳಿತ್ಥಾ ತದ್ವಪುಷೇ ಎಂಬ ಶ್ರುತಿಯು, ದೇವಸ್ಯ ವಾಯೋಃ = ಷಡ್ಗುಣೈಶ್ವರ್ಯಸಂಪನ್ನರಾದ ವಾಯುದೇವರ, ಪ್ರಥಮಂ ವಪುಃ= ಪ್ರಥಮಾವತಾರವನ್ನು, ದ್ವಿತೀಯಂ ತೃತೀಯಂ ಚ= ಎರಡು ಮತ್ತು ಮೂರನೆಯ ಅವತಾರಗಳನ್ನು, ವಾಕ್ಯತ್ರಯೇ= ಮೂರುವಾಕ್ಯಗಳಲ್ಲಿ, ಕ್ರಮಾತ್= ಕ್ರಮದಿಂದ, ವಕ್ತಿ= ಹೇಳುತ್ತದೆ.

**ಅನುವಾದ–** ಬಳಿತ್ಥಾ ತದ್ವಪುಷೇ ಎಂಬ ವೇದವಾಕ್ಯವು ಮುಖ್ಯಪ್ರಾಣನ ಮೂರು ಅವತಾರಗಳನ್ನು ಕ್ರಮವಾಗಿ ಮೂರುವಾಕ್ಯಗಳಲ್ಲಿ ವರ್ಣಿಸುತ್ತದೆ.

**ಭಾವವಿಲಾಸಿನೀ–** ಬಳಿತ್ಥೇತಿ ವರ್ಗಸ್ಥಾಯಾಂ ಯದೀಮನುಪ್ರದಿವ ಇತಿ ಋಚ್ಯಪಿ ವಾಯ್ವಾಖ್ಯಮಧ್ವವಿಷಯತಾಪೂರ್ವಸಂಗತ್ಯಾಪಿ ಪ್ರಸಿದ್ಧೇತ್ಯಾಹ – **ಬಳಿತ್ಥೇತಿ ಶ್ರುತಿರಿತಿ** ॥ ಸಹಸೋ ವೇಗವತೋ ದೇವಸ್ಯೇತಿ ಪ್ರಾಥಮಿಕವಾಕ್ಯೇ ವಾಯೋಃ ಸ್ಪಷ್ಟಂ ಪ್ರಸ್ತುತತ್ವಾತ್ ವಾಯೋರಿತ್ಯುಕ್ತಮ್ । ಯದೀಮುಪಹ್ವರತೇ ಸಾಧತೇ ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ।

ಪೃಕ್ಷೋವಪುಃ ಪಿತುಮಾನ್ನಿತ್ಯ ಆಶಯೇ ದ್ವಿತೀಯಮಾ ಸಪ್ತಶಿವಾಸು ಮಾತೃಷು । ತೃತೀಯಮಸ್ಯ ವೃಷಭಸ್ಯ ದೋಹಸೇದಶಪ್ರಮಿತಂ ಜನಯಂತ ಯೋಷಣ ಇತಿ ವಾಕ್ಯತ್ರಯೇ ಯದ್ಯಪಿ ಪ್ರಥಮ-ವಾಕ್ಯೇ ಪ್ರಥಮಮಿತಿ ಪದಂ ನಾಸ್ತಿ ತಥಾಪ್ಯುತ್ತರವಾಕ್ಯದ್ವಯೇ ದ್ವಿತೀಯತೃತೀಯಪದ ಸದ್ಭಾವೇನ ತತ್ ಬಲಾತ್ ಪೂರ್ವವಾಕ್ಯೇಽಪಿ ಪ್ರಥಮಮಿತಿ ಪದಂ ಊಹ್ಯಮಿತಿ ಭಾವಃ ॥ ೬೮೨ ॥

**ವಿವರಣೆ–** ಬಳಿತ್ಥಾಸೂಕ್ತಕ್ಕೆ ವ್ಯಾಖ್ಯಾನಿಸುತ್ತಿರುವ ರಾಜರು ಶ್ರುತಿಯ ಮೊದಲನೆಯ ವಾಕ್ಯದಲ್ಲಿ ಸಹಸಃ - ವೇಗಶಾಲಿಯಾದ ದೇವಸ್ಯ - ವಾಯುದೇವನ ಎಂಬ ವಾಕ್ಯದಲ್ಲಿ ವಾಯುದೇವರೇ ಸ್ಪಷ್ಟವಾಗಿ ಪ್ರತಿಪಾದ್ಯರಾಗಿದ್ದಾರೆ ಎಂಬುದನ್ನು ಸೂಚಿಸಲು ವಾಯೋರ್ದೇವಸ್ಯ ಪ್ರಥಮಂ ವಪುಃ ಎಂದು ವಾಯುಶಬ್ದವನ್ನು ಬಳಸಿದ್ದಾರೆ.

ಪೃಕ್ಷೋ ವಪುಃ ಎಂದು ಭೀಮಸೇನರನ್ನು ಹೇಳುವ ಮಂತ್ರದಲ್ಲಿ ದ್ವಿತೀಯಂ ಎಂದೂ ಯದೀಮನು ಪ್ರದಿವಃ ಎಂದು ಮಧ್ವರನ್ನು ಹೇಳುವ ಮಂತ್ರದಲ್ಲಿ ತೃತೀಯಂ ಎಂದೂ ಇದೆ.

ಆದರೆ ಪ್ರಥಮವಾಕ್ಯದಲ್ಲಿ ಪ್ರಥಮಂ ಎಂಬುದಾಗಿ ಪ್ರಥಮಪದವಿಲ್ಲದಿದ್ದರೂ ಮುಂದಿನ ವಾಕ್ಯಗಲ್ಲಿ ದ್ವಿತೀಯ ತೃತೀಯ ಪದಗಳಿರುವುದರಿಂದ ಹಿಂದಿನ ವಾಕ್ಯದಲ್ಲೂ ಪ್ರಥಮಪದವನ್ನು ಇಟ್ಟುಕೊಳ್ಳಬೇಕು ಎಂದು ಗೊತ್ತಾಗುತ್ತದೆ.

**ತಚ್ಚ ಪ್ರಸಿದ್ಧಸಂತ್ಯಾಗಾಯೋಗಾದನ್ಯಾಪ್ರಸಿದ್ಧಿತಃ ।**
**ತತ್ತ್ವವಾದ್ಯುದಿತಂ ರೂಪತ್ರಯಮೇವೇತಿ ಮೇ ಮತಿಃ ॥ ೬೮೩ ॥**

**ಅರ್ಥ–** ತತ್= ವಾಯುದೇವರ ರೂಪತ್ರಯವು, ಪ್ರಸಿದ್ಧಸಂತ್ಯಾಗಾಯೋಗಾತ್ = ಪ್ರಸಿದ್ಧವಾದ ಹನುಮದ್ ಭೀಮ ಮಧ್ವರೂಪಗಳ ತ್ಯಾಗವು ಯುಕ್ತವಲ್ಲವಾದ್ದರಿಂದಲೂ, ಅನ್ಯಾಪ್ರಸಿದ್ಧಿತಃ= ಬೇರೆಡೆ ಈ ನಾಮಗಳ ಪ್ರಸಿದ್ಧಿಇಲ್ಲವಾದ್ದರಿಂದಲೂ, ತತ್ತ್ವವಾದ್ಯುದಿತಂ = ತತ್ತ್ವವಾದಿಯಿಂದ ಹೇಳಲ್ಪಟ್ಟ , ರೂಪತ್ರಯಮೇವೇತಿ= ಮೂರುರೂಪಗಳೇ ಎಂದು, ಮೇ= ನನ್ನ ಮತಿಃ = ನಿಶ್ಚಯವು.

**ಅನುವಾದ–** ಹೀಗೆ ಶ್ರುತಿಯು ಸ್ಪಷ್ಟವಾಗಿ ವಾಯುದೇವರ ಪ್ರಸಿದ್ಧಗಳಾದ ಮೂರು ಅವತಾರಗಳನ್ನು ಪ್ರತಿಪಾದಿಸುತ್ತಿರಲು ಅದನ್ನು ತಿರಸ್ಕಾರಮಾಡಲೂ ಸಾಧ್ಯವಿಲ್ಲ. ಹಾಗೆ ಆ ವಾಕ್ಯಗಳನ್ನು ಇತರ ದೇವತೆಗಳ ಪ್ರಸಿದ್ಧಿಇಲ್ಲದ ಕಾರಣ ಬೇರೆಡೆ ಸಮನ್ವಯಿಸಲೂ ಸಾಧ್ಯವಿಲ್ಲ. ಆದ್ದರಿಂದ ತತ್ತ್ವವಾದಿಗಳಾದ ನಾವು ಹೇಳಿದಂತೆ ನಮ್ಮ ಗುರುಗಳಾದ ವಾಯುದೇವರ ಮೂರು ಅವತಾರಗಳೂ ಶ್ರುತಿಸಿದ್ಧವೆನ್ನಬೇಕು.

**ಭಾವವಿಲಾಸಿನೀ–** ತತ್ ವಾಯೋರೂಪತ್ರಯಂ ಪ್ರಸಿದ್ಧಸಂತ್ಯಾಗಾಯೋಗಾತ್ ವಾಯೋ-ರವತಾರತ್ರಯತಯಾ ಪ್ರಸಿದ್ಧಸ್ಯ ಹನುಮದ್ಭೀಮಮಧ್ವಾಖ್ಯಾಸ್ಯ ರೂಪತ್ರಯಸ್ಯ ಸಂತ್ಯಾ-ಗಾಯೋಗಾತ್ ॥ ೬೮೩ ॥

ಬಳಿತ್ಥಾಸೂಕ್ತದಲ್ಲಿ ವಾಯುದೇವರ ಮಹಿಮೆಯೇ ಉಕ್ತವಾಗಿ ಎನ್ನುವ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ-

**ಹನುಮದ್ಭೀಮಸಂಜ್ಞೌ ದ್ವೌ ಪ್ರಸಿದ್ಧೌ ವಿಷ್ಣುಕಿಂಕರೌ ।**
**ಅತಸ್ತೃತೀಯೋಽಪಿ ಕಶ್ಚಿದ್ ಭವೇದ್ ಭಕ್ತಧುರಂಧರಃ ॥ ೬೮೪ ॥**

**ಅರ್ಥ–** ಹನುಮದ್ಭೀಮಸಂಜ್ಞೌ= ಹನುಮ ಭೀಮರೆಂಬ ನಾಮವುಳ್ಳ, ದ್ವೌ= ಎರಡು ರೂಪಗಳು, ಪ್ರಸಿದ್ಧೌ = (ರಾಮಾಯಣ ಭಾರತಾದಿಗಳಲ್ಲಿ) ಪ್ರಸಿದ್ಧವಾಗಿರುವ, ವಿಷ್ಣುಕಿಂಕರೌ= ವಿಷ್ಣುಸೇವಕರೂಪಗಳು. ಅತಃ= ಆದ್ದರಿಂದ, ತೃತೀಯಃ ಅಪಿ= ಶ್ರುತ್ಯುಕ್ತವಾದ ಮೂರನೆಯ ಅವತಾರವೂ, ಕಶ್ಚಿತ್= ಒಬ್ಬ ಭಕ್ತಧುರಂಧರಃ= ವಿಷ್ಣುಭಕ್ತನಾದ ಕಾರ್ಯಸಾದಕನೇ, ಭವೇತ್= ಆಗಿರಲೇಬೇಕು.

**ಅನುವಾದ–** ವಾಯುದೇವರ ಮೊದಲನೆಯ ಅವತಾರವಾದ ಶ್ರೀರಾಮ ಸೇವೆಗಾಗಿ ಹನುಮಂತನು ಕಪಿಸೇನಾ ನಾಯಕತ್ವವನ್ನು ವಹಿಸಿದ್ದ. ಹಾಗೆ ಭೀಮಾವತಾರದಲ್ಲಿ ಶ್ರೀಕೃಷ್ಣನ ಸೇವಕನಾಗಿ ಪಾಂಡವರ ಸೇನಾನಾಯಕತ್ವವನ್ನು ವಹಿಸಿದ್ದರಿಂದ ಮೂರನೆಯ ಅವತಾರವೂ ವೇದವ್ಯಾಸರ ಸೇವೆಗಾಗಿ ವೈಷ್ಣವಭಕ್ತ ಒಬ್ಬ ಸೇನಾನಾಯಕರೆಂದೇ ಹೇಳಬೇಕು. ಆದ್ದರಿಂದ ಈ ಯುಕ್ತಿಯಿಂದಲೂ ಮೂರನೆಯ ಅವತಾರವು ಶ್ರುತ್ಯುಕ್ತವೆಂದು ತೀರ್ಮಾನವಾಗುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಹನುಮದಿತಿ** ॥ ಪ್ರಥಮದ್ವಿತೀಯಾವತಾರಯೋ-ರ್ವಿಷ್ಣುಕಿಂಕರತಯಾ ರಾಮಾಯಣಭಾರತಾದೌ ಪ್ರಸಿದ್ಧತ್ವಾತ್ತೃತೀಯೋಽಪ್ಯವತಾರೋ ವಿಷ್ಣುಭಕ್ತಿಧುರಂಧರೋ ಭವೇತ್ । ಅತೋಽಪಿ ತತ್ತ್ವವಾದ್ಯುದಿತೋ ಮಧ್ವಾಚಾರ್ಯ ಏವಾಸಾವಿತಿ ಭಾವಃ ॥ ೬೮೪ ॥

**ವಿವರಣೆ–** ವಾಯುದೇವನ ಮೂರು ಅವತಾರಗಳಲ್ಲಿ ಮೊದಲೆರಡು ಪ್ರಸಿದ್ಧಗಳಾದ ವಿಷ್ಣುಸೇವಕರ ಅವತಾರಗಳೇ ಆಗಿವೆ. ಆದ್ದರಿಂದ ಶ್ರುತ್ಯುಕ್ತವಾದ ಮೂರನೇ ಅವತಾರವೂ ಒಬ್ಬ ಶ್ರೇಷ್ಠವಿಷ್ಣುಭಕ್ತನೇ ಆಗಿರಬೇಕು.

ಹಿಂದಿನ ಶ್ಲೋಕದಲ್ಲಿ ವಿಷ್ಣುಸೇವಕತ್ವದ ಬಲದಿಂದ ಮೂರನೆಯ ಅವತಾರವನ್ನು ಆಚಾರ್ಯರು ಎಂದು ಸಮರ್ಥನೆ ಮಾಡಿದರು. ಇನ್ನು ವಿಷ್ಣುಸೇನಾನಾಯಕತ್ವೇನಾಪಿ ಮಧ್ವರೇ ತೃತೀಯಾವತಾರವೆಂದು ಸಿದ್ಧವಾಗುತ್ತದೆ ಎನ್ನುತ್ತಾರೆ -

**ಪೂರ್ವೌ ದ್ವೌ ಹರಿಸೇನಾಯಾಃ ಸೇನಾನ್ಯೌ ಯನ್ಮತೌ ಸತಾಮ್ ।**
**ಅತಸ್ತೃತೀಯೋಽಪಿ ಸೋಽಯಂ ವೈಷ್ಣವಾಗ್ರೇಸರೋ ಭವೇತ್ ॥ ೬೮೫ ॥**

**ಅರ್ಥ–** ಪೂರ್ವೌ ದ್ವೌ= ಮೊದಲಿನ ಹನುಮ ಭೀಮ ಎರಡು ರೂಪಗಳು, ಹರಿಸೇನಾಯಾಃ= ಕಪಿಸೇನೆಯ ಹಾಗೂ ಪಾಂಡವ ಸೇನೆಯ, ಸೇನಾನ್ಯೌ= ನಾಯಕ-

ರೂಪಗಳೆಂದು, ಯತ್= ಯಾವ ಕಾರಣದಿಂದ, ಸತಾಂ = ಸಜ್ಜನರಿಗೆ, ಮತೌ= ಸಮ್ಮತಗಳಾಗಿವೆಯೋ, ಅತಃ= ಆದ್ದರಿಂದಲೇ, ತೃತೀಯೋಪಿ= ಈ ಮೂರನೆಯದ್ದೂ ಕೂಡ, ಅಯಂ ವೈಷ್ಣವಾಗ್ರೇಸರಃ= ಆ ವಿಷ್ಣುಭಕ್ತರ ನಾಯಕನು, ಭವೇತ್= ಆಗಿರಬೇಕು.

**ಅನುವಾದ–** ವಾಯುದೇವರ ಮೊದಲಿನ ಎರಡು ರೂಪಗಳಲ್ಲಿ ಹನುಮರೂಪವು ರಾಮನ ನೇತೃತ್ವದ ಕಪಿಸೇನಾನಾಯಕವಾದರೆ, ಎರಡನೆಯ ಬೀಮರೂಪವು ಕೃಷ್ಣನ ನೇತೃತ್ವದ ಪಾಂಡವಸೇನೆಯ ನಾಯಕವಾಗಿ ಪರಮಾತ್ಮನ ಸೇವೆಯನ್ನು ಮಾಡಿತು. ಅದರಂತೆ ಮೂರನೆಯ ಅವತಾರವೂ ವಿಷ್ಣುಭಕ್ತರ ಸೇನಾನಾಯಕತ್ವವನ್ನು ಆಚಾರ್ಯರೂಪವು ವಹಿಸಬೇಕು. ಆದ್ದರಿಂದಲೂ ವಾಯುದೇವರೇ ಮಧ್ವರೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–ಪೂರ್ವಂ** ವಿಷ್ಣುಕಿಂಕರತ್ವಬಲಾತ್ ತೃತೀಯೋ ಮಧ್ವಾಚಾರ್ಯ ಇತ್ಯುಕ್ತಮ್ । ಇದಾನೀಂ ವೈಷ್ಣವಸೇನಾನಾಯಕತ್ವಬಲಾದಪಿ ಸ ಏವ ತೃತೀಯ ಇತ್ಯಾಹ – **ಪೂರ್ವಾವಿತಿ** ॥ ಹರಿಸೇನಾಯಾಃ ಕಪಿಸೇನಾಯಾಃ ಪಾಂಡವಸೇನಾಯಾಶ್ಚ ಯದ್ಯಸ್ಮಾತ್ ॥ ೭೮೫ ॥

ಹಾಗೆ ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ -

ತ್ರೇತಾಯಾಂ ದ್ವಾಪರೇ ಚೈವ ತೌ ದ್ವೌ ವಾಯುಕುಮಾರಕೌ ।
ತತ್ತೃತೀಯಃ ಕಲೌ ಚ ಸ್ಯಾದ್ಯುಕ್ತ್ಯಾ ವಾಯುಕುಮಾರಕಃ ।
ಯೌಕ್ತಸ್ಯ ತಸ್ಯ ಸುಜನಪ್ರಸಿದ್ಧಿರ್ಮಧ್ವತಾಂ ದಿಶೇತ್ ॥ ೭೮೬ ॥

**ಅರ್ಥ–** ತ್ರೇತಾಯಾಂ= ತ್ರೇತಾಯುಗದಲ್ಲಿ, ಚ = ಮತ್ತು, ದ್ವಾಪರೇ ಏವ= ದ್ವಾಪರಯುಗದಲ್ಲಿಯೇ, ತೌ ದ್ವೌ= ಆ ಎರಡು ರೂಪಗಳು, ವಾಯುಕುಮಾರಕೌ= ವಾಯುಪುತ್ರರು. ತತ್= ಆದ್ದರಿಂದ, ಕಲೌ ಚ= ಕಲಿಯುಗದಲ್ಲಿಯೇ, ಯುಕ್ತ್ಯಾ= ಯುಕ್ತಿಯಿಂದ, ತೃತೀಯಃ= ಮೂರನೆಯವರು, ವಾಯುಕುಮಾರಕಃ= ವಾಯುಪುತ್ರನು, ಸ್ಯಾತ್ = ಆಗಿರಬೇಕು. ಯೌಕ್ತಸ್ಯ= ಯುಕ್ತಿಬಲದಿಂದ ಪ್ರಾಪ್ತವಾದ, ತಸ್ಯ= ಆ ಅರ್ಥಕ್ಕೆ, ಸುಜನಪ್ರಸಿದ್ಧಿಃ= ತತ್ವವಾದಿಜನರ ಪ್ರಸಿದ್ಧಿಯು, ಮಧ್ವತಾಂ= ಮಧ್ವಾಚಾರ್ಯರೆಂಬುವುದನ್ನು, ದಿಶೇತ್= ತಿಳಿಸುತ್ತದೆ.

**ಅನುವಾದ–** ವಾಯುದೇವರಿಗೆ ಮೂರು ಅವತಾರಗಳು ಎಂದು ಪ್ರಸಿದ್ಧಿ ವಿದ್ವಜ್ಜನರಲ್ಲಿ ಇದೆ. ಆದ್ದರಿಂದ ತ್ರೇತಾಯುಗ ಮತ್ತು ದ್ವಾಪರಯುಗದಲ್ಲಿ ಹನುಮ ಭೀಮ ರೂಪಗಳಾದ ಮೇಲೆ ಕಲಿಯುಗದಲ್ಲಿ ಆದ - ಮಧ್ವಾವತಾರವೇ ವಾಯುದೇವರ ಮೂರನೆಯ ಅವತಾರ ಎನ್ನಬೇಕು. ಇಂತಹ ಯುಕ್ತಿಯ ಬಲದಿಂದಲೂ ವಾಯುದೇವರೇ ಮಧ್ವಾಚಾರ್ಯರೆಂಬುದನ್ನು ದೃಢಪಡಿಸುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂಚಾಹ – **ತ್ರೇತಾಯಾಮಿತಿ ॥ ತೌ** ಹನುಮದ್ಭೀಮೌ ತತ್ ತಸ್ಮಾತ್ । ಕಲೌ ಚ ಕಲಿಯುಗ ಏವ । ಯೌಕ್ತಸ್ಯ ಉಕ್ತಯುಕ್ತಿಬಲಾತ್ ಕಲಿಯುಗೇ ಆಗತಸ್ಯ ಸುಜನಪ್ರಸಿದ್ಧಿಃ ತತ್ವವಾದಿಜನಪ್ರಸಿದ್ಧಿಃ। ಕಲಿಯುಗಸ್ಥವಾಯ್ವವತಾರಃ ತತ್ವವಾದ್ಯಾಖ್ಯಶಿಷ್ಯಪ್ರಸಿದ್ಧ್ಯಾ ಮಧ್ವಾಚಾರ್ಯ ಏವ ಭಾವೇದಿತಿ ಭಾವಃ ॥ ೭೮೬ ॥

ಬಲಕಾರ್ಯೇಷು ಯೋ ವಿಷ್ಣೋಃ ಸಾಚಿವ್ಯಮಕರೋನ್ಮರುತ್ ।
ಹನೂಮದಾದಿರೂಪೇಣ ಜ್ಞಾನಕಾರ್ಯೇಽಪಿ ಸ ಪ್ರಭೋಃ ।
ವ್ಯಾಸರೂಪಸ್ಯ ಸಚಿವೀಭಾವಮರ್ಹತಿ ನಾಪರಃ ॥ ೭೮೭ ॥

**ಅರ್ಥ–** ಯಃ ಮರುತ್= ಯಾವ ವಾಯುದೇವರು, ಬಲಕಾರ್ಯೇಷು= ರಾಕ್ಷಸಸಂಹಾರೂಪಬಲಕಾರ್ಯಗಳಲ್ಲಿ ವಿಷ್ಣೋಃ= ಶ್ರೀವಿಷ್ಣುವಿನ, ಸಾಚಿವ್ಯಂ= ಸೇವೆಯನ್ನು (ರಾಮಕೃಷ್ಣಾದಿರೂಪಗಳ ಸೇವೆಯನ್ನು), ಹನುಮದಾದಿರೂಪೇಷು= ಹನುಮದ್ ಭೀಮರೂಪಗಳಿಂದ, ಅಕರೋತ್= ಮಾಡಿದರೋ, ಸಃ= ಆ ವಾಯುದೇವರು, ಜ್ಞಾನಕಾರ್ಯೇಷು= ಪರಮಾತ್ಮನ ಜ್ಞಾನಕಾರ್ಯದಲ್ಲೂ ಪ್ರಭೋಃ ವ್ಯಾಸರೂಪಸ್ಯ= ವೇದವ್ಯಾಸರೂಪರಾದ ಶ್ರೀವಿಷ್ಣುವಿನ, ಸಚಿವೀಭಾವಂ= ಸೇವಾಭಾವವನ್ನು ಅರ್ಹತಿ= (ಹೊಂದಲು) ಯೋಗ್ಯವಾಗುತ್ತಾರೆ, ಅಪರಃ ನ= ಬೇರೆಯವರಲ್ಲ.

**ಅನುವಾದ–** ಭೂಭಾರಹರಣಕ್ಕಾಗಿ ರಾಮಕೃಷ್ಣಾದಿರೂಪದಿಂದ ಅವತಾರ ಮಾಡಿದ ಪರಮಾತ್ಮನ ಸೇವೆಯನ್ನು ಮಾಡಲು ವಾಯುದೇವರೂ ಕೂಡ ಹನುಮದ್ ಭೀಮರೂಪಗಳಂದ ಅವತರಿಸಿ ದೈತ್ಯಸಂಹಾರ ರೂಪಬಲಕಾರ್ಯದಲ್ಲಿ ಸಹಕರಿಸಿ ತಮ್ಮ ಸೇವೆಯನ್ನು ಪರಮಾತ್ಮನಿಗೆ ಸಮರ್ಪಿಸಿದ್ದಾರೆ. ಆದ್ದರಿಂದ ತತ್ತ್ವಜ್ಞಾನ-ಸಂರಕ್ಷಣರೂಪಜ್ಞಾನಕಾರ್ಯದಲ್ಲಿ ವೇದವ್ಯಾಸರಿಗೆ ತಮ್ಮ ಸೇವೆಯನ್ನು ಅರ್ಪಿಸಲು ಭೂಲೋಕದಲ್ಲಿ ವಾಯುದೇವರೇ ಸಮರ್ಥರು ಹೊರತು ಬೇರೆಯಾರೂ ಅಲ್ಲ.

**ಭಾವವಿಲಾಸಿನೀ–** ಯುಕ್ತ್ಯಂತರೇಣಾಪಿ ತೃತೀಯೋ ವಾಯ್ವವತಾರೋ ಮಧ್ವ ಏವ ಭವೇದಿತ್ಯಾಹ – **ಬಲೇತಿ ॥ ಸಃ ಮರುತ್** ॥ ೭೮೭ ॥

ಬಲಕಾರ್ಯೇ ಸಹಾಯೌ ತೌ ಪ್ರಭೋರ್ದಾನವಮರ್ದನೌ ।
ಜ್ಞಾನಕಾರ್ಯೇ ಸೂತ್ರಕೃತೋ ಭಾಷ್ಯಕೃದ್ಧಿ ಸಹಾಯಕೃತ್ ।
ಅತೋಽಪಿ ಮಧ್ವನಾಮಾ ಯಸ್ತೃತಿಯೋ ವಾಯುನಂದನಃ ॥ ೭೮೮ ॥

**ಅರ್ಥ–** ಪ್ರಭೋಃ= ಭಗವಂತನ, ಬಲಕಾರ್ಯೇ= ರಾವಣಶಿಶುಪಾಲಾದಿ ದೈತ್ಯಸಂಹಾರರೂಪ ಬಲಕಾರ್ಯದಲ್ಲಿ ತೌ= ಆ ಹನುಮಭೀಮರು, ಸಹಾಯೌ= ಭಗವಂತನಿಗೆ ಸಹಾಯಕರಾಗಿದ್ದಾರೆ, ದಾನವಮರ್ದನೌ= ಅಕ್ಷಕುಮಾರ ಜರಾಸಂಧಾದಿ-

ದಾನವರನ್ನು ಮರ್ದನಮಾಡಿರುವವು. (ತಥಾ= ಹಾಗೆ) ಸೂತ್ರಕೃತಃ= ಸೂತ್ರಗಳನ್ನು ರಚಿಸಿದ ವ್ಯಾಸರಿಗೆ, ಭಾಷ್ಯಕೃತ್= ಭಾಷ್ಯವನ್ನು ರಚಿಸಿದವರೇ, ಜ್ಞಾನಕಾರ್ಯೇ= ಜ್ಞಾನಕಾರ್ಯದಲ್ಲಿ ಸಹಾಯಕೃತ್= ಸಹಾಯ ಮಾಡಿದವರು, ಅತ ಅಪಿ= ಆದ್ದರಿಂದಲೂ, ಮಧ್ವನಾಮಾ= ಮಧ್ವರೆಂಬ ನಾಮವುಳ್ಳ, ಯಃ= ಯಾವ ಗುರುಗಳು ಇದ್ದಾರೆಯೋ, ಸಃ= ಅವರು, ತೃತೀಯಃ ವಾಯುನಂದನಃ= ಮೂರನೆಯ ವಾಯ್ವಂಶಸಂಭೂತರು (ಎಂದು ಸಿದ್ಧವಾಗುತ್ತದೆ.)

**ಅನುವಾದ–** ವಾಯುದೇವರು ಹನುಮಂತನ ಅವತಾರದಲ್ಲಿ ಅಕ್ಷಕುಮಾರ, ಭೀಮಾವತಾರದಲ್ಲಿ ಜರಾಸಂಧ ಮೊದಲಾದ ರಾಕ್ಷಸರನ್ನು ಸಂಹಾರಮಾಡಿ ಭಗವಂತನ ಭೂಭಾರಕಾರ್ಯದಲ್ಲಿ ಸಹಾಯಕರಾದರು. ಹಾಗೆ ಮೂರನೆಯ ಅವತಾರದಲ್ಲೂ ದುರ್ಭಾಷ್ಯಗಳನ್ನು ಖಂಡಿಸಿ ವ್ಯಾಸರ ಅಭಿಪ್ರಾಯಕ್ಕೆ ಅನುಗುಣವಾಗಿ ಭಾಷ್ಯವನ್ನು ರಚಿಸುವ ಮೂಲಕ ಸಿದ್ಧಾಂತವನ್ನು ಸ್ಥಾಪಿಸಿ ವೇದವ್ಯಾಸರೂಪಿಭಗವಂತನ ಸಹಾಯವನ್ನು ಮಾಡಿದರು, ಆದ್ದರಿಂದಲೂ ವಾಯುದೇವರೆ ಮಧ್ವಾಚಾರ್ಯ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಪ್ರಭೋರ್ಬಲಕಾರ್ಯೇ ಸಹಾಯೌ ತೌ ಹನುಮದ್ಭೀಮೌ ದಾನವ-ಮರ್ದನೌ ಪ್ರಭುರ್ಯಥಾ ರಾವಣಶಿಶುಪಾಲಾದಿದಾನವಮರ್ದನಃ ತದ್ವತ್ಸ್ವಯಮಪಿ ಪ್ರಭುಕಾರ್ಯಧುರಂಧರತ್ವಾತ್ ಅಕ್ಷಕುಮಾರಜರಾಸಂಧಾದಿದಾನವಮರ್ದನೌ । ಏವಂ ಜ್ಞಾನಕಾರ್ಯೇ ಸೂತ್ರಕೃತೋ ವ್ಯಾಸಸ್ಯ ಸಕಲದುರ್ಭಾಷ್ಯಾಣಾಮಂತೇ ಸಿದ್ಧಾಂತೀಭೂತ ಶ್ರೀಮದ್ಭಾಷ್ಯಕಾರೋ ಮಧ್ವ ಏವ ಪ್ರಭೋಃ ಕಾರ್ಯೇ ಏವ ಧುರಂಧರತ್ವಾತ್ ತೃತೀಯೋ ವಾಯ್ವವತಾರೋ ನ್ಯಾಯ್ಯ ಇತಿ ಭಾವಃ ॥ ೬೮೮ ॥

ಕಿಂಚಾಶ್ರಮಚತುಷ್ಕಸ್ಯ ಧರ್ಮಮಾಚರತೋ ಗುರೋಃ ।
ಪ್ರಥಮಂ ತು ವಪುರ್ವರ್ಣಿವನಿನೋಃ ಧರ್ಮಮಾಚರತ್ ।
ದ್ವಿತೀಯಂ ಗೃಹಿಣೋ ಧರ್ಮಮಾಚರದ್ ಭೀಮಸಂಜ್ಞಿತಮ್ ॥ ೬೮೯ ॥

**ಅರ್ಥ–** ಕಿಂಚ= ಮತ್ತೆ, ಆಶ್ರಮಚತುಷ್ಕಸ್ಯ= ಬ್ರಹ್ಮಚರ್ಯ, ಗೃಹಸ್ಥ ವಾನಪ್ರಸ್ಥ ಯತ್ಯಾಶ್ರಮಗಳೆಂಬ ನಾಲ್ಕು ಆಶ್ರಮಗಳ, ಧರ್ಮಂ= ಧರ್ಮವನ್ನು ಆಚರತಃ= ಆಚರಿಸುವ, ಗುರೋಃ= ಮುಖ್ಯಪ್ರಾಣನ, ಪ್ರಥಮಂ ವಪುಃ ತು= ಪ್ರಥಮಾವತಾರವಾದ ಹನುಮಂತನೆಂಬ ರೂಪವೇ, ವರ್ಣಿವನಿನೋಃ= ಬ್ರಹ್ಮಚಾರಿ ಮತ್ತು ವಾನಪ್ರಸ್ಥರ, ಧರ್ಮಂ= ಧರ್ಮವನ್ನು ಆಚರತ್= ಆಚರಿಸಿತು. (ಕಿಂಚ= ಮತ್ತು) ಭೀಮಸಂಜ್ಞಿತಂ= ಭೀಮನಾಮಕ, ದ್ವಿತೀಯಂ= ಎರಡನೆಯ ರೂಪವು, ಗೃಹಿಣಃ ಧರ್ಮಂ= ಗೃಹಸ್ಥಧರ್ಮವನ್ನು ಆಚರತ್= ಆಚರಿಸಿತು.

**ಅನುವಾದ–** ವಾಯುದೇವರು ಸ್ವೇಚ್ಛೆಯಿಂದ ಬ್ರಹ್ಮಚರ್ಯ,ವಾನಪ್ರಸ್ಥ ಗಾರ್ಹಸ್ಥ್ಯ ಮತ್ತು ಯತ್ಯಾಶ್ರಮಗಳ ಧರ್ಮಗಳನ್ನು ಆಚರಿಸಲು ಸಂಕಲ್ಪಿಸಿ ಮೊದಲನೆಯ ಹನುಮದವತಾರದಲ್ಲಿ ಜಿತೇಂದ್ರಿಯರಾಗಿ ಗಾಯತ್ರಿಜಪ ಆಚರಣೆ ಮತ್ತು ಕಂದಮೂಲಾದಿ ಆಹಾರವನ್ನು ಸ್ವೀಕರಿಸುವವರಾಗಿ ವನದಲ್ಲಿ ವಾಸಮಾಡಿದ್ದರಿಂದ ಬ್ರಹ್ಮಚರ್ಯ ಮತ್ತು ವಾನಪ್ರಸ್ಥಾಶ್ರಮಧರ್ಮವನ್ನು ಒಂದೇ ಅವತಾರದಲ್ಲಿ ಆಚರಿಸಿದರು. ಇನ್ನು ಎರಡನೆಯದಾದ ಭೀಮಾವತಾರದಲ್ಲಿ ಹಿಡಿಂಬಿ ಕಾಳಿ ಮೊದಲಾದವರನ್ನು ಮದುವೆಯಾಗಿ ಗೃಹಸ್ಥಧರ್ಮವನ್ನು ಪಾಲಿಸಿದರು.

**ಭಾವವಿಲಾಸಿನೀ–** ಯುಕ್ತ್ಯಂತರಂಚಾಹ – ಕಿಂ ಚೇತಿ ॥ ಆಶ್ರಮಚತುಷ್ಕಸ್ಯ ಬ್ರಹ್ಮಚಾರಿಗೃಹಸ್ಥ ವಾನಪ್ರಸ್ಥಯತ್ಯಾಖ್ಯಾಶ್ರಮಚತುಷ್ಕಸ್ಯ । ಗುರೋಃ ಮುಖ್ಯಪ್ರಾಣಸ್ಯ । ಆಶ್ರಮಚತುಷ್ಟಯ-ಧರ್ಮಮಾಚರಿಷ್ಯಾಮೀತ್ಯವತೀರ್ಣಸ್ಯ ಮುಖ್ಯಪ್ರಾಣಸ್ಯೇತಿ ಭಾವಃ । ಪ್ರಥಮಂ ವಪುಃ ಹನುಮದಾಖ್ಯಂ ವಪುಃ । ವರ್ಣವನಿನೋಃ ಬ್ರಹ್ಮಚಾರಿವಾನಪ್ರಸ್ಥಯೋಃ ಜಿತೇಂದ್ರಿಯತಯಾ ಗಾಯತ್ರೀಮಂತ್ರಜಪಾತ್ ಬ್ರಹ್ಮಚಾರೀ । ಕಂದಮೂಲಫಲಾದ್ಯಾಹಾರಂ ಕೃತ್ವಾ ವನ ಏವ ನಿವಸನಾತ್ ವಾನಪ್ರಸ್ಥಃ । ಏವಂ ಚಾಶ್ರಮಚತುಷ್ಟಯಧರ್ಮಾಚರಣಾಯಾವತಾರ ಚತುಷ್ಟಯಾಭಾವಾತ್ ಪ್ರಥಮಾವಾತರ ಏವ ಸ್ವಸಂಕಲ್ಪಪರಿಪೂರಣಾಯ ಆಶ್ರಮದ್ವಯ-ಧರ್ಮಮಾಚರಿತವಾನಿತಿ ಭಾವಃ ॥ ೬೮ ॥

ತೃತೀಯಂ ಚ ವಪುರ್ಯುಕ್ತ್ಯಾ ಯತ್ಯಾಶ್ರಮಧುರಂಧರಮ್ ।
ಭವೇದವಶ್ಯಂ ತದ್ವಾಯೋರ್ಮಾಧ್ವೀ ತನುರಭೂದ್ ಬಲಾತ್ ॥ ೬೯ ॥

**ಅರ್ಥ–** ಯುಕ್ತ್ಯಾ= ಯುಕ್ತಿಬಲದಿಂದ, ತೃತೀಯಂ ಚ ವಪುಃ= ಮೂರನೆಯ ರೂಪವು, ಯತ್ಯಾಶ್ರಮಧುರಂಧರಂ= ಯತ್ಯಾಶ್ರಮಪಾಲನೆಯಲ್ಲಿ ಸಮರ್ಥವಾದುದು. ಅವಶ್ಯಂ ಭವೇತ್= ಅವಶ್ಯವಾಗಿ ಆಗಬೇಕಾಯಿತು. ತತ್= ಆದ್ದರಿಂದ, ಬಲಾತ್= ಅನ್ಯಮಾರ್ಗವಿಲ್ಲದೆ ಯುಕ್ತಿಬಲದಿಂದ, ವಾಯೋಃ= ವಾಯುದೇವನ ಮೂರನೆಯ ಅವತಾರವು, ಮಾಧ್ವೀ ತನುಃ= ಮಧ್ವರೂಪವು, ಅಭೂತ್= ಆಯಿತು.

**ಅನುವಾದ–** ವಾಯುದೇವನ ಎರಡುರೂಪಗಳು ಮೊದಲ ಮೂರು ಆಶ್ರಮಗಳನ್ನು ಆಚರಿಸಿವೆಯಾದ್ದರಿಂದ ಮೂರನೆಯರೂಪವೂ ಕೂಡ ನಿಶ್ಚಿತವಾಗಿ ಸಂನ್ಯಾಸವನ್ನು ಆಚರಿಸಿದರೂಪವೇ ಆಗಿರಬೇಕೆಂದು ಯುಕ್ತಿಯಿಂದ ಸಿದ್ಧವಾಗುತ್ತದೆ. ಆದ್ದರಿಂದ ಅನ್ಯಮಾರ್ಗವಿಲ್ಲದೇ ವಾಯುವಿನ ಮೂರನೆಯ ಅವತಾರವು ಮಧ್ವಾವತಾರ ವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–**ಯುಕ್ತ್ಯಾ ಆಶ್ರಮತ್ವಯುಕ್ತ್ಯಾ।ತತ್‌ವಪುಃ। ಬಲಾತ್ ಯುಕ್ತಿಬಲಾತ್॥೬೯॥

**ವಿವರಣೆ–** ಆದ್ದರಿಂದಲೇ ವಾಯುಸ್ತುತಿಯಲ್ಲಿ ಪಾರಿವ್ರಾಜ್ಯಾಧಿರಾಜಃ ಎಂದಿದ್ದಾರೆ.

**ದೇವೋ ವಾ ದಾನವೋ ವಾ ಸ್ಯಾದ್ಭಾಷ್ಯಕಾರೋ ನ ಮಾನವಃ ।
ತತ್ರ ವಿಷ್ಣೌ ರತಾ ದೇವಾ ದೈತ್ಯಾ ಬ್ರಹ್ಮಶಿವಾದಿಷು ।
ಅತೋಽಪಿ ವೈಷ್ಣವಂ ಭಾಷ್ಯಂ ದೇವಮೂಲಂ ನ ಸಂಶಯಃ ॥ ೬೧ ॥**

**ಅರ್ಥ–** ಭಾಷ್ಯಕಾರಃ= ಸೂತ್ರಕ್ಕೆ ಭಾಷ್ಯವನ್ನು ಬರೆಯುವವನು, ದೇವಃ ವಾ=ದೇವನಾಗಲೀ, ದಾನವಃ ವಾ= ದಾನವನಾಗಲೀ, ಸ್ಯಾತ್= ಆಗಿರಬೇಕು. ಮಾನವಃ ನ= ಮನುಷ್ಯನು ಮಾತ್ರ ಅಲ್ಲ, ತತ್ರ= ಈ ವಿಷಯದಲ್ಲಿ ದೇವಾಃ= ದೇವತೆಗಳು, ವಿಷ್ಣೌ= ವಿಷ್ಣುವಿನಲ್ಲಿ ರತಾಃ= ಆಸಕ್ತರು. ದೈತ್ಯಾಃ= ದೈತ್ಯರು, ಬ್ರಹ್ಮಶಿವಾದಿಷು = ಬ್ರಹ್ಮರುದ್ರಾದಿ ಅನ್ಯರಲ್ಲಿ ರತಾಃ= ಆಸಕ್ತರು. ಅತೋಽಪಿ= ಆ ಕಾರಣದಿಂದಲೂ, ವೈಷ್ಣವಂ ಭಾಷ್ಯಂ= ವಿಷ್ಣುಸರ್ವೋತ್ತಮತ್ವವನ್ನು ಸಾಧಿಸುವ ಭಾಷ್ಯವು, ದೇವಮೂಲಂ = ದೇವನಿರ್ಮಿತವೇ, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ.

**ಅನುವಾದ–** ಸೂತ್ರಭಾಷ್ಯರಚನೆಯಂತಹ ಕಾರ್ಯವನ್ನು ಮಾಡುವವನು ದೇವಾಂಶಸಂಭೂತನಿರಬೇಕು ಇದು ಸಾಧ್ಯವೇ ಇಲ್ಲ. ದೇವತೆಗಳು ವಿಷ್ಣುಭಕ್ತರಾಗಿದ್ದರೆ ದಾನವರು ಬ್ರಹ್ಮಶಿವಾದಿಗಳ ಭಕ್ತರಾದಿರುತ್ತಾರೆ. ಆದ್ದರಿಂದಲೂ ವಿಷ್ಣುಪಾರಮ್ಯವನ್ನು ಪ್ರತಿಪಾದಿಸುವ ಭಾಷ್ಯವು ದೇವಾಂಶಸಂಭೂತನಿಂದಲೇ ರಚಿತವಾದದ್ದೆಂಬುದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ಪುನರಪಿ ಮಧ್ವಸ್ಯ ವಾಯ್ವವತಾರತ್ವೇ ಇತರಭಾಷ್ಯಕಾರಣಾಂ ದಾನವ ರೂಪತ್ವೇ ಚ ಯುಕ್ತಿಮಾಹ –**ದೇವೋ ವೇತಿ** ॥ ಮನುಷ್ಯಮಾತ್ರಸ್ಯ ಸುಯುಕ್ತ್ಯಾ ವಾದರ್ಯುಕ್ತ್ಯಾ ಸಕಲಶಾಸ್ತ್ರನಿರ್ಣಾಯಕಸೂತ್ರೇ ಪ್ರವೃತ್ತ್ಯಯೋಗಾತ್ । ದಾನವಾನಾಂ ತು ದೇವವತ್ ಸಹಜಶಕ್ತ್ಯಭಾವೇಽಪಿ ಶಿವಾದಿವಿಷಯಕಕುತ್ಸಿತತೀವ್ರತಪಆದಿನಾ ಆಹಿತಶಕ್ತಿಸಂಭವೇನ ಪ್ರವೃತ್ತ್ಯುಪಪತ್ತೇಃ । ಮಾನವಾನಾಂ ತು ಉಭಯವಿಧಶಕ್ತ್ಯೋರಭಾವಾನ್ನ ಪ್ರವೃತ್ತಿರಿತಿಭಾವಃ । ಕೋ ವಾ ಭಾಷ್ಯಕಾರೋ ದೇವಃ । ಕೋ ವಾ ಭಾಷ್ಯಕಾರೋ ದಾನವ ಇತ್ಯತೋ ವಿವೇಕಮಾಹ–**ತತ್ರೇತಿ** । ಆದಿಪದೇನ ನಿರ್ಗುಣಪರಪರ್ಯಾಯಂ ಶೂನ್ಯಂ ಗೃಹತೇ । ವಿಷ್ಣಾವೇವ ನಿಷ್ಠಾವಂತೋ ದೇವಾಃ, ತತೋಽನ್ಯತ್ರ ನಿಷ್ಠಾವಂತೋ ದೈತ್ಯಾ ಇತಿ ತಾವತ್ ಸಿದ್ಧಮ್ । ಏವಂ ಚ ವೈಷ್ಣವಭಾಷ್ಯಕಾರೀ ದೇವಃ ಅವೈಷ್ಣವಭಾಷ್ಯಕಾರೀ ದಾನವ ಇತಿ ಕಥಂ ನ ಸಿದ್ಧ್ಯೇದಿತಿ ಭಾವಃ ॥೬೧॥

**ವಿವರಣೆ–** ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸುವಂತಹ ಯೋಗ್ಯತೆಯು ಪರಮಾತ್ಮನ ಅನನ್ಯ ಭಕ್ತರಾದ ದೇವತೆಗಳಿಗೆ. ಹಾಗೆ ಬ್ರಹ್ಮರುದ್ರಾದಿವರದಿಂದ ಮದೋನ್ಮತ್ತರಾದ ದಾನವರಿಗೂ ಬರುತ್ತದೆ, ಹೊರತು ಇವೆರಡೂ ಇಲ್ಲದ ಸಾಮಾನ್ಯಮಾನವರಿಗೆ ಭಾಷ್ಯವನ್ನು ರಚಿಸುವಂತಹ ಯೋಗ್ಯತೆಯು ಬರಲು ಸಾಧ್ಯವಿಲ್ಲ. ದೇವತೆಗಳು ವಿಷ್ಣುಭಕ್ತರು. ವಿಷ್ಣು ಪಾರಮ್ಯವನ್ನೇ ಸ್ಥಾಪಿಸುವವರು.

ದಾನವರಾದರೋ ಬ್ರಹ್ಮರುದ್ರಾದಿ ಭಕ್ತರು. ಎಂದೂ ನಿರ್ಗುಣತ್ವವಾದಿಗಳು ಮತ್ತು ಶೂನ್ಯವಾದಿಗಳು. ಆದ್ದರಿಂದ ಸರ್ವಪ್ರಕಾರದಿಂದ ವಿಷ್ಣು ಸರ್ವೋತ್ತಮತ್ವನ್ನೇ ಸಾಧಿಸುವ ಈ ವೈಷ್ಣವಭಾಷ್ಯವು ದೇವನಿರ್ಮಿತವೇ ಆಗಿದೆ ಎಂಬುದಕ್ಕೆ ಯಾವುದೇ ಸಂದೇಹವಿಲ್ಲ.

**ಅಯಾದವೀಂ ಕ್ಷ್ಮಾಂ ಕರಿಕ್ಷ್ಯ ಇತ್ಯೇಕಃ ಪ್ರತಿಶುಶ್ರುವೇ ।**
**ಅನ್ಯಸ್ತು ಕೃಷ್ಣಂ ಜಗ್ರಾಸ ಯೋऽಗ್ರಸೀತ್ ಸಕಲಂ ಜಗತ್ ॥ ೬೯೨ ॥**

**ಸ ವಾದೀ ಮೂಲದೈತ್ಯೋ ವಾ ತದಾವೇಶಯುತೋಽಪಿ ವಾ ।**
**ಅಪರಃ ಕೋಽಪಿ ದೈತ್ಯಃ ಸ್ಯಾನ್ನ ಚೇದೀದೃಙ್ಮತಿಃ ಕುತಃ ॥ ೬೯೩ ॥**

**ಅರ್ಥ–** ಏಕಃ= ಒಬ್ಬನು (ಸಾಲ್ವನು) ಕ್ಷ್ಮಾಂ= ಭೂಮಿಯನ್ನು, ಅಯಾದವೀಂ= ಕೃಷ್ಣಸಹಿತವಾಗಿ ಯಾದವರಿಂದ ರಹಿತವನ್ನಾಗಿ, ಕರಿಷ್ಯೇ ಇತಿ= ಮಾಡುವೆನೆಂದು, ಪ್ರತಿಶುಶ್ರುವೇ= ಪ್ರತಿಜ್ಞೆಮಾಡಿದನು. ಅನ್ಯಃ ತು= ಮತ್ತೊಬ್ಬನಾದರೂ (ಬಕನು) ಯಃ= ಯಾವನು, ಸಕಲಂ ಜಗತ್= ಸಮಸ್ತಜಗತ್ತನ್ನು, ಅಗ್ರಸೀತ್= ಗ್ರಾಸಮಾಡಿರುವನೋ, (ತಂ= ಅಂತಹ) ಕೃಷ್ಣಂ= ಕೃಷ್ಣನನ್ನು, ಜಗ್ರಾಸ= (ಬಕಪಕ್ಷಿರೂಪಧರಿಸಿ ಬಂದು) ನುಂಗಿದನು.

ಸ ವಾದೀ= ಕೃಷ್ಣ ಜೀವ ಜಡಾತ್ಮಕಜಗತ್ತಿನ ಮಿಥ್ಯಾತ್ವವನ್ನು ವಾದಿಸುವವನು, ಮೂಲದೈತ್ಯಃ= ಮೂಲದೈತ್ಯನು, ವಾ= ಅಥವಾ, ತದಾವೇಶಯುತಃ ಅಪಿ= ಮೂಲದೈತ್ಯನ ಆವೇಶವುಳ್ಳವನಾಗಲೀ, ವಾ= ಅಥವಾ, ಅಪರಃ= ಮತ್ತೊಬ್ಬನಾದ ಬಕಾದಿ, ಕೋಽಪಿ ದೈತ್ಯಃ= ಯಾವನೋ ಒಬ್ಬ ದೈತ್ಯನು, ಸ್ಯಾತ್ = ಆಗಿರುತ್ತಾನೆ. ನ ಚೇತ್= ದೈತ್ಯನಲ್ಲದಿದ್ದರೆ, ಈದೃಙ್ಮತಿಃ= ಇಂತಹ ಮಿಥ್ಯಾತ್ವಬುದ್ಧಿಯು, ಕುತಃ = ಎಲ್ಲಿಂದ ಬರುತ್ತದೆ?

**ಅನುವಾದ–** ಸಾಲ್ವನು ಕೃಷ್ಣನಿಂದ ಕೂಡಿದ ಸಕಲಯಾದವರನ್ನು ನಾಶ ಮಾಡುವೆ ಎಂದು ಪ್ರತಿಜ್ಞೆಮಾಡಿದ. ಹಾಗೆ ಸಮಸ್ತ ಜಗತ್ತನ್ನೇ ಒಂದು ತುತ್ತಿನ ಹಾಗೆ ನುಂಗಿ ಪ್ರಳಯಕಾಲದಲ್ಲಿ ತನ್ನ ಹೊಟ್ಟೆಯಲ್ಲಿಟ್ಟುಕೊಂಡ ಕೃಷ್ಣನನ್ನೇ ನುಂಗಲು ಬಂದವನು ಬಕನೆಂಬ ರಾಕ್ಷಸ.

ಕೃಷ್ಣನೂ ಸೇರಿದಂತೆ ಸಕಲ ಜೀವಜಡಾತ್ಮಕ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳುವ ವಾದಿಯು ಸಾಲ್ವನಾಗಲೀ ಅವನ ಆವೇಶವುಳ್ಳ ಮತ್ತೊಬ್ಬ ದೈತ್ಯನಾಗಲೀ ಅಥವಾ ಮತ್ತೊಬ್ಬ ಬಕಾಸುರಾದಿ ದೈತ್ಯನೇ ಆಗಿರಬೇಕು. ಇಲ್ಲದಿದ್ದರೆ ಇಂತಹ ವಿಪರೀತ ಬುದ್ಧಿ ಬರುವುದು ಹೇಗೆ ಸಾಧ್ಯ?

**ಭಾವವಿಲಾಸಿನೀ–** ಕಿಂಚ ಮಾಯಾವಾದಿನೋ ನಿರ್ಗುಣಬ್ರಹ್ಮಣ ಏವ ಸತ್ಯತಾಂ ವದಂತಃ ಕೃಷ್ಣಸ್ಯ ತದಧೀನಜೀವಾದೇಶ್ಚ ವಿಶಿಷ್ಟಪದಾರ್ಥಸ್ಯಾತ್ಯಂತಾಭಾವಪ್ರತಿಯೋಗಿತ್ವರೂಪಮಿಥ್ಯಾತ್ವಂ ವರ್ಣಯಂತಿ । ಇಯಂ ಚ ಪ್ರಕ್ರಿಯಾ ಕೃಷ್ಣಾವತಾರೇ ದೈತ್ಯಕೃತೋದ್ಯಮಪರ್ಯಾಲೋಚನಯಾ

ದೈತ್ಯಮೂಲೈವ ಭವಿತುಮುರ್ಹತೀತ್ಯಾಹ– ಅಯಾದವೀಮಿತಿ ॥ ಅಯಾದವೀಂ ಕೃಷ್ಣಸಹಿತ ಸಕಲಯಾದವರಹಿತಾಮ್ । ಏಕಃ ಸಾಲ್ವಃ । ಅನ್ಯಃ ಬಕಃ ಜಗ್ರಾಸ ಜಿಘಾಂಸಯಾ ಭಕ್ಷಿತವಾನ್ । ಯಃ ಕೃಷ್ಣಃ ಅಗ್ರಸೀತ್ ಸ್ವೋದರೇ ನಿಕ್ಷಿಪ್ಯ ರಕ್ಷಿತವಾನ್ । ತಸ್ಮಾಜ್ಜಗದುದರಂ ಕೃಷ್ಣಂ ಹಂತುಕಾಮೋ ಬಕಃ ಕೃಷ್ಣೇನ ಸಹ ಸಕಲಜಗದಭಾವಕರಣೇ ಕೃತೋದ್ಯಮ ಇತಿ ಭಾವಃ । ಏವಂ ಚ ಸಾಲ್ವಃ ಕೃಷ್ಣಾಭಾವಮ್ ಉಪಲಕ್ಷಣಯಾ ಸರ್ವಜೀವಾಭವಂ ಚ ಕಾಮಯಮಾನಃ ಬಕಸ್ತು ಕೃಷ್ಣಾಭಾವಂ ಸಕಲಜಗದಭಾವಂ ಚ ಕಾಮಯಮಾನ ಇತಿ ಭಾಗವತಪ್ರಸಿದ್ಧ್ಯಾ ಸಿದ್ಧಮ್ ॥ ೬೨ ॥

ಸ ವಾದೀ ಕೃಷ್ಣಜೀವಜಡಾತ್ಮಕಜಗತೋ ಮಿಥ್ಯಾತ್ವವಾದೀ ಮೂಲದೈತ್ಯಃ ಪೂರ್ವೋಕ್ತಸಾಲ್ವಃ ಕೋಽಪಿ ಬಕಾದಿಷ್ವೇಕಃ । ನ ಚೇತ್ ದೈತ್ಯೋ ನ ಚೇತ್ । ಈದೃಙ್ಮತಿಃ ಕೃಷ್ಣಾದಿಸಕಲಜಗತೋ ಮಿಥ್ಯಾತ್ವಮತಿಃ ॥ ೬೩ ॥

**ವಿವರಣೆ–** ಮಾಯಾವಾದಿಗಳು ನಿರ್ಗುಣಬ್ರಹ್ಮನನ್ನು ಮಾತ್ರ ಒಪ್ಪಿ ಸಕಲಸದ್ಗುಣ ಪರಿಪೂರ್ಣಸಗುಣಬ್ರಹ್ಮನಾದ ಕೃಷ್ಣನನ್ನೂ ಅವನ ಅಧೀನವಾದ ಜೀವಜಡಾತ್ಮಕ ಪ್ರಪಂಚವನ್ನು ಮಿಥ್ಯಾ ಎನ್ನುತ್ತಾರೆ. ಕೃಷ್ಣಾವತಾರದಲ್ಲಿದ್ದ ದೈತ್ಯರ ಸ್ವಭಾವವನ್ನು ಗಮನಿಸಿದರೆ ಮಾಯಾವಾದಿಗಳ ಈ ಬುದ್ಧಿಯೂ ದೈತ್ಯಮೂಲವೇ ಆಗಿದ್ದಿರಬೇಕೆನ್ನಿಸುತ್ತದೆ. ಸಾಲ್ವನು ಕೃಷ್ಣನ ಅಭಾವವನ್ನು ಉಪಲಕ್ಷಣತಯಾ ಸಕಲಜೀವರ ಅಭಾವವನ್ನು ಸಾಧಿಸಲು ಉದ್ಯುಕ್ತನಾದವನು. ಬಕನಾದರೂ ಕೃಷ್ಣನ ಅಭಾವವನ್ನು ಮತ್ತು ಸಕಲ ಜಗತ್ತಿನ ಅಭಾವವನ್ನು ಸಾಧಿಸಲು ಹೊರಟವನು. ಮಾಯಾವಾದಿಗಳೂ ಇಂತಹ ದೈತ್ಯರು ಅಥವಾ ಅವರ ಆವೇಶವುಳ್ಳವರೋ ಆಗಿರಬೇಕು. ಇಲ್ಲದಿದ್ದರೆ ಪರಮಾತ್ಮನಲ್ಲಿ ನೈರ್ಗುಣ್ಯ ಬುದ್ಧಿ ಮತ್ತು ಜಗತ್ತಿನಲ್ಲಿ ಮಿಥ್ಯಾತ್ವ ಬುದ್ಧಿ ಹೇಗೆ ಬರುತ್ತಿತ್ತು?

ಇನ್ನೊಂದು ರೀತಿಯಲ್ಲಿ ಭೀಮನೇ ಮಧ್ವರೆಂದು ಸಾಧಿಸುತ್ತಿದ್ದಾರೆ-

**ಸೂಚಿಮಾತ್ರಪ್ರದೇಶಂ ಚ ಯಃ ಸ್ವತೋಽನ್ಯಸ್ಯ ನಾದಿಶತ್ ।**
**ಸ ಭೀಮಗದಯಾ ಶಾಮ್ಯೇನ್ನಾಭೀಮಸ್ಯ ಪರಾಕ್ರಮೈಃ ।**
**ಮಧ್ವಸ್ಯ ಭೀಮರೂಪತ್ವಂ ತದ್ಯೌಕ್ತಮಿತಿ ಮೇ ಮತಿಃ ॥ ೬೪ ॥**

**ಅರ್ಥ–** ಸೂಚಿಮಾತ್ರಪ್ರದೇಶಂ ಚ= ಸೂಜಿತುದಿಯೂರುವಷ್ಟು ಭೂಪ್ರದೇಶವನ್ನು, ಸ್ವತಃ= ತಾನೇ, ಅನ್ಯಸ್ಯ= ಇನ್ನೊಬ್ಬನಿಗೆ, ನ ಆದಿಶತ್= ಕೊಡಲಿಲ್ಲವೋ, ಸಃ= ಅಂತಹ ದೈತ್ಯನು, ಭೀಮಗದಯಾ= ಭೀಮನ ಗದೆಯಿಂದಲೇ, ಶಾಮ್ಯೇತ್= ಉಪಶಾಂತನಾಗುತ್ತಾನೆ, ಅಭೀಮಸ್ಯ= ಭೀಮನಲ್ಲದವನ, ಪರಾಕ್ರಮೈಃ = ಶೂರತನದಿಂದ, ನ= ಆಗುವುದಿಲ್ಲ, ತತ್= ಆದ್ದರಿಂದ, ಮಧ್ವಸ್ಯ= ಮಧ್ವರಿಗೆ, ಭೀಮರೂಪತ್ವಂ= ಭೀಮರೂಪತ್ವವು, ಯೌಕ್ತಃ= ಯುಕ್ತಿಯುಕ್ತವಾಗಿದೆ, ಇತಿ ಮೇ ಮತಿಃ= ಎಂದು ನನ್ನ ನಿಶ್ಚಯಾಭಿಪ್ರಾಯ.

**ಅನುವಾದ–** **ಒಂದು ಸೂಜಿಯ ಮೊನೆಯಷ್ಟೂ ಭೂಮಿಯನ್ನೂ ತನ್ನವರಲ್ಲದ ಪಾಂಡವರಿಗೆ ಕೊಡಲೊಪ್ಪದ ದುರ್ಯೋಧನನು ಭೀಮಸೇನನ ಭಯಂಕರವಾದ ಗದೆಯ ಪ್ರಹಾರದಿಂದಲೇ ಮೆತ್ತಗಾದಾನು ಹೊರತು ಬೇರೆಯವರ ಪರಾಕ್ರಮಕ್ಕೆ ಮಣಿಯಲಾರನು. ಅದರಂತೆ ಸಕಲದುರ್ವಾದಿಗಳನ್ನು ದಮನಮಾಡಿದ ಮಧ್ವರು ಭೀಮರೂಪರೇ ಆಗಿದ್ದಾರೆಂಬುದು ಯುಕ್ತಿಸಿದ್ಧವೆಂದು ನನ್ನ ಅಭಿಪ್ರಾಯ.**

**ವಿವರಣೆ–** ಈ ಶ್ಲೋಕದಲ್ಲಿ ರಾಜರು ಭೀಮಸೇನನೇ ಮಧ್ವರಾಗಿ ಅವತರಿಸಿದ್ದಾರೆ ಎಂಬುದನ್ನು ಯುಕ್ತಿಯಿಂದ ಸಾಧಿಸುತ್ತಿದ್ದಾರೆ.

ಹಿಂದೆ ದುರ್ಯೋಧನ ಹೇಗೆ ಸೂಜಿಯ ಜಾಗವನ್ನೂ ಪಾಂಡವರಿಗೆ ಕೊಡಲಿಲ್ಲ. ರಾಜ್ಯವು ನನ್ನದೇ. ನನ್ನ ವಿಷಯದಲ್ಲಿ ಅಸತ್ ಅಲ್ಲ. ಅಸದ್ವಿಲಕ್ಷಣವಾದುದು. ಪಾಂಡವರದ್ದಾದರೆ ಇಲ್ಲ. ಸದ್ವಿಲಕ್ಷಣವಾದುದು ಎಂದು ತನ್ನ ರಾಜ್ಯಕ್ಕೆ ಸದಸದ್ವಿಲಕ್ಷಣವನ್ನು ಹೇಳಿದವನು ದುರ್ಯೋಧನ. ಹೇಗೆ ಜಗತ್ತು ಇಲ್ಲವೇ ಇಲ್ಲ ಎನ್ನುವ (ಅತ್ಯಂತಾಭಾವಪ್ರತಿಯೋಗಿ ಎನ್ನುವ) ವಾದಕ್ಕೆ ಹಿಂದೆ ಹೇಳಿದ ಸಾಲ್ವ ಮತ್ತು ಬಕರು ಇಬ್ಬರು ಗುರುಗಳಾದರೆ ಸಮಸ್ತ ಜಗತ್ತೂ ನನ್ನದೇ ಎನ್ನುವ ಮೂಲಕ. ತನಗೆ ಅಸದ್ವಿಲಕ್ಷಣ, ಪಾಂಡವರಿಗೆ ಸದ್ವಿಲಕ್ಷಣರೂಪವಾದ ಅನಿರ್ವಚನೀಯವಾದಕ್ಕೆ ದುರ್ಯೋಧನನೇ ಗುರು ಎಂದು ಹೇಳಿದಂತಾಯಿತು.

ಅಥವಾ ದುರ್ಯೋಧನ ತಾನೇ ಸಮಸ್ತರಾಜ್ಯಕ್ಕೂ ಈಶ್ವರ ಬೇರೆಯವರಿಲ್ಲ ಎನ್ನುವುದರಿಂದ ನಾನೇ ದೇವರು, ನನಗಿಂತ ಭಿನ್ನನಾದ ದೇವರು ಇಲ್ಲ ಎನ್ನುವ ಜೀವೇಶ್ವರ ಅಭೇದವಾದಕ್ಕೆ ಗುರು ಎನ್ನಬಹುದು.

ಹೀಗೆ ದುರ್ಯೋಧನ ದೈತ್ಯತಾರತಮ್ಯದಲ್ಲಿ ಅಗ್ರಗಣ್ಯನಾದ ಕಲಿಯ ಅವತಾರನಾದ್ದರಿಂದ, ಹಿಂದೆ ಹೇಳಿದ ಅನಿರ್ವಚನಯವಾದಕ್ಕೂ, ಹಾಗೇ ಈಶ್ವರೋಹಂ ಎನ್ನುವ ಜೀವೇಶ್ವರಾಭೇದವಾದಕ್ಕೆ ಎರಡಕ್ಕೂ ಗುರುಸ್ಥಾನದಲ್ಲಿ ಇರುವನು.

ಹೀಗೆ ಇಂತಹ ರಾಕ್ಷಸರು ಹಿಂದೆ ವೈಷ್ಣವದ್ವೇಷವನ್ನು ಬಗೆದು ಭೀಮಸೇನದೇವರ ಭಯಂಕರವಾದ ಗದಾ ಪ್ರಹಾರದಿಂದ ಹತರಾದರೆ ಅದೇ ದೈತ್ಯರ ಆವೇಶಯುಕ್ತರಾದ ಮಣಿಮಂತಮೊದಲಾದ ರಾಕ್ಷಸರು ಭೂಮಿಯಲ್ಲಿ ಅವತರಿಸಿ ವೈಷ್ಣವಶಾಸ್ತ್ರದ ದ್ವೇಷವನ್ನು ಆರಂಭಿಸಿದಾಗ, ಅದೇ ಭೀಮಸೇನದೇವರು ಮಧ್ವಾಚಾರ್ಯರಾಗಿ ಅವತರಿಸಿ ತಮ್ಮ ಪ್ರಚಂಡವಾದ ಮಾತೆಂಬ ಗದೆಯಿಂದ ಅವರನ್ನು ಸೋಲಿಸಿ ಹರಿಸರ್ವೋತ್ತಮತ್ವ ಹಾಗೂ ಜಗತ್ಸತ್ಯತ್ವ ವನ್ನು ಸಾಧನೆಮಾಡಿದರು.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಭೀಮಸ್ಯೈವ ಮಧ್ವರೂಪತ್ವಮುಪಪಾದಯತಿ– **ಸೂಚಿಮಾತ್ರೇತಿ ॥** ಸ್ವತೋಽನ್ಯಸ್ಯ ಸೂಚಿಮಾತ್ರಪ್ರದೇಶಂ ಚ ನ ದೀಶತೀತ್ಯನೇನ ಮಮ ಚೇತ್

ಜಗದಸದ್ವಿಲಕ್ಷಣಂ ಸ್ವವಿಷಯೇ ರಾಜ್ಯದೇಶಾದೇರಸತ್ವಾನಂಗೀಕಾರಾತ್ । ಅನ್ಯಸ್ಯ ಚೇತ್ ಸದ್ವಿಲಕ್ಷಣಮ್ । ಅನ್ಯವಿಷಯೇ ರಾಜ್ಯದೇಶಾದಿಕಂ ನಾಸ್ತೀತ್ಯಂಗೀಕಾರಾತ್ । ಏವಂ ಚಾತ್ಯಂತಾಭಾವಪ್ರತಿಯೋಗಿತ್ವರೂಪಮಿಥ್ಯಾತ್ವವಾದಸ್ಯ ಪೂರ್ವೋಕ್ತೌ ದೈತ್ಯೌ ಗುರೂ । ಸದಸದ್ವೈಲಕ್ಷಣ್ಯರೂಪಮಿಥ್ಯಾತ್ವವಾದಸ್ಯ ಚ ದುರ್ಯೋಧನೋ ಗುರುರಿತ್ಯುಕ್ತಂ ಭವತಿ । ಅಥವಾ ಅಹಮೇವ ರಾಜ್ಯೇಶ್ವರೋ ನ ತ್ವನ್ಯ ಇತಿ ವದನ್ ದುರ್ಯೋಧನಃ ಈಶ್ವರಾಭೇದವಾದಸ್ಯ ಗುರುಃ । ತಥಾ ಚ ಕಲಿರೂಪಮೂಲದೈತ್ಯರೂಪತ್ವಾದಯಂ ಮತದ್ವಯಸ್ಯಾಪಿ ಗುರುರಿತ್ಯುಕ್ತಂ ಭವತಿ । ಸಃ ದುರ್ಯೋಧನೋ ವಾ ತದಾವೇಶವಶಾದೀದೃಂಮತಂ ಕುರ್ವನ್‌ಮಣಿಮಾನ್ವಾ ಭೀಮಗದಯಾ ತದ್ಗದಾಸದೃಶವಾಗ್ರೂಪಗದಯಾ ವಾ । ಅತ ಏವ ನಾಭೀಮಸ್ಯ ಪರಾಕ್ರಮೈರಿತ್ಯುಕ್ತಮ್ । ತತ್‌ತಸ್ಮಾತ್ ॥ ೬೪ ॥

ಹೀಗೆ ಅನೇಕ ನ್ಯಾಯ (ಯುಕ್ತಿ)ಗಳಿಂದ ಮಧ್ವರು ವಾಯುದೇವರ ಅವತಾರ ಎಂದು ತೋರಿಸಿದ ರಾಜರು ಈ ನ್ಯಾಯೋಪೇತ ಶ್ರುತಿ ಎಂದರೆ ಬಳಿತ್ಥಾಸೂಕ್ತದ ಮೂರು ವಾಕ್ಯಗಳಲ್ಲಿ ವಾಯುದೇವರ ಮೂರು ಅವತಾರಗಳು ಪ್ರತಿಪಾದ್ಯವಾಗಿವೆ ಎಂದು ಸಿದ್ಧವಾಗುತ್ತದೆ ಎನ್ನುತ್ತಾರೆ-

ಕಿಂಚ ಶ್ರುತೌ ಮತಿಪದಂ ಹನುಮದ್ವಾಚಕಂ ಭವೇತ್ ।
ಯತೋ ಗತ್ಯರ್ಥಕೋ ಧಾತುರ್ಜ್ಞಾನಾರ್ಥ ಇತಿ ಶಾಬ್ದಿಕಾಃ ।
ತಜ್ಞಾನಶೀಲಂ ತದ್ವಂತಂ ನಿರ್ವಕ್ತಿ ಹನುಮತ್ಪದಮ್ ॥ ೬೫ ॥

**ಅರ್ಥ–** ಕಿಂಚ= ಮತ್ತು, ಶ್ರುತೌ ಮತಿಪದಂ= ಬಳಿತ್ಥಾ ಸೂಕ್ತದ ಮತಿಃ ಋತಸ್ಯ ಧೇನಾ ಅನಯಂತ ಎಂಬಲ್ಲಿರುವ ಮತಿಪದವು, ಹನುಮದ್ವಾಚಕಂ= ಹನುಮಂತನನ್ನು ಪ್ರತಿಪಾದಿಸುವುದು, ಭವೇತ್= ಆಗುತ್ತದೆ. ಯತಃ= ಏಕೆಂದರೆ, ಗತ್ಯರ್ಥಕಃ= ಹನ ಹಿಂಸಾಗತ್ಯೋಃ ಎಂಬ ಗತ್ಯರ್ಥಕವಾದ, ಧಾತುಃ=ಧಾತುವು, ಜ್ಞಾನಾರ್ಥಃ = ಜ್ಞಾನವೆಂಬ ಅರ್ಥವುಳ್ಳದ್ದು ಇತಿ= ಎಂದು, ಶಾಬ್ದಿಕಾಃ= ವೈಯಾಕರಣರು, (ವದಂತಿ = ಹೇಳುತ್ತಾರೆ.) ಹನುಮತ್ಪದಂ= ಹನುಮತ್ ಎಂಬ ಪದವೂ, ತಜ್ಞಾನಶೀಲಂ= ಆ ಜ್ಞಾನಸ್ವಭಾವ ಉಳ್ಳವನನ್ನು ತದ್ವಂತಂ= ಜ್ಞಾನವುಳ್ಳವನನ್ನಾಗಿ, ನಿರ್ವಕ್ತಿ= ನಿರ್ವಚನ ಮಾಡುತ್ತದೆ.

**ಅನುವಾದ–** ಬಳಿತ್ಥಾಸೂಕ್ತದ ಮತಿ ಎಂಬ ಶಬ್ದವೂ ಹನುಮಂತನನ್ನು ಹೇಳುತ್ತದೆ. ಏಕೆಂದರೆ ವ್ಯಾಕರಣ ಶಾಸ್ತ್ರಜ್ಞರು ಗತ್ಯರ್ಥಕಧಾತುಗಳೆಲ್ಲ ಜ್ಞಾನಾರ್ಥಕಗಳೂ ಆಗಿವೆಯೆಂದು ಹೇಳುತ್ತಾರೆ. ಆದ್ದರಿಂದ ಹನು ಎಂಬ ಪದವು ಜ್ಞಾನವನ್ನು ಪಡೆಯುವ ಸ್ವಭಾವವುಳ್ಳವನು ಮತ್ತು ಜ್ಞಾನವುಳ್ಳವನು ಎಂಬ ಅರ್ಥವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಶ್ರೌತಪದಮಹಿಮ್ನಾಪಿ ವಾಕ್ಯತ್ರಯೇ ಹನೂಮದಾದ್ಯವತಾರತ್ರಯಸ್ಯೈವ ಪ್ರಾಪ್ತಿರಿತ್ಯಾಹ – **ಕಿಂಚೇತಿ** ॥ ಧಾತುಃ ಹನಹಿಂಸಾಗತ್ಯೋರಿತಿ ಧಾತುಃ । ತತ್‌ತಸ್ಮಾತ್ ಹನುಶಬ್ದಸ್ಯ

ಜ್ಞಾನವಾಚಕತ್ವಾತ್ । ಜ್ಞಾನಶೀಲಮಿತ್ಯನೇನ ಹನೂಶಬ್ದಾದುಪರಿ ತಾಚ್ಛೀಲಿಕಾರ್ಥ ಉನ್ ಪ್ರತ್ಯಯ ಇತಿ ಸೂಚಯತಿ । ತದ್ವಂತಮಿತ್ಯನೇನ ಹನುಮತ್ಪದೇ ವಿದ್ಯಮಾನಮತುಪ್-ಪ್ರತ್ಯಯಾರ್ಥಂ ದರ್ಶಯತಿ । ತತಶ್ಚ ಜ್ಞಾನಶೀಲವಾನ್ ಹನುಮಾನಿತ್ಯುಕ್ತಮ್ ಭವತಿ । ಕ್ವಚಿದ್ಧನೂಮಾನಿತಿ ಪ್ರಯೋಗುಸ್ತು ನಿರುಕ್ತತ್ವಪುನರಪಿ ಊಕಾರಾಖ್ಯ ವರ್ಣಾಗಮಮಾದಾಯೇತಿ ದ್ರಷ್ಟವ್ಯಮ್ । ಹನ್ವಾಖ್ಯಾಂಗ ವಿಶೇಷತ್ವಸ್ಯ ಮರ್ಕಟಾಂತರೇಽಪಿ ಸತ್ತ್ವೇನ ರಾಮವ್ಯಾಸಯೋ-ರ್ಮುಖ್ಯಶಿಷ್ಯೇ ಮೂಲರಾಮಾಯಣಪ್ರವರ್ತಕಾಚಾರ್ಯೇ ವೈಯಾಕರಣಗುರೌ ಹನುಮತಿ ಶ್ರೌತಮತಿಪದಸಮಾಖ್ಯಯಾ ಅಸ್ಮದುಕ್ತವ್ಯುತ್ಪತ್ತೇರೇವ ಶ್ಲಾಘ್ಯತ್ವಾದಿತಿ ಭಾವಃ ॥ ೬೫ ॥

**ವಿವರಣೆ–** ಇಲ್ಲಿ ಮತಿ (ಜ್ಞಾನವುಳ್ಳವನು) ಎಂಬ ಪದದ ವಿವರಣೆಯೇ ಹನುಮಾನ್ ಎಂದು ಹೇಳಿದ್ದಾರೆ.

ಇಲ್ಲಿ ರಾಜರು ಜ್ಞಾನಶೀಲಂ ಎಂದು ಪ್ರಯೋಗಿಸುವ ಮೂಲಕ ಹನುಶಬ್ದದ ಮೇಲೆ ತಾಚ್ಛೀಲ್ಯಾರ್ಥದಲ್ಲಿ ಅಂದರೆ ತಚ್ಛೀಲ - ತತ್ಸ್ವಭಾವ ಎಂಬ ಅರ್ಥದಲ್ಲಿ ಉನ್ ಪ್ರತ್ಯಯ ಬಂದಿದೆ. ಆದ್ದರಿಂದ ಜ್ಞಾನವು ಹನುಮಂತನಿಗೆ ಇನ್ನೊಂದರಿಂದ ಬಂದಿದ್ದಲ್ಲ, ಅದು ಸ್ವಾಭಾವಿಕವಾಗಿಯೇ ಅವನಲ್ಲಿ ಇದೆ ಎಂಬ ಅರ್ಥವನ್ನು ಸೂಚಿಸಿದ್ದಾರೆ.

ಇದನ್ನು ಶ್ಲೋಕದಲ್ಲಿ ತದ್ವಂತಂ ಎಂಬ ಪದದಿಂದ ಹೇಳಿದ್ದಾರೆ. ಹನುಮನ್ ಎಂಬ ಪದದಲ್ಲಿರುವ ಮತುಪ್ ಪ್ರತ್ಯಯಾರ್ಥವಾದ ಉಳ್ಳವನು ಎಂಬ ಅರ್ಥವನ್ನು ಹೀಗೆ ಹೇಳಿದ್ದಾರೆ.

ಆದರೆ ಕೆಲವೊಮ್ಮೆ ಹನೂಮಾನ್ ಎಂದೂ ಕರೆಯುವುದುಂಟು. ಆ ಪ್ರಯೋಗವೂ ಸರಿ. ಇಲ್ಲಿ ಊ ವರ್ಣದ ಆಗಮದಿಂದ ಜ್ಞಾನದ ವಿಶೇಷವನ್ನೇ ಅಂದರೆ ಪರಿಪೂರ್ಣಜ್ಞಾನಸ್ವಭಾವವುಳ್ಳವನು ಎಂಬ ಅರ್ಥವನ್ನೇ ಕೊಡುವುದರಿಂದ ಆ ಪ್ರಯೋಗವೂ ಸರಿ ಎಂದು ಅಭಿಪ್ರಾಯ.

ಆದರೆ ಕೆಲವರು ಹನುಮಾನ್ ಎಂಬ ಶಬ್ದಕ್ಕೆ ಹನು ಎಂದರೆ ಅಂಗವಿಶೇಷ (ಕಪಿಮುಖದಲ್ಲಿರುವ ಗಲ್ಲ) ಎಂದು ಅರ್ಥವನ್ನು ಹೇಳಿ ಅದು ಉಳ್ಳವನಾದ್ದರಿಂದ ಹನುಮಾನ್ ಎಂದು ಹನುಮಾನ್ ಶಬ್ದಕ್ಕೆ ನಿರ್ವಚನ ತೋರಿಸುತ್ತಾರೆ.

ಆದರೆ ಅದು ತೀರಾ ಅಸ್ವರಸ. ಯಾಕೆಂದರೆ ಅಂತಹ ಅಂಗವಿಶೇಷವು ಇತರ ಕಪಿಗಳಲ್ಲಿಯೂ ಕಂಡುಬರುವುದರಿಂದ ಶ್ರೀರಾಮಚಂದ್ರನ ಹಾಗೆ ವ್ಯಾಸರೂಪಿ ಭಗವಂತನ ಶಿಷ್ಯರಾದ ಮೂಲರಾಮಾಯಣಪ್ರವರ್ತಕರಾದ ವೈಯಾಕರಣರಿಗೆ ಗುರುಗಳಾದ ಹನುಮಂತದೇವರಲ್ಲೇ ಪ್ರಯೋಗಿಸಲು ನಿಯಾಮಕವಿಲ್ಲದಂತೆ ಆಗುತ್ತದೆ. ಆದ್ದರಿಂದ ನಾವು ಹೇಳಿದ ಜ್ಞಾನವುಳ್ಳವನು ಎಂಬ ಅರ್ಥವನ್ನೇ ಹೇಳಬೇಕು.

ಹಾಗೆ ನಮ್ಮ ವ್ಯಾಖ್ಯಾನಕ್ಕೆ ಶ್ರುತಿಯಸಂವಾದವೂ ಇದೆ ಆದ್ದರಂದ ನಾವು ಹೇಳಿದವ್ಯಾಖ್ಯಾನವೇ ಸರಿ ಎಂದು ತೋರುತ್ತದೆ.

ಮತಿ ಮತ್ತು ಮತಿಮಾನ್ ಎಂಬ ಎರಡು ಪದಗಳೂ ಒಂದೇ ಅರ್ಥ ಎಂದರೆ ಹಾಗಾದರೆ ಹನುಮಾನ್ ಎಂದು ಇರುವಂತೆ ಮತಿಮಾನ್ ಎಂದು ಇರಬೇಕಿತ್ತು, ಮತಿ ಎಂದೇ ಶ್ರುತಿಯಲ್ಲಿ ಇದೆಯಲ್ಲಾ ಎಂದರೆ ಆದಕ್ಕೆ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ನೀಡುತ್ತಿದ್ದಾರೆ.

**ಮತಿರೂಪಂ ಮತೀತ್ಯಾಹುರ್ಮತಿಮಂತಂ ಯತೋ ಬುಧಾಃ ।**
**ಅತಃ ಸ್ವಾಭಾವಿಕೀ ಯಸ್ಯ ಮತಿಃ ಸ ಮತಿರುಚ್ಯತೇ ।**
**ಏವಂ ಚ ಹನುಮಾನೇವ ಮತಿಶಬ್ದೋದಿತೋ ನ ಕಿಮ್ ॥ ೬೯ ॥**

**ಅರ್ಥ–** ಯತಃ= ಯಾವಕಾರಣದಿಂದ, ಬುಧಾಃ= ವಿವೇಕಿಗಳು, (ಜ್ಞಾನಿಗಳು) ಮತಿಮಂತಂ= ಮತಿಯುಳ್ಳವನನ್ನು, ಮತೀತ್ಯಾಹುಃ= ಮತಿ ಎಂದು ಹೇಳುವರೋ, ಅತಃ= ಆ ಕಾರಣದಿಂದ, ಯಸ್ಯ = ಯಾರ, ಮತಿಃ= ಜ್ಞಾನವು, ಸ್ವಾಭಾವಿಕೀ = ಸ್ವಾಭಾವಿಕವಾದದ್ದೋ, ಸಃ= ಆತನು, ಮತಿಃ ಉಚ್ಯತೇ= ಮತಿ ಎಂದೇ ಕರೆಯಲ್ಪಡುವನು. ಏವಂ ಚ= ಹೀಗೆ, ಹನುಮಾನ್ ಏವ= ಹನುಮಂತನೇ ಎಂಬುದೇ, ಮತಿಶಬ್ದೋದಿತಃ= ಮತಿಶಬ್ದದಿಂದ ಹೇಳಲ್ಪಡುವವನು, ನ ಕಿಂ= ಅಲ್ಲವೇನು?

**ಅನುವಾದ– ಮತಿಮಾನ್ ಅಂದರೆ ಮತಿವುಳ್ಳವನು ಮತಿ - ಮತಿರೂಪನು ಎರಡೂ ಒಂದೇ ಎಂದು ಜ್ಞಾನಿಗಳು ನಿಶ್ಚಯಿಸಿದ್ದಾರೆ. ಆದ್ದರಿಂದ ಸ್ವಾಭಾವಿಕವಾದ ಮತಿಯುಳ್ಳವನೇ ಮತಿಯು, ಏವಂ ಚ ಮತಿ ಶಬ್ದವೂ ಹನುಮಂತನನ್ನೇ ಹೇಳುತ್ತಿದೆ, ಮತಿ ಎಂದರೆ ಜ್ಞಾನವಷ್ಟೇ.**

**ಭಾವವಿಲಾಸಿನೀ–** ತರ್ಹಿ ಶ್ರುತಾವಪಿ ಹನುಮತ್ಪದಸಮಾನಾರ್ಥಕತಯಾ ಮತಿಮಾನಿತ್ಯೇವ ವಕ್ತವ್ಯಂ ಮತಿರಿತಿ ಪದಂ ಕಿಮರ್ಥಮಿತ್ಯತಸ್ತಥೋಕ್ತಾವಪಿ ಸ ಏವಾರ್ಥೋ ಲಭ್ಯತ ಇತ್ಯತ್ರ ಲೌಕಿಕಪ್ರಯೋಗಂ ದರ್ಶಯತಿ ॥ **ಮತಿರೂಪಮಿತಿ** ॥ ೬೯ ॥

**ವಿವರಣೆ–** ಯಾವರೀತಿ ಭಗವಾನ್ ಭಗನೋ ಹಾಗೆ ಮತಿಮಾನ್ ಮತಿ ಎಂದು ಜ್ಞಾನಿಗಳು ನಿಶ್ಚಯಿಸಿದ್ದಾರೆ.

ಹರಿವಂಶ ಮೊದಲಾದ ಪುರಾಣವಾಕ್ಯಗಳು ವಾಯುದೇವರ ಮೂರು ಅವತಾರಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ.

೧. ತ್ರಿಕೋಟಿಮೂರ್ತಿಸಂಯುಕ್ತಸ್ತ್ರೇತಾಯಾಂ ರಾಕ್ಷಸಾಂತಕಃ ।
ಹನೂಮಾನಿತಿ ವಿಖ್ಯಾತೋ ರಾಮಕಾರ್ಯಧುರಂಧರಃ ॥

ಸ ವಾಯುರ್ಭೀಮಸೂತೋಽಭೂತ್ ದ್ವಾಪರಾರಾಂತೇ ಕುರೂದ್ವಹ ।
ಕೃಷ್ಣಂ ಸಂಪೂಜಯಾಮಾಸ ಹತ್ವಾ ದುರ್ಯೋಧನಾದಿಕಾನ್ ॥

ದ್ವೈಪಾಯನಸ್ಯ ಸೇನಾರ್ಥಂ ಬದರ್ಯಾಂ ಸ ಕಲೌ ಯುಗೇ ।
ಮತಿರೂಪಧರೋ ವಾಯುಃ ಭವಿಷ್ಯತಿ ನ ಸಂಶಯಃ ॥ - ಹರಿವಂಶ

೨. ಮತಿರೂಪೋ ಮಾತರಿಶ್ವಾ ಅಷ್ಟಾವಿಂಶತಿತಮೇ ಕಲೌ ।
ಅವತೀರ್ಯ ವಸತ್ಯತ್ರ ಮಧ್ವನಾಮಾ ವರೋ ವಿಭೋ ॥ - ಬ್ರಹ್ಮಪುರಾಣಂ

೩. ವಿಷ್ಣ್ವಾಜ್ಞಯಾ ಮರ್ತ್ಯಲೋಕೇ ಜನಿಷ್ಯನ್ ಜ್ಞಾನಸಿದ್ಧಯೇ ।
ಮಾತರಿಶ್ವಾಂಬುಧೌ ಮಗ್ನಾಂ ಪ್ರತಿಮಾಂ ತಾಂ ಮಹಾಮುನಿಃ ॥-ಸ್ಕಾಂದಪುರಾಣಂ

ದ್ವಿತೀಯಂ ಚ ವಪುಃ ಸಾ ವಾಕ್ ಪಿತುಮಾನ್ ಇತಿ ಶಂಸತಿ ।
ಪಿತುರಿತ್ಯನ್ನನಾಮೇತಿ ಬ್ರಾಹ್ಮಣಂ ಪಿತುಮಾಂಸ್ತತಃ ॥
ಬಹ್ವನ್ನವಾನಭೂದ್ ಭೀಮೋ ಬಾಹುಲ್ಯಾರ್ಥಮತುಬ್ಬಲಾತ್ ॥ ೬೯ ॥

**ಅರ್ಥ**– ಸಾ ವಾಕ್= ಆ ಶ್ರುತಿವಾಕ್ಯವು (ಬಳಿತ್ಥಾ ಸೂಕ್ತವು), ದ್ವಿತೀಯಂ=ಎರಡನೆಯ, ವಪುಃ ಚ=ರೂಪವನ್ನು, ಪಿತುಮಾನ್ ಇತಿ=ಪಿತುಮಾನ್ ಎಂದು, ಶಂಸತಿ=ಹೊಗಳುತ್ತದೆ. ಪಿತುಃ ಇತಿ= ಪಿತು ಎಂಬುದು, ಅನ್ನನಾಮ ಇತಿ= 'ಅನ್ನ'ದ ಹೆಸರು ಎಂದು, ಬ್ರಾಹ್ಮಣಂ= ಬ್ರಾಹ್ಮಣವಚನವಿದೆ. (ಬ್ರಾಹ್ಮಣವೆಂಬ ವೇದಭಾಗದಲ್ಲಿ ತಿಳಿಸಿರುತ್ತಾರೆ). ಬಾಹುಲ್ಯಾರ್ಥ ಮತುಬ್ಬಲಾತ್= 'ಬಹಳ' ಎಂದು ಅರ್ಥವಿರುವ 'ಮತುಪ್' ಪ್ರತ್ಯಯದ ಬಲದಿಂದ, ಬಹ್ವನ್ನವಾನ್=ಬಹಳ ಅನ್ನವುಳ್ಳವನು, ಭೀಮಃ= ಭೀಮಸೇನನು, ಅಭೂತ್=ಆದನು.

**ಅನುವಾದ**– 'ಪೃಕ್ಷೋ ವಪುಃ' ಎಂಬ ಶ್ರುತಿಯು ವಾಯುದೇವರ ದ್ವಿತೀಯ ರೂಪವನ್ನು 'ಪಿತುಮಾನ್' ಎಂದು ಹೊಗಳುತ್ತಿದೆ. ಪಿತು ಶಬ್ದಕ್ಕೆ 'ಅನ್ನ' ಎಂದು ಅರ್ಥವೆಂದು ವೇದದ ಬ್ರಾಹ್ಮಣ ಭಾಗದಲ್ಲಿ ತಿಳಿಸಿದ್ದಾರೆ. 'ಪಿತುಮಾನ್' ಎಂಬಲ್ಲಿರುವ 'ಮತುಪ್' ಪ್ರತ್ಯಯಕ್ಕೆ 'ಬಹಳ' ಎಂದರ್ಥವನ್ನು ತಿಳಿಸಿದೆ (ಬಹುಧನ-ವಿರುವವನನ್ನು 'ಧನವಾನ್' ಎಂದು ಕರೆದಂತೆ). ಆದ್ದರಿಂದ ಪಿತುಮಾನ್ ಎಂಬುದು ಭೀಮಸೇನ ದೇವರನ್ನೇ ಹೇಳುತ್ತದೆ. ಅಂದರೆ ಬಹಳ ಅನ್ನವುಳ್ಳವರು ಎಂದು ಸಿದ್ಧವಾಗುತ್ತದೆ. ('ಬಾಹುಲ್ಯ-ಭೂಮ-ನಿಂದಾ- ಪ್ರಶಂಸಾಸು ಭವಂತಿ ಮತುಬಾದಯಃ)

**ಭಾವವಿಲಾಸಿನೀ**– ಸಾ ವಾಕ್ ಪೃಕ್ಷೋ ವಪುರಿತಿ ಶ್ರುತಿಃ। ಪಿತುರಿತ್ಯನ್ನನಾಮೇತಿ ಬ್ರಾಹ್ಮಣ ವಚನ-ಬಲಾತ್ ಪಿತುರನ್ನಮಸ್ಯಾಸ್ತೀತಿವ್ಯುತ್ಪತ್ತ್ಯಾ ಬಹ್ವನ್ನವಾನ್ ಭೀಮ ಏವ ಪಿತುಮಾನಿತ್ಯುಚ್ಯತೇ। ಬಹು-ಧನೇ ಧನವಾನಿತಿ ಪ್ರಯೋಗದರ್ಶನೇನ ಬಾಹುಲ್ಯಸ್ಯಾಪಿ ಮತುಬರ್ಥತ್ವಾದಿತಿ ಭಾವಃ॥೬೯॥

**ತೃತೀಯಂ ಚ ವಪುಃ ಪ್ರಾಹ ದಶಪ್ರಮತಿನಾಮ ಸಾ ।**
**ತಚ್ಚ ಪೂರ್ಣಪ್ರಜ್ಞನಾಮಸಮಾನಾರ್ಥಂ ಪ್ರತೀಯತೇ ॥ ೬೮ ॥**

**ಅರ್ಥ–** ಸಾ= ಆ ಶ್ರುತಿಯು ('ತೃತೀಯಮಸ್ಯ' ಎಂಬ), ತೃತೀಯಂ ತು=(ವಾಯುದೇವರ) ಮೂರನೆಯದಾದ, ವಪುಃ=ಶರೀರವನ್ನು, ದಶಪ್ರಮತಿನಾಮ= 'ದಶಪ್ರಮತಿ' ಎಂಬ ನಾಮವುಳ್ಳದ್ದೆಂದು, ಪ್ರಾಹ=ಹೇಳುತ್ತದೆ. ತತ್ ಚ=ಆ ನಾಮವಾದರೂ, ಪೂರ್ಣಪ್ರಜ್ಞನಾಮಸಮಾನಾರ್ಥಂ='ಪೂರ್ಣಪ್ರಜ್ಞ' ಎಂಬ ನಾಮದ ಸಮಾನವಾದ ಅರ್ಥವುಳ್ಳದ್ದೆಂದು, ಪ್ರತೀಯತೇ=ತಿಳಿಯುತ್ತದೆ. 'ದಶದಶತಸ್ತಚ್ಛತಂ ಶತಶತಾನಿ ತತ್ಸಹಸ್ರಂ ತತ್ಸರ್ವಮ್' ಎಂಬ ಶ್ರುತಿಯು ಶತ, ಸಹಸ್ರ, ಅನಂತ ಪದಗಳ ಅರ್ಥವನ್ನು ದಶಶಬ್ದವು ಎಂದು ಹೇಳುತ್ತದೆ. ಆದ್ದರಿಂದ ದಶಶಬ್ದಕ್ಕೆ 'ಪೂರ್ಣ' ಎಂದರ್ಥ. ಪ್ರಮತಿ ಎಂದರೆ ಜ್ಞಾನ. ಹೀಗೆ ದಶಪ್ರಮತಿ ಎಂದರೆ ಪೂರ್ಣಪ್ರಜ್ಞ ಅಥವಾ ಸರ್ವಜ್ಞ ಎಂಬ ಅರ್ಥವು ಸೂಚಿತವಾಗುತ್ತದೆ.

**ಅನುವಾದ– ವಾಯುದೇವರ ಮೂರನೆಯ ಅವತಾರವನ್ನು ತಿಳಿಸುವ ಈ ಶ್ರುತಿಯು ಅದನ್ನು 'ದಶಪ್ರಮತಿ' ಎಂಬುದಾಗಿಯೂ ತಿಳಿಸುತ್ತದೆ. ಅದು ಪೂರ್ಣಪ್ರಜ್ಞ ಸಮಾನಾರ್ಥಕವಾಗಿದೆ. ಹೇಗೆಂದರೆ 'ದಶ' ಶಬ್ದಕ್ಕೆ ಅನಂತ, ಶತ, ಸಹಸ್ರ ಎಂಬರ್ಥಗಳಿವೆ. ಹೀಗಾಗಿ ದಶಪ್ರಮತಿ ಎಂದರೆ ಪೂರ್ಣಪ್ರಮತಿ, ಪೂರ್ಣಪ್ರಜ್ಞ ಎಂದೇ ಅರ್ಥವಾಯಿತು.**

**ಭಾವವಿಲಾಸಿನೀ–** ದಶಪ್ರಮತಿರಿತಿ ನಾಮ ಅಸ್ಯ ವರ್ತತ ಇತಿ ದಶಪ್ರಮತಿನಾಮಿ । ಸಾ ತೃತೀಯಮಸ್ಯೇತಿ ಶ್ರುತಿಃ । ತತ್ ನಾಮ ಬಹುತ್ವಾರ್ಥದಶತ್ವೋಕ್ತೇರಿತ್ಯನೇನ ದಶದಶತಸ್ತಚ್ಛತಂ ಶತಶತಾನಿ ತತ್ಸಹಸ್ರಾಣಿ ತತ್ಸರ್ವಮಿತಿ ಶ್ರುತಿಂ ಸೂಚಯತಿ ಅಯಮರ್ಥಃ ದಶದಶತಃ । ದಶವಾರಂ ದಶತಃ ಯಾ ಸಂಖ್ಯಾತಚ್ಛತಂ ಯಾನಿ ದಶಶತಾನಿ ತತ್ಸಹಸ್ರಮ್ । ತತ್ ತಸ್ಮಾತ್ ದಶ ಸಂಖ್ಯಾ ಪೌನಃ ಪುನ್ಯೇನ ಗಣನೇ ಸರ್ವಮ್ ಅನಂತಂಚ ಭವತೀತ್ಯರ್ಥಃ । ಯುಕ್ತ್ಯಾಪಿ ದಶದಶಕಸ್ಯ ಶತತ್ವಾತ್ ದಶಶತಕಸ್ಯ ಸಹಸ್ರತ್ವಾತ್ ಏವಮನಂತಾನಾಮಪಿ ದಶಸಂಖ್ಯೈವ ಗುಣನಾತ್ ದಶಪ್ರಮತಿಪದಂ ಪೂರ್ಣತ್ವಾರ್ಥಕಮಿತಿ ಮನ್ಯತೇ ॥ ೬೮ ॥

**ಬಹುತ್ವಾರ್ಥದಶತ್ವೋಕ್ತೇಃ ಪೂರ್ಣತ್ವಾರ್ಥೇಽಪಿ ವರ್ತನಾತ್ ।**
**ಅತಃ ಪೂರ್ಣಪ್ರಜ್ಞ ಏವ ದಶಪ್ರಮತಿನಾಮವಾನ್ ॥ ೬೯ ॥**

**ಅರ್ಥ–** ಬಹುತ್ವಾರ್ಥದಶತ್ವೋಕ್ತೇಃ='ಬಹಳ' ಎಂಬ ಅರ್ಥವುಳ್ಳ 'ದಶ'ಶಬ್ದವನ್ನು ಶ್ರುತಿಯು ಹೇಳಿರುವುದರಿಂದ, ಪೂರ್ಣತ್ವಾರ್ಥೇಽಪಿ= ಅದು 'ಪರಿಪೂರ್ಣ' ಎಂಬ ಅರ್ಥದಲ್ಲಿಯೂ, ವರ್ತನಾತ್=ಇರುವುದರಿಂದ, ಅತಃ=ದಶ ಮತ್ತು ಪೂರ್ಣ ಪದಗಳು

ಪರ್ಯಾಯಪದವಾದ್ದರಿಂದಲೂ, ಪೂರ್ಣಪ್ರಜ್ಞ ಏವ=ಪೂರ್ಣಪ್ರಜ್ಞರಾದ ಮಧ್ವರೇ, ದಶಪ್ರಮತಿನಾಮವಾನ್='ದಶಪ್ರಮತಿ' ಎಂಬ ಹೆಸರುಳ್ಳವರು.

**ಅನುವಾದ–** ಹಿಂದೆ ಹೇಳಿದಂತೆ ಹೇಗೆ 'ದಶ' ಶಬ್ದಕ್ಕೆ ಬಹಳ ಎಂಬ ಅರ್ಥವಿದೆಯೋ, ಹಾಗೆ 'ಪೂರ್ಣ' ಎಂಬರ್ಥವೂ ಇದೆ. ಈ ಕಾರಣ ಪೂರ್ಣಪ್ರಜ್ಞರೇ ದಶಪ್ರಮತಿ ಎಂದು ಶ್ರುತಿಯ ಅಭಿಪ್ರಾಯ. (ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ । ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ॥ ಎಂಬ ಪಂಚರಾತ್ರ ಸಂಹಿತೆಯ ನಿರ್ವಚನವೂ ಇದೆ.)

**ಭಾವವಿಲಾಸಿನೀ–** ಅತಃ ದಶಪದಸ್ಯ ಪೂರ್ಣಪದಪರ್ಯಾಯತ್ವಾತ್ ॥ ೭೯೯ ॥

**ಅಪ್ಯಕ್ಷರಸ್ಯ ಸಾಮ್ಯೇನ ನಿರ್ಬ್ರೂಯಾದಿತಿ ವೈದಿಕಾಃ ।**
**ಸರ್ವಸಾಮ್ಯೇ ತು ಶಬ್ದೌ ದ್ವೌ ಕಥಂ ನೈಕಾರ್ಥವಾಚಕೌ ॥ ೭೦೦ ॥**

**ಅರ್ಥ–** ಅಕ್ಷರಸ್ಯ ಸಾಮ್ಯೇನ ಅಪಿ= ಎರಡು ಪದಗಳಲ್ಲಿ ಅಕ್ಷರಸಾಮ್ಯದಿಂದಲ್ಲೂ, ನಿರ್ಬ್ರೂಯಾತ್= ನಿರ್ವಚನ ಮಾಡಬೇಕು, ಇತಿ=ಎಂದು, ವೈದಿಕಾಃ=ವೈದಿಕರು (ಹೇಳುತ್ತಾರೆ.). ಆದ್ದರಿಂದ, ದ್ವೌ ಶಬ್ದೌ=ಎರಡೂ ಪದಗಳು, ಸರ್ವಸಾಮ್ಯೇ ತು=ಎಲ್ಲ ರೀತಿಯ ಸಮಾನತೆ ಹೊಂದಿದ್ದರೆ, ನ ಏಕಾರ್ಥವಾಚಕೌ=ಒಂದೇ ವಸ್ತುವನ್ನೇ ಹೇಳದೇ ಇರಲು, ಕಥಂ=ಹೇಗೆ ಸಾಧ್ಯ? (ಒಂದೇ ವಸ್ತುವನ್ನು ತಿಳಿಸುತ್ತದೆ.)

**ಅನುವಾದ–** ಅಕ್ಷರ ಸಾಮ್ಯದಿಂದಲೂ ವೈದಿಕ ಶಬ್ದಗಳಿಗೆ ನಿರ್ವಜನ ಮಾಡಬೇಕೆಂದು ನಿರುಕ್ತವಚನವಿದೆ. ಹೀಗಿರುವಾಗ ಸರ್ವಸಾಮ್ಯವಿದ್ದರಂತೂ ಎರಡು ಶಬ್ದಗಳೂ ಒಂದೇ ಅರ್ಥವನ್ನು ಹೇಳಬೇಕು. ದಶಪ್ರಮತಿ ಹಾಗು ಪೂರ್ಣಪ್ರಮತಿ ಎಂಬ ಎರಡು ಪದಗಳಲ್ಲೂ ಅಕ್ಷರಸಾಮ್ಯವಿರುವುದರಿಂದ ಒಂದೇ ವಸ್ತು ಅಂದರೆ ಆಚಾರ್ಯಮಧ್ವರನ್ನೇ ತಿಳಿಸುತ್ತದೆ. ಅಕ್ಷರಸಾಮ್ಯವಿರುವ ಎರಡು ಪದಗಳು ಒಂದೇ ವಸ್ತುವನ್ನು ಪ್ರತಿಪಾದಿಸುತ್ತವೆ ಎಂದು ವೈದಿಕರೂ ನಿಶ್ಚಯಿಸಿರುತ್ತಾರೆ. ಹೀಗಿರುವಾಗ 'ದಶಪ್ರಮತಿ' ಹಾಗು 'ಪೂರ್ಣಪ್ರಮತಿ' ಎರಡೂ ಶಬ್ದಗಳು ಒಂದೇ ವಸ್ತುವನ್ನು ತಿಳಿಸುವುದಿಲ್ಲವೆಂದು ಹೇಗೆ ಹೇಳುವುದು?

**ಭಾವವಿಲಾಸಿನೀ–** ದ್ವೌ ದಶಪ್ರಮತಿಪೂರ್ಣಪ್ರಮತಿಶಬ್ದೌ । ಉಕ್ತಂ ಚ ಪಂಚರಾತ್ರೇ ಸಂಹಿತಾಯಾಮ್ । ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ । ಪ್ರಜ್ಞಾಪ್ರಮಿತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತ ಇತಿ ॥೭೦೦॥

**ದಶಪ್ರಮತಿನಾಮಾಽನ್ಯೋ ಯತೋ ನಾಸ್ತಿ ಜಗತ್ತ್ರಯೇ ।**
**ಅರ್ಥಾಲಾಭೇನ ಶಬ್ದೋಽಸೌ ಪೂರ್ಣಪ್ರಜ್ಞಂ ಬಲಾದ್ ಭಜೇತ್ ॥ ೭೦೧ ॥**

**ಅರ್ಥ–** ಯತಃ=ಯಾವ ಕಾರಣದಿಂದ, ದಶಪ್ರಮತಿನಾಮಾಽನ್ಯಃ=ದಶಪ್ರಮತಿ ಎಂಬ ನಾಮವುಳ್ಳ ಬೇರೆ ಯಾರೂ, ಜಗತ್ತ್ರಯೇ=ಮೂರು ಲೋಕದಲ್ಲೂ, ನಾಸ್ತಿ=ಇಲ್ಲವೋ. ಈ ಕಾರಣದಿಂದ, ಅಸೌ ಶಬ್ದಃ=ಈ ದಶಪ್ರಮತಿ ಶಬ್ದವು, ಅರ್ಥಾಲಾಭೇನ= ಬೇರೆ ಅರ್ಥವು ದೊರೆಯುವುದರಿಂದ, ಬಲಾತ್= ಶಬ್ದವು ನಿರರ್ಥಕವಾಗುವುದಿಲ್ಲ ಎಂಬ ತರ್ಕದ ಬಲದಿಂದ, ಪೂರ್ಣಪ್ರಜ್ಞಂ=ಶ್ರೀಮಧ್ವರನ್ನೇ, ಭಜೇತ್=ಆಶ್ರಯಿಸುತ್ತದೆ.

**ಅನುವಾದ–** 'ದಶಪ್ರಮತಿ' ಎಂಬ ನಾಮವುಳ್ಳ ಮತ್ತೊಬ್ಬ ಮೂರು ಲೋಕದಲ್ಲೂ ಇಲ್ಲ. ಈ ಶಬ್ದಪ್ರತಿಪಾದ್ಯ ವಸ್ತುವೇ ಎಲ್ಲಿಯೂ ಸಿಗದಿರಲು ಶಬ್ದವು ಅರ್ಥ-ಶೂನ್ಯವಾಗಲು ಸಾಧ್ಯವಿಲ್ಲವಾದ್ದರಿಂದ ಅಂತಿಮವಾಗಿ ಈ ಶಬ್ದವು ಶ್ರೀಮಧ್ವರನ್ನೇ ಆಶ್ರಯಿಸುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ದಶಪ್ರಮತೀತಿ** ॥ ಅರ್ಥಾಲಾಭೇನ ಅಸ್ಮದಾ-ಚಾರ್ಯಾರ್ಥಕತ್ವಾಭಾವೇ ಅರ್ಥಸ್ಯೈವಾಲಾಭೇನ ಅಸೌ ಶಬ್ದಃ ದಶಪ್ರಮತಿಶಬ್ದಃ । ಬಲಾತ್ ಶಬ್ದಸ್ಯಾರ್ಥಸಾಹಿತ್ಯಾವಶ್ಯಂಭಾವಬಲಾತ್ । ಯದಾಹ ಕಾಲಿದಾಸೋಽಪಿ ವಾಗರ್ಥಾವಿವ ಸಂಪೃಕ್ತಾವಿತಿ ॥ ೭೦೧ ॥

**ಯತೋ ಮಧ್ವೋ ಮಾತರಿಶ್ವಾ ಗುಹಾಸಂತಂ ಮಥಾಯತಿ ।**
**ಇತಿ ವಕ್ಷ್ಯತಿ ಯಂ ಮಧ್ವಂ ಮಾತರಿಶ್ವಾಭಿಧಂ ಸ್ಫುಟಮ್ ॥**
**ದಶಪ್ರಮತಿನಾಮಾಽತ್ರ ಸ ಏವಾತೋ ನ ಸಂಶಯಃ ॥ ೭೦೨ ॥**

**ಅರ್ಥ–** ಯತಃ=ಯಾವ ಕಾರಣದಿಂದ, ಮಾತರಿಶ್ವಾ ಮಧ್ವಃ=ವಾಯುದೇವರ ಮೂರನೆಯ ಅವತಾರರಾದ ಶ್ರೀಮಧ್ವರು, ಗುಹಾಸಂತಂ=ಎಲ್ಲರ ಹೃದಯಗುಹೆಯಲ್ಲಿ ಇರುವ ಶ್ರೀಹರಿಯನ್ನು, ಮಥಾಯತಿ=ಶಾಸ್ತ್ರವೆಂಬ ಮಥನದಿಂದ ವಿಚಾರ ಮಾಡುತ್ತಾರೆ, ಇತಿ= ಎಂದು, ಯಂ= ಯಾವ, ಮಾತರಿಶ್ವಾಭಿಧಂ= ಮಾತರಿಶ್ವನಾಮಕ, ಮಧ್ವಂ= ಮಧ್ವರೂಪವನ್ನು, ಸ್ಫುಟಂ=ಸ್ಪಷ್ಟವಾಗಿ, ವಕ್ಷ್ಯತಿ=ಶ್ರುತಿಯು ತಿಳಿಸುತ್ತದೆಯೋ, ಅತಃ=ಈ ಕಾರಣದಿಂದ (ಒಂದೇ ಪ್ರಕರಣದಲ್ಲಿರುವ ಎರಡು ಶಬ್ದಗಳಿಗೆ ಭಿನ್ನಾರ್ಥಕತ್ವವು ಸರಿಯಿಲ್ಲವಾದ್ದರಿಂದ), ಅತ್ರ=ಇಲ್ಲಿ, ದಶಪ್ರಮತಿನಾಮಾ=ದಶಪ್ರಮತಿನಾಮವುಳ್ಳವರು, ಸಃ ಏವ=ಮಧ್ವರೂಪೀ ವಾಯುದೇವರೇ ಆಗಿದ್ದಾರೆ, ನ ಸಂಶಯಃ=ಸಂಶಯವಿಲ್ಲ.

**ಅನುವಾದ–** ಶ್ರುತಿಯು ಮಾತರಿಶ್ವಾಭಿಧಾಯಕ ಮಧ್ವರೇ ತಮ್ಮ ಶಾಸ್ತ್ರಗಳ ಮೂಲಕ ಭಗವಂತನನ್ನು ಸ್ಪಷ್ಟವಾಗಿ ತಿಳಿಸುತ್ತಾರೆ ಎಂದಿದೆ. ಈ ಕಾರಣದಿಂದಲೂ ಮಧ್ವ-ರೂಪೀ ವಾಯುದೇವರೇ 'ದಶಪ್ರಮತಿ'ನಾಮಯೋಗ್ಯರಾಗಿದ್ದಾರೆ ಎಂಬುದಾಗಿ ಸಿದ್ಧವಾಗುತ್ತದೆ. ಸಂಶಯಿಸದಿರಿ. ('ತಸ್ಮಿನ್ನಪೋ ಮಾತರಿಶ್ವಾ ದಧಾತಿ' ಎಂದು ವೇದವು ವಾಯುವಿಗೆ 'ಮಾತರಿಶ್ವಾ' ಎಂಬ ನಾಮದ ಪ್ರಸಿದ್ಧಿಯನ್ನು ತಿಳಿಸುತ್ತದೆ.)

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಯತ** ಇತಿ ॥ ಅತಃ ಏಕಪ್ರಕರಣಸ್ಥ ಶಬ್ದದ್ವಯಸ್ಯ ಭಿನ್ನಾರ್ಥಕತ್ವಾಯೋಗಾತ್ ॥ ೭೦೨ ॥

**ವೃಷಭಸ್ಯಾಸ್ಯ ದೇವಸ್ಯ ತೃತೀಯಂ ಚ ವಪುರ್ಹರೇಃ ।**
**ಯೋ ಮತೋ ವೇದಮಾನಿನ್ಯಃ ಶ್ರೀಭೂದುರ್ಗಾಭಿಧಾಃ ಕಿಲ ॥ ೭೦೩ ॥**

**ದೋಹಸೇ ಜ್ಞಾನದೋಹಾಯ ದಶಪ್ರಮತಿಸಂಜ್ಞಿತಮ್ ।**
**ಜನಯಂತ ನಿಜಾಮ್ನಾಯರಕ್ಷಣಾರ್ಥಮಜೀಜನನ್ ॥ ೭೦೪ ॥**

**ಅರ್ಥ–** ವೃಷಭಸ್ಯ=ಶ್ರೇಷ್ಠನಾದ, ಅಸ್ಯ ದೇವಸ್ಯ=ಈ ವಾಯುವಿನ, ತೃತೀಯಂ ಚ ವಪುಃ=ಮೂರನೇ ದೇಹವನ್ನು, ಹರೇಃ=ಶ್ರೀಹರಿಯ, ಯೋಷಿತಃ=ಹೆಂಡತಿಯರಾದ, ವೇದಮಾನಿನ್ಯಃ= ವೇದಾಭಿಮಾನಿಗಳಾದ, ಶ್ರೀಭೂದುರ್ಗಾಭಿಧಾಃ= ಶ್ರೀ-ಭೂ-ದುರ್ಗಾ ನಾಮಕರೆಂದು ಪ್ರಸಿದ್ಧರಾದ ಸ್ತ್ರೀಯರು, ದೋಹಸೇ ಜ್ಞಾನದೋಹಾಯ=ಹಸುವಿನಿಂದ ಹಾಲು ಕರೆಯುವಂತೆ ಜ್ಞಾನದೋಹನಕ್ಕಾಗಿ (ವೇದದಿಂದ ಜ್ಞಾನವನ್ನು ಕರೆದು ರಕ್ಷಿಸಲು, ಅಪಾರ್ಥವನ್ನು ಪರಿಹರಿಸಲು), ದಶಪ್ರಮತಿಸಂಜ್ಞಿತಂ='ದಶಪ್ರಮತಿ' ಎಂಬ ಹೆಸರುಳ್ಳವರನ್ನು, ನಿಜಾಮ್ನಾಯರಕ್ಷಣಾರ್ಥಂ= ತಮ್ಮ ವೇದದ ರಕ್ಷಣೆಗಾಗಿ, ಜನಯಂತ ಅಜೀಜನನ್= ಜನಯಂತ ಎಂದರೆ ಹುಟ್ಟಿಸಿದರು ಎಂದು ಅರ್ಥ.

**ಅನುವಾದ–** ದೇವತೆಗಳಲ್ಲಿ ಅತ್ಯಂತ ಶ್ರೇಷ್ಠರಾದ ವಾಯುದೇವರ ಮೂರನೆಯ ಅವತಾರವಾದ ಶ್ರೀಮಧ್ವರನ್ನು ಪ್ರಸಿದ್ಧ ವೇದಾಭಿಮಾನಿಗಳಾದ ಶ್ರೀ-ಭೂ-ದುರ್ಗಾ ದೇವಿಯರೇ ತಮ್ಮಿಂದ ಅಭಿಮನ್ಯವಾದ ವೇದಗಳ ರಕ್ಷಣೆಗಾಗಿ, ಅಂದರೆ, ಅಪಾರ್ಥಗಳನ್ನು ತೊಳೆದು ಸಜ್ಜನರಿಗೆ ಯಥಾರ್ಥಜ್ಞಾನವಾಗಲು ಜ್ಞಾನಧಾರಾ-ದೋಹನಕ್ಕಾಗಿ 'ದಶಪ್ರಮತಿ' ಎಂದು ಹೆಸರಿರುವ ಶ್ರೀಮಧ್ವರನ್ನು ಪ್ರಸವಿಸಿದರು.

**ಭಾವವಿಲಾಸಿನೀ–** ವಾಕ್ಯಾರ್ಥಪರ್ಯಾಲೋಚನಯಾಪಿ ತೃತೀಯವಾಕ್ಯಂ ಮಧ್ವಪರಮಿತಿ ದರ್ಶಯಿತುಂ ವಾಕ್ಯಾರ್ಥಂ ವಕ್ತಿ – **ವೃಷಭಸ್ಯೇತಿ** ॥ ವೃಷಭಸ್ಯ ಶ್ರೇಷ್ಠಸ್ಯ ಅಸ್ಯ ಪೂರ್ವೋಕ್ತ ವಾಯುದೇವಸ್ಯ ತೃತೀಯಪದಸ್ಯ ವಿಶೇಷಣಪದತ್ವೇನ ಸಾಕಾಂಕ್ಷಾತ್ ತತ್ಪೂರಣಾಯ ಪೂರ್ವವಾಕ್ಯಾದ್ವಪುಃ ಪದಮಾವರ್ತನೀಯಮಿತಿ ಭಾವೇನ ತೃತೀಯಂ ವಪುರಿತ್ಯುಕ್ತಮ್ । ಕಸ್ಯ ಯೋಷಣ ಇತ್ಯಾಕಾಂಕ್ಷಾಪೂರಣಾಯ ಯೋಗ್ಯತಯಾ ಹರೇರಿತ್ಯುಕ್ತಮ್ । ದೇವೇಷು ಬಹುಭಾರ್ಯತ್ವಸ್ಯ ಶ್ರೀಭೂದುರ್ಗಾಪತೌ ಹರಾವೇವ ಯುಕ್ತತ್ವಾದಿತಿ ಭಾವಃ । ಪೂಷನ್-ಶಬ್ದವತ್ ಯೋಷನ್ ಶಬ್ದೋಽಪಿ ನರಕಾಂತಸ್ತ್ರೀಲಿಂಗೋ ವೈದಿಕೋಽಸ್ತಿ । ಅತ ಏವ ಯೋಷಣ ಇತ್ಯಸ್ಯ ಯೋಷಿತ ಇತ್ಯರ್ಥ ಉಕ್ತಃ । ದೋಹಸ ಇತ್ಯತ್ರಾಪಿ ಹರೇರಿತಿ ಪದಮಾವರ್ತನೀಯಮ್ ಯದ್ವಾ ವೃಷಭಸ್ಯ ಸರ್ವೋತ್ತಮಸ್ಯ ವೃಷಭಾವತಾರಸ್ಯ ವಾ ಹರೇರಿತಿ ವೃಷಭಪದಾವೃತ್ತ್ಯೈವ

ಯೋಜನೀಯುವಮ್ । ತಾಸಾಮೇತಜ್ಜನನೀತ್ವೇ ಕಿಂ ಕಾರಣಮಿತ್ಯತ ಉಕ್ತಂ ನಿಜೇತಿ । ಮಾನುಷಸ್ತ್ರೀಣಾಂ ದೇವಜನನೀತ್ವಾಸಂಭವಾತ್ ಭಗವತ್‌ಪುತ್ರಸ್ಯ ಮುಖ್ಯಪ್ರಾಣಸ್ಯ ಲಕ್ಷ್ಮೀಪುತ್ರತ್ವಾತ್ ಸಹಜಮಾತರಸ್ತಾ ಏವ ಮನುಷ್ಯಪತ್ನ್ಯಾಮಾವಿಷ್ಟಾಸ್ತಂ ಜನಯಾಮಾಸುರಿತಿ ಭಾವಃ ॥ ೭೦೩-೭೦೪ ॥

'ಅಜನಯಂತ' ಎಂದಾಗಬೇಕಿತ್ತು. 'ಜನಯಂತ' ಎಂದು ಹೇಗೆ ಪ್ರಯೋಗ ರಾಜರು ಮಾಡಿದ್ದಾರೆ ಎಂಬ ಸಂಶಯಕ್ಕೆ ಪರಿಹಾರವನ್ನು ಸೂಚಿಸುತ್ತಿದ್ದಾರೆ-

**ಅಮಾಙ್‌ಯೋಗೇಽಪಿ ಲಙ್‌ರೂಪಂ ಯತಃ ಸ್ಯಾತ್ ಛಂದಸೀದೃಶಮ್ ।**
**ಛಂದಸ್ಯಸನ್‌ಪ್ರತ್ಯಯೋಽಪಿ ತುಮರ್ಥೇಽಸ್ತೀತಿ ಶಾಬ್ದಿಕಾಃ ॥ ೭೦೫ ॥**

**ಅರ್ಥ–** ಅಮಾಙ್‌ಯೋಗೇಽಪಿ=ನಿಷೇಧಾರ್ಥಕ ಮಾಙ್‌ನ ಯೋಗವಿಲ್ಲದಿದ್ದರೂ (ಬಹುಲಂ ಛಂದಸ್ಯಮಾಙ್‌ಯೋಗೇಽಪಿ ಎಂದು ಸೂತ್ರ), ಲಙ್‌ರೂಪಂ=ಧಾತುವನ್ನು ಲಙ್‌ರೂಪದಲ್ಲಿ ಉಪಯೋಗಿಸುವುದು (ವೇದದಲ್ಲಿ ಅಡಾಗಮವು ವೈಕಲ್ಪಿಕ, ಇಚ್ಛಾನುಸಾರ), ಯತಃ=ಯಾವ ಕಾರಣದಿಂದ, ಛಂದಸಿ=ವೇದದಲ್ಲಿ, ಈದೃಶಂ= 'ಜನಯಂತ' ಎಂದೇ ಈ ರೀತಿಯಾಗಿ, ಸ್ಯಾತ್=ಆಗಿದೆಯೋ. ಹಾಗೆಯೇ, ಛಂದಸಿ= ವೇದದಲ್ಲಿ, ಪ್ರತ್ಯಯಃ= ಪ್ರತ್ಯಯವು, ಅಸನ್ ಅಪಿ=ಇಲ್ಲದಿದ್ದರೂ, ತುಮರ್ಥೇ='ತುಂ' ಪ್ರತ್ಯಯಾರ್ಥದಲ್ಲಿ, ಅಸ್ತಿ= ಆಗುತ್ತದೆ. ('ದೋಗ್ಧುಂ' ಎಂಬರ್ಥದಲ್ಲಿ 'ದೋಹಸೇ' ಎಂಬ ಪದವೂ), ಇತಿ=ಎಂದು, ಶಾಬ್ದಿಕಾಃ= ವ್ಯಾಕರಣಶಾಸ್ತ್ರಜ್ಞರು (ಹೇಳುತ್ತಾರೆ.)

**ಅನುವಾದ–** ವೇದದಲ್ಲಿ ಮಾಙ್ ಯೋಗವಿಲ್ಲದಿದ್ದರೂ ಅಡಭಾವವಿರುವಂತೆ, ತುಮುನ್ ಪ್ರತ್ಯಯವಿಲ್ಲದಿದ್ದರೂ ತುಮುನ್ ಅರ್ಥವಿರುತ್ತದೆ. ದೋಹಸೇ ಎಂಬಲ್ಲಿ ತುಮುನ್ ಪ್ರತ್ಯಯವಿಲ್ಲದಿದ್ದರೂ ದೋಗ್ಧುಂ ಎಂದು ಅರ್ಥವು ದೊರೆಯುತ್ತದೆ.

**ಭಾವವಿಲಾಸಿನೀ–** ನನು ಲಡಾಗಮಸ್ಯಾವಶ್ಯಕತ್ವಾದಜನಯಂತೇತಿ ವಕ್ತವ್ಯಂ ಜನಯಂತೇತಿ ಕಥಮಿತ್ಯತ ಆಹ – **ಅಮಾಂಯೋಗೇಽಪೀತಿ** ॥ ಅಮಾಙ್‌ಯೋಗೇ ನಿಷೇದಾರ್ಥಕಾಮಾಙ್ ಯೋಗಾಭಾವೇಽಪಿ । ಮಾಙ್‌ಯೋಗೇ ಅಡಾಗಮಾಭಾವೋ ಲೋಕಸಿದ್ಧಃ । ಅಮಾಙ್-ಯೋಗೇಽಪಿ ಛಂದಸಿ ಅಡಾಗಮೋ ವೈಕಲ್ಪಿಕಃ । ತಸ್ಮಾಜ್ಜನಯಂತೇತ್ಯಪಿ ಪದಂ ಛಂದಸೀತಿ ಭಾವಃ । ಅನೇನ ಬಹುಲಂ ಛಂದಸ್ಯಾಮಾಙ್‌ಯೋಗೇಽಪೀತಿ ಸೂತ್ರಂ ಸೂಚಯತಿ । ತುಮರ್ಥೇ ತುಮುಂ ಪ್ರತ್ಯಯಾರ್ಥೇ । ದೋಗ್ಧುಮಿತ್ಯಾದ್ಯರ್ಥೇ ದೋಹಸ ಇತ್ಯಾದಿ ಪದಮಪಿ ಭವತೀತಿ ಭಾವಃ । ಏವಂ ಚ ಹರಿವಿಷಯಕ ಜ್ಞಾನದೋಹಾಯ ವೇದಾಭಿಮಾನಿ-ದೇವತಾಭಿರ್ಜನಿತಃ ಪುತ್ರೋ ಮಧ್ವ ಏವ ಭವತೀತಿ ಭಾವಃ ॥ ೭೦೫ ॥

'ಯದೀಮನು ಪ್ರದಿವೋ' ಎಂಬ ಬಳಿತ್ಥಾಸೂಕ್ತದ ಮುಂದಿನ ವಾಕ್ಯದ ಅರ್ಥದ ವಿವರಣೆಯನ್ನು ನೀಡುತ್ತಿದ್ದಾರೆ-

ಯತೋ ಮಧ್ವೋ ಮಾತರಿಶ್ವಾ ಜನ್ಮನೋಽನು ಸುರಾನನು ।
ಪ್ರಕೃಷ್ಟವಿಜಿಗೀಷಾದಿಶಕ್ತಿಮಾನ್ ಪ್ರದಿವಃ ಸುಧೀಃ ॥ ೭೦೬ ॥

**ಅರ್ಥ–** ಯತಃ=ಯಾವ ಕಾರಣದಿಂದ, ಜನ್ಮನಃ ಅನು=ಅವತಾರದ ನಂತರ, ಸುರಾನ್ ಅನು=ದೇವತೆಗಳನ್ನು ಕುರಿತು, ಮಧ್ವಃ ಮಾತರಿಶ್ವಾ=ಮಧ್ವರೂಪೀ ವಾಯುದೇವರು ಪ್ರಕೃಷ್ಟವಿಜಿಗೀಷಾದಿಶಕ್ತಿಮಾನ್= ಪ್ರಕೃಷ್ಟವಾದ ಜಯಾದಿ ಶಕ್ತಿಯುಳ್ಳವರೋ ಆ ಕಾರಣದಿಂದ ಅವರು, ಪ್ರದಿವಃ= ಪ್ರದಿವಶಬ್ದವಾಚ್ಯನಾದ, ಸುಧೀಃ= ಜ್ಞಾನಿಯಾಗಿದ್ದಾರೆ.

**ಅನುವಾದ–** ಯಾವ ಕಾರಣದಿಂದ ಮಾತರಿಶ್ವರಾದ ಮಧ್ವರು ಜನನದಿಂದಾರಂಭಿಸಿ ದೇವತೆಗಳನ್ನು ಜಯಿಸುವ ಇಚ್ಛೆ ಮತ್ತು ಶಕ್ತಿಯುಳ್ಳವರೋ ಆ ಕಾರಣದಿಂದ ದೇವತೆಗಳನ್ನು ಮೀರಿದವರು ಎಂಬ ಅರ್ಥದಲ್ಲಿ ಈ ಪ್ರದಿವ ಶಬ್ದವು ಶ್ರೇಷ್ಠಜ್ಞಾನಿಗಳಾದ ಮಧ್ವರನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ಯದೀಮನುಪ್ರದಿವ ಇತಿ ವಾಕ್ಯಸ್ಯಾರ್ಥಮಾಹ – **ಯತ ಇತಿ** ॥ ಯದಿತ್ಯಸ್ಯಾರ್ಥ ಕಥನಂ ಯತ ಇತಿ । ಯಸ್ಮಾತ್ ಕಾರಣಾದಿತ್ಯರ್ಥಃ । ಅನ್ವಿತ್ಯಸ್ಯ ಸಾಕಾಂಕ್ಷತ್ವಾತ್ ಶೇಷಪೂರಣಂ ಜನ್ಮನೋಽನು ಜನ್ಮಾನಂತರಮಿತಿ । ಸುರಾನನು ಸುರಾನುದ್ದಿಶ್ಯೇತಿ ॥ ೭೦೬ ॥

ಪ್ರಕೃಷ್ಟಾ ದ್ಯೌರ್ಯೇಷು ತೇ ವಾ ಪ್ರದಿವೋ ದೇವತಾ ಜನಾಃ ।
ತಾನನೂದ್ದಿಶ್ಯೇತಿ ವಾರ್ಥೋ ವಕ್ತವ್ಯೋಽತ್ರವಿಚಕ್ಷಣೈಃ ॥ ೭೦೭ ॥

**ಅರ್ಥ–** ಪ್ರಕೃಷ್ಟಾ=ಶ್ರೇಷ್ಠವಾದ, ದ್ಯೌಃ=ಕಾಂತಿಯು, ಯೇಷು=ಯಾರಲ್ಲಿದೆಯೋ, ತೇ ವಾ=ಅವರೇ, ಪ್ರದಿವಃ=ಪ್ರದಿವರೆಂದು ಕರೆಯಲ್ಪಡುವ, ದೇವತಾಜನಾಃ=ದೇವತೆಗಳು, ತಾನ್ ಅನು=ಅವರನ್ನು ಉದ್ದೇಶಿಸಿ ಎಂಬ, ಅರ್ಥಃ ವಾ=ಅರ್ಥವಾದರೂ, ಅತ್ರ=ಇಲ್ಲಿ, ವಿಚಕ್ಷಣೈಃ=ಜ್ಞಾನಿಗಳಿಂದ, ವಕ್ತವ್ಯಃ=ಹೇಳಲ್ಪಡಬೇಕು.

**ಅನುವಾದ–** 'ಪ್ರಕೃಷ್ಟಾ ದ್ಯೌಃ ಯೇಷಾಂ ತೇ' ಎಂಬ ವ್ಯುತ್ಪತ್ತಿಯಿಂದ ದೇವತೆಗಳು ಜ್ಞಾನ-ಕಾಂತಿಯುಳ್ಳವರಾದ್ದರಿಂದ ಅವರೇ 'ಪ್ರದಿವ'ರೆನಿಸುತ್ತಾರೆ. 'ಅವರನ್ನು ಉದ್ದೇಶಿಸಿ' ಎಂದಾದರೂ ಅನುಶಬ್ದದ ಅರ್ಥವನ್ನು ಜ್ಞಾನಿಗಳಿಂದ ತಿಳಿಯಬೇಕು.

**ಭಾವವಿಲಾಸಿನೀ–** ಪ್ರದಿವ ಇತ್ಯಸ್ಯಾರ್ಥಾಂತರಮಾಹ – **ಪ್ರಕೃಷ್ಟಾ ದ್ಯೌರಿತಿ** ॥ ೭೦೭ ॥

ಅಥವೇ ಸರ್ವತಃ ಶ್ರೈಷ್ಠ್ಯೇ ಯದ್ ಧವಃ ಪತಿರುಚ್ಯತೇ ।
ಭಾವಪ್ರಧಾನೋ ನಿರ್ದೇಶೋಽಪ್ಯಸ್ತಿ ತೇನೋಚಿತಂ ಹಿ ತತ್ ॥ ೭೦೮ ॥

**ಅರ್ಥ–** ಆಥವೇ= ಆಥವೇ ಎಂದರೆ ಸರ್ವತಃ ಶ್ರೈಷ್ಠ್ಯೇ ಸರ್ವೋತ್ತಮತ್ವದ ವಿಷಯದಲ್ಲಿ ಎಂದು ಅರ್ಥ, ಯತ್= ಏಕೆಂದರೆ, ಧವಃ= ಧವ ಎಂದರೆ, ಪತಿಃ= ಸ್ವಾಮಿಯು, ಉಚ್ಯತೇ= ಹೇಳಲ್ಪಡುತ್ತಾನೆ, ಭಾವಪ್ರಧಾನೋ ನಿರ್ದೇಶೋಽಪಿ= ಶಾಸ್ತ್ರಗಳಲ್ಲಿ ಭಾವಪ್ರಧಾನ ನಿರ್ದೇಶವೂ ಸಹ, ಅಸ್ತಿ= ಇದೆ, ತೇನ= ಆ ಕಾರಣದಿಂದ, ತತ್= ಧವೇ ಎಂಬ ಶಬ್ದಕ್ಕೆ ಧವತ್ವೇ ಎಂದು ಅರ್ಥ ಮಾಡುವುದು, ಉಚಿತಂ= ಯೋಗ್ಯವಾಗಿದೆ.

**ಅನುವಾದ–** ಆಥವೇ ಎಂದರೆ ಸರ್ವೋತ್ತಮತ್ವದ ವಿಷಯದಲ್ಲಿ ಎಂದು ಅರ್ಥ. ಏಕೆಂದರೆ ಧವ ಎಂದರೆ ಪತಿ ಎಂಬ ಅರ್ಥವು ಹೇಳಲ್ಪಡುತ್ತದೆ. ಶಾಸ್ತ್ರದಲ್ಲಿ ಭಾವಪ್ರಧಾನ ನಿರ್ದೇಶವೂ ಇದೆ. ಆದ್ದರಿಂದ ಧವ ಶಬ್ದಕ್ಕೆ ಧವತ್ವ ಎಂದು ಅರ್ಥ ಮಾಡುವುದು ಯೋಗ್ಯವಾಗಿದೆ.

**ಗುಹಾಸಂತಂ ಹೃದ್ಗುಹಾಯಾಂ ವಸಂತಂ ಪುರುಷೋತ್ತಮಮ್ ।**
**ಈಮಿತ್ಥಂ ಹೃದ್ಗುಹಾಸ್ಥತ್ವಾದ್ಯಾಕಾರೇಣ ಮಥಾಯತಿ ।**
**ವೇದಶಾಸ್ತ್ರಾದಿಮಥನಂ ಕೃತ್ವಾ ದರ್ಶಯತಿ ಪ್ರಭುಃ ॥ ೭೦೯ ॥**

**ಅರ್ಥ–** ಗುಹಾಸಂತಂ= ಗುಹಾಸಂತಂ ಎಂದರೆ ಹೃದ್ಗುಹಾಯಾಂ= ಹೃದಯಗುಹೆಯಲ್ಲಿ, ವಸಂತಂ= ವಾಸಿಸುವ, ಪುರುಷೋತ್ತಮಂ= ಪುರುಷೋತ್ತಮನನ್ನು ಎಂದು ಅರ್ಥ, ಈಂ= ಈಂ ಎಂದರೆ, ಇತ್ಥಂ= ಈ ರೀತಿಯಾಗಿ ಎಂದರೆ, ಹೃದ್ಗುಹಾಸ್ಥತ್ವಾದ್ಯಾಕಾರೇಣ= ಹೃದ್ಗುಹಾಸ್ಥತ್ವ ಮೊದಲಾದ ಪ್ರಕಾರದಿಂದ ಎಂದು ಅರ್ಥ. ಮಥಾಯತಿ= ಮಥಾಯತಿ ಎಂದರೆ ವೇದಶಾಸ್ತ್ರಾದಿಮಥನಂ ಕೃತ್ವಾ= ವೇದಶಾಸ್ತ್ರಾದಿಗಳನ್ನು ಮಥನ ಮಾಡಿ, ಪ್ರಭುಃ= ಶ್ರೀಮಧ್ವಾಚಾರ್ಯರು, ದರ್ಶಯತಿ= ತೋರಿಸುತ್ತಾರೆ ಎಂದು ಅರ್ಥ.

**ಅನುವಾದ–** ಗುಹಾಸಂತಂ ಎಂದರೆ ಹೃದ್ಗುಹೆಯಲ್ಲಿ ವಾಸಿಸುವ ಪುರುಷೋತ್ತಮನನ್ನು ಎಂದು ಅರ್ಥ. ಈಂ ಎಂದರೆ ಈ ರೀತಿಯಾಗಿ. ಎಂದರೆ ಹೃದ್ಗುಹಸ್ಥತ್ವಾದಿ ರೂಪದಿಂದ ಎಂದು ಅರ್ಥ. ಮಥಾಯತಿ ಎಂದರೆ ಪ್ರಭುಗಳಾದ ಶ್ರೀಮಧ್ವಾಚಾರ್ಯರು ವೇದಶಾಸ್ತ್ರಾದಿಗಳ ವಿಮರ್ಶೆ ಮಾಡಿ ತೋರಿಸುತ್ತಾರೆ ಎಂದು ಅರ್ಥ.

**ಭಾವವಿಲಾಸಿನೀ–** ತತ್ ಸರ್ವತಃ ಶ್ರೈಷ್ಠ್ಯರೂಪಾರ್ಥಕಥನಮ್ ॥ ೭೦೮, ೭೦೯ ॥

**ದೀರ್ಘೇಣ ಮಥನಸ್ಯಾತಿದೀರ್ಘತಾಂ ಶ್ರೌತತಾಂ ಚ ಸಾ ।**
**ಅಸೂಚಯತ್ ತೇನ ನಾನಾದುರ್ಭಾಷ್ಯಾಣ್ಯಪ್ಯಮೋಚಯತ್ ॥ ೭೧೦ ॥**

**ಅರ್ಥ–** ದೀರ್ಘೇಣ= ಮಥಾಯತಿ ಎಂಬಲ್ಲಿ 'ಥಾ' ಎಂಬಲ್ಲಿರುವ ದೀರ್ಘದಿಂದ, ಮಥನಸ್ಯ= ಮಥನಕ್ಕೆ ಎಂದರೆ ವಿಮರ್ಶೆಗೆ, ಅತಿ ದೀರ್ಘತಾಂ= ಬಹುಕಾಲಸ್ಥಿತಿಯನ್ನೂ,

ಚ= ಮತ್ತು, ಶ್ರೌತತಾಂ= ಶ್ರುತಿಸಮ್ಮತಿಯನ್ನೂ, ಅಸೂಚಯತ್= ಸೂಚಿಸಿದೆ, ತೇನ= ಆ ಕಾರಣದಿಂದ, ನಾನಾದುರ್ಭಾಷ್ಯಾಣಿ= ಅನೇಕ ದುರ್ಭಾಷ್ಯಗಳನ್ನು, ಅಮೋಚಯತ್= ನಿರಾಕರಿಸಿದೆ.

**ಅನುವಾದ–** ಮಥಾಯತಿ ಎಂಬಲ್ಲಿ ಥಾ ಎಂಬಲ್ಲಿರುವ ದೀರ್ಘದಿಂದ ಆಚಾರ್ಯರು ಮಾಡುವ ವಿಮರ್ಶೆಯು ಬಹುಕಾಲಸ್ಥಾಯಿ ಎಂದು ಮತ್ತು ಶ್ರುತಿಸಮ್ಮತವೆಂದು ವಾಕ್ಯವು ಸೂಚಿಸುತ್ತದೆ. ಆ ಕಾರಣದಿಂದ ಅನೇಕ ದುರ್ಭಾಷ್ಯಗಳನ್ನು ನಿರಾಕರಿಸುತ್ತದೆ.

**ಭಾವವಿಲಾಸಿನೀ–** ಸಾ ಶ್ರುತಿಃ । ತೇನ ಮಥನಸ್ಯ ದೀರ್ಘತ್ವಾಪರಪರ್ಯಾಯ ಬಹು-ಕಾಲಸ್ಥಾಯಿತ್ವಸೂಚನೇನ । ದುರ್ಭಾಷ್ಯಕೃತಮತಾನಿ ಪೂರ್ವೋತ್ತರ ವಿರುದ್ಧತ್ವಾದಸ್ಥಿರಾಣೀತಿ ಭಾವಃ ॥ ೭೧೦ ॥

**ವಿವರಣೆ–** ಮಥಾಯತಿ ಎಂಬಲ್ಲಿ ಮಥ್ನಾತಿ ಅಥವಾ ಮಥತಿ ಎಂದು ಇರಬೇಕಾಗಿದ್ದಿತು. ಮಥಾಯತಿ ಎಂಬ ದೀರ್ಘವು ಆಚಾರ್ಯರು ಮಾಡುವ ವಿಮರ್ಶೆಯು ದೀರ್ಘವಾದುದು ಎಂದರೆ ಬಹುಕಾಲಸ್ಥಾಯಿಯಾದುದು ಎಂದು ಸೂಚಿಸುತ್ತದೆ. ದುರ್ಭಾಷ್ಯದಲ್ಲಿ ಮಾಡಿದ ವಿಮರ್ಶೆಗಳು ಪೂರ್ವೋತ್ತರ ವಿರುದ್ಧವಾದುದರಿಂದ ಅಸ್ಥಿರವಾದವುಗಳು. ಆಚಾರ್ಯರ ವಿಮರ್ಶೆಯು ಮಾತ್ರ ಶ್ರುತಿಸಮ್ಮತವಾದುದರಿಂದ ಬಹುಕಾಲ ಉಳಿಯುತ್ತದೆ ಎಂದು ಅರ್ಥ.

ತಸ್ಮಾದೀಶಾನಾದಯೋಽಪಿ ಸೂರಯಸ್ತತ್ಪ್ರಸಾದತಃ ।
ಬಭೂವುರಿತಿ ಸಂಬಂಧೋ ಯತೋಽತ್ರೈಕೋ ಬಹುಃ ಕೃತಃ ।
ಆದ್ಯರ್ಥೈವ ವಿಭಕ್ತಿಸ್ತದಿತಿ ಸರ್ವಂ ಚ ಮಂಗಲಮ್ ॥ ೭೧೧ ॥

**ಅರ್ಥ–** ತಸ್ಮಾತ್= ಆ ವಿಮರ್ಶೆಯಿಂದ, ಈಶಾನಾದಯಃ= ರುದ್ರದೇವರೇ ಮೊದಲಾದ ಸೂರಯಃ= ಜ್ಞಾನಿಗಳು, ತತ್ಪ್ರಸಾದತಃ= ವಾಯುದೇವರ ಅನುಗ್ರಹದಿಂದ, ಬಭೂವುಃ= ಯಥಾರ್ಥ ಜ್ಞಾನದಿಂದ ಕೂಡಿದವರಾದರು, ಇತಿ= ಎಂದು, ಯತಃ= ಯಾವ ಕಾರಣದಿಂದ, ಅತ್ರ= ಇಲ್ಲಿಯೇ, ಏಕಃ= ಒಬ್ಬ ರುದ್ರದೇವರು, ಬಹುಕೃತಃ= ಈಶಾನಾಸಃ ಎಂದು ಬಹುವಚನ ಪುರಸ್ಸರವಾಗಿ, ಸಂಬಂಧಃ= ಸಂಬಂಧವು ಹೇಳಲ್ಪಟ್ಟಿದೆಯೋ, ಆದ್ದರಿಂದ, ತತ್= ಆ, ವಿಭಕ್ತಿಃ= ಬಹುವಚನವಿಭಕ್ತಿಯು, ಆದ್ಯರ್ಥೈವ= ಮೊದಲಾದ ಎಂಬ ಅರ್ಥದಲ್ಲಿ ಇದೆ ಎಂದು, ಸರ್ವಂ= ಎಲ್ಲವೂ, ಮಂಗಲಂ= ಅತಿಮಂಗಲವಾದುದು.

**ಅನುವಾದ–** ಆ ವಿಮರ್ಶೆಯಿಂದ ರುದ್ರದೇವರೇ ಮೊದಲಾದವರು ವಾಯುದೇವರ ಅನುಗ್ರಹದಿಂದ ಜ್ಞಾನಸುಖಪೂರ್ಣರಾದರು ಎಂದು ಹೇಳಿದೆ. ರುದ್ರದೇವರು

ಒಬ್ಬರೇ ಆದರೂ ಈಶಾನಾಸಃ ಎಂದು ಬಹುವಚನ ಪ್ರಯೋಗವನ್ನು ಮಾಡಿ ಆಚಾರ್ಯರ ವಿಮರ್ಶೆಯ ಸಂಬಂಧವನ್ನು ಅನೇಕ ವ್ಯಕ್ತಿಗಳಲ್ಲಿ ಹೇಳಿದ್ದಾರೆ. ಬಹುವಚನಕ್ಕೆ ಆದ್ಯರ್ಥವನ್ನು ಎಂದರೆ ಮೊದಲಾದ ಎಂಬ ಅರ್ಥವನ್ನು ಹೇಳುವುದು ಶಾಸ್ತ್ರಗಳಲ್ಲಿ ಕಂಡಿದೆ. ಆದ್ದರಿಂದ ಎಲ್ಲವೂ ಮಂಗಲವಾಗಿದೆ.

**ಭಾವವಿಲಾಸಿನೀ–** ತಸ್ಮಾತ್ ಕಾರಣಾತ್ । ತತ್ಪ್ರಸಾದತಃ ಮಧ್ವಪ್ರಸಾದತಃ । ಬಭೂವುಃ ಜ್ಞಾನಿನೋ ಬಭೂವುಃ । ಅನೇನ ಬುಧ್ನಾತ್ ಜ್ಞಾನರೂಪಾತ್ ಯತ್ ಯಸ್ಮಾತ್ ಮಧ್ವಾತ್ । ಈಶಾನಾಸಃ ಈಶಾನಾದ್ಯಾಃ । ಮಹಿಷಸ್ಯ ನಾರಾಯಣಸ್ಯ ವರ್ಪಸಃ ವರಣೀಯತ್ವಾತ್ ಪಾಲಕತ್ವಾತ್ ವರ್ಪಃಸಂಜ್ಞಾನ್ ಗುಣಾನ್ ನಿರಕ್ರಂತ ಕ್ರಂದಿ ಗರ್ತಿಶೋಷಣಯೋರಿತಿಧಾತೋಃ ನಿರಜಾನಂತೇತಿ ಶ್ರುತೇರರ್ಥೋಽಪಿ ಸೂಚಿತೋ ಭವತಿ । ಸಂಬಂಧಃ ಯದೀ ಮನ್ವಿತಿ ವಾಕ್ಯಸ್ಯ ನಿರ್ಯದೀಮಿತಿ ವಾಕ್ಯಸ್ಯ ಚ ಸಂಬಂಧಃ । ಉಪಲಕ್ಷಣಂ ಚೈತತ್ । ಯಚ್ಛಬ್ದಸ್ಯ ತಚ್ಛಬ್ದಾಪೇಕ್ಷತ್ವಾತ್ ತತ್ ತೃತೀಯಂ ವಪುರ್ಜನಯಂತೇತಿ ಅಸ್ಯಾಪಿ ವಾಕ್ಯಸ್ಯ ಸ್ವಪೂರ್ವವಾಕ್ಯೇನ ಸಂಬಂಧಶ್ಚೇತಿ ದ್ರಷ್ಟವ್ಯಮ್ । ಯಸ್ಮಾದಿತ್ಯಸ್ಯ ತತ್ ತೃತೀಯಂ ವಪುರಿತಿ ಪೂರ್ವೇಣಾನ್ವಯಃ । ಅತ್ರ ಶ್ರುತೌ । ಏಕಃ ಏಕಶಿವಪ್ರತಿಪಾದಕೇಶಾನ ಶಬ್ದಃ । ಬಹುವಚನಾಂತವಿಭಕ್ತಿಃ ಬಹುವಚನರೂಪ ವಿಭಕ್ತಿಃ । ತತ್ತಸ್ಮಾತ್ ಈಶಾನಾಪದವಾಚ್ಯ ಶಿವಸ್ಯೈಕತ್ವೇನ ಬಹುವಚನಸ್ಯ ಆದ್ಯರ್ಥಂ ವಿನಾಽರ್ಥಾಂತ-ರಾಯೋಗಾತ್ ॥ ೭೧೧ ॥

**ವಿವರಣೆ–** ಮಂತ್ರಾರ್ಥವು ಈ ರೀತಿಯಾಗುತ್ತದೆ. ಬುಧ್ನಾತ್= ಜ್ಞಾನರೂಪರಾದ, ಯತ್= ಯಾವ ಮಧ್ವಾಚಾರ್ಯರಿಂದ, ಈಶಾನಾಸಃ= ರುದ್ರದೇವರೇ ಮೊದಲಾದವರು, ಮಹಿಷಸ್ಯ= ನಾರಾಯಣನ, ವರ್ಪಸಃ= ವರಣೀಯವಾದ್ದರಿಂದ ಮತ್ತು ಪಾಲಕಗಳಾದ್ದರಿಂದ ವರ್ಪಃ ಎಂದು ಹೇಳಲ್ಪಟ್ಟ ಗುಣಗಳನ್ನು, ನಿಃ ಅಕ್ರಂತ= ಚೆನ್ನಾಗಿ ತಿಳಿದರು. ಹೀಗೆ ವಾಕ್ಯದ ಅರ್ಥ. ಆದ್ದರಿಂದ ಯದೀ ಮನುಪ್ರದಿವೋ ಎಂಬ ವಾಕ್ಯಾರ್ಥದ ಸಂಬಂಧವನ್ನು ಅನೇಕ ವ್ಯಕ್ತಿಗಳಲ್ಲಿ ತೆಗೆದುಕೊಳ್ಳಬೇಕು. ಇದನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. ಇಲ್ಲಿರುವ ಯತ್ ಶಬ್ದವು ತತ್ ಶಬ್ದವನ್ನು ಅಪೇಕ್ಷಿಸುವುದರಿಂದ ಯತ್= ಯಾವ ಮಧ್ವಾಚಾರ್ಯರ ಅನುಗ್ರಹದಿಂದ ರುದ್ರಾದಿಗಳು ಜ್ಞಾನಿಗಳಾದರೋ, ತತ್= ಅಂತಹ ಆ, ತೃತೀಯಂ ವಪುಃ= ಮೂರನೆಯ ದೇಹವನ್ನು, ಜನಯಂತಃ= ಶ್ರೀಭೂದುರ್ಗೆಯರು ಸೃಷ್ಟಿಸಿದರು ಎಂದು ಈ ವಾಕ್ಯಕ್ಕೂ ಹಿಂದಿನ ವಾಕ್ಯದಿಂದ ಸಂಬಂಧವನ್ನು ತೆಗೆದುಕೊಳ್ಳಬೇಕು ಎಂದು ಅಭಿಪ್ರಾಯ.

**ವರ್ಗಾರ್ಥಸ್ತೂದಿತಃ ಪೂರ್ವೈರ್ಮದ್ಗೀಸ್ತದ್ಯುಕ್ತಿಮಲ್ಲಿಕಾ ॥ ೭೧೨ ॥**

**ಅರ್ಥ–** ವರ್ಗಾರ್ಥಃ ತು= ವರ್ಗಾರ್ಥವಾದರೂ, ಪೂರ್ವೈಃ= ಪೂರ್ವಾಚಾರ್ಯರಿಂದಲೇ, ಉದಿತಃ= ಹೇಳಲ್ಪಟ್ಟಿದೆ, ಮದ್ಗೀಃ= ಈ ಗ್ರಂಥರೂಪವಾದ ನನ್ನ ವಾಕ್ಯವು, ತದ್ಯುಕ್ತಿಮಲ್ಲಿಕಾ= ಆ ವಾಕ್ಯಗಳಲ್ಲಿರುವ ಯುಕ್ತಿಗಳೆಂಬ ಮಲ್ಲಿಕಾರೂಪವಾದುದು.

**ಅನುವಾದ–** ಈ ವರ್ಗದ ಅರ್ಥವಾದರೂ ಪೂರ್ವಾಚಾರ್ಯರಿಂದಲೇ ಹೇಳಲ್ಪಟ್ಟಿದೆ. ಈ ಗ್ರಂಥರೂಪವಾದ ನನ್ನ ವಚನವಾದರೂ ಆ ವಾಕ್ಯಗಳಲ್ಲಿರುವ ಯುಕ್ತಿಗಳೆಂಬ ಮಲ್ಲಿಕಾ ಪುಷ್ಪಗಳನ್ನು ತೋರಿಸುವಂತಹದಾಗಿದೆ.

**ಭಾವವಿಲಾಸಿನೀ–** ಮದ್ಗೀಃ ಮಮ ಗ್ರಂಥರೂಪಾ ವಾಕ್ ತದ್ಯುಕಿಮಲ್ಲಿಕಾ ಪೂರ್ವಾಚಾರ್ಯೋಕ್ತಾರ್ಥೇ ಯುಕ್ತಿಸಂಗ್ರಹರೂಪತ್ವಾದ್ಯುಮಲ್ಲಿಕಾಖ್ಯಾ । ನನ್ವನ್ನಸೂಕ್ತಮಧ್ಯಸ್ಥೇಽಸ್ಮಿನ್ವರ್ಗೇ ಕುತೋ ಸಂಗ ಇತಿ ಚೇತ್ ನ । ಅನ್ನಮಾತ್ರಸ್ಯ ಪ್ರಾಣಾದ್ಯಾಹುತಿಪಂಚಕಭರಿತತ್ವೇನಾನ್ನಸೂಕ್ತ ಏವ ಪ್ರಾಣಸ್ತುತೇರೇವಾವಶ್ಯಕತ್ವಾತ್ । ತಥಾಚಾಯಂ ವರ್ಗಾರ್ಥಃ। ಸಹಸಃ ವೇಗವತ್ತ್ವಾತ್ ಬ್ರಹ್ಮಾಂಡಾಂತರ್ಗತಘನೋದಕಮಧ್ಯಸ್ಥ ವಾಯುಕೂರ್ಮರೂಪೇಣ ಜಗದ್ಧಾರಕಶೇಷಾಧಾರತಯಾ ಬಹುತರ ಸಹನಹಶೀಲತ್ವಾದ್ವಾ ಸಹಃ ಶಬ್ದವಾಚ್ಯಸ್ಯ ದೇವಸ್ಯ ಮುಖ್ಯಪ್ರಾಣಸ್ಯ, ಪ್ರಾಣಾದಭೂದ್ಯಸ್ಯ ಚರಾಚರಾಣಾಂ ಪ್ರಾಣಃ ಸಹೋ ಬಲಮೋಜಶ್ಚ ವಾಯುರಿತಿ ಭಗವತವಚನೇ ಸಹೋಬಲಾದಿಶಬ್ದಾನಾಂ ಮುಖ್ಯಪ್ರಾಣೇ ಪ್ರಯೋಗಾಚ್ಚ। ಅತ ಏವ ಅನುಶಾಸನಬಲಾತ್ ಜಗದ್ಧಾರಣಾಖ್ಯ ಕಾರ್ಯಬಲಾಚ್ಚ ಭರ್ಗಃಶಬ್ದವಾಚ್ಯಂ ತನ್ಮೂಲರೂಪಂ ಯತೋ ಭಗವತಃ ಸ್ವಯಮಜನಿ ತದಾಜ್ಞಯೇತಿ ಚ ಗ್ರಾಹ್ಯಮ್ । ಅಜ್ಞಾನಮನ್ಯೈರಧಾರ್ಯಾಮಿತಿ ವಚನಾತ್ ।

ಇತ್ಥಾ ಇತ್ಥಮ್ ವಕ್ಷ್ಯಮಾಣಪ್ರಕಾರೇಣ । ಭಾರತರಾಮಾಯಣಾದೌ ವಕ್ಷ್ಯಮಾಣಪ್ರಕಾರಃ। ಅತಿದೀರ್ಘ ಇತಿ ಜ್ಞಾಪಯಿತುಮಿತ್ಥೇತ್ಯುಕ್ತಮ್ । ಇತ್ಥಂ ಮೂಲರೂಪವದೇವ ವಾ । ವಪುಷೇ ಹನುಮಾದ್ಯವತಾರಾಯ ಧಾಯಿ ಅಧಾಯಿ । ಯತೋ ಹನುಮಾದ್ಯವತಾರತ್ರಯಾತ್ ಭರ್ಗಃ ಭಾರರೂಪತ್ವಾದ್ರತಿರೂಪತ್ವಾತ್ ಗತಿರೂಪತ್ವಾಚ್ಚ ಭರ್ಗಃ ಶಬ್ದವಾಚ್ಯಂ ಭಗವತೋ ರೂಪಮ್ । ಅಜನಿ ಮೂಲರಾಮಾಯಣಪಂಚರಾತ್ರಬ್ರಹ್ಮಸೂತ್ರವ್ಯಾಖ್ಯಾನಾದಿನಾ ಪ್ರಾದುರ್ಭೂತಮಭೂತ್ । ತಸ್ಮೈ ವಪುಷೇಧಾಯೀತಿ ವಾ ಯತೋ ಯಸ್ಮಾತ್ ಕಾರಣಾತ್ ಭರ್ಗಃ ಶಬ್ದವಾಚ್ಯಂ ಭಗವತೋ ರಾಮರೂಪಂ ಕೃಷ್ಣರೂಪಂ ವ್ಯಾಸರೂಪಂ ಚಾಜನಿ ಭೂಮಾವವತೀರ್ಣಮಭೂತ್ । ತಸ್ಮಾತ್ ಕಾರಣಾತ್ ತತ್ಸೇವಾರ್ಥಂ ವಪುಷೇ ಧಾಯೀತಿ ವಾ । ರೂಪತ್ರಯಸ್ಯಾಪ್ಯಭೇದಸೂಚನಾಯ ವಪುಷ ಇತ್ಯೇಕವಚನಮ್ ।

ಅಥವಾ ಭರ್ಗ ಇತ್ಯಕಾರಾಂತಂ ಪದಂ ಶಿವವಾಚಕಮ್ । ಹರಃ ಸಮರಹರೋ ಭರ್ಗಃ ಕೃತ್ತಿವಾಸಾ ವೃಷಾಂಗ ಇತ್ಯಭಿಧಾನಾತ್ । ಯತಃ ಸಹಸೋ ವಾಯೋಃ ಭರ್ಗಃ ಶಿವೋಽಜನಿ ತಸ್ಯ ಸಹಸೋ ದೇವಸ್ಯ ಬಟ್ ದರ್ಶತಂ ತತ್ ಮೂಲರೂಪಂ ಇತ್ಥಂ ವಪುಷೇ ಧಾಯೀತಿ ಯೋಜನಾ । ವಾಯ್ವವತಾರಂ ವಿಹಾಯ ಸಹಃಪದೇನ ಮುಖ್ಯಪ್ರಾಣಸ್ಯೈವ ಗ್ರಹಣಾಯೇದಂ ವ್ಯಾಖ್ಯಾನಮ್ । ಶಿವಜನಕತ್ವಸ್ಯಾನ್ಯತ್ರಾಯೋಗಾತ್ ಕಿಂಕರಾಃ ಶಂಕರಾದ್ಯಾ ಇತಿ ಮುಖ್ಯಪ್ರಾಣ ಏವ ಸಂಭವಾಚ್ಚ ಏಕೈಕರೋಮ್ಣಃ ಕೋಟಲಿಂಗಜನಕತ್ವಸ್ಯ ಸುಪ್ರಸಿದ್ಧತ್ವೇನ ಯುಕ್ತಿಯುಕ್ತತ್ವಾಚ್ಚಾಯಮಪ್ಯರ್ಥೋಽತ್ಯಂತಶ್ಲಾಘ್ಯಃ । ವಬಯೋರಭೇದನ ಬಲಾತ್ಮಕತ್ವಾದಯ-

ಪಯಗತಾವಿತಿ ಧಾತೋರ್ಜ್ಞಾನಶೀಲತ್ವಾಚ್ಚ ವಾಯುಶಬ್ದವಾಚ್ಯಸ್ಯ ಪ್ರಾಣಸ್ಯ ಮುಖ್ಯತೋ ನಾಮಭೂತವಾಯುಶಬ್ದಾರ್ಥಸೂಚನಾಯ ಚೇದಂ ವಿಶೇಷಣದ್ವಯಮುಪಾತ್ತಮ್ । ಮಾತರಿಶ್ವಾ ಮಥಾಯತೀತಿ ಉಪರಿ ಸ್ಪಷ್ಟಂ ವಾಯೋಃ ಕಥನಾದತ್ರಾಪಿ ದೇವಸ್ಯೇತಿ ಪದಂ ವಾಯುದೇವಸ್ಯೈವ ವಾಚಕಂ ಮಾತರಿ ಭಗವತ್ ಜ್ಞಾನಸಾಧನೀಭೂತೇ ವೇದಶಾಸ್ತ್ರಾದೌ ಶ್ವಾ ಗತಿರವಗತಿರ್ಯಸ್ಯೇತಿ ವ್ಯುತ್ಪತ್ತ್ಯಾ ವಾಯುವಾಚಕಮಾತರಿಶ್ವಪದಾರ್ಥಸೂಚನಾಯ ಚ ದರ್ಶತಮಿತ್ಯುಕ್ತಮ್ । ಟು ಓಶ್ವಿಗತಿವೃದ್ಧ್ಯೋರಿತಿ ಧಾತೋಃ । ವಾಯವಾಯಾಹಿ ದರ್ಶತೇತ್ಯತ್ರ ಸ್ಪಷ್ಟಂ ದರ್ಶತಪದಸ್ಯ ವಾಯುವಿಶೇಷಣತ್ವಶ್ರವಣಾದಸ್ಯಾಪಿ ವಾಯುಪ್ರಕರಣತ್ವದ್ಯೋತನಾಯ ಚ ತದೇವ ಪದಮುಪಾತ್ತಮ್ । ಆದ್ಯರೂಪದ್ವಯೇನ ಬಲಕಾರ್ಯಕರಣೇ ತೃತೀಯರೂಪೇಣ ಜ್ಞಾನಕಾರ್ಯಕರಣೇ ಚ ವಾಯೋಃ ಶಕ್ತಿಸದ್ಭಾವಸೂಚನಾಯ ಚ ಕ್ರಮೇಣ ಬಟ್ ದರ್ಶತಮಿತಿ ವಿಶೇಷಣದ್ವಯಮುಪಾತ್ತಮ್ । ತದುಭಯಂ ಚ ಹೃದಿ ಭಗವತೋ ನಿರಂತರಧ್ಯಾನಾದುತ್ಪನ್ನಮಿತಿ ಸೂಚಯಿತುಂ ಧ್ಯಾನರೂಪಪ್ರಕೃಷ್ಟಚೇಷ್ಟಾಕರ್ತೃತ್ವಾಖ್ಯಪ್ರಾಣಶಬ್ದಾರ್ಥಸೂಚನಾಯ ಚ ಭರ್ಗ ಇತಿ ತೃತೀಯಂ ವಿಶೇಷಣಮ್ । ಭಗವತ್ಪರತಾಯಾಂ ತು ಭಗವತೋ ಜನನಾಭಾವ-ಸೂಚನಾರ್ಥಂ ಗಾಯತ್ರೀ ಪ್ರತಿಪಾದ್ಯತ್ವಸೂಚನಾರ್ಥಂ ಚ ಭರ್ಗ ಇತಿ ವಿಶೇಷಣಮ್ ।

ಯದ್ವಾ ದರ್ಶತಪದಂ ವಾಯೋಃ ವೇದಪುರಾಣಪಂಚರಾತ್ರ- ಭಾರತಾದಿಸಚ್ಛಾಸ್ತ್ರ-ವ್ಯಾಪ್ತಜ್ಞಾನರೂಪಶಾಸ್ತ್ರಾಭ್ಯಾಸಾಖ್ಯೋಪಾಸನಾಕೌಶಲದರ್ಶನಾರ್ಥಮ್ । ಈಶ್ವರಾದನ್ಯತ್ರಾ-ಲೋಚನೇ ಸಕಲಪದಾರ್ಥವ್ಯಾಪ್ತಜ್ಞಾನಸೂಚನಾರ್ಥಂ ಚ । ಭರ್ಗಃ ಪದಂ ತು ಧ್ಯಾನರೂಪೋಪಾಸನಾದಿಕೌಶಲದರ್ಶನಾರ್ಥಂ ಪುನರ್ದರ್ಶತಪದಂ ದೃಶ್ಯಪ್ರೇಕ್ಷಣ ಇತಿ ಧಾತೋರ್ದರ್ಶಪದಸ್ಯ ಪ್ರಾಯಶೋಽಪರೋಕ್ಷಜ್ಞಾನವಾಚಕತ್ವಾತ್ ತತ್ತತ್ಪದಸ್ಯತನ್ನಿಯಮ-ವಾಚಕತ್ವೇನ ವಾಯೋರ್ದ್ವಿವಿಧೋಪಾಸನಾಫಲೀಭೂತನಿತ್ಯಾಪರೋಕ್ಷ- ಪ್ರತೀತಿಪ್ರತಿ-ಪಾದನಾರ್ಥಮ್ । ಏವಂ ಚ ಜ್ಞಾನಸ್ಯ ಮೋಕ್ಷಂ ಪ್ರತ್ಯಂತರಂಗಸಾಧನತ್ವಾತ್ ತದ್ವಿಸ್ತರಪ್ರದರ್ಶ-ನಾಯೇದಂ ವಿಶೇಷಣದ್ವಯಮ್ । ಬಲಸ್ಯ ತು ಜ್ಞಾನಸಾಧನದುಷ್ಟಸಂಹಾರಾಖ್ಯಭಗವತ್ ಸೇವೋಪಯೋಗಿನೋ ಜ್ಞಾನಾದಮುಖ್ಯತ್ವಾತ್ತತ್ಪ್ರತಿಪಾದನಾಯ ಏಕಂ ವಿಶೇಷಣಂ ಜ್ಞಾನಸಾಧನ ಪ್ರತಿಪಾದಕತ್ವಾದದಾವೇವೋಪಾತ್ತಮ್ । ಯದ್ವಾ ದರ್ಶೋ ದರ್ಶನಂ ವೈಷ್ಣವದರ್ಶನಮ್ । ತಂ ತತಂ ಸ್ವತೃತೀಯಾವತರೇಣ ಭೂಮೌ ವ್ಯಾಪ್ತಂ ಯಸ್ಮಾತ್ ತದ್ದರ್ಶತಮ್ । ಭರ್ಗಃ ತದ್ರೂಪ್ಯೈಣ್ಯೈವ ಭರ್ಜ್ಯಂತೇ ನಾನಾದುರ್ದರ್ಶನಾನ್ಯನೇನೇತಿ ಭರ್ಗಃ ಶಬ್ದವಾಚ್ಯಮ್ । ಭ್ರಸ್ಜ ಪಾಕ ಇತಿ ಧಾತೋಃಪ್ರಸಿದ್ಧೋಽಯಮರ್ಥಃ । ತದುಭಯೋಪಯುಕ್ತ-ಯುಕ್ತಿಜ್ಞಾನಬಲವತ್ತ್ವಾದ್ವಟ್ ಚ । ಅಥ ಏವ ವಪುಷೇ ಧಾಯೀತಿ ವಿಶೇಷಣತ್ರಯಮಪಿ ಜ್ಞಾನಕಾರ್ಯೋಪಯೋಗಿತಯೈವ ಪ್ರಯೋಜನೀಯಮ್ । ಉಕ್ತರೀತ್ಯಾ ತಸ್ಯೈವಾತಿ-ಪ್ರಬಲತ್ವಾತ್ ಜಗದ್ಗುರುತಯಾ ಜ್ಞಾನದಾಯಕ ತೃತೀಯರೂಪಸ್ಯ ಸಾಕ್ಷಾನ್ಮೋಕ್ಷೋಪ-ಯೋಗಿತಯಾ ಭಗವತಃ ಸರ್ವೋತ್ತಮತ್ವಾದಿಮಹಾಮಹಿಮಸ್ಥಾಪಕತಯಾ ಸ್ವಪ್ರಾಮಾಣ್ಯ-ಸ್ಥಾಪಕತಯಾ ಸ್ವಾರ್ಥಕಮೀಮಾಂಸಕತಯಾ ಶ್ರುತೇರತ್ಯಂತಪ್ರಿಯತಯಾ ತತ್ರೈವ ಭರಾದ್ವಪುಷ

ಇತ್ಯೇಕವಚನಮ್ । ಅತ ಏವ ಮೂಲರೂಪೇ ಅವತಾರದ್ವಯೇಽಪಿ ಚ ಅರ್ಧಾರ್ಧಋಕ್, ತೃತೀಯರೂಪವಿಷಯೇ ತು ಸಾರ್ಧಋಕ್‌ತ್ರಯಮ್ । ಸರ್ವಜ್ಞಮನ್ಯಮನವೇಕ್ಷ್ಯಸಕಾರ್ಯ (ವೀರ್ಯಂ) ದಕ್ಷಂ ಸ್ಮೇರಾನನೋ ಭುವನಜೀವನ ಮಾಬಭಾಷೇ । ತದ್ಯುಕ್ತ್ಯಾಭಾಸಜಾಲ ಪ್ರಸರವಿಷತರೂದ್ದಾಹದಕ್ಷ ಪ್ರಮಾಣಜ್ವಾಲಮಾಲಾಧರೋಽಗ್ನಿಃ ಪವನ ವಿಜಯತೇ ತೇಽವತಾರಸ್ತೃತೀಯ ಇತ್ಯಾದಿ ವಚನಾತ್ ಸ ಏವ ಯುಕ್ತಿಜ್ಞಾನಬಲವಾನ್ ದುರ್ದರ್ಶನ-ಭರ್ಜನಶ್ಚ ।

ಯದೀಂ ಯ ಏವ ಮತಿಃ ಅತಿಶಯಿತಮತಿತ್ವೇನ ಮತಿರೇವ ರೂಪವತೀತಿ ಕವಿಭಿ-ರ್ವರ್ಣಿತತ್ವಾತ್ ಮತಿಶಬ್ದವಾಚ್ಯೋ ಹನುಮಾನ್ । ಉಪ ರಾಮಸ್ಯ ಸಮೀಪೇ ಹ್ವರತೇ ವಿಹರತೇ ಕ್ರೀಡತ ಇತ್ಯರ್ಥಃ । ವಕಾರಶ್ಛಾಂದಸಃ । ಹ್ವರಕ್ರೀಡಾಯಾಮಿತ್ಯೇವ ವಾ ಧಾತುಃ । ಇದಂ ಚ ಹನಹಿಂಸಾಗತ್ಯೋರಿತಿ ಧಾತೋರ್ಗತ್ಯರ್ಥಾನಾಂ ಚ ಜ್ಞಾನಾರ್ಥತ್ವಾದ್ಧನಂ ಹನನಂ ಮುಖಸ್ಯಾನುಭವೋ ಯಸ್ಯೇತಿ ವ್ಯುತ್ಪತ್ತ್ಯಾ ಹನುಮಚ್ಛಬ್ದಾರ್ಥ ಸೂಚನಾರ್ಥಮ್ ।

ಅಥವಾ ಉಪ ರಾಮಸ್ಯ ಸಮೀಪೇ ಏಕಾಂತವಚನಶ್ರವಣಾರ್ಥಂ ರಾಮಸಮೀಪಾಗಮನೇ ಸತೀತ್ಯರ್ಥಃ । ಹ್ವರತೇ ಹ್ವರ ಕೌಟಿಲ್ಯ ಇತಿ ಧಾತೋಃ ಭಕ್ತ್ಯಾ ನಮ್ರಾಂಗೀಭೂಯ ತಿಷ್ಠತೀ-ತ್ಯರ್ಥಃ । ಪ್ರೀತ್ಯಾಽವನಮ್ರಾಕೃತಿಂ ವಕ್ತ್ರಾಂಭೋರುಹಸಕ್ತಹಸ್ತಕಮಲಂ ಭಕ್ತಂ ಭಟಾಗ್ರೇಸರಂ ಇತಿ ವಚನಾತ್ । ಇದಮಪಿ ಸಾಕ್ಷಾತ್ಪರದೇವತಯಾ ಸಹ ಏಕಾಂತಗೋಷ್ಠೀಯೋಗ್ಯವಿಲಕ್ಷಣ-ಹನುಪ್ರದೇಶವತ್ತ್ವಾದ್ವಜಹತ್ಸ್ವಾರ್ಥಲಕ್ಷಣಾಯಾ ಹನುಶಬ್ದಬೋಧ್ಯಂ ಮುಖಕಮಲಮಸ್ಯೇತಿ ವ್ಯುತ್ಪತ್ತ್ಯಾ ಹನುಮಚ್ಛಬ್ದಾರ್ಥಸ್ಯೈವ ದರ್ಶನಾರ್ಥಮ್ ।

ಯದ್ವಾ ಯದ್ವಪುಃ ಪೂರ್ವೋಕ್ತವಿಧಯಾ ಮತಿಶಬ್ದವಾಚ್ಯಂ ಯಚ್ಚ ಇತ್ಥಂ ನಾರಾಯಣಾದೌ ಉಕ್ತಪ್ರಕಾರೇಣ ಈಂ ಇತ್ಥಂ ಹರೇರ್ಮೂಲರೂಪೇ ಲಕ್ಷ್ಮೀಮೂಲರೂಪೇ ಚ ಸ್ವರೂಪವಮೂಲರೂಪವತ್ ಈಂ ಸೀತಾರೂಪಲಕ್ಷ್ಮೀಮ್ ಉಪಸಮೀಪೇ ಲಂಕಾಸ್ಥಿತ-ಸೀತಾಖ್ಯಲಕ್ಷ್ಮ್ಯಾಃ ಸಮೀಪ ಇತ್ಯರ್ಥಃ । ಈಕಾರೇ ಶ್ರೀವಾಚಕತ್ವಸ್ಯ ನಿಘಂಟ್ವಾದೌ ಪ್ರಸಿದ್ಧತ್ವಾತ್ । ಋತಸ್ಯ ಯಥಾರ್ಥಜ್ಞಾನಸ್ಯ ರಾಮಸ್ಯ ಚ ಸಮೀಪೇ ಹ್ವರತೇ ಕ್ರೀಡತೇ । ಏಕಾಂತೋಕ್ತಿಸಮಯೇ ನಮ್ರೀಭವತಿ ಚ । ಸಾಧತೇ ದುಷ್ಟರಾಕ್ಷಸಹಿಂಸನಾದಿರಾಮಕಾರ್ಯಾಣಿ ಸಾಧಯತೇ । ಸ್ವಾಮಿಭಕ್ತಿಕರಣಸಮಯೇ ಅಂಗಕೌಟಿಲ್ಯ ಸದ್ಭಾವೇಽಪಿ ಸ್ವಾಮಿಕಾರ್ಯಕರಣಸಮಯೇ ಮನಃಕೌಟಿಲ್ಯಾಭಾವಸೂಚನಾಯ ಸಾಧಯತ ಇತಿ ಪ್ರಸಿದ್ಧಪ್ರಯೋಗಂ ವಿಹಾಯ ಯಥಾಸ್ಥಿತ ಧಾತುಪ್ರಕೃತೇರೇವ ಪ್ರಯೋಗಃ ಕೃತಃ । ಇದಮಪಿ ಹನಹಿಂಸಾಗತ್ಯೋರಿತಿಧಾತೋಃ ಶತ್ರೂಣಾಂ ಹನಂ ಹನನಮಸ್ಯಾಸ್ತೀತಿ ಹನುಮಾನಿತಿ ಹನುಮಚ್ಛಬ್ದಾರ್ಥಸೂಚನಾರ್ಥಮುಕ್ತಮ್ । ತಾಚ್ಛೀಲ್ಯಪ್ರದರ್ಶನಾಯ ಉಕಾರಃ । ಋತಸ್ಯ ರಾಮಸ್ಯ ಸಸ್ರುತಃ ಅಮೃತಸ್ರವಣಸಹಿತಾಃ ಧೇನಾಃ ಧಿನುಪುಷ್ಟಾವಿತಿ ಧಾತೋಃ ಕಾಮಧೇನುವತ್ ಸತಾಂ ಧಾರಣಪೋಷಣಶೀಲತ್ವಾದ್ಧೇನಾ-ಶಬ್ದವಾಚ್ಯಾ ವಾಚಃ ಈಂ ಲಂಕಾಸ್ಥಿತ ಸೀತಾರೂಪಲಕ್ಷ್ಮೀಂ ಪ್ರತಿ ಅನಯಂತ ಅನಯತ ಆನೀತವಾನಿತ್ಯರ್ಥಃ । ವ್ಯತ್ಯಯೋ ಬಹುಲಮಿತಿ ವಚನಾತ್ ಬಹುವಚನಮೇಕವಚನಾರ್ಥೇ ।

ಅಥವಾ ತತ ಏವ ಕರ್ತೃಕರ್ಮವ್ಯತ್ಯಾಸಾತ್ ಯೇನ ವಪುಷಾ ಋತಸ್ಯ ಧೇನಾಃ ಅನಯಂತ ಸೀತಾಂ ಪ್ರತ್ಯನೀಯಂತ । ತಥಾ ಯದ್ವಪುಃ ಋತಸ್ಯ ಋಗತಾವಿತಿ ಧಾತೋಃ ರಾವಣಬಲೇನ ಲಂಕಾಂ ಪ್ರತಿ ನೀತಸ್ಯ ಸೀತಾಪ್ರತಿಬಿಂಬಸ್ಯ ಸಸ್ರುತಃ ಅಮೃತಸ್ರವಣಸಹಿತಾಃ ಚಿತ್ತದ್ರವಸಹಿತಾ ವಾ ಋತಸ್ಯ ಸತ್ಯಸ್ಯ ಧೇನಾಃ ಸತ್ಯಸಂಬಂಧಿನೀರ್ವಾಚಃ ಯಥಾರ್ಥವಾಚ ಇತ್ಯರ್ಥಃ । ಮನಸಾ ರಾವಣಮಂಗೀಕೃತ್ಯ ವಚಸಾ ರಾಮಪ್ರದರ್ಶನ ಪರಾ ನೇತಿ ಯಾವತ್ । ಋತಸ್ಯ ರಾಮಸ್ಯ ಉಪ ಸಮೀಪಂ ಪ್ರತಿ ಅನಯಂತ ಅನಯತ । ಯೇನ ವಪುಷಾ ಅನೀಯಂತ ವಾ ।

ಯದ್ವಾ ಋತಸ್ಯ ರಾಮಸ್ಯ ಸಸ್ರುತಃ ಉಪಕ್ರಮೋಪಸಂಹಾರಾದಿ ಯುಕ್ತಿಸ್ರವಣಸಹಿತಾಃ ಧೇನಾಃ ವೇದಪಂಚರಾತ್ರಾದಿಬ್ರಹ್ಮಮೀಮಾಂಸಾದಿ ವ್ಯಾಖ್ಯಾನರೂಪವಾಚಃ ಮುಖ್ಯಶ್ರೋತೃತಯಾ ಪುರತಸ್ಸ್ಥಿತಸ್ಯ ಸ್ವಸ್ಯ ಮನಸಿ ಅನಯಂತ ಹನುಮಾನನಯಂತೇತ್ಯರ್ಥಃ । ಹನುಮತಃ ಸ್ವಾಂತರ್ಯಾಮಿಣೋ ಹರೇಃ ವಾಙ್ಮನಸದೇವತಾಯಾ ಲಕ್ಷ್ಮ್ಯಾಶ್ಚೇತಿ ತ್ರಯಾಣಾಂ ಕರ್ತೃತ್ವಸೂಚನಾಯ ಅನಯಂತೇತಿ ಬಹುವಚನಮ್ । ಅನೀಯಂತ ವಾ ।

ಅಥವಾ ರಾಮಸ್ಯ ಪ್ರತಿಪಾದಿಕಾಃ ಮೂಲರಾಮಾಯಣಾದಿವಾಚಃ ದೇವಗಂಧರ್ವಾದಿ-ಶ್ರೋತೃಷ್ವನಯಂತ ವ್ಯಾಖ್ಯಾಯ ತನ್ಮನಸಿ ಅನಯತ್ ಅನೀಯಂತ ವಾ । ಅತ್ರಾಪಿ ಬಹುವಚನಸ್ಯ ಉಕ್ತಮೇವ ಕೃತ್ಯಮ್ । ಸೀತಾರಾಮಯೋರುಭಯೋರಪಿ ದೇಶತಃಸಮವ್ಯಾಪ್ತತಯಾ ದೂತೇನ ತದ್ವಚನಪ್ರಣಯನರೂಪಾರ್ಥಸ್ಯ ಪರಮತತ್ವರಹಸ್ಯೋಪೇಕ್ಷಯಾ ವ್ಯತ್ಯಸ್ತತ್ವಸೂಚನಾಯ ಶಬ್ದಸ್ಯಾಪಿ ವ್ಯತ್ಯಾಸಃ । ಇದಮಪಿ ಹನಂ ಹನನಂ ವಚಸಾಮಿತಸ್ತತಃ ಪ್ರಾಪಣಂ ಅಸ್ಯ ವರ್ತತ ಇತಿ ವ್ಯುತ್ಪತ್ತ್ಯಾ ಹನುಮಚ್ಛಬ್ದಾರ್ಥ ಪ್ರತಿಪಾದನಪರಮ್ । ತದ್ವಪುಃ ಪ್ರಥಮಮಿತಿ ವಾಕ್ಯಶೇಷೇಣ ಸಂಬಂಧಃ ।

ಯದ್ವಾ ರಾಮಸೇವಾರ್ಥಂ ಭೂಮಿಂ ಪ್ರಾಪ್ತಸ್ಯ ಹನುಮತಃ ಸಸ್ರುತಃ ನಿರುಪಾಧಿಕಭಕ್ತಿ-ಸ್ರವಣಸಹಿತಾಃ ಸಮುದ್ರೋಲ್ಲಂಘನವನಭಂಜನಾಕ್ಷಶಿಕ್ಷಣಸೇತುಬಂಧನ- ಸಂಜೀವನಾ-ನಯನಾದಿಮಹಾಕಾರ್ಯಂ ಕೃತ್ವಾಪಿ ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ ತ್ವಯೀಶ ಮೇ ಹ್ರಾಸವಿವರ್ಜಿತಾ ಸದಾ । ಅನುಗ್ರಹಸ್ತೇ ಮಯಿ ಚೈವಮೇವ ನಿರೂಪಧೌ ತೌ ಮಮ ಸರ್ವಕಾಮ ॥

ಇತ್ಯಾದಿರೂಪಾ ಧೇನಾಃ ಏಕಾಂತಭಕ್ತಾನಾಂ ಪೋಷಣಹೇತುಭೂತಾ ವಾಚಃ ಸಸ್ರುತಃ ಆನಂದಾಶ್ರುಕಣಸ್ರವಣಸಹಿತಾಃ ಧೇನಾಃ ಪಟ್‌ಧಾತ್ ಪರಸಕಲತತ್ವಪೋಷಣಶೀಲಾ ವಾಚಶ್ಚ ತಥಾ ಋತಸ್ಯ ಭೂಭಾರಹರಣಾರ್ಥಂ ಭೂಮಿಂ ಪ್ರಾಪ್ತಸ್ಯ ರಾಮಸ್ಯ ಸಸ್ರುತಃ ಮಹಾಪ್ರಸಾದವಿಪುಲಕೃಪಾರಸಸ್ರವಣಸಹಿತಾಃ ಧೇನಾಃ ಸ್ವಭಕ್ತಾಗ್ರೇಸರಹನುಮತ್ಪೋಷಣ-ಶೀಲಾಃ ಹನುಮಂಸ್ತ್ವಂಭವಿಷ್ಯತಿ ಕಲ್ಪೇ ಮಮ ನಾಭಿಕಮಲಾತ್ ಉದ್ಭೂಯ ಚತುರ್ಮುಖೋ ಭೂತ್ವಾ ಸತ್ಯಲೋಕ ಪದವೀಶ್ರಿಯಂ ಭೋಕ್ಷ್ಯಸಿ । ತತಃ ಪರಂ ಪರಾಂತಕಾಲೇ ವೈಕುಂಠಾದಿ-ಲೋಕೇ ಸ್ಥಿತಸ್ಯ ಮಮ ಸರ್ವೇಭ್ಯೋಽಪತ್ಯತ್ಯಾಧಿಕಾಂ ಸಾಯುಜ್ಯಸಂಪದಮನುಭವಿಷ್ಯ

ಸೀತ್ಯಾದಿರೂಪಾ ವಾಚಶ್ಚ ಸ್ವಸಮೀಪೇ ಸದಾ ವಿಹರಂತಂ ಸ್ವಕಾರ್ಯಾಣಿ ಚ ಸಾಧಯಂತಂ ಮತಿಮಂತಂ ಯಂ ಹನುಮಂತಮ್, ಈಕಾರೋಽಬ್ಜದಲೇ ಲಕ್ಷ್ಮ್ಯಾಂ ವಾಣ್ಯಾಂ ಕಮಲಕೇಸರೇ । ರಚನಾಯಾಂ ಶಕ್ರಚಾಪೇ ಬಾಣೇ ಫಣಿನಿಕಂದರೇ ॥

ಇತಿ ನಾನಾರ್ಥರತ್ನಮಾಲೋಕ್ತೇಃ, ಋತಸ್ಯ ಜ್ಞಾನರೂಪಸ್ಯ ಪದ್ಮನಾಭಸ್ಯ ಈಂ ನಾಭಿ-ಕಮಲಕೇಸರಂ ಅನಯಂತ ಆನಯನ್ । ಋತಸ್ಯ ಸತ್ಯಸ್ಯ ಸತ್ಯಲೋಕಸ್ಯೇತ್ಯರ್ಥಃ। ಈಂ ಶ್ರಿಯಮ್ ಅನಯಂತ ಪ್ರಾಪಯಂತ । ತಥಾ ಋತಸ್ಯ ಪ್ರದ್ಯುಮ್ನಸ್ಯ ಭೂಕುಮಾರೀಭೂತಾಂ ಈಂ ವಾಣೀಂ ಅನಯಂತ ಸರಸ್ವತೀಪತಿಂ ಚಕ್ರುರಿತ್ಯರ್ಥಃ। ತಥಾ ಋತಸ್ಯ ಸತ್ಯಸ್ಯ ಜಗತಃ ಈಂ ರಚನಾಂ ಪಾದ್ಮೇ ಕಲ್ಪೇ ಪ್ರಾಪ್ತೇ ಜಗದ್ರಚನಾಮಿತ್ಯರ್ಥಃ। ಅನಯಂತ ಜಗತ್ಸೃಷ್ಟಿವ್ಯಾಪಾರನಿರತಮಕುರ್ವನ್ನಿತ್ಯರ್ಥಃ।

ಯದ್ಯಪಿ ಮೂಲರೂಪವಾಯೋರೇವ ಬ್ರಹ್ಮಪದವೀ । ತಥಾಪಿ ಹನುಮದವತಾರೇ ಸೇವಯಾ ಪರಿತುಷ್ಟೇನ ರಾಮೇಣ ದತ್ತತ್ವಾತ್ ಹನುಮತ್ಕಥಾತ್ವೇನ ಶ್ರುತಿರವರ್ಣಯತ್ । ತಥಾ ಬ್ರಹ್ಮಶತವರ್ಷಾನಂತರಮುಕ್ತೌ ಪ್ರಾಪ್ತಾಯಾಂ ಸಸ್ರುತಃ ಸದಾಜ್ಞಾನರಸಸ್ರವಣಸಹಿತಸ್ಯ ಋತಸ್ಯ ಸತ್ಯವಚನಶೀಲಸ್ಯ ಋತಸ್ಯ ಯಥಾರ್ಥಜ್ಞಾನರೂಪಸ್ಯ ವೈಕುಂಠಸ್ಥನಾರಾಯಣಮುಖಕಮಲಸ್ಯ ಉಪಸಮೀಪೇ ತದ್ವಕ್ಷಸ್ಥಲ ಇತ್ಯರ್ಥಃ । ಯಾ ಈರ್ಲಕ್ಷ್ಮೀಃ ತಾಮುಪ ತತ್ಸಮೀಪಮ್ ಅನಯಂತ । ವಕ್ಷಃಸ್ಥಲೋಲ್ಲಸಿತಶ್ರೀಸಮೀಪ ಮುಕ್ತಾಮಾಲಾಶ್ರಿತಮಣಿಗಣಮಧ್ಯೇ ಏಕಮ-ಕುರ್ವನ್ನಿತ್ಯರ್ಥಃ । ದುಷ್ಪ್ರಾಪೇ ಪಾರಮೇಷ್ಠ್ಯೇ ಕರತಲಮತುಲಂ ಮೂರ್ಧ್ನಿ ವಿನ್ಯಸ್ಯ ಧನ್ಯಂ ತನ್ವನ್ಸ್ಭೂಯಃ ಪ್ರಭೂತಪ್ರಣಯವಿಕಸಿತಾಬ್ಜೇಕ್ಷಣಸ್ತ್ವೇಕ್ಷಮಾಣ ಇತಿ ವಚನಾತ್ । ಮುಕ್ತಾ-ಮಾಲಾವಿಮುಕ್ತದ್ರುಹಿಣಗಣತನುರ್ನಿತ್ಯಮುಕ್ತಸ್ಯ ಕಂಠೇ ಭಕ್ತ್ಯಾ ಸಕ್ತ್ಯಾ ವಿಮುಕ್ತ್ಯೈ ಭವತು ಭವಭಯಾದ್ಭೂಯಸೋ ಭಾವಿತಾನ್ನ ಇತಿ ವಚನಾಚ್ಚ। ಯದ್ಯಪಿ ಪ್ರಾಣಶ್ಚೂಡಾಮಣಿರಿತ್ಯಸ್ತಿ ತಥಾಪಿ ಅಮುಕ್ತಗಮ್ಯಸ್ಥಾನಸ್ಥಿತಮೂರ್ತಿವಿಷಯತ್ವಾತ್ತದತ್ರನೋಕ್ತಮ್ । ಪರಮುಕ್ತ್ಯಾಖ್ಯ ಮಹಾಫಲದಾಯಕಮೂರ್ತೌ ತೂಕ್ತೈವ ಗತಿಃ । ತಸ್ಯ ಹನುಮತೋ ವಪುಃ ಪ್ರಥಮಮಿತಿ ಸಂಬಂಧಃ । ಅಸ್ಯಾಂ ಯೋಜನಿಕಾಯಾಂ ನಾರ್ಥವ್ಯತ್ಯಾಸೋಽಸ್ತಿ । ಉಕ್ತಾರ್ಥಸ್ಯ ಪರಮತ-ತ್ವಾನುಕೂಲತ್ವಾತ್ । ಅತ ಏವ ನ ಶಬ್ದವ್ಯತ್ಯಾಸೋಽಪಿ ।

ಅಸ್ಯ ವಾಯೋಃ ದ್ವಿತೀಯಂ ವಪುಃ ಪೃಕ್ಷಃ ಪೃತ್ ಪೃತನಾ ಕ್ಷೀಯತೇ ಅಸ್ಮಾದಿತಿ ವ್ಯುತ್ಪತ್ತ್ಯಾ ವೈರಿಪೃತನಾಕ್ಷಯಕಾರಿತ್ವಾತ್ಪೃಕ್ಷಃ ಶಬ್ದವಾಚ್ಯಂ, ತಕಾರಲೋಪಶ್ಛಾಂದಸಃ । ತೇನ ಚ ಮಹಾಬಲಸ್ಯಾಸ್ಯ ಸೇನಾ ಸರ್ವಾಪಿ ನ ಪ್ರತಿಸೇನೇತಿ ಜ್ಞಾಪಯತಿ । ಕ್ಷಿಕ್ಷಯ ಇತಿ ಧಾತೋಃ ಔಣಾದಿಕೇ ಡಸ್ ಪ್ರತ್ಯಯೇ ಕೃತೇ ಪೃಕ್ಷ ಇತಿ ಸಕಾರಾಂತಂ ಪದಮ್ । ಇದಂ ಚ ವೈರಿಣಾಂ ಭಯಂ ಮಿಮೀತೇ ನಿರ್ಮಿಮೀತ ಇತಿ ವ್ಯುತ್ಪತ್ತ್ಯಾ ಭೀಮ ಶಬ್ದಾರ್ಥಜ್ಞಾಪನಾರ್ಥಮ್ । ಸೋಽಯಂ ಭೀಮಃ ಪಿತುಮಾನ್ ಬಹ್ವನ್ನಭೋಕ್ತೃತ್ವಾತ್ ಪಿತುಮಚ್ಛಬ್ದವಾಚ್ಯಶ್ಚ । ಇದಮಪಿ ಬಕಾಯ ದತ್ತಸಹಸ್ರ ಪ್ರಸ್ಥಾನಭೋಜನಂ ಕೃತ್ವಾ ಸ್ವಾಶ್ರಿತೈಕಚಕ್ರಸ್ಥಸಜ್ಜನಾನಾಂ ಭೀಃ ಮೀಯತೇ ಸಮೀಯತೇ ನಶ್ಯತ್ಯಸ್ಮಾದಿತಿ ವ್ಯುತ್ಪತ್ತ್ಯಾ ಭೀಮಶಬ್ದಸೂಚನಾರ್ಥಮ್ ।

ನಿತ್ಯಃ ಪ್ರಲಯೇऽಪ್ಯವಿಲುಪ್ತಜ್ಞಾನತ್ವಾನ್ನಿತ್ಯಶಬ್ದವಾಚ್ಯಃ ಸೋऽಯಂ ಭೀಮಃ ಸಪ್ತ ಸಪ್ತಸು ವೇದಚತುಷ್ಟಯಮೂಲರಾಮಾಯಣಪುರಾಣಪಂಚರಾತ್ರಭೇದೇನ ಸಪ್ತಸಂಖ್ಯಾತಾಸು । ಸುಪಾಂಸುಲುಗಿತಿ ವಿಭಕ್ತಿಲೋಪಃ । ಶಿವಾಸು ಶೋಭಾನಾಸು ಮಾತೃಷು ಮೀಯಂತೇ ಜ್ಞಾಯಂತೇ ಅರ್ಥಾಃ ಆಭ್ಯ ಇತಿ ವ್ಯುತ್ಪತ್ತ್ಯಾ ಮಾತೃಶಬ್ದವಾಚ್ಯಾಸು ವಿದ್ಯಾಸು ಆಸಮಂತಾತ್ ಶಯೇ ಶೇತಿ ಸರ್ವತ್ರ ವಿಮರ್ಶಂ ಕೃತ್ವಾ ತಿಷ್ಠತೀತ್ಯರ್ಥಃ । ಶೇತ ಇತಿ ವಕ್ತವ್ಯೇ ಶಯ ಇತಿ ವಚನಂ ಲೌಕಿಕಾನಾಂ ನಿದ್ರಾವತ್ ನಿದ್ರಾಭಾವಸೂಚನಾರ್ಥಮ್ । ಅತ ಏವ ಪ್ರಾಕ್ ನಿತ್ಯ ಇತಿ ವಿಶೇಷಣಂ ಚೋಕ್ತಮ್ । ಸಪ್ತ ಪರತತ್ವಾಪರತತ್ವೇ । ತಯೋಃ ಪಂಚಭೇದಾಶ್ಚೇತಿ ಸಪ್ತಾರ್ಥಾಃ ಯಥಾ ಭವಂತಿ ತಥಾ ಶೇತ ಇತಿ ವಾ । ಇದಮಪಿ ಭಿಯೋಭೃತಾಃ ಮಾಃ ಯೇನ ಸ ಇತಿ ವ್ಯುತ್ಪತ್ತ್ಯಾ ಭೀಮಶಬ್ದಾರ್ಥಜ್ಞಾಪನಾರ್ಥಮ್ । ಭೃಞ್‌ಭರಣ ಇತಿ ಧಾತೋಃ ಕರ್ಮಣ್ಯೋಣಾದಿಕಡೀಪ್ರತ್ಯಯೇ ಕೃತೇ ಭೀತಿ ರೂಪಂ ಸಿದ್ಧ್ಯತಿ ।

ವೃಷಭಸ್ಯ ಶ್ರೇಷ್ಠಸ್ಯ ಅಸ್ಯ ಚ ವಾಯೋಃ ತೃತೀಯಂ ವಪುಃ ಯೋಷಣಃ ಯೋಷಿತಃ ವೇದಾಭಿಮಾನಿನ್ಯಃ ಶ್ರೀಭೂದುರ್ಗಾತ್ಮಿಕಾಃ ಶ್ರೀನಾರಾಯಣಪತ್ನ್ಯಃ ದೋಹಸೇ ಜ್ಞಾನದೋಹಾಯ ದಶಪ್ರಮತಿಂ ಪೂರ್ಣಪ್ರಜ್ಞನಾಮಕಂ ಅನಯಂತ ಅಜನಯಂತ । ಅಥವಾ ಅಸ್ಯ ವಾಯೋಃ ದಶಪ್ರಮತಿಸಂಜ್ಞಿತಂ ದ್ವಿತೀಯಂ ವಪುಃ ವೃಷಭಸ್ಯ ವೃಷಂ ಧರ್ಮಂ ಬಿಭರ್ತೀತಿ ವೃಷಭಃ ಸಕಲವೈಷ್ಣವಧರ್ಮಾಧಾರಭೂತೋ ನಾರಾಯಣಃ । ತಸ್ಯ ದೋಹಸೇ ಉಪದೇಶಾದಿನಾ ಸಕಲಸಜ್ಜನಮನಸ್ಸು ಪ್ರಕರ್ಷೇಣ ಪೂರಣಾಯ ವೈಷ್ಣವಧರ್ಮಂ ವಿಷ್ಣುಂ ಚ ಲೋಕೇ ಸಮ್ಯಕ್ ಪ್ರತಿಪಾದಯಿತುಮಿತ್ಯರ್ಥಃ । ದುಹ ಪ್ರಪೂರಣ ಇತಿ ಧಾತೋಃ । ಯೋಷಿತಃ ಜನಯಂತೇತಿ ಯೋಜನಾ । ಅನೇನಾಪಿ ಆನಂದಸ್ಯ ಭಗವತಃ ಜ್ಞಾನಪ್ರದಂ ತೀರ್ಥಂ ಶಾಸ್ತ್ರಂ ಯಸ್ಯೇತಿ ಪೂರ್ಣಾ ಪ್ರಜ್ಞಾ ಯಸ್ಯೇತಿ ಚ ವ್ಯುತ್ಪತ್ತ್ಯಾ ಆನಂದತೀರ್ಥಪೂರ್ಣಪ್ರಜ್ಞಾಖ್ಯನಾಮದ್ವಯಾರ್ಥಃ ಸೂಚಿತೋ ಭವತಿ । ತೃತೀಯಮಿತ್ಯನೇನ ಪ್ರಾಗುಕ್ತರೀತ್ಯಾ ಆಶ್ರಮದ್ವಯಪ್ರವರ್ತಕರೂಪದ್ವಯಾತ್ ತೃತೀಯತಯಾ ಯತೀಶ್ವರನಾಮಾರ್ಥೋऽಪಿ ಸೂಚಿತೋ ಭವತಿ । ಬುಧ್ನಾತ್ ಜ್ಞಾನರೂಪಾತ್ । ಮೂಲಂ ಬುಧ್ನೋऽಘ್ನಿನಾಮಕ ಇತ್ಯಭಿಧಾನಾತ್ ಸಕಲವೈಷ್ಣವಾನಾಂ ಮೂಲಾಧಾರಾಭೂತಾದ್ವಾ ಯತ್ ಯಸ್ಮಾನ್ಮಧ್ವಾಭಿಧಾತ್ತೃತೀಯರೂಪಾತ್ ಈಮ್ ಇತ್ಥಂ ಜಗತಿ ಪ್ರವರ್ತಮಾನ- ಮಧ್ವಸಿದ್ಧಾಂತರೀತ್ಯಾ ಈಶಾನಾಸಃ ಈಶಾನಾದ್ಯಾಃ ಸೂರಯಃ ವಿದ್ವಾಂಸಃ ಮಹಿಷಸ್ಯ ಸರ್ವೋತ್ತಮಸ್ಯ ನಾರಾಯಣಸ್ಯ ವರ್ಪಸಃ ವರಣೀಯತ್ವಾತ್ ಪಾಲಕತ್ವಾದ್ವರ್ಪಾಃ ಸಂಜ್ಞಾನ್ ಗುಣಾನ್ ಅವತಾರಾನ್ವಾ ನಿರಕ್ರಂತ ಕ್ರಂದಿರ್ಗತಿಶೋಷಣಯೋರಿತಿ ಧಾತೋಃ ಗತ್ಯರ್ಥಾನಾಂ ಚ ಜ್ಞಾನಾರ್ಥತ್ವಾನ್ನಿರಜಾನಂತೇತ್ಯರ್ಥಃ ।

ಅಥವಾ ಮಹಿಷಸ್ಯ ಶ್ರೇಷ್ಠಸ್ಯ ವಾಯೋಃ ವರ್ಪಸಃ ಗುರುತಯಾ ವರಣೀಯಾತ್‌ಮಾನದಾನೇನ ಪಾಲಕಾಚ್ಚ ಬುಧ್ನಾತ್ ಯಸ್ಮಾತ್ ತೃತೀಯರೂಪಾತ್ ಈಶಾನಾಸಃ ಸೂರಯಃ ಯಥಾಪೂರ್ವಂ ಪ್ರಾಜಾಯಂತ ಇತಿ ಸ್ಮೃತೇಃ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾ ಇತಿ

ಶ್ರುತೇಶ್ಚ ಈಮ್ ಇತ್ಥಂ ಪೂರ್ವಮುಕ್ತದೇವವತ್ ನಿರಕ್ರಂತ ಸಂಸಾರಾನ್ನಿಷ್ಕ್ರಾಂತ ಅಭೂವನ್ನಿತಿ ಯೋಜನಾ । ಶ್ರುತಿದ್ವಯೇನಾಪಿ ಜ್ಞಾನದಾತೇತಿ ನಾಮಾರ್ಥಃ ಸೂಚಿತೋ ಭವತಿ ।

ಯತ್ ಯಸ್ಮಾತ್ ಕಾರಣಾತ್ ಪ್ರದಿವಃ ಪ್ರಕೃಷ್ಟಾ ದ್ಯೌರ್ಯಸ್ಯೇತಿ ವ್ಯುತ್ಪತ್ತ್ಯಾ ಪ್ರಕೃಷ್ಟಜ್ಞಾನಪ್ರಕಾಶವಾನ್ । ದಿವು ಕ್ರೀಡಯಾಮಿತಿ ಧಾತೋಃ ಭಾವಾರ್ಥೇ ಕಪ್ರತ್ಯಯೇ ದಿವ ಇತಿ ರೂಪಂ ಸಿದ್ಧ್ಯತಿ। ಮಧ್ವೋ ಮಾತರಿಶ್ವಾ ಮಧ್ವಾಖ್ಯೋ ವಾಯುಃ ಅನು ಜನ್ಮಾನಂತರಮೇವ ಪ್ರದಿವಃ ಪ್ರಕೃಷ್ಟಪ್ರಕಾಶಾನ್ ಈಶಾನಾದಿದೇವಾನ್ ಅನುಸೃತ್ಯ ವಾ ಶ್ರುತಿಬ್ರಹ್ಮ-ಮೀಮಾಂಸಾದೀನನುಸೃತ್ಯ ವಾ ಗುಹಾಸಂತಂ ಹೃದಯಗುಹಾಯಾಂ ವಿದ್ಯಮಾನಂ ನಾರಾಯಣಂ ಆಥವೇ ಆಸಮಂತಾತ್ತತ್ತ್ವೇ ಮಥಾಯತಿ ಮಥಯತಿ । ವೇದಶಾಸ್ತ್ರವಿಚಾ-ರಾಖ್ಯಮಥನಂ ಕೃತ್ವಾ ಪ್ರಕಾಶಯತೀತ್ಯರ್ಥಃ। ತಸ್ಮಾತ್ಕಾರಣಾತ್ ಯಸ್ಮಾನ್ಮಧ್ವಾತ್ ಈಶನಾಸಃ ಸೂರಯಃ ವರ್ಪಸೋ ನಿರಕ್ರಂತ । ತದ್ವಪುಃ ತೃತೀಯಮಿತ್ಯಾದಿ ವಾಕ್ಯೇನ ಸಂಬಂಧಃ । ಅಸ್ಯಾಂ ತು ಶ್ರುತೌ ಸ್ಪಷ್ಟಂ ಮಧ್ವೇತಿ ನಾಮ್ನಃ ಮಾತಾರಿಶ್ವನಾಮ್ನಾ ಸಾಮಾನಾಧಿಕರಣ್ಯೋಕ್ತೇಃ ತೃತೀಯರೂಪಸ್ಯ ಮಧ್ವ ಇತ್ಯಾಖ್ಯಾ ವಾಯುರೂಪತಾ ಚ ಸ್ಪಷ್ಟೀಕೃತಾ ।

ಯತ್ ಯಸ್ಮಾತ್ ಅಯಂ ಮಧ್ವಃ ಪಿತುಃ ಸ್ವಮೂಲರೂಪಜನಕಾತ್ ಸರ್ವೋತ್ತಮಾತ್ ನಾರಾಯಣಾತ್ ಪಿತುಃ ಗುರುತಯಾ ವಾ ಸ್ವಪಿತೃಭೂತಾತ್ಪರಮಾತ್ ಪರಾ ಅತಿಶಯಿತಾ ಮಾ ವಿದ್ಯಾ ಯಸ್ಯೇತಿ ವ್ಯುತ್ಪತ್ತ್ಯಾ ಪರಮಾದ್ಯಾಸಾದ್ವಾ ಪರಿ ಪರಿತಃ ಪ್ರಣೀಯತೇ ಪ್ರಕರ್ಷಣೇನ ಪ್ರೇರಯಿತ್ವಾ ನೀಯತೇ ಇದಂ ಕಾರ್ಯಂ ಕರ್ತುಂ ಅತ್ರ ಗಚ್ಛೇತಿ ನಿಯಮ್ಯತೇ । ಭಗವತ್ಸಂಕಲ್ಪನುಸಾರೇಣ ತತ್ಪ್ರೇರಣಾಯೈವ ಸರ್ವತ್ರ ಗಚ್ಛತಿ। ನ ತು ದುರ್ದರ್ಶನಾಚಾರ್ಯವತ್ ಸ್ವೇಚ್ಛಾಚಾರಿ ಸ್ವಪಾಪಚಾರೀ ಚೇತ್ಯರ್ಥಃ। ತತ್ ತಸ್ಮಾತ್ಕಾರಣಾತ್ ವಿರುದ್ಧಃ ವಿಃ ವಿಶೇಷೇಣ ರುಹತೀತಿ ವ್ಯುತ್ಪತ್ತ್ಯಾ ವೀರುಚ್ಛಬ್ದವಾಚ್ಯಲತಾವತ್ ವಾರಂ ವಾರಮುತ್ಪದ್ಯಮಾನತಯಾ ತದ್ವತ್ ವೇದಾಖ್ಯಪಾದಪವಿಲಂಬಿತಯಾ ಚ ಲತಾಶಬ್ದೋಪಲಕ್ಷಿತಾಃ ಪೃಕ್ಷುಧಃ ಪ್ರಚ್ಛ ಜ್ಞೀಪ್ಸಾಯಾ-ಮಿತ್ಯತ್ರೋಕ್ತಪ್ರಚ್ಛಧಾತೋಃ ಛಕಾರಸ್ಯ ವರ್ಣಾಂತರಾದೇಶೇನ ಪ್ರಶ್ನಶಬ್ದವತ್ ಕ್ಷುದಾಖ್ಯ-ವರ್ಣವಿಕಾರೇ ಸತಿ ಪೃಕ್ಷುಚ್ಛಬ್ದವಾಚ್ಯಾನ್ ಪ್ರತಿವಾದಿಕೃತಪ್ರಶ್ನಾನ್ । ಪ್ರಶ್ನಾನಾಂ ಪ್ರಾಮಾಣಿಕ-ತ್ವಾಭಾವಸೂಚನಾಯ ಋಕಾರಸ್ಯ ಗುಣಾಭಾವಶ್ಛಾಂದಸಃ। ದಂಸು ದಂತೇಷು ಆರೋಹತಿ ಆರೋಪಯತಿ । ಯಥಾ ಲತಾಃ ದಂತೈಃ ಚೂರ್ಣೀಕುರ್ವಂತಿ ತಥಾ ಪ್ರತಿವಾದಿಕೃತಪ್ರಶ್ನಾನ್ ದಂತಾಂತರ್ವರ್ತಿವಾಗ್ಗುಂಭೈಶ್ಚೂರ್ಣೀಕರೋತೀತ್ಯರ್ಥಃ । ಅತ ಏವ ಮುಖ್ಯತೋ ದಂತತ್ವಾಭಾವಸೂಚನಾಯ ದತ್ಸ್ವಿತಿ ವಕ್ತವ್ಯೇ ಪುಂಸ್ವಿತಿವತ್ ದಂಸ್ವಿತ್ಯುಕ್ತಮ್ । ಪುಮಾನಿತಿವತ್ ದೋ ಅವಖಂಡನ ಇತಿ ಧಾತೋಃ ದಂಶದಂಶನ ಇತಿ ವಾ ಧಾತೋಃ ದಾನಿತಿ ಸಕಾರಂತೋ ವಾ ಶಬ್ದೋ ದ್ರಷ್ಟವ್ಯಃ । ಲೃತುಲಸಾನಾಂ ದಂತಾ ಇತಿ ವಚನಾತ್ತನ್ವೇತಿ ದಾಂತಾಭ್ಯಾಂ ವರ್ಣಾಭ್ಯಾಮೇವ ಪ್ರಶ್ನಪರಿಹಾರಸ್ಯ ಪ್ರಾಗಾರಂಭನಿಯಮಾದ್ದಂಸ್ವಿತ್ಯುಕ್ತಮ್ । ಅಪ್ರಮಾಣಿಕಶಂಕಾಯಾಃ ಸತ್ಯಮಿತಿ ಪರಿಹಾರೋ ನಾಸ್ತ್ಯೇವ । ಕ್ವಚಿತ್ಪ್ರಾಮಾಣಿಕಾ-

ಪ್ರಾಮಾಣಿಕಶಂಕಾಯಾಃ ಸತ್ಯಮಿತಿ ಪರಿಹಾರಾರಂಭೇಽಪಿ ದಾಂತಾಕ್ಷರಬಾಹುಲ್ಯೇನೈವ ತತ್ರಾಪಿ ಪ್ರರಿಹಾರಾರಂಭಾತ್ ಯಕಾರಾದೇರಪ್ರಾಧಾನ್ಯಾದ್ದಂಸ್ವಿತ್ಯೇವೋಕ್ತಮ್ ।

ಅಥವಾ ವೀರುಧಃ ವಿಃ ಭಾಗವದ್ವಿರೋಧಿತಯಾ ಉತ್ಪನ್ನಸ್ಯ ಪೃಕ್ಷುಧಃ ಸ್ವಪ್ರತನಾಕ್ಷೋಭಕಾರಿಣಃ ಕಲ್ಯಾದಿದೈತ್ಯಸಮೂಹಸ್ಯ ದಂಸು ದಂತೇಷು ಆರೋಹತಿ ಸ್ವಚರಣೇನಾರೋಹತಿ ಆರೋಹಣಂ ಕರೋತಿ । ತಾನ್ ಪರಾಭೂಯ ತೇಷಾಂ ದಂತಭಂಗಂ ಕರೋತೀತ್ಯರ್ಥಃ । ಪರಾಜಯಸ್ಯ ದಂತಭಂಗ ಇತಿ ಲೋಕೇ ರೂಢೇಃ । ಭೀಮಸೇನೇನ ದುಶ್ಯಾಸನಾದೇಃ ಸಾಕ್ಷಾಂದ್ದಂತಭಂಗಸ್ಯಾಪಿ ಕೃತತ್ವಾದ್ದಂಸ್ವಿತ್ಯುಕ್ತಮ್ । ತಥಾ ಚ ಶ್ರುತಿಃ ಅಧಃ ಸಪತ್ನಾ ಮೇ ಪದೋರಿಮೇ ಸರ್ವೇ ಅಭೀಷ್ಠಿತಾ ಇತಿ, ತ್ವಯಾಭಿಗುಪ್ತಾ ವಿಚರಂತಿ ನಿರ್ಭಯಾ ವಿನಾಯಕಾನೀಕಪಮೂರ್ಧಸು ಪ್ರಭೋ ಇತಿ ದೇವನಾಂ ಸ್ತುತಿರೂಪಸ್ಮೃತಿಶ್ಚ ।

ಯತ್ ಯಸ್ಮಾತ್ ಉಭೌ ಲಕ್ಷ್ಮೀನಾರಾಯಣೌ ಅಸ್ಯ ಮಧ್ವಸ್ಯ ಸ್ವಾಮಿತ್ವೇನ ಸಂಬಂಧಿನೌ । ಯದ್ಯಾಸ್ಮಾತ್ ಜನುಷಂಜನ್ಮ ಇನ್ವತಃ ಪ್ರೇರಯತಃ । ಇಣ್‌ಗತಾವಿತಿಧಾತೋಃ ಇನ್ವತೀತಿ ವೈದಿಕರೂಪಮ್ । ಆತ್ ಅಸ್ಮಾತ್ ಕಾರಣಾತ್ ಅಕಾರವಾಚ್ಯಪ್ರೇರಕಪರಮಾತ್ಮಬಲಾದ್ವಾ ಯವಿಷ್ಠಃ ಸೂಕ್ಷ್ಮರೂಪೋ ಮಧ್ವಃ ಘೃಣಾ ಘೃಣವಾನ್ ಯತಿರೂಪಧಾರಿತ್ವಾತ್ ದಯಯೈವ ಭೀಮಾದಿವತ್ ಶತ್ರುಷು ಹಿಂಸಾದಿಕರ್ಮಕುರ್ವನ್ನಿತ್ಯರ್ಥಃ । ಲೋಕಮರ್ಯಾದಾ-ರಕ್ಷಣಾರ್ಥಮೇವ ಸಾ ಘೃಣಾ । ನ ತು ಸ್ವಸ್ಯ ಸಹಜೇತಿ ಸೂಚನಾಯ ಘೃಣೇತಿ ನೋಕ್ತಮ್ । ಶುಚಿಃ ಪಾರಮಹಂಸ್ಯಧರ್ಮಾಚರಣಾತ್ ಪರಮಪಾವನಶ್ಚಾ ಭವತ್ । ಆತ್ ಅಕಾರ-ವಾಚ್ಯಪರಮಾತ್ಮಪ್ರೇರಣಾದೇವ । ಇತ್ ಇತ್ಥಂ ಕಲ್ಪೇ ಕಲ್ಪೇ ಮಾತೃಃ ಜನನೀಃ ಆವಿಶತ್ । ಆವಿ-ಶಾದಿತ್ಯನೇನ ಮಾತುರುದರಸ್ಥಶುಕ್ಲಶೋಣಿತಾತ್ಮಕದೇಹಪರಿಣಾಮಕಾಲೇ ಸ್ವಯಮಾವಿಶತ್ । ನ ತು ಪೂರ್ವಮಾರಭ್ಯ ಗರ್ಭಾವಾಸದುಃಖಮನ್ವಭೂದಿತಿ ಸೂಚಯತಿ । ಅತ ಏವ ಯಾಸು ಮಾತೃಷು ಆಶುಚಿಃ ಆಸಮಂತಾತ್ ಶುಚಿಃ ಪಾಪಾದಿಕರ್ಮಲೇಪರಹಿತ ಇತ್ಯರ್ಥಃ । ಅಹಿಂಸ್ಯಮಾನಃ ಗರ್ಭೇ ವಾ ಗರ್ಭಜ್ಜನ್ಮಾಂತರಂ ವಾ ಕಲ್ಯಾದಿಭಿರಹಿಂಸ್ಯಮಾನಃ । ಉರ್ವಿಯಾ ಉರ್ವ್ಯಾ ಉರುತರಸ್ವಶಕ್ತ್ಯಾ ವಿವಾವೃಧೇ ವಿಶೇಷೇಣ ವವೃಧೇ । ತದ್ವರ್ಧನಂ, ದೇವಾನಾಂ ತು ಶರಚ್ಛತಮಿತಿ ವಾಯುಪುರಾಣವಚನಾತ್ ದೇವವರ್ಷಶತಪರ್ಯಂತಮಿತಿ ಸೂಚನಾಯ ದೀರ್ಘಃ ।

ಯತ್ ಯಸ್ಮಾತ್ ಅಯಂ ಮಧ್ವಃ ಸನಾಜುವಃ ಸನಾತ್ ಸದಾತನತ್ವೇನ ಸನಾತ್ಪುರುಷಸಂಜ್ಞಿತಂ ನಾರಾಯಣಂ ಜುಷಂತೇ ಗುಣಸ್ತವನೇನ ಸೇವಂತ ಇತಿ ಸನಾಜುಷ ಇತ್ಯರ್ಥಃ । ಜುಷ ಇತ್ಯಸ್ಮಿನ್ನರ್ಥೇ ಜುವ ಇತಿ ವೈದಿಕಪದಮ್ । ಪೂರ್ವಾಃಪಪ್ತವಿದ್ಯಾಸು ಪ್ರಥಮಂ ವಿದ್ಯಮಾನಾ ಋಗ್ಯಜುಃ ಸಾಮಾಥರ್ವಾಖ್ಯಾ ವಿದ್ಯಾಃ ಅನು ತದುಪಕ್ರಮೋಪಸಂಹಾರಾದೀನನುಸೃತ್ಯ ಆರುಹತ್ ಮನಸಾ ಆರುಹ್ಯ ಅಭಿಮಾನಿತಯಾ ಆರುಹ್ಯ ವಾ ತಿಷ್ಠತಿ । ಯಥಾ ಅಶ್ವಾರೂಢಪುರುಷಃ ತಮಶ್ವಂ ಹಂತುಂ ನ ಮುಂಚಂತಿ ತಥಾ ವೇದಾಭಿಮಾನಿತ್ವಾದಯಮಪಿ

ವೇದಮನ್ಯಥೀಕರ್ತುಂ ನ ಮುಂಚತೀತಿ ಸೂಚನಾಯ ಅರುಹದಿತ್ಯುಕ್ತಮ್ । ತಸ್ಮಾತ್ ಕಾರಣಾತ್ ನಿನವ್ಯಸೀಷು ನಿತರಾಂ ನವ್ಯಾಸು ಮೂಲರೂಪಾದ್ವ್ಯಾಸಾದಿರೂಪಾಚ್ಚ ಭಗವತ ಉತ್ಪನ್ನಾಸ್ವಿತ್ಯರ್ಥಃ ।

ವೇದಾನಾಮಪಿ ಸೃಷ್ಟಿಕಾಲ ಏವ ಪ್ರಾದುರ್ಭೂತತ್ವೇನ ನವಸಮತ್ವಸದ್ಭಾವೇಽಪಿ ಕೃತತ್ವೇನ ಸಾಕ್ಷಾನ್ನವ್ಯತ್ವ ಸೂಚನಾಯಾನೀತ್ಯುಪಸರ್ಗಃ । ಭಗವದುತ್ಪ್ರೇಕ್ಷಿತನೂತನಯುಕ್ತ್ಯುಪೇತಾಸು ವಾ ಅವರಾಸು ವೇದವಿದ್ಯಾತಃ ಅನಂತರಂ ವಿದ್ಯಮಾನಾಸು ಪುರಾಣಪಂಚರಾತ್ರೇಷು ವಾ ಪುರಾಣಪಂಚರಾತ್ರಮೂಲರಾಮಾಯಣೇಷು ವಾ ಧಾವತೇ ಅನುಕೂಲವರಬಲಾತ್ ಸಾಕ್ಷಾದ್ಭಗವದುಪದೇಶಬಲಾಚ್ಚ ತ್ವರಯಾ ಅವಗಾಹತೇ । ಕ್ರಮಮಾತ್ರವ್ಯತ್ಯಾಸಸದ್ಭಾವೇಽಪಿ ಶಬ್ದತೋಽರ್ಥತಶ್ಚಾನಾದಿಷ್ವೇಷು ಪುರಾಣಾದಿಷು ಸ್ವಕಪೋಲಕಲ್ಪಿತತಯಾ ಕಾಲಿದಾಸಕೃತ-ಮೇಘಸಂದೇಶಾದಿಷ್ವಿವ ಶಬ್ದತೋಽರ್ಥಶ್ಚ ನವ್ಯತ್ವಾಭಾವ ಸೂಚನಾಯ ನವ್ಯಸೀಷ್ವಿತಿ ವಿಲಕ್ಷಣಪ್ರಯೋಗಃ । ಅನ್ಯಥಾ ನವೀಯಸೀಷ್ವಿತ್ಯೇವ ಶ್ರುತಿರವಕ್ಷ್ಯತ್ । ಅಪಿ ಚ ಪ್ರಥಮಂ ವಪುರಿತ್ಯನೇನ ಹನುಮತಃ ವಾಯುಪುತ್ರನಾಮ, ಋತಸ್ಯ ಉಪಹ್ವರತ ಇತ್ಯನೇನ ರಾಮೇಷ್ಟನಾಮ, ಸಾಧತ ಇತ್ಯನೇನ ಮಹಾಬಲಃ ದಶಗ್ರೀವಸ್ಯ ದರ್ಪಹೇತಿ ನಾಮ, ಧೇನಾ ಅನಯಂತೇತ್ಯನೇನ ಅಮಿತವಿಕ್ರಮಃ ಉದಧಿಕ್ರಮಣಃ ಸೀತಾಶೋಕವಿನಾಶನ ಇತಿ ನಾಮ, ಚ ಹನುಮಚ್ಛ್ರುತ್ಯಾ ಸೂಚಿತಮ್ । ಹನುಮನ್ನಾಮ ತು ಸರ್ವತ್ರ ಸೂಚಿತಮಿತ್ಯುಕ್ತಮ್ । ಭೀಮಶ್ರುತ್ಯಾ ಚ ದ್ವಿತೀಯಂ ವಪುರಿತ್ಯನೇನ ಮಾರುತಿರಿತಿ ನಾಮ, ಪೃಕ್ಷ ಇತ್ಯನೇನ ಮಹಾಬಲಃ ಗದಾಪಾಣಿಃ ದುಃಶಾಸನವಿನಾಶನಃ ಜರಾಸಂಧಾಂತಕೃತ್ ವೀರ ಇತಿ ನಾಮ, ಪಿತುಮಾನಿತ್ಯನೇನ ವೃಕೋ ನಾಮ ಮಹಾವಹ್ನಿಃ ಕಾಯೇನ ದಶಯೋಜನ ಇತಿ ವಚನಾತ್ ವೃಕಾಖ್ಯಾಗ್ನಿಸನ್ನಿಹಿತೋದರತ್ವೇನ ವೃಕೋದರನಾಮ, ಮಾತೃಷು ಆವಿಶಾದಿತ್ಯನೇನ ಕೃಷ್ಣಾದಯಿತ ಇತಿ ನಾಮಸೂಚಿತಮ್ । ಭೀಮನಾಮ ತು ಸರ್ವತ್ರಸೂಚಿತಮಿತ್ಯುಕ್ತಮ್ । ಮಧ್ವಶ್ರುತ್ಯಾ ತೃತೀಯಮಸ್ಯೇತಿ ವಾಕ್ಯೇ ಆನಂದತೀರ್ಥಃ ಪೂರ್ಣಪ್ರಜ್ಞಃ ಯತೀಶ್ವರ ಇತಿ ನಾಮ ಸೂಚಿತಮ್ । ನಿರ್ಯದೀಮಿತಿ ಶ್ರುತ್ಯಾ ಜ್ಞಾನದಾತಾ ವೈಷ್ಣವಾಚಾರ್ಯ ಇತಿ ನಾಮ । ಯದೀಮನ್ವಿತಿ ಶ್ರುತ್ಯಾ ಮಧ್ವನಾಮ ತತ್ವಜ್ಞನಾಮ ಚ, ಪ್ರಯತ್ಚಿತುರಿತಿ ಶ್ರುತ್ಯಾ ವ್ಯಾಸಶಿಷ್ಯಃ ಧ್ವಸ್ತದುರಾಗಮಃ ಜಿತವಾದೀತಿನಾಮ । ಉಭಾ ಯದಸ್ಯೇತಿ ಶ್ರುತೌ ಶುಚಿಪದೇನ ಜಿತೇಂದ್ರಿಯನಾಮ ಚ ಸೂಚಿತಮ್ । ಅತೋ ಹನು-ಮದಾದಿಪ್ರತಿಪಾದಕತ್ವಮಸ್ಯ ವರ್ಗಸ್ಯ ಲೋಕಪ್ರವಾದತೋಽಪಿ ಸಿದ್ಧಮಿತ್ಯಪಿ ದ್ರಷ್ಟವ್ಯಮ್ । ವರ್ಗಾರ್ಥಃ ಸಮಾಪ್ತಃ ॥ ೭೧೨ ॥

**ವಿವರಣೆ—** ಯುಕ್ತಿಮಲ್ಲಿಕಾ ರೂಪವಾದ ನನ್ನ ಈ ಗ್ರಂಥವು ವೇದಮಂತ್ರದಲ್ಲಿರುವ ಮತ್ತು ಪೂರ್ವಾಚಾರ್ಯರ ವಚನಗಳಲ್ಲಿರುವ ಯುಕ್ತಿಗಳನ್ನು ತೆಗೆದು ಸ್ಪಷ್ಟವಾಗಿ ತೋರಿಸುತ್ತದೆ ಎಂದು ಅಭಿಪ್ರಾಯ.

ಅನ್ನಸೂಕ್ತದಲ್ಲಿರುವ ಈ ಮಧ್ಯಮ ವರ್ಗವು ಮುಖ್ಯಪ್ರಾಣ ಪರವಾಗಿ ಹೇಗೆ ಆಗುತ್ತದೆ ಎಂಬ ಪ್ರಶ್ನೆಗೆ ಅನ್ನವೆಲ್ಲವೂ ಪ್ರಾಣಾದಿ ಪಂಚ ಆಹುತಿಗಳಿಂದ ಕೂಡಿರುವುದರಿಂದ

ಪ್ರಾಣಾದಿಗಳು ಮುಖ್ಯಪ್ರಾಣನ ರೂಪವಾದುದರಿಂದ ಅನ್ನದ ಸ್ತುತಿಯು ಮುಖ್ಯಪ್ರಾಣನ ಸ್ತುತಿಯಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ ಎಂದು ಉತ್ತರ. ಆದ್ದರಿಂದ ವರ್ಗಾರ್ಥವು ಈ ರೀತಿಯಾಗುತ್ತದೆ. ಸಹಸಃ ಎಂದರೆ ಸಹಸ್ ಶಬ್ದವಾಚ್ಯರಾದ ಎಂದು ಅರ್ಥ. ಸಹಸ್ ಶಬ್ದಕ್ಕೆ ವೇಗ ಎಂದೂ, ಸಹನೆ ಎಂದೂ ಅರ್ಥವಿದೆ. ವಾಯುದೇವರು ವೇಗವುಳ್ಳವರಾದ್ದರಿಂದಲೂ ಮತ್ತು ಬ್ರಹ್ಮಾಂಡದ ಒಳಗೆ ಘನೋದಕದ ಮಧ್ಯದಲ್ಲಿ ವಾಯುಕೂರ್ಮರೂಪದಿಂದ ಜಗದ್ಧಾರಕನಾದ ಶೇಷನಿಗೆ ಆಧಾರನಾಗಿ ಬಹಳವಾದ ಸಹನೆಯನ್ನು ಹೊಂದಿರುವುದರಿಂದಲೂ ಸಹಸ್ ಶಬ್ದವಾಚ್ಯರಾಗುತ್ತಾರೆ. ಅಂತಹ ದೇವಸ್ಯ ಎಂದರೆ ಮುಖ್ಯಪ್ರಾಣನ ಎಂದು ಅರ್ಥ. 'ಪ್ರಾಣಾದಭೂತ್ ಯಸ್ಯ ಚರಾಚರಾಣಾಮ್ ಪ್ರಾಣಃ ಸಹೋ ಬಲಂ ಓಜಶ್ಚ ವಾಯುಃ' ಎಂಬ ಭಾಗವತದ ವಾಕ್ಯದಲ್ಲಿ ಮುಖ್ಯಪ್ರಾಣನಿಗೆ ಸಹಃಶಬ್ದವಾಚ್ಯತ್ವ, ಬಲಶಬ್ದ- ವಾಚ್ಯತ್ವವನ್ನು ಹೇಳಿರುವುದರಿಂದಲೂ ಸಹಃ ಶಬ್ದಕ್ಕೆ ಮುಖ್ಯಪ್ರಾಣನೆಂದು ಅರ್ಥ. ಆದ್ದರಿಂದಲೇ ಇಂತಹ ಅನುಶಾಸನದ ಬಲದಿಂದಲೂ ಮತ್ತು ಜಗದ್ಧಾರಣರೂಪವಾದ ಕಾರ್ಯದ ಬಲದಿಂದಲೂ ಬಟ್ ಎಂದರೆ ಬಲಾತ್ಕಾರವಾದುದು ಎಂದು ಅರ್ಥವಾಗುತ್ತದೆ. ದರ್ಶತಂ ಎಂದರೆ ದರ್ಶನ ತತಂ ಜ್ಞಾನದಿಂದ ಪೂರ್ಣರಾದವರು ಎಂದು ಅರ್ಥ. ಯತಃ= ಈ ಬಲ ಜ್ಞಾನಾತ್ಮಕವಾದ ರೂಪವು ಯಾವ ವಿಷ್ಣುವಿನಿಂದ, ಸ್ವಯಂ ಅಜನಿ= ತಾವೇ ಹುಟ್ಟಿದರೋ ಅಂತಹ, ಭರ್ಗಃ= ಎಂದರೆ ವಿಷ್ಣುವಿನ ರೂಪವನ್ನು ಸದಾ ತಮ್ಮ ಹೃದಯಕಮಲದಲ್ಲಿ ಧರಿಸುವುದರಿಂದ ಮತ್ತು ಮನಸ್ಸಿನಿಂದ ಯಾವಾಗಲೂ ಆ ರೂಪವನ್ನು ತಿಳಿಯುವುದರಿಂದ ಭರ್ಗಶಬ್ದವಾಚ್ಯರಾದವರು ಮುಖ್ಯಪ್ರಾಣರ ಮೂಲರೂಪ ಎಂದು ಅರ್ಥ. ಅಂತಹ ವಾಯುದೇವರು ಭಗವಂತನ ಆಜ್ಞೆಯಿಂದ ತಾವೇ ಅವತರಿಸಿದರು ಎಂದು ಅರ್ಥವನ್ನು ತೆಗೆದುಕೊಳ್ಳಬೇಕು. ಆಜ್ಞಾಮನ್ಯೈರಧಾರ್ಯಾಂ ಎಂಬ ವಾಯುಸ್ತುತಿ ವಚನವು ಈ ಅರ್ಥವನ್ನು ಪುಷ್ಟೀಕರಿಸುತ್ತದೆ. ಇತ್ಥಾ ಎಂದರೆ ಇತ್ಥಂ ಈ ರೀತಿಯಾಗಿ ಎಂದರೆ ಮುಂದೆ ಹೇಳುವ ಪ್ರಕಾರದಿಂದ ಎಂದು ಅರ್ಥ. ಭಾರತ ರಾಮಾಯಣಾದಿಗಳಲ್ಲಿ ಹೇಳುವ ವಿಷ್ಣುವಿನ ಗುಣಕೀರ್ತನೆಯ ಪ್ರಕಾರವು ಅತಿ ದೀರ್ಘವೆಂದು ಸೂಚಿಸಲು ಇತ್ಥಾ ಎಂಬಲ್ಲಿ ದೀರ್ಘವಿದೆ. ಅಥವಾ ಇತ್ಥಾ ಎಂದರೆ ಇತ್ಥಂ ಮೂಲರೂಪದಂತೆಯೇ ಎಂದಾದರೂ ಅರ್ಥವನ್ನು ಮಾಡಬಹುದು. ವಪುಷೇ ಎಂದರೆ ಹನುಮದಾದಿ ಅವತಾರ-ಗಳಿಗೋಸ್ಕರವಾಗಿ, ಧಾಯಿ= ಇಡಲ್ಪಟ್ಟಿತು ಎಂದು ಅನ್ವಯ. ಅಥವಾ ಯತಃ ಎಂಬ ಶಬ್ದಕ್ಕೆ ಯಾವ ವಿಷ್ಣುವಿನಿಂದ ಎಂದು ಅರ್ಥವನ್ನು ಮಾಡದೆ ಯಾವ ಹನುಮದಾದಿ ಅವತಾರತ್ರಯದಿಂದ ಎಂದು ಅರ್ಥವನ್ನು ಮಾಡಿ ಯಾವ ಹನುಮದಾದಿ ಅವತಾರತ್ರಯದಿಂದ ಭರ್ಗಃ ಎಂದರೆ ಭಾರೂಪವಾದ, ರತಿರೂಪವಾದ ಮತ್ತು ರತಿ (ಜ್ಞಾನರೂಪವಾದ) ಕಾರಣದಿಂದ ಭರ್ಗಃ ಭರ್ಗಶಬ್ದವಾಚ್ಯವಾದ ಭಗವಂತನ ರೂಪವು, ಅಜನಿ= ಮೂಲರಾಮಾಯಣ ಪಂಚರಾತ್ರ ಬ್ರಹ್ಮಸೂತ್ರ ವ್ಯಾಖ್ಯಾನಾದಿಗಳಿಂದ ಅಭಿವ್ಯಕ್ತವಾಯಿತೋ, ತಸ್ಮೈ= ಅಂತಹ ವಪುಷೇ= ಅವತಾರ ತ್ರಯಕ್ಕಾಗಿ ಅಧಾಯಿ=

ಇಡಲ್ಪಟ್ಟಿತು ಎಂದೂ ಅರ್ಥವನ್ನು ಮಾಡಬಹುದು ಅಥವಾ ಯತಃ ಯಾವ ಕಾರಣದಿಂದ, ಭರ್ಗಃ ಭರ್ಗಶಬ್ದವಾಚ್ಯವಾದ ವಿಷ್ಣುವಿನ ರಾಮ-ಕೃಷ್ಣ-ವೇದವ್ಯಾಸರೂಪಗಳು, ಅಜನಿ= ಭೂಮಿಯಲ್ಲಿ ಅವತಾರಗಳನ್ನು ಮಾಡಿತೋ, ಆ ಕಾರಣದಿಂದ ಆ ರೂಪಗಳ ಸೇವೆಗಾಗಿ, ವಪುಷೇ= ಮೂರು ರೂಪಗಳಿಗಾಗಿ, ಅಧಾಯಿ= ಇಡಲ್ಪಟ್ಟಿತು ಎಂದೂ ಅರ್ಥವನ್ನು ಮಾಡಬಹುದು. ವಾಯುದೇವರ ರೂಪಗಳು ಮೂರು ಆದರೂ ಅವರಿಗೆ ಅಭೇದವನ್ನು ಸೂಚಿಸಲು ವಪುಷೇ ಎಂದು ಏಕವಚನ ಪ್ರಯೋಗವಿದೆ. ಅಥವಾ ಭರ್ಗಃಶಬ್ದವನ್ನು ಬಿಟ್ಟು ಭರ್ಗ ಎಂಬ ಅಕಾರಾಂತ ಪುಲ್ಲಿಂಗದ ರೂಪವನ್ನಾದರೂ ತೆಗೆದುಕೊಳ್ಳಬಹುದು. 'ಹರಃ ಸ್ಮರಹರೋ ಭರ್ಗಃ ಕೃತ್ತಿವಾಸಾಃ.........' ಎಂದು ಕೋಶವಿರುವುದರಿಂದ ಭರ್ಗಶಬ್ದಕ್ಕೆ ಶಿವ ಎಂದು ಅರ್ಥ. ಯಾವ ಸಹಸಃ ವಾಯುದೇವರಿಂದ, ಭರ್ಗಃ ಶಿವನು, ಅಜನಿ= ಜನಿಸಿದನೋ, ಆ ಸಹೋನಾಮಕ ವಾಯುದೇವರ, ಬಟ್= ಬಲಾತ್ಮಕವಾದ, ದರ್ಶತಂ= ಜ್ಞಾನಪೂರ್ಣವಾದ, ತತ್= ಆ ಮೂಲರೂಪವು, ಇತ್ಥಂ= ಈ ರೀತಿಯಾಗಿ, ವಪುಷೇ= ಮೂರು ಅವತಾರಗಳಿಗೋಸ್ಕರವಾಗಿ, ಅಧಾಯಿ= ವಿಷ್ಣುವಿನಿಂದ ಇಡಲ್ಪಟ್ಟಿತು ಎಂದೂ ಯೋಜನೆಯನ್ನು ಮಾಡಬಹುದು. ಅನೇಕ ವಾಯುಗಳಿದ್ದರೂ (ಮರುದ್ಗಣದಲ್ಲಿ 49 ವಾಯುಗಳಿದ್ದಾರೆ) ಅವರನ್ನು ಬಿಟ್ಟು ಇಲ್ಲಿ ಮುಖ್ಯಪ್ರಾಣನನ್ನೇ ಸ್ವೀಕರಿಸಬೇಕು ಎಂದು ಸೂಚಿಸಲು ಹೀಗೆ ವ್ಯಾಖ್ಯಾನವನ್ನು ಮಾಡಲಾಗಿದೆ. ಶಿವಜನಕತ್ವವು ಮುಖ್ಯಪ್ರಾಣನನ್ನು ಬಿಟ್ಟು ಇನ್ನೊಬ್ಬರಿಗೆ ಕೂಡುವುದಿಲ್ಲ. ಕಿಂಕರಾಃ ಶಂಕರಾದ್ಯಾಃ ಎಂಬ ವಾಯುಸ್ತುತಿ ವಚನವು ಈ ವ್ಯಾಖ್ಯಾನವನ್ನು ಸಮರ್ಥಿಸುತ್ತದೆ. ವಾಯುದೇವರು ತಮ್ಮ ಒಂದೊಂದು ರೋಮದಿಂದ ಕೋಟಿಲಿಂಗಗಳನ್ನು ಉತ್ಪಾದನೆ ಮಾಡಿದ ಕಥೆಯು ಪುರಾಣಗಳಲ್ಲಿ ಪ್ರಸಿದ್ಧವಾಗಿರುವುದರಿಂದ ಯುಕ್ತಿಯುಕ್ತವಾದ ಈ ಅರ್ಥವೂ ಸಹ ಬಹಳ ಶ್ಲಾಘ್ಯವಾಗುತ್ತದೆ. ವ ಕಾರ ಮತ್ತು ಬ ಕಾರಗಳಿಗೆ ಅಭೇದವಿರುವುದರಿಂದ ವಾಯು ಎಂಬಲ್ಲಿ ವ ಶಬ್ದದಿಂದ ಬಲವನ್ನು, ಆಯು ಶಬ್ದದಿಂದ ಜ್ಞಾನಶೀಲತೆಯನ್ನು ಹೇಳುವುದರಿಂದ ಮುಖ್ಯಪ್ರಾಣನಿಗೆ ವಾಯುಶಬ್ದವಾಚ್ಯತ್ವ ನಿಮಿತ್ತವಾದ ಬಲ ಜ್ಞಾನಗಳನ್ನು ತಿಳಿಸುವುದಕ್ಕೋಸ್ಕರ ಬಟ್ ಮತ್ತು ದರ್ಶತಂ ಎಂಬ ಈ ಎರಡು ವಿಶೇಷಣಗಳನ್ನು ಶ್ರುತಿಯು ಹೇಳುತ್ತದೆ. ಮಾತರಿಶ್ವಾ ಮಥಾಯತಿ ಎಂದು ಮುಂದೆ ಸ್ಪಷ್ಟವಾಗಿ ವಾಯುದೇವರನ್ನೇ ಹೇಳುವುದರಿಂದ ಇಲ್ಲಿಯೂ ಸಹ ದೇವಸ್ಯ ಎಂಬ ಪದವು ವಾಯುದೇವರನ್ನೇ ಹೇಳುತ್ತದೆ. ಮತ್ತು ಮಾತರಿಶ್ವಾ ಎಂಬ ಪದಕ್ಕೆ ಮಾತರಿ= ಭಗವದ್‌ಜ್ಞಾನಕ್ಕೆ ಸಾಧನವಾದ ವೇದಶಾಸ್ತ್ರಾದಿ ರೂಪವಾದ ವಾಕ್ಯಸಮುದಾಯದಲ್ಲಿ ಶ್ವಾ= ಎಂದರೆ ಗತಿ ಎಂದರೆ ಅವಗತಿ ಎಂದರೆ ಪೂರ್ಣಜ್ಞಾನವು ಯಾರಿಗೆ ಇದೆಯೋ ಅಂಥವರು ಎಂಬ ವ್ಯುತ್ಪತ್ತಿಯಿಂದ ವಾಯುವಾಚಕವಾದ ಮಾತರಿಶ್ವ ಎಂಬ ಪದದ ಅರ್ಥವನ್ನು ಸೂಚನೆ ಮಾಡಲು ದರ್ಶತಂ ಎಂದು ಹೇಳಲ್ಪಟ್ಟಿದೆ. ಟು ಓ ಶ್ವಿ ಗತಿ

ವೃದ್ಧ್ಯೋಃ.... ಎಂಬ ಧಾತುವಿನಿಂದ ನಿಷ್ಪನ್ನವಾದುದರಿಂದ ಶ್ವಾ ಶಬ್ದಕ್ಕೆ ಗತಿ, ಅವಗತಿ ಎಂದು ಅರ್ಥವಾಗುತ್ತದೆ. ಮತ್ತು ವಾಯವಾಯಾಹಿ ದರ್ಶತ ಎಂಬ ವಾಯುಸೂಕ್ತದಲ್ಲಿರುವ ಮಂತ್ರದಲ್ಲಿ ದರ್ಶತ ಎಂದು ಸ್ಪಷ್ಟವಾಗಿ ವಾಯುದೇವರಿಗೆ ವಿಶೇಷಣವನ್ನು ಕೊಟ್ಟಿರುವುದರಿಂದ ಅದೇ ದರ್ಶತ ಶಬ್ದವನ್ನು ಹೊಂದಿದ ಈ ವರ್ಗವೂ ಸಹ ವಾಯುಪರವಾದುದು ಎಂದು ಸೂಚಿಸಲ್ಪಡುತ್ತದೆ. ಮೊದಲನೆಯ ಎರಡು ಅವತಾರಗಳಿಂದ ಬಲಕಾರ್ಯವನ್ನು, ಮೂರನೆಯ ಅವತಾರದಿಂದ ಜ್ಞಾನಕಾರ್ಯವನ್ನು ಮಾಡಲು ವಾಯುದೇವರಿಗೆ ಸಾಮರ್ಥ್ಯವಿದೆ ಎಂದು ಸೂಚಿಸಲು ಕ್ರಮವಾಗಿ ಬಟ್ ಮತ್ತು ದರ್ಶತಂ ಎಂಬ ಎರಡು ವಿಶೇಷಣಗಳನ್ನು ಹೇಳಲಾಗಿದೆ. ಅವೆರಡೂ ಸಹ ಮುಖ್ಯಪ್ರಾಣನಿಗೆ ತಮ್ಮ ಹೃದಯದಲ್ಲಿ ನಿರಂತರವಾಗಿ ಹರಿಯನ್ನು ಧ್ಯಾನ ಮಾಡುವುದರಿಂದ ಉಂಟಾದುದು ಎಂದು ಸೂಚಿಸಲು ಧ್ಯಾನರೂಪವಾದ ಪ್ರಕೃಷ್ಟ-ಚೇಷ್ಟಾಕರ್ತೃತ್ವರೂಪವಾದ ಪ್ರಾಣಶಬ್ದಾರ್ಥವನ್ನು ಸೂಚಿಸಲು ಭರ್ಗಃ ಎಂಬ ಮೂರನೆಯ ವಿಶೇಷಣವು ಹೇಳಲ್ಪಟ್ಟಿದೆ. ಭರ್ಗ ಶಬ್ದವು ಭಗವತ್ಪರವಾದಾಗ ಜನನಾದಿ ರಾಹಿತ್ಯವನ್ನು ಮತ್ತು ಗಾಯತ್ರೀಮಂತ್ರ ಪ್ರತಿಪಾದ್ಯತ್ವವನ್ನು ಸೂಚಿಸುತ್ತದೆ.

ಅಥವಾ ದರ್ಶತ ಎಂಬ ಪದವು ವಾಯುದೇವರಿಗೆ ವೇದಪುರಾಣ ಪಂಚರಾತ್ರ, ಭಾರತಾದಿ ಸಚ್ಛಾಸ್ತ್ರಗಳಲ್ಲಿ ವ್ಯಾಪ್ತವಾದ ಜ್ಞಾನರೂಪವಾದ ಶಾಸ್ತ್ರಾಭ್ಯಾಸರೂಪವಾದ ಉಪಾಸನೆಯ ಕೌಶಲವನ್ನು ಹೇಳುತ್ತದೆ. ಈಶ್ವರನನ್ನು ಬಿಟ್ಟು ಉಳಿದ ವಿಷಯದಲ್ಲಿ ಆಲೋಚನೆಯನ್ನು ಮಾಡಿದರೆ ಅವರ ಜ್ಞಾನವು ಸಕಲ ವಿಷಯಗಳನ್ನೂ ವ್ಯಾಪಿಸುತ್ತದೆ ಎಂಬ ಅಂಶವನ್ನು ಸೂಚಿಸುತ್ತದೆ. ಭರ್ಗಪದವಾದರೂ ಧ್ಯಾನರೂಪ ಉಪಾಸನಾದಿ ಕೌಶಲಗಳನ್ನು ಸೂಚಿಸುತ್ತದೆ. ದರ್ಶತ ಪದದಲ್ಲಿ ದರ್ಶ ಎಂಬ ಅಂಶವು ದೃಶಿರ್ ಪ್ರೇಕ್ಷಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಪ್ರಾಯಶಃ ಅಪರೋಕ್ಷ ಜ್ಞಾನವಾಚಕವಾಗಿದೆ. ತ ಎಂಬ ಪದವು ಆ ಅಪರೋಕ್ಷ ಜ್ಞಾನದ ನಿಯಮವನ್ನು ಹೇಳುತ್ತದೆ. ಆದ್ದರಿಂದ ದರ್ಶತ ಮತ್ತು ಭರ್ಗ ಎಂಬ ಎರಡು ಶಬ್ದಗಳಿಂದ ಒಟ್ಟು ವಾಯುದೇವರಿಗೆ ಶಾಸ್ತ್ರಾಭ್ಯಾಸರೂಪವಾದ ಮತ್ತು ಧ್ಯಾನರೂಪವಾದ ವಿವಿಧ ಉಪಾಸನೆಯ ಫಲವಾದ ಅಪರೋಕ್ಷ ಜ್ಞಾನವು ನಿತ್ಯವಾಗಿದೆ ಎಂಬ ಅರ್ಥವು ಲಬ್ಧವಾಗುತ್ತದೆ. ಹೀಗೆ ಮೋಕ್ಷವನ್ನು ಕುರಿತು ಜ್ಞಾನವು ಅಂತರಂಗ ಸಾಧನವಾದುದರಿಂದ ಆ ವಾಯುದೇವರ ಜ್ಞಾನದ ವಿಸ್ತಾರವನ್ನು ವರ್ಣಿಸಲು ಭರ್ಗ ಮತ್ತು ದರ್ಶತ ಎಂಬ ಎರಡು ವಿಶೇಷಣಗಳು ಪ್ರಯುಕ್ತವಾಗಿವೆ. ಬಲವಾದರೂ ಜ್ಞಾನಸಾಧನವಾದ ದುಷ್ಟಸಂಹಾರ ರೂಪವಾದ ಭಗವತ್ಸೇವೆಗೆ ಉಪಯೋಗಿಯಾದುದು. ಆದ್ದರಿಂದ ಜ್ಞಾನಕ್ಕಿಂತ ಅಮುಖ್ಯವಾದುದು. ವಾಯುದೇವರು ಅಂತಹ ಬಲವಂತರೆಂದು ಪ್ರತಿಪಾದನೆ ಮಾಡಲು ಆ ಕಾರಣದಿಂದ ಬಟ್ ಎಂಬ ವಿಶೇಷಣವು ಪ್ರಯುಕ್ತವಾಗಿದೆ. ಬಲವು ಜ್ಞಾನದ ಸಾಧನವಾದುದರಿಂದ ಬಲವನ್ನು ಹೇಳುವ ಒಂದು ವಿಶೇಷಣವನ್ನು

ಮೊದಲು ಹೇಳಿ ಅನಂತರ ಜ್ಞಾನವನ್ನು ಹೇಳುವ ಎರಡು ವಿಶೇಷಣಗಳನ್ನು ಹೇಳಿದ್ದಾರೆ.

ಅಥವಾ ದರ್ಶತ ಎಂಬಲ್ಲಿ ದರ್ಶ ಎಂದರೆ ದರ್ಶನ, ವೈಷ್ಣವ ದರ್ಶನ ಎಂದು ಅರ್ಥ. ತ ಎಂದರೆ ತತ ವ್ಯಾಪ್ತವಾದುದು ಎಂದು ಅರ್ಥ. ದರ್ಶಃ ವೈಷ್ಣವ ದರ್ಶನಂ ತಂ ತತಂ ಯಸ್ಮಾತ್ ಸಃ ಎಂದು ಬಹುವ್ರೀಹಿ ಸಮಾಸವನ್ನು ಮಾಡಿ ಯಾರಿಂದ ವೈಷ್ಣವ ದರ್ಶನವು ಭೂಮಿಯಲ್ಲಿ ವ್ಯಾಪ್ತವಾಯಿತೋ ಅಂತಹ ಮಧ್ವರೂಪವು ದರ್ಶತ ಶಬ್ದ ಪ್ರತಿಪಾದ್ಯವೆಂದು ಸಿದ್ಧವಾಗುತ್ತದೆ. ಭರ್ಗ ಎಂಬ ಶಬ್ದವು ಭ್ರಸ್ಜಪಾಕೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಭರ್ಗ ಎಂದರೆ ದುರ್ಮತಗಳನ್ನು ಸುಡುವವರು ಎಂದು ಅರ್ಥ. ಆದ್ದರಿಂದ ಭರ್ಗ ಶಬ್ದವು ಮಧ್ವರೂಪವನ್ನೇ ಹೇಳುತ್ತದೆ. ಬಟ್ ಎಂಬ ಪದವು ವೈಷ್ಣವ ದರ್ಶನದ ಸ್ಥಾಪನೆಗೆ ಮತ್ತು ದುರ್ಮತಗಳ ಭರ್ಜನೆಗೆ ಅವಶ್ಯಕವಾದ ಯುಕ್ತಿಜ್ಞಾನದ ಬಲವನ್ನು ಸೂಚಿಸುತ್ತದೆ. ಆದ್ದರಿಂದ ಬಟ್ ಎಂಬ ವಿಶೇಷಣವು ಮಧ್ವರೂಪದಲ್ಲಿಯೇ ಅನ್ವಯವನ್ನು ಹೊಂದುತ್ತದೆ. ಆದ್ದರಿಂದಲೇ ಮೂರು ವಿಶೇಷಣಗಳು ಜ್ಞಾನಕಾರ್ಯದಲ್ಲಿಯೇ ಉಪಯೋಗವನ್ನು ಹೊಂದು ವುದರಿಂದ ವಪುಷೇ ಧಾಯಿ ಎಂದು ಮಧ್ವರೂಪದ ವಿವಕ್ಷೆಯಿಂದ ವಪುಷೇ ಎಂಬ ಏಕವಚನವು ಉಪಪನ್ನವಾಗುತ್ತದೆ. ಏಕೆಂದರೆ ಮಧ್ವರೂಪವೇ ಅತಿಪ್ರಬಲವಾದುದು, ಜಗದ್ಗುರು ಸ್ಥಾನದಲ್ಲಿರುವುದರಿಂದ ಜ್ಞಾನದಾಯಕವಾದುದು, ಸಾಕ್ಷಾನ್ ಮೋಕ್ಷೋಪಯೋಗಿ ಯಾದ ಭಗವಂತನ ಸರ್ವೋತ್ತಮತ್ವಾದಿ ಮಹಾಮಹಿಮೆಯನ್ನು ಸ್ಥಾಪನೆ ಮಾಡುವಂತಹದು, ವೇದಪ್ರಾಮಾಣ್ಯವನ್ನು ಸ್ಥಾಪನೆ ಮಾಡುವಂತಹದು ಮತ್ತು ವೇದಾರ್ಥಮೀಮಾಂಸೆಯನ್ನು ಮಾಡುವಂತಹದು. ಆ ಕಾರಣದಿಂದ ವೇದಕ್ಕೆ ಅತ್ಯಂತ ಪ್ರಿಯವಾದುದು. ಆದಕಾರಣದಿಂದ ವಪುಷೇ ಎಂಬಲ್ಲಿ ಮಧ್ವರೂಪವನ್ನೇ ವಿವಕ್ಷೆ ಮಾಡಿ ಏಕವಚನವು ಇದೆ. ಆದ್ದರಿಂದಲೇ ಮೂಲರೂಪವನ್ನೂ ಮೊದಲನೆಯ ಎರಡು ಅವತಾರಗಳನ್ನೂ ಹೇಳಲು ಅರ್ಧ ಅರ್ಧ ಋಕ್‌ಗಳು ಮಾತ್ರ ಪ್ರವೃತ್ತವಾಗಿವೆ. ಮೂರನೆಯದಾದ ಮಧ್ವರೂಪವನ್ನು ಹೇಳುವುದಕ್ಕೆ ಮೂರೂವರೆ ಋಕ್‌ಗಳು ಪ್ರವೃತ್ತವಾಗಿವೆ. 'ಸರ್ವಜ್ಞಮನ್ಯಮನವೇಕ್ಷ್ಯ ಸ ಕಾರ್ಯವೀರ್ಯಂ' ಎಂಬ ಮಧ್ವವಿಜಯದ ವಾಕ್ಯದಿಂದಲೂ 'ತದ್ಯುಕ್ತ್ಯಾಭ್ಯಾಸಜಾಲ ಪ್ರಸರವಿಷತರೂ-ದ್ದಾಹದಕ್ಷಪ್ರಮಾಣ ಜ್ವಾಲಾಮಾಲಾಧರೋಗ್ನಿಃ ಪವನವಿಜಯತೇ ತೇವತಾರಸ್ತೃತೀಯಃ' ಎಂಬ ವಾಯುಸ್ತುತಿಯ ವಚನದಿಂದಲೂ ಮಧ್ವಾಚಾರ್ಯರೇ ಯುಕ್ತಿಜ್ಞಾನಬಲ ಉಳ್ಳವರು ಮತ್ತು ದುರ್ದರ್ಶನಭರ್ಜಕರಾದವರು ಎಂದು ಸಿದ್ಧವಾಗುತ್ತದೆ.

ಯದೀಂ= ಯಃ ಏವ= ಯಾವನು ಅತಿಶಯಿತ ಮತಿಯುಳ್ಳವನಾದ್ದರಿಂದ ಶರೀರವನ್ನು ಧರಿಸಿದ ಮತಿ ಎಂದು ಕವಿಗಳಿಂದ ವರ್ಣಿತನಾಗಿದ್ದಾನೆಯೋ ಅಂತಹ ಮತಿ ಶಬ್ದವಾಚ್ಯನಾದ ಹನುಮಂತನು ಉಪ= ರಾಮನ ಸಮೀಪದಲ್ಲಿ, ಹ್ವರತೇ= ವಿಹರಿಸುತ್ತಾನೆ, ಕ್ರೀಡಿಸುತ್ತಾನೆ ಎಂದು ಅರ್ಥ. ಹ್ವರತೇ , ಎಂಬಲ್ಲಿ

ಆರ್ಷಪ್ರಯೋಗವಾದ್ದರಿಂದ ವಕಾರವು ಅಧಿಕವಾಗಿ ಬಂದಿದೆ. ಅಥವಾ ಇದು ಹ್ವರ ಕ್ರೀಡಾಯಾಂ ಎಂಬ ಧಾತುವಿನ ರೂಪ. ಈ ಅರ್ಥವೂ ಕೂಡ ಹನುಮಾನ್ ಎಂಬ ಶಬ್ದಾರ್ಥದ ವಿವರಣೆ. ಹನ ಹಿಂಸಾಗತ್ಯೋಃ ಎಂಬ ಧಾತುವಿದೆ. ಹನ ಎಂದರೆ ಗತಿ, ಜ್ಞಾನ ಎಂದರೆ ಸುಖದ ಅನುಭವ ಎಂದು ಅರ್ಥ. ಅದನ್ನು ಉಳ್ಳವನು ಹನುಮಾನ್. ರಾಮನ ಸಮೀಪದಲ್ಲಿ ಕ್ರೀಡಿಸುವವನು ಎಂದು ಅರ್ಥ. ಅಥವಾ ಉಪ= ರಾಮನ ಸಮೀಪದಲ್ಲಿ, ಏಕಾಂತವಚನವನ್ನು ಕೇಳಲು ರಾಮನ ಸಮೀಪಕ್ಕೆ ಬಂದಾಗ ಎಂದು ಅರ್ಥ, ಹ್ವರತೇ= ಭಕ್ತಿಯಿಂದ ಬಾಗಿ ನಿಲ್ಲುತ್ತಾನೆ ಎಂದು ಅರ್ಥ. ಹ್ವರಕೌಟಿಲ್ಯೇ ಎಂಬ ಧಾತುವಿನಿಂದ ಈ ಅರ್ಥವು ಲಭಿಸುತ್ತದೆ. 'ಪ್ರೀತ್ಯಾವನಮ್ರಾಕೃತಿಂ ವಕ್ತ್ರಾಂಭೋರುಹಸಕ್ತಹಸ್ತಕಮಲಂ ಭಕ್ತಂ .........' (ತೀರ್ಥಪ್ರಬಂಧ - ರಾಮಸೇತು ವರ್ಣನ) ಎಂಬ ವಚನಗಳಿಂದಲೂ ಈ ಅರ್ಥವು ಸಿದ್ಧವಾಗುತ್ತದೆ. ಈ ಅರ್ಥವೂ ಸಾಕ್ಷಾತ್ ಪರದೇವತೆಯಾದ ರಾಮನ ಜೊತೆಯಲ್ಲಿ ಸಂಭಾಷಣೆಗೆ ಯೋಗ್ಯವಾದ ಹನುಪ್ರದೇಶ ಉಪಲಕ್ಷಿತವಾದ ಮುಖಕಮಲವನ್ನು ಹೊಂದಿದವನು ಎಂಬ ಅರ್ಥದಲ್ಲಿ ಹನುಮತ್ ಶಬ್ದದ ವ್ಯಾಖ್ಯಾನರೂಪವೇ ಆಗುತ್ತದೆ.

ಅಥವಾ ಯತ್= ಪೂರ್ವೋಕ್ತ ರೀತಿಯಿಂದ ಮತಿಶಬ್ದವಾಚ್ಯವಾದ ಯಾವ ದೇಹವಿದೆಯೋ, ಯತ್ ಚ= ಮತ್ತು ಯಾವ ರೂಪವು, ಇತ್ಥಂ= ನಾರಾಯಣ ರೂಪದಲ್ಲಿಯೂ ಮತ್ತು ಲಕ್ಷ್ಮಿಯ ಮೂಲರೂಪದಲ್ಲಿಯೂ ತನ್ನ ಮೂಲರೂಪವು ಹೇಗಿದೆಯೋ ಅದರಂತೆಯೇ ಇದೆಯೋ ಅಂತಹ ಹನುಮದ್ರೂಪವು, ಈಂ= ಸೀತಾರೂಪಲಕ್ಷ್ಮಿಯ, ಉಪ= ಸಮೀಪದಲ್ಲಿ, ಲಂಕೆಯಲ್ಲಿರುವ ಸೀತೆಯ ಸಮೀಪದಲ್ಲಿ ಎಂದು ಅರ್ಥ. ಏಕೆಂದರೆ ಈಕಾರವು ಲಕ್ಷ್ಮೀವಾಚಕವೆಂದು ಕೋಶಗಳಲ್ಲಿ ಪ್ರಸಿದ್ಧವಾಗಿದೆ. ಋತಸ್ಯ= ಯಥಾರ್ಥಜ್ಞಾನರೂಪನಾದ ರಾಮನಲ್ಲಿಯೂ ಕೂಡ, ಹ್ವರತೇ= ಕ್ರೀಡಿಸುತ್ತದೆ. ಏಕಾಂತವಚನ ಸಮಯದಲ್ಲಿ ನಮ್ರವಾಗಿಯೂ ಇರುತ್ತದೆ. ಸಾಧತೇ= ದುಷ್ಟರಾಕ್ಷಸ ಹಿಂಸನಾದಿ ರಾಮಕಾರ್ಯವನ್ನು ಸಾಧಿಸುತ್ತದೆ. ಸ್ವಾಮಿಯಲ್ಲಿ ಭಕ್ತಿಯನ್ನು ತೋರಿಸುವ ಸಮಯದಲ್ಲಿ ಅಂಗಕೌಟಿಲ್ಯವಿದ್ದರೂ ಸ್ವಾಮಿಕಾರ್ಯವನ್ನು ಸಾಧಿಸುವ ಸಮಯದಲ್ಲಿ ಅಂಗಕೌಟಿಲ್ಯವಾಗಲೀ ಅಥವಾ ಮನಃಕೌಟಿಲ್ಯವಾಗಲೀ ಇಲ್ಲವೆಂದು ಸೂಚಿಸಲು ಸಾಧಯತೇ ಎಂಬ ಪ್ರಸಿದ್ಧವಾದ ಪ್ರಯೋಗವನ್ನು ಬಿಟ್ಟು ಸಾಧತೇ ಎಂದು ಯಥಾಸ್ಥಿತವಾದ ಧಾತುಪ್ರಕೃತಿಯನ್ನೇ ಪ್ರಯೋಗಿಸಿದ್ದಾರೆ. ಈ ಅರ್ಥವೂ ಕೂಡ ಹನುಮದ್ ಶಬ್ದಾರ್ಥದ ವಿವರಣರೂಪವೇ ಆಗಿದೆ. ಹನ ಎಂದರೆ ಹನನ, ಶತ್ರುಹನನ. ಅದರ ಮೇಲೆ ಮತುಪ್ ಪ್ರತ್ಯಯವು ಬಂದರೆ ಹನವಾನ್ ಎಂದು ಆಗುತ್ತದೆ. ಹನ ಶಬ್ದದ ಮೇಲೆ ತಾಚ್ಛೀಲಿಕ ಉಪ್ರತ್ಯಯವು ಬಂದಿರುವುದರಿಂದ ಹನುಮಾನ್ ಎಂದು ಆಗುತ್ತದೆ. ರಾಕ್ಷಸರನ್ನು ಸಂಹಾರ ಮಾಡುವ ಸ್ವಭಾವವುಳ್ಳವನು ಎಂದು ಒಟ್ಟು ಅರ್ಥ. ಋತಸ್ಯ= ರಾಮನ, ಸಸ್ರುತಃ= ಅಮೃತಸ್ಯಂದಿಯಾದ, ಧೇನಾಃ= ಮಾತುಗಳನ್ನು, ಈಂ=

ಲಂಕಾಸ್ಥಿತ ಸೀತಾರೂಪಳಾದ ಲಕ್ಷ್ಮಿಯನ್ನು ಕುರಿತು, ಅನಯಂತ= ಅನಯತ= ತೆಗೆದುಕೊಂಡು ಹೋದನು ಎಂದು ಅರ್ಥ. ಧಿನು ಪುಷ್ಟೌ ಎಂಬ ಧಾತುವಿನಿಂದ ಧೇನಾ ಶಬ್ದವು ನಿಷ್ಪನ್ನವಾಗುತ್ತದೆ. ಸಜ್ಜನರಿಗೆ ಧಾರಣ- ಪೋಷಣಶೀಲವಾದುದರಿಂದ ರಾಮನ ಮಾತುಗಳು ಧೇನಾಶಬ್ದವಾಚ್ಯವಾಗುತ್ತವೆ. ಆದ್ದರಿಂದ ಈ ಅರ್ಥವು ಲಭಿಸುತ್ತದೆ. ಅನಯತ ಎಂದು ಏಕವಚನ ಇರಬೇಕಾದ ಸ್ಥಳದಲ್ಲಿ ಅನಯಂತ ಎಂಬ ಬಹುವಚನವು ವ್ಯತ್ಯಯೋ ಬಹುಲಂ ಎಂಬ ವ್ಯಾಕರಣಸೂತ್ರಕ್ಕೆ ಅನುಸಾರಿಯಾಗಿದೆ. ಅಥವಾ ಅನಯಂತ ಎಂದಿರುವ ಕರ್ತರಿ ಪ್ರಯೋಗವನ್ನು ಅನೀಯಂತ ಎಂದು ಕರ್ಮಣಿ ಪ್ರಯೋಗವಾಗಿ ಇದೇ ವ್ಯತ್ಯಯದಿಂದಲೇ ತಿಳಿಯಬೇಕು. ಆಗ ರಾಮನ ಮಾತುಗಳು ಸೀತೆಯನ್ನು ಕುರಿತು ತೆಗೆದುಕೊಂಡು ಹೋಗಲ್ಪಟ್ಟವು ಎಂಬ ಅರ್ಥವು ದೊರೆಯುತ್ತದೆ. ಆದರಂತೆ ಯತ್= ಯಾವ ಅದೇ ಮತಿಶಬ್ದವಾದ ದೇಹವು, ಋತಸ್ಯ= ರಾವಣ ಬಲದಿಂದ ಲಂಕಾಪ್ರಾಪ್ತಿಯನ್ನು ಹೊಂದಿದ ಸೀತಾಪ್ರತಿಬಿಂಬದ, ಸಸ್ರುತಃ ಅಮೃತಸ್ಯಂದಿಯಾದ ಅಥವಾ ಚಿತ್ತದ್ರವಣಯುಕ್ತವಾದ, ಋತಸ್ಯ ಧೇನಾಃ ಸತ್ಯಸಂಬಂಧಿಯಾದ ಮಾತುಗಳನ್ನು ಎಂದರೆ ಯಥಾರ್ಥವಾದ ಮಾತುಗಳನ್ನು ಎಂದು ಅರ್ಥ. ಎಂದರೆ ಮನಸ್ಸಿನಲ್ಲಿ ರಾವಣನನ್ನು ಅಂಗೀಕರಿಸಿ ಮಾತಿನಲ್ಲಿ ಮಾತ್ರ ರಾಮನಲ್ಲಿ ಪ್ರೀತಿಯನ್ನು ಹೇಳುವ ಮಾತುಗಳಲ್ಲ ಎಂದು ಅರ್ಥ, ಅಂತಹ ಸೀತೆಯ ಮಾತುಗಳನ್ನು ಋತಸ್ಯ= ರಾಮನ, ಉಪ= ಸಮೀಪಕ್ಕೆ, ಅನಯಂತ= ಅನಯತ= ತೆಗೆದುಕೊಂಡು ಹೋದನು. ಯಾವ ಶರೀರದಿಂದ ತೆಗೆದುಕೊಂಡು ಹೋದನೋ ಅಂತಹ ಶರೀರವು ಹೀಗೆಯೇ ಇಡಲ್ಪಟ್ಟಿತು ಎಂದು ಅನ್ವಯವನ್ನು ಎಲ್ಲ ಕಡೆಗಳಲ್ಲಿಯೂ ತೆಗೆದುಕೊಳ್ಳಬೇಕು.

ಅಥವಾ ಋತಸ್ಯ= ರಾಮನ, ಸಸ್ರುತಃ= ಉಪಕ್ರಮ ಉಪಸಂಹಾರಾದಿ ಯುಕ್ತಿ ಸ್ರವಣ ಸಹಿತವಾದ, ಧೇನಾಃ= ವೇದ ಪಂಚರಾತ್ರ ಬ್ರಹ್ಮಮೀಮಾಂಸಾದಿ ವ್ಯಾಖ್ಯಾನ ರೂಪವಾದ ಮಾತುಗಳನ್ನು, ಅನಯಂತ= ಮುಖ್ಯಶ್ರೋತೃವಾದುದರಿಂದ ಎದುರಿಗೆ ಕುಳಿತಿದ್ದ ತನ್ನ ಮನಸ್ಸಿನಲ್ಲಿ ಅನಯತ= ಸೇರಿಸಿದನು ಎಂದು ಅರ್ಥ. ರಾಮದೇವರ ಮಾತುಗಳು ಹನುಮಂತನ ಹೃದಯವನ್ನು ಸೇರುವುದರಲ್ಲಿ ರಾಮದೇವರಿಗೂ, ವಾಙ್ಮನೋ-ದೇವತೆಯಾದ ಲಕ್ಷ್ಮಿಗೂ ಮತ್ತು ಶ್ರೋತೃವಾದ ಹನುಮಂತನಿಗೂ ಕರ್ತೃತ್ವವಿದೆ ಎಂದು ಸೂಚಿಸಲು ಅನಯಂತ ಎಂದು ಬಹುವಚನವಿದೆ. ಅಥವಾ ಹಿಂದೆ ಹೇಳಿದಂತೆ ಅನಯಂತ ಎಂಬುದನ್ನು ಅನೀಯಂತ ಎಂದು ಕರ್ಮಣಿ ರೂಪವನ್ನಾಗಿ ಮಾಡಿ ಯೇನ ವಪುಷಾ ಅನೀಯಂತ ಎಂದಾದರೂ ಯೋಜನೆಯನ್ನು ಮಾಡಬಹುದು. ಅಥವಾ ಋತಸ್ಯ= ರಾಮನನ್ನು ಪ್ರತಿಪಾದಿಸುವ, ಧೇನಾಃ= ಮೂಲ ರಾಮಾಯಣಾದಿ ವಾಕ್ಯಗಳನ್ನು, ಅನಯಂತ= ದೇವಗಂಧರ್ವಾದಿ ಶ್ರೋತೃಗಳಿಗೆ ತಲುಪಿಸಿದರು ಎಂದೂ ಅರ್ಥವನ್ನು ಮಾಡಬಹುದು. ಬಹುವಚನದ ಸಾರ್ಥಕ್ಯವು ಹಿಂದೆ ಹೇಳಿದಂತಯೇ ಇರುತ್ತದೆ. ಅನೀಯಂತ ಎಂದು ಕರ್ಮಣಿ ಪ್ರಯೋಗವನ್ನಾದರೂ ಅಂಗೀಕರಿಸ

ಬಹುದು. ಸೀತಾರಾಮರು ಇಬ್ಬರೂ ದೇಶದಿಂದ ಸಮವ್ಯಾಪ್ತರಾದ್ದರಿಂದ ರಾಮನ ಸಂದೇಶವನ್ನು ಸೀತೆಗೆ ತಲುಪಿಸಲು ದೂತನ ಅವಶ್ಯಕತೆ ಇಲ್ಲ. ಆದ್ದರಿಂದ ಒಬ್ಬ ದೂತನನ್ನು ಕಳುಹಿಸುವುದು ಪರತತ್ವಕ್ಕೆ ವ್ಯತ್ಯಾಸವಾದ ಒಂದು ಕ್ರಿಯೆಯಾಗಿದೆ. ಈ ವ್ಯತ್ಯಾಸವನ್ನು ಸೂಚಿಸಲು ಅನಯತ ಎಂಬ ಶಬ್ದವನ್ನು ಪ್ರತ್ಯಾಸ ಮಾಡಿ ಅನಯಂತ ಎಂದು ಪ್ರಯೋಗಿಸಿದ್ದಾರೆ ಎಂದೂ ಹೇಳಬಹುದು. ಈ ಅರ್ಥವೂ ಕೂಡ ಹನುಮದ್ ಶಬ್ದದ ವ್ಯಾಖ್ಯಾನರೂಪವೇ ಆಗಿದೆ. ಹನ ಎಂದರೆ ಗತಿ ಪ್ರಾಪಣ ಎಂದು ಅರ್ಥ. ರಾಮನ ಮಾತುಗಳನ್ನು ಸೀತೆಗೆ ಅಥವಾ ತಮಗೆ ಅಥವಾ ದೇವ-ಗಂಧರ್ವಾದಿಗಳಿಗೆ ತಲುಪಿಸುವುದು ಹನ ಶಬ್ದಾರ್ಥ. ಅದರ ಮೇಲೆ ಮತುಪ್ ಪ್ರತ್ಯಯ ಮತ್ತು ತಾಚ್ಛೀಲ್ಯಾರ್ಥದಲ್ಲಿ ಉ ಪ್ರತ್ಯಯವು ಬಂದು ಹನುಮಾನ್ ಎಂದಾಗುತ್ತದೆ. ಇಂತಹ ದೇಹವು ಮೊದಲನೆಯ ಅವತಾರ ಎಂದು ವಾಕ್ಯಶೇಷದಿಂದ ಅನ್ವಯವನ್ನು ಮಾಡಬೇಕು.

ಅಥವಾ ಋತಸ್ಯ= ರಾಮನ ಸೇವೆಗಾಗಿ ಭೂಮಿಗೆ ಬಂದಂತಹ ಹನುಮಂತನ ಎಂದು ಅರ್ಥ, ಋ ಗತೌ ಎಂಬ ಧಾತುವಿನಿಂದ ಈ ಅರ್ಥವು ಲಭಿಸುತ್ತದೆ. ಸಸ್ರುತಃ ನಿರುಪಾಧಿಕ ಭಕ್ತಿಸ್ರವಣದಿಂದ ಸಹಿತವಾದಂತಹ, ಧೇನಾಃ ಏಕಾಂತ ಭಕ್ತರ ಪೋಷಣೆಗೆ ಹೇತುಭೂತವಾದ ಮಾತುಗಳು, ಅನಯಂತ= ಭಕ್ತರ ಹೃದಯದಲ್ಲಿ ತಲುಪಿಸಲ್ಪಟ್ಟವು ಎಂದೂ ಅರ್ಥವನ್ನು ಮಾಡಬಹುದು, ಸಮುದ್ರ ಉಲ್ಲಂಘನ, ವನಭಂಜನ, ಅಕ್ಷಕುಮಾರ ಹನನ, ಸೇತುಬಂಧನ, ಸಂಜೀವನ ಪರ್ವತಾನಯನ ಮೊದಲಾದ ಮಹತ್ಕಾರ್ಯಗಳನ್ನು ಮಾಡಿದರೂ ಹನುಮಂತದೇವರು ರಾಮನಲ್ಲಿ ಪ್ರಾರ್ಥಿಸಿದ 'ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ ತ್ವಯೀಶಮೇ ಹ್ರಾಸವಿವರ್ಜಿತಾ ಸದಾ । ಅನುಗ್ರಹಸ್ತೇ ಮಯಿಚೈವಮೇವ ನಿರೂಪಧೌತೌ ಮಮಸರ್ವಕಾಮ' ಇವೇ ಮೊದಲಾದ ಹನುಮಂತದೇವರ ವಾಕ್ಯಗಳು ಏಕಾಂತ ಭಕ್ತರ ಪುಷ್ಟಿಗೆ ಹೇತುವಾದ್ದರಿಂದ ಈ ಅರ್ಥವು ಯುಕ್ತವಾಗುತ್ತದೆ. ಅದರಂತೆಯೇ ಸಸ್ರುತಃ ಆನಂದಾಶ್ರುಕಣ ಸಹಿತವಾದ, ಧೇನಾಃ ಸಕಲ ತತ್ವಪೋಷಣ ಶೀಲವಾದ ಮಾತುಗಳನ್ನು ಎಂದು ಅರ್ಥವನ್ನು ಮಾಡಬಹುದು. ಹಾಗೆಯೇ ಋತಸ್ಯ= ಭೂಭಾರಹರಣಕ್ಕಾಗಿ ಭೂಮಿಗೆ ಬಂದಂತಹ ರಾಮನ, ಸಸ್ರುತಃ ಮಹಾಪ್ರಸಾದ ಮತ್ತು ಅಪಾರಕೃಪಾರಸಸ್ಯಂದಿಯಾದ, ಧೇನಾಃ ತನ್ನ ಭಕ್ತಾಗ್ರೇಸರನಾದ ಹನುಮಂತನ ಪೋಷಣೆಯನ್ನು ಮಾಡುವಂತಹ ಎಂದರೆ ನೀನು ಮುಂದಿನ ಕಲ್ಪದಲ್ಲಿ ನನ್ನ ನಾಭಿಕಮಲದಿಂದ ಉತ್ಪತ್ತಿಯನ್ನು ಹೊಂದಿ ಚತುರ್ಮುಖನಾಗಿ ಸತ್ಯಲೋಕ ವೈಭವವನ್ನು ಭೋಗಿಸುತ್ತೀಯೆ. ಅನಂತರ ವೈಕುಂಠಾದಿ ಲೋಕದಲ್ಲಿ ನನ್ನಿಂದ ಅತಿಶಯಿತವಾದ ಸಾನ್ನಿಧ್ಯವನ್ನು ಪಡೆದು ಸುಖವನ್ನು ಅನುಭವಿಸುತ್ತೀಯೆ ಮುಂತಾದ ಮಾತುಗಳು ಮತಿಃ ಮತಿವಂತಂ= ತನ್ನ ಸಮೀಪದಲ್ಲೇ ಯಾವಾಗಲೂ ವಿಹಾರ ಮಾಡುತ್ತಾ ತನ್ನ ಕಾರ್ಯವನ್ನು ಸಾಧಿಸುವ ಮೇಧಾವಿಯಾದ

ಹನುಮಂತನನ್ನು, ಈಂ= ನಾಭಿಕಮಲ ಕೇಸರವನ್ನು ಕುರಿತು, ಅನಯಂತ= ಅನಯನ್= ತೆಗೆದುಕೊಂಡು ಹೋದವು ಎಂದೂ ಅರ್ಥವನ್ನು ಮಾಡಬಹುದು. **'ಈಕಾರೋ ಅಬ್ಜದಲೇ ಲಕ್ಷ್ಮ್ಯಾಂ ವ್ಯಾಣ್ಯಾಂ ಕಮಲಕೇಸರೇ । ರಚನಾಯಾಂ ಶಕ್ರಚಾಪೇ ಬಾಣೇ ಫಣಿನಿ ಕಂದರೇ'** ಎಂಬು ನಾನಾರ್ಥರತ್ನಮಾಲಾ ಕೋಶವಿರುವುದರಿಂದ ಈಂ ಎಂದರೆ ನಾಭಿಕಮಲಕೇಸರವನ್ನು ಎಂದು ಅರ್ಥವನ್ನು ಮಾಡಬಹುದು. ಭಾಗವತದಲ್ಲಿ ಸತ್ಯಲೋಕಕ್ಕೆ ಋತ ಎಂಬ ಹೆಸರನ್ನು ಹೇಳಿರುವುದರಿಂದ, ಋತಸ್ಯ= ಸತ್ಯಲೋಕದ, ಈಂ= ಸಂಪತ್ತನ್ನು, ಅನಯಂತ= ಹೊಂದಿಸಿದವು ಎಂದು ಅರ್ಥವನ್ನು ಮಾಡಬಹುದು.

ಅದರಂತೆಯೇ, ಋತಸ್ಯ ಧೇನಾಃ ರಾಮನ ಮಾತುಗಳು, ಮತಿಃ= ಮತಿಂ= ಹನುಮಂತನನ್ನು, ಋತಸ್ಯ= ಪ್ರದ್ಯುಮ್ನನ ಮಗಳಾದ, ಈಂ= ವಾಣಿಯನ್ನು, ಅನಯಂತ= ತಲುಪಿಸಿದವು, ಸರಸ್ವತೀಪತಿಯನ್ನಾಗಿ ಮಾಡಿದವು ಎಂದು ಅರ್ಥ. ಹಾಗೆಯೇ ಋತಸ್ಯ= ಸತ್ಯವಾದ ಜಗತ್ತಿನ, ಈಂ= ರಚನೆಯನ್ನು ಎಂದರೆ ಪಾದ್ಮಕಲ್ಪವು ಉಂಟಾದಾಗ ಜಗತ್ತಿನ ಸೃಷ್ಟಿಯನ್ನು, ಅನಯಂತ= ಮಾಡಿಸಿದವು, ಜಗತ್ ಸೃಷ್ಟಿರೂಪವಾದ ವ್ಯಾಪಾರದಲ್ಲಿ ನಿರತನನ್ನಾಗಿ ಮಾಡಿದವು ಎಂದೂ ಅರ್ಥ. ಯದ್ಯಪಿ ವಾಯುವಿನ ಮೂಲರೂಪಕ್ಕೆ ಬ್ರಹ್ಮಪದವಿಯು ಉಂಟಾಗುತ್ತದೆ. ಆದರೂ ಹನುಮದವತಾರದಲ್ಲಿ ಮಾಡಿದ ಸೇವೆಯಿಂದ ಸಂತುಷ್ಟನಾದ ರಾಮನು ಆ ಕಾರಣದಿಂದಲೇ ಬ್ರಹ್ಮಪದವಿಯನ್ನು ಕೊಟ್ಟಿರುವುದರಿಂದ ಬ್ರಹ್ಮನ ಕಥೆಯು ಹನುಮಂತನ ಕಥೆಯೆಂದೇ ವರ್ಣಿಸಲ್ಪಡುತ್ತದೆ. ಹಾಗೆಯೇ ಋತಸ್ಯ= ಬ್ರಹ್ಮದೇವರ ಶತವರ್ಷಾನಂತರದಲ್ಲಿ ಉಂಟಾದ ಮೋಕ್ಷದಲ್ಲಿ, ಸಸ್ರುತಃ= ಜ್ಞಾನರಸ ಶ್ರವಣ ಶೀಲವಾದಂತಹ, ಋತಸ್ಯ= ಸತ್ಯವಚನಶೀಲನಾದಂತಹ, ಋತಸ್ಯ= ಯಥಾರ್ಥಜ್ಞಾನ-ರೂಪನಾದಂತಹ, ವೈಕುಂಠದಲ್ಲಿರುವ ನಾರಾಯಣನ ಮುಖಕಮಲದ, ಉಪ= ಸಮೀಪದಲ್ಲಿ, ಅವನ ವಕ್ಷಸ್ಥಲದಲ್ಲಿ ಎಂದು ಅರ್ಥ, ಯಾ ಈಃ= ಯಾವ ಲಕ್ಷ್ಮೀ ಇದ್ದಾಳೆಯೋ, ತಾಂ ಉಪ= ಅವಳ ಸಮೀಪಕ್ಕೆ ತೆಗೆದುಕೊಂಡು ಹೋದವು, ವಕ್ಷಸ್ಥಲದಲ್ಲಿ ಇರುವ ಲಕ್ಷ್ಮಿಯ ಸಮೀಪದಲ್ಲಿರುವ ಮುಕ್ತಾಮಾಲೆಯಲ್ಲಿರುವ ಮಣಿಗಳಲ್ಲಿ ಶ್ರೇಷ್ಠವಾದ ಕೌಸ್ತುಭಮಣಿಯನ್ನಾಗಿ ಮಾಡಿದವು ಎಂದು ಅರ್ಥ. 'ದುಷ್ಪ್ರಾಪೇ ಪಾರಮೇಷ್ಠ್ಯೇ ಕರತಲಮತುಲಂ ಮೂರ್ಧ್ನಿವಿನ್ಯಸ್ಯ ಧನ್ಯಂ ತನ್ವನ್‌ಭೂಯಃ ಪ್ರಭೂತಪ್ರಣಯವಿಕಸಿತಾಬ್ಜೇಕ್ಷಣಃ ತ್ವೇಕ್ಷಮಾಣಃ' ಎಂಬ ವಾಯುಸ್ತುತಿಯ ವಚನದಿಂದಲೂ 'ಮುಕ್ತಾಮಾಲಾ ವಿಮುಕ್ತ ದ್ರುಹಿಣ ಗಣತನೋಃ ನಿತ್ಯಮುಕ್ತಸ್ಯ ಕಂಠೇ ಭಕ್ತ್ಯಾಸಕ್ತಾ ವಿಮುಕ್ತ್ಯೈ ಭವತು ಭವಭಯಾತ್ ಭೂಯಸೋ ಭಾವಿತಾ ನಃ' ಎಂಬ ವಿಷ್ಣುಸ್ತುತಿಯ ವಚನದಿಂದಲೂ ಈ ಅರ್ಥವು ದೊರೆಯುತ್ತದೆ (ಬ್ರಹ್ಮದೇವರೇ ಮುಕ್ತಾಮಾಲೆಯಲ್ಲಿ ಸನ್ನಿಹಿತರಾಗಿದ್ದಾರೆಂದು ಅಥವಾ ಮುಕ್ತಾಮಾಲೆಯಲ್ಲಿರುವ ಕೌಸ್ತುಭ ಮಣಿಯಲ್ಲಿ ಸನ್ನಿಹಿತರಾಗಿದ್ದಾರೆಂದು ಅರ್ಥವನ್ನು ಮಾಡಬಹುದು). ಯದ್ಯಪಿ ಪ್ರಾಣಃ

ಚೂಡಾಮಣಿ ಸ್ಮೃತಃ ಎಂಬ ವಚನದಂತೆ ವಾಯುದೇವರ ಸನ್ನಿಧಾನವು ಚೂಡಾಮಣಿಯಲ್ಲಿದೆ ಎಂದು ಹೇಳಲಾಗಿದೆ. ಅದು ಅಮುಕ್ತಸ್ಥಾನದಲ್ಲಿರುವ ಭಗವಂತನ ಮೂರ್ತಿವಿಶೇಷದ ದೃಷ್ಟಿಯಿಂದ. ಮುಕ್ತಸ್ಥಾನದಲ್ಲಂತೂ ವಾಯುದೇವರು ಇಲ್ಲವಾದ್ದರಿಂದ ಅಲ್ಲಿ ಬ್ರಹ್ಮದೇವರೇ ಕೌಸ್ತುಭ ಮಣಿಯನ್ನು ಆಶ್ರಯಿಸಿದ್ದಾರೆ ಎಂದು ಹೇಳಬೇಕು. ಈ ಅರ್ಥದಲ್ಲಿ ಯಾವ ತತ್ವದ ವಿರೋಧವೂ ಇಲ್ಲ. ಆದ್ದರಿಂದ ಅರ್ಥವ್ಯತ್ಯಾಸವಾಗಲೀ, ಶಬ್ದವ್ಯತ್ಯಾಸವಾಗಲೀ ಇಲ್ಲ. ಅಂತಹ ಹನುಮಂತನ ಅವತಾರವು ಮೊದಲನೆಯದು ಎಂದು ಅನ್ವಯವನ್ನು ಮಾಡಿಕೊಳ್ಳಬೇಕು.

ಅಸ್ಯ= ಈ ವಾಯುವಿನ, ದ್ವಿತೀಯಂ ವಪುಃ= ಎರಡನೆಯ ದೇಹವು, ಪೃಕ್ಷಃ= ಪೃತನಾ ಎಂದರೆ ಸೈನ್ಯವನ್ನು ಕ್ಷ ಎಂದರೆ ನಾಶವನ್ನು ಮಾಡುವಂತಹದು, ಪೃತ್ ಎಂಬಲ್ಲಿರುವ ತಕಾರಕ್ಕೆ ಛಾಂದಸವಾದ ಲೋಪವು ಬಂದಿದೆ. ಕ್ಷಿ ಕ್ಷಯ ಎಂಬ ಧಾತುವಿನಿಂದ ಕ್ಷಃ ಎಂದಾಗುತ್ತದೆ. ಪೃಕ್ಷಃ ಎಂದರೆ ಸೇನಾಕ್ಷಯಕಾರಿ ಎಂದು ಅರ್ಥ. ಆದ್ದರಿಂದ ಮಹಾಬಲರಾದ ವಾಯುದೇವರಿಗೆ ಯಾವ ಸೈನ್ಯವೂ ಪ್ರತಿಸೈನ್ಯವಾಗುವುದಿಲ್ಲ (ಎದುರಿಗೆ ನಿಂತು ಯುದ್ಧವನ್ನು ಮಾಡಲು ಸಮರ್ಥವಾಗುವುದಿಲ್ಲ) ಎಂಬ ಅರ್ಥವು ಲಭಿಸುತ್ತದೆ. ಪೃಕ್ಷಃ ಎಂಬುದು ಸಕಾರಾಂತ ನಪುಂಸಕಲಿಂಗ ಶಬ್ದ ಈ ಅರ್ಥವೂ ಸಹ ಭೀಮಶಬ್ದದ ಅರ್ಥವೇ ಆಗಿದೆ. ಭಿಯಂ= ವೈರಿಗಳಿಗೆ ಭಯವನ್ನು, ಮಿಮೀತೇ= ಉಂಟುಮಾಡುತ್ತದೆ ಎಂಬ ಅರ್ಥದಲ್ಲಿ ಭೀಮಶಬ್ದವು ನಿಷ್ಪನ್ನವಾಗಿದೆ. ಅಂತಹ ಈ ಭೀಮನು ಪಿತುಮಾನ್= ಬಹಳ ಅನ್ನವನ್ನು ಊಟ ಮಾಡುವುದರಿಂದ ಪಿತುಮಾನ್ ಎಂದು ಕರೆಸಿಕೊಳ್ಳಲ್ಪಡುತ್ತಾನೆ. ಪಿತು ಎಂದರೆ ಅನ್ನ ಎಂದು ಅರ್ಥ, ಬಕನಿಗೆ ಕಳುಹಿಸಿದ್ದ ಸಹಸ್ರಜನಕ್ಕೆ ಪರಿಮಿತವಾದ ಅನ್ನವನ್ನು ಭೋಜನ ಮಾಡುವುದರಿಂದ ಪಿತುಮಾನ್ ಎಂಬ ಶಬ್ದವು ಭೀಮನಲ್ಲಿ ಕೂಡುತ್ತದೆ. ಅಥವಾ ಭೀಃ= ಭಯವು, ಮೀಯತೇ= ಪ್ರಮೀಯತೇ= ನಶ್ಯತಿ ಎಂಬ ಅರ್ಥದಲ್ಲಿ ಭೀಮ ಎಂಬ ಶಬ್ದವು ನಿಷ್ಪನ್ನವಾಗುತ್ತದೆ (ಭೀಃ ಮೀಯತೇ ಯಸ್ಮಾತ್ ಸಃ ಭೀಮಃ ಎಂಬ ವಿಗ್ರಹವಾಕ್ಯದಿಂದ ಈ ಅರ್ಥವು ಲಭ್ಯವಾಗುತ್ತದೆ). ಬಕನಿಗೆ ತಲುಪಿಸಬೇಕಾಗಿದ್ದ ಅನ್ನವನ್ನು ತಿಂದು ಏಕಚಕ್ರ ನಗರದ ಭಯವನ್ನು ಪರಿಹಾರ ಮಾಡಿದುದರಿಂದ ಈ ಅರ್ಥವು ಉಪಪನ್ನವಾಗುತ್ತದೆ. ನಿತ್ಯಃ ಎಂದರೆ ಪ್ರಳಯದಲ್ಲಿಯೂ ಕೂಡ ಜ್ಞಾನಲೋಪವಿಲ್ಲದವನು ಎಂದು ಅರ್ಥ. ಅಂತಹ ಈ ಭೀಮನು ಸಪ್ತ= ಸಪ್ತಸು= ನಾಲ್ಕು ವೇದಗಳು ಮೂಲರಾಮಾಯಣ, ಪುರಾಣ ಮತ್ತು ಪಂಚರಾತ್ರ ಎಂಬ ಭೇದದಿಂದ ಸಪ್ತಸಂಖ್ಯೆಯನ್ನುಳ್ಳ (ಸುಪಾಂಸುಲುಕ್ ಎಂಬ ಸೂತ್ರದಿಂದ ಸಪ್ತ ಎಂಬಲ್ಲಿ ಸು ಎಂಬ ವಿಭಕ್ತಿಯ ಲೋಪವುಂಟಾಗಿದೆ). ಶಿವಾಸು= ಶೋಭನಗಳಾದ, ಮಾತೃಷು= ಅರ್ಥವನ್ನು ಪ್ರತಿಪಾದಿಸುತ್ತವೆ ಎಂಬ ಕಾರಣದಿಂದ ಮಾತೃಶಬ್ದವಾಚ್ಯವಾದ ವಿದ್ಯೆಗಳಲ್ಲಿ, ಆ= ಚೆನ್ನಾಗಿ, ಶಯೇ= ಶೇತೇ= ಮಲಗಿರುತ್ತಾನೆ= ಚೆನ್ನಾಗಿ ವಿಮರ್ಶೆಯನ್ನು ಮಾಡುತ್ತಾ ಇರುತ್ತಾನೆ ಎಂದು ಅರ್ಥ. ಶೇತೇ ಎಂದು

ಹೇಳಬೇಕಾದಲ್ಲಿ ಶಯೇ ಎಂಬ ವ್ಯತ್ಯಾಸವಚನವು ಭೀಮಸೇನನ ಈ ನಿದ್ರೆಯು ಲೌಕಿಕ ನಿದ್ರೆಯಂತಲ್ಲ ಎಂದು ಸೂಚನೆ ಮಾಡುವುದಾಗಿದೆ. ಆದ್ದರಿಂದಲೇ ಮೊದಲು ನಿತ್ಯಶಬ್ದದಿಂದ ಪ್ರಳಯಕಾಲದಲ್ಲೂ ಅವನು ಅವಿಲುಪ್ತವಾದ ಜ್ಞಾನವನ್ನು ಹೊಂದಿದವನು ಎಂದು ಹೇಳಲ್ಪಟ್ಟಿದೆ. ಅಥವಾ ಸಪ್ತ= ಪರತತ್ವ, ಅಪರತತ್ವ ಮತ್ತು ಅವುಗಳಲ್ಲಿರುವ ಪಂಚಭೇದಗಳು, ಇವು ಹೇಗೆ ಉಂಟಾಗುತ್ತದೆಯೋ ಹಾಗೆ ವಿಮರ್ಶೆ ಮಾಡುತ್ತಾನೆ ಎಂದು ಅರ್ಥ. ಇದೂ ಕೂಡ ಭೀಮಶಬ್ದಾರ್ಥದ ಕಥನವೇ ಆಗಿದೆ. ಭಿಯಃ ಭೃತಾಃ ಮಾಃ ವಿದ್ಯಾಃ ಯೇನ ಸಃ ಎಂಬ ವ್ಯುತ್ಪತ್ತಿಯಿಂದ ಸಪ್ತವಿದ್ಯೆಗಳು ಯಾವನಿಂದ ಧೃತವಾಗಿದೆಯೋ ಮತ್ತು ಪೋಷಿತವಾಗಿದೆಯೋ ಅವನು ಭೀಮ ಎಂಬ ಅರ್ಥವು ದೊರೆಯುತ್ತದೆ ಎಂದು ಸೂಚಿಸುತ್ತದೆ. ಭೃಞ್ ಭರಣೇ ಧಾತುವಿನ ಮೇಲೆ ಕರ್ಮಣಿ ಔಣಾದಿಕ ಡೀ ಪ್ರತ್ಯಯವನ್ನು ಮಾಡಿದರೆ ಭೀ ಎಂಬ ರೂಪವು ಸಿದ್ಧಿಸುತ್ತದೆ. ಮಾ ಶಬ್ದಕ್ಕೆ ವಿದ್ಯಾ ಎಂಬ ಅರ್ಥ ಮತ್ತು ಪ್ರಮಾಣವೆಂಬ ಅರ್ಥ ಪ್ರಸಿದ್ಧವಾದುದು.

ವೃಷಭಸ್ಯ= ಶ್ರೇಷ್ಠನಾದ, ಅಸ್ಯ= ಈ ವಾಯುವಿನ, ತೃತೀಯಂ ವಪುಃ= ಮೂರನೆಯ ಶರೀರವನ್ನು, ಯೋಷಣಃ= ಯೋಷಿತಃ= ನಾರಾಯಣರ ಪತ್ನಿಯರಾದ ವೇದಾಭಿಮಾನಿಯರಾದ ಶ್ರೀಭೂದುರ್ಗಾದೇವಿಯರು, ದೋಹಸೇ= ಜ್ಞಾನ ದೋಹನಕ್ಕಾಗಿ, ದಶಪ್ರಮತಿಂ= ಪೂರ್ಣಪ್ರಜ್ಞನಾಮಕನನ್ನಾಗಿ, ಜನಯಂತ= ಅಜನಯಂತ= ಸೃಷ್ಟಿಸಿದರು, ಅಥವಾ, ಅಸ್ಯ= ಈ ವಾಯುವಿನ, ದಶಪ್ರಮತಿಂ= ದಶಪ್ರಮತಿ ನಾಮಕವಾದ, ತೃತೀಯಂ ವಪುಃ= ಮೂರನೆಯ ಶರೀರವನ್ನು, ವೃಷಭಸ್ಯ= ವೃಷ ಎಂದರೆ ಧರ್ಮವನ್ನು, ಬಿಭರ್ತಿ= ಭರಿಸುತ್ತಾನೆ ಎಂಬ ಕಾರಣದಿಂದ ವೃಷಭ ನಾಮಕನಾದ, ಸಕಲ ವೈಷ್ಣವಧರ್ಮಾಧಾರನಾದ ನಾರಾಯಣನ ಜ್ಞಾನವನ್ನು, ದೋಹಸೇ= ಉಪದೇಶಾದಿಗಳಿಂದ ಸಕಲ ಸಜ್ಜನರ ಮನಸ್ಸಿನಲ್ಲಿ ಚೆನ್ನಾಗಿ ತುಂಬುವುದಕ್ಕೋಸ್ಕರ ಎಂದರೆ ವೈಷ್ಣವ ಧರ್ಮವನ್ನು ಮತ್ತು ವಿಷ್ಣುವನ್ನು ಚೆನ್ನಾಗಿ ಪ್ರತಿಪಾದನೆ ಮಾಡುವುದಕ್ಕೋಸ್ಕರವಾಗಿ ಎಂದು ಅರ್ಥ, ಯೋಷಿತಃ ಶ್ರೀಭೂದುರ್ಗೆಯರು, ಜನಯಂತ= ಸೃಷ್ಟಿಸಿದರು ಎಂದೂ ಅನ್ವಯವನ್ನು ಮಾಡಬಹುದು, ಈ ಅರ್ಥ ಕಥನದಿಂದ ಆನಂದತೀರ್ಥ ಮತ್ತು ಪೂರ್ಣಪ್ರಜ್ಞ ಎಂಬ ನಾಮದ್ವಯಾರ್ಥವು ಸೂಚಿತವಾಗುತ್ತದೆ. ಆನಂದಸ್ಯ= ಭಗವಂತನ ಜ್ಞಾನಪ್ರದವಾದ, ತೀರ್ಥಂ= ಶಾಸ್ತ್ರವು ಯಾರಿಂದಲೋ ಅವರು ಎಂದು ವ್ಯುತ್ಪತ್ತಿಯನ್ನು ಆಶ್ರಯಿಸುವುದರಿಂದ ಈ ಎರಡು ನಾಮಾರ್ಥಗಳು ಸೂಚಿತವಾಗುತ್ತವೆ. ತೃತೀಯ ಎಂದು ಹೇಳುವುದರಿಂದ ಮೊದಲನೆಯ ಎರಡು ರೂಪಗಳು ಬ್ರಹ್ಮಚರ್ಯಾಶ್ರಮ ಮತ್ತು ಗೃಹಸ್ಥಾಶ್ರಮಕ್ಕೆ ಪ್ರವರ್ತಕವಾದರೆ ಇದು ಅದಕ್ಕಿಂತ ಭಿನ್ನವಾದುದು ಎಂಬ ಅರ್ಥವು ದೊರೆಯುವುದರಿಂದ ಯತೀಶ್ವರ ಎಂಬ ನಾಮದ ಅರ್ಥವು ಸೂಚಿತವಾಗುತ್ತದೆ. ಬುಧ್ನಾತ್= ಜ್ಞಾನರೂಪನಾದ (ಬುಧ ಅವಬೋಧನೇ ಎಂಬ

ಧಾತುವಿನಿಂದ ಈ ಅರ್ಥವು ದೊರೆಯುತ್ತದೆ), ಅಥವಾ ಸಕಲ ವೈಷ್ಣವರಿಗೆ ಮೂಲಾಧಾರನಾದ (ಮೂಲಂ ಬುಧ್ನೋ ಅಂಘ್ರಿನಾಮಕಃ ಎಂಬ ಕೋಶದಿಂದ ಆಧಾರವೆಂಬ ಅರ್ಥವು ದೊರೆಯುತ್ತದೆ), ಯತ್= ಯಾವ ಈ ಮಧ್ವನಾಮಕನಾದ ತೃತೀಯ ರೂಪದಿಂದ, ಈಂ= ಇತ್ಥಂ= ಜಗತ್ತಿನಲ್ಲಿ ಪ್ರವೃತ್ತವಾದ ಮಧ್ವಸಿದ್ಧಾಂತದ ರೀತಿಯಿಂದ, ಈಶಾನಾಸಃ= ರುದ್ರದೇವರೇ ಮೊದಲಾದ, ಸೂರಯಃ= ವಿದ್ವಾಂಸರು, ಮಹಿಷಸ್ಯ= ಸರ್ವೋತ್ತಮನಾದ ನಾರಾಯಣನ, ವರ್ಪಸಃ= ವರಣೀಯವಾದ ಕಾರಣದಿಂದ ಮತ್ತು ಪಾಲಕಗಳಾದ ಕಾರಣದಿಂದ ವರ್ಪಸ್ ಎಂಬ ಶಬ್ದದಿಂದ ಹೇಳಲ್ಪಡುವ ಗುಣಗಳನ್ನು ಮತ್ತು ಅವತಾರಗಳನ್ನು ನಿರಕ್ರಂತ= ಚೆನ್ನಾಗಿ ತಿಳಿದರು ಎಂದು ಅರ್ಥ. ಕ್ರಂಧಿಗತಿಶೋಷಣಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಅಕ್ರಂತ ಎಂಬ ಕ್ರಿಯಾಪದವು, ಅಜಾನಂತ= ತಿಳಿದರು ಎಂಬ ಅರ್ಥವನ್ನು ಕೊಡುತ್ತದೆ. ಅಥವಾ ಮಹಿಷಸ್ಯ= ಶ್ರೇಷ್ಠನಾದ ವಾಯುವಿನ, ವರ್ಪಸಃ= ಗುರುಗಳಾದ್ದರಿಂದ ವರಣೀಯವಾದ ಮತ್ತು ಜ್ಞಾನದಾನದಿಂದ ಪಾಲಕವಾದ, ಬುಧ್ನಾತ್= ಜ್ಞಾನ ಪ್ರಚುರವಾದ ತೃತೀಯರೂಪದಿಂದ, ಈಶಾನಾಸಃ ಸೂರಯಃ= ರುದ್ರದೇವರೇ ಮೊದಲಾದ ಜ್ಞಾನಿಗಳು, ನಿರಕ್ರಂತ= ಸಂಸಾರದಿಂದ ನಿಷ್ಕ್ರಾಂತರಾಗಿ ಮುಕ್ತರಾದರು ಎಂದೂ ಅರ್ಥವಾಗುತ್ತದೆ, 'ಯಥಾಪೂರ್ವಂ ಪ್ರಜಾಯಂತೇ' ಎಂಬ ಸ್ಮೃತಿಯೂ 'ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ' ಎಂಬ ಶ್ರುತಿಯೂ ಈ ಅರ್ಥವನ್ನು ಪೋಷಿಸುತ್ತವೆ. ಈಂ ಎಂದರೆ ಇತ್ಥಂ ಎಂದರೆ ಈ ರೀತಿಯಾಗಿ ಎಂದರೆ ಹಿಂದೆ ಮುಕ್ತರಾದ ದೇವತೆಗಳಂತೆ, ನಿರಕ್ರಂತ= ಸಂಸಾರದಿಂದ ಮುಕ್ತರಾದರು ಎಂದು ಅರ್ಥ. ಈ ಎರಡು ವಿವರಣೆಗಳು ಜ್ಞಾನದಾತಾ ಎಂಬ ವಾಯುದೇವರ ನಾಮದ ಅರ್ಥವನ್ನು ಸೂಚಿಸುತ್ತವೆ. ಯತ್= ಯಸ್ಮಾತ್= ಯಾವ ಕಾರಣದಿಂದ, ಪ್ರದಿವಃ= ಪ್ರಕೃಷ್ಟವಾದ ಜ್ಞಾನಪ್ರಕಾಶವುಳ್ಳ (ದಿವು ಕ್ರೀಡಾಯಾಂ ಎಂಬ ಧಾತುವಿಗೆ ಭಾವಾರ್ಥದಲ್ಲಿ ಕ ಪ್ರತ್ಯಯವನ್ನು ಮಾಡಿದರೆ ದಿವಃ ಎಂಬ ರೂಪವು ಸಿದ್ಧವಾಗುತ್ತದೆ), ಮಧ್ವೋ ಮಾತರಿಶ್ವಾ= ಮಧ್ವನಾಮಕನಾದ ವಾಯುವು, ಅನು= ಅವತಾರ ಮಾಡಿದ ತಕ್ಷಣವೇ ಪ್ರದಿವಃ= ಪ್ರಕೃಷ್ಟವಾದ ಜ್ಞಾನವನ್ನು ಉಳ್ಳ ರುದ್ರಾದಿ ದೇವತೆಗಳನ್ನು, ಅನು= ಅನುಸರಿಸಿ (ಎಂದಾದರೂ ಅರ್ಥವನ್ನು ಮಾಡಬಹುದು) ಅಥವಾ ವೇದಬ್ರಹ್ಮಮೀಮಾಂಸಾ ಶಾಸ್ತ್ರಗಳನ್ನು ಅನುಸರಿಸಿ ಎಂದೂ ಅನು ಶಬ್ದಕ್ಕೆ ಅರ್ಥವನ್ನು ಮಾಡಬಹುದು. ಗುಹಾಸಂತಂ= ಹೃದಯ ಗುಹೆಯಲ್ಲಿರುವ ನಾರಾಯಣನನ್ನು, ಆಧವೇ= ಅವನ ಸರ್ವೋತ್ತಮತ್ವದ ವಿಷಯದಲ್ಲಿ, ಮಥಾಯತಿ= ಮಥನ ಮಾಡುತ್ತಾನೆ. ವೇದಶಾಸ್ತ್ರರೂಪವಾದ ವಿಚಾರವನ್ನು ಮಥನ ಮಾಡಿ ಹೃದ್ಗುಹೆಯಲ್ಲಿರುವ ನಾರಾಯಣನನ್ನು ಪ್ರಕಾಶಪಡಿಸುತ್ತಾರೆ ಎಂದು ಅರ್ಥ. ಆ ಕಾರಣದಿಂದ ಯಾವ ಮಧ್ವರಿಂದ ರುದ್ರಾದಿ ಜ್ಞಾನಿಗಳು ಭಗವದ್ಗುಣಗಳನ್ನು ಚೆನ್ನಾಗಿ ತಿಳಿದರೋ, ತತ್= ಅದು, ತೃತೀಯಂ ವಪುಃ= ವಾಯುದೇವರ ಮೂರನೆಯ ಶರೀರ

ಎಂದು ಯೋಜನೆಯನ್ನು ಮಾಡಬೇಕು. ಈ ಶ್ರುತಿಯಲ್ಲಂತೂ ಸ್ಪಷ್ಟವಾಗಿ ಮಧ್ವ ಮತ್ತು ಮಾತರಿಶ್ವಾ ಎಂಬ ಹೆಸರುಗಳನ್ನು ಸಮಾನವಿಭಕ್ತಿಕವಾಗಿ ಹೇಳಿರುವುದರಿಂದ ಮೂರನೆಯ ರೂಪವು ವಾಯುವಿನ ಅವತಾರವೆಂದು ಮತ್ತು ಮಧ್ವನಾಮಕವೆಂದು ಸ್ಪಷ್ಟವಾಗುತ್ತದೆ.

ಯತ್= ಯಸ್ಮಾತ್, ಯಾವ ಕಾರಣದಿಂದ ಈ ಮಧ್ವಾಚಾರ್ಯರು, ಪರಮಾತ್ಪಿತುಃ ಜನಕತಂದೆಯಾದ ಸರ್ವೋತ್ತಮನಾದ ನಾರಾಯಣನಿಂದ, ಅಥವಾ ಅತಿಶಯಿತ ವಿದ್ಯೆಯನ್ನು ಹೊಂದಿರುವುದರಿಂದ ಪರಮಶಬ್ದವಾಚ್ಯರಾದ ಮತ್ತು ಗುರುಗಳಾದ್ದರಿಂದ ಪಿತೃಸ್ಥಾನಾಪನ್ನರಾದ ವೇದವ್ಯಾಸರಿಂದ ಪರಿ= ಪರಿತಃ ಎಲ್ಲ ಕಡೆಗಳಲ್ಲಿಯೂ, ಪ್ರ-ಣೀಯತೇ= ಶ್ರೇಷ್ಠವಾಗಿ ಪ್ರೇರಿಸಲ್ಪಟ್ಟು ಕರೆದುಕೊಂಡು ಹೋಗಲ್ಪಡುತ್ತಾರೆಯೋ ಎಂದರೆ ಈ ಕಾರ್ಯವನ್ನು ಮಾಡಲು ಇಲ್ಲಿ ಬಾ ಎಂದು ನಿಯಮಿಸಲ್ಪಡುತ್ತಾರೆಯೋ ಎಂದರೆ ಭಗವತ್ಸಂಕಲ್ಪಕ್ಕೆ ಅನುಸಾರವಾಗಿ ವಾಯುದೇವರು ಎಲ್ಲಾ ಕಾರ್ಯಗಳನ್ನು ಮಾಡುತ್ತಾರೆ. ಸ್ವೇಚ್ಛೆಯಿಂದ ಮಾಡುವುದಿಲ್ಲ ಮತ್ತು ಪಾಪಕರ್ಮಗಳನ್ನೂ ಮಾಡುವುದಿಲ್ಲ ಎಂದು ಅಭಿಪ್ರಾಯ. ತತ್= ಆ ಕಾರಣದಿಂದ, ವೀರುಧಃ ವಿಶೇಷವಾಗಿ ಮತ್ತೆ ಮತ್ತೆ ಹುಟ್ಟುವುದರಿಂದ ಮತ್ತು ವೇದವೆಂಬ ವೃಕ್ಷವನ್ನು ಆಶ್ರಯಿಸಿರುವುದರಿಂದ ಲತಾ ರೂಪವಾದ, ಪೃಕ್ಷುಧಃ ಪ್ರತಿವಾದಿಗಳ ಪ್ರಶ್ನೆಗಳನ್ನು, ಪೃಚ್ಛಜ್ಞೀಪ್ಸಾಯಾಂ ಎಂಬ ಧಾತುವಿನಿಂದ ಛಕಾರಕ್ಕೆ ವರ್ಣವಿಕಾರವುಂಟಾಗಿ ಪ್ರಶ್ನ ಎಂದು ರೂಪವಾದಂತೆ ಛಕಾರಕ್ಕೆ ಕ್ಷುತ್ ಎಂಬ ವರ್ಣವಿಕಾರವುಂಟಾಗಿ ಪೃಕ್ಷುದ್ ಶಬ್ದವೂ ವರ್ಣವಿಕಾರದಿಂದ ನಿಷ್ಪನ್ನವಾಗಿದೆ. ಪ್ರತಿವಾದಿಗಳ ಪ್ರಶ್ನೆಗಳು ಪ್ರಮಾಣಿಕವಲ್ಲವೆಂದು ಸೂಚಿಸಲು ಪೃಕ್ಷುಧಃ ಎಂಬಲ್ಲಿ ಋಕಾರಕ್ಕೆ ಗುಣವನ್ನು ಮಾಡಿಲ್ಲ, ದಂಸುಃ ದಂತೇಷುಃ ದಂತಗಳಲ್ಲಿ, ಆರೋಹತಿ= ಇಟ್ಟುಕೊಳ್ಳುತ್ತಾರೆ, ಹೇಗೆ ಲತೆಗಳನ್ನು ದಂತಗಳಲ್ಲಿ ಇಟ್ಟುಕೊಂಡು ಪುಡಿ ಮಾಡುತ್ತಾರೆಯೋ ಅದರಂತೆ ಪ್ರತಿವಾದಿಗಳು ಮಾಡಿದ ಪ್ರಶ್ನೆಗಳನ್ನು ದಂತದ ಬಳಿ ಇರುವ ಶಬ್ದಸಮೂಹಗಳಿಂದ ನಿರಾಕರಣೆ ಮಾಡುತ್ತಾರೆ ಎಂದು ಅರ್ಥ. ಆದ್ದರಿಂದಲೇ ಇಲ್ಲಿ ಮುಖ್ಯವಾದ ದಂತತ್ವವು ಇಲ್ಲವಾದ ಕಾರಣದಿಂದ ದತ್ಸು ಎಂದು ಹೇಳುವ ಬದಲು ದಂಸು ಎಂದು ಹೇಳಿದ್ದಾರೆ. ಪುಮಾನ್ ಎಂಬ ಶಬ್ದವು ಪುಂಸು ಎಂದು ರೂಪವನ್ನು ಪಡೆದಂತೆ ಈ ಶಬ್ದವು ರೂಪವನ್ನು ಪಡೆಯುತ್ತದೆ. ದೋ ಅವಖಂಡನೇ ಎಂಬ ಧಾತುವಿಂದಾಗಲೀ, ದಂಶ ದಂಶನೇ ಎಂಬ ಧಾತುವಿಂದಾಗಲೀ ದನ್ ಎಂಬ ನಕಾರಾಂತ ಶಬ್ದವು ನಿಷ್ಪನ್ನವಾಗುತ್ತದೆ. ಪ್ರತಿವಾದಿಗಳ ಪ್ರಶ್ನೆಗಳನ್ನು ನಿರಾಕರಣೆ ಮಾಡಲು 'ತನ್ನ' ಎಂದೇ ಪ್ರಾರಂಭಿಸುತ್ತಾರೆ. ಇಲ್ಲಿ ತ, ನ ಎರಡು ವರ್ಣಗಳು ದಂತ್ಯ ವರ್ಣಗಳಾದ್ದರಿಂದ ಹಲ್ಲುಗಳಲ್ಲಿ ಏರಿಸಿ ಚೂರ್ಣಮಾಡುತ್ತಾರೆ ಎಂಬುದು ಉಚಿತವಾಗುತ್ತದೆ. ಅಪ್ರಾಮಾಣಿಕ ಶಂಕೆಗಳೆಲ್ಲವನ್ನೂ 'ತನ್ನ' ಎಂದೇ ನಿರಾಕರಿಸುತ್ತಾರೆ. ಕೆಲವು ಬಾರಿ ಪ್ರಾಮಾಣಿಕ ಶಂಕೆಗಳಿರುತ್ತವೆ. ಅದನ್ನು ನಿರಾಕರಣೆ ಮಾಡುವಾಗ ಸತ್ಯಂ ಎಂದು ಶಂಕೆಯ ಪ್ರಾಮಾಣಿಕತ್ವವನ್ನು ಅಂಗೀಕರಿಸಿ ಅನಂತರ ಅದಕ್ಕೆ ಪರಿಹಾರವನ್ನು

ಹೇಳುತ್ತಾರೆ. ಸತ್ಯಂ ಎಂಬಲ್ಲಿಯೂ ಸಕಾರ ಮತ್ತು ತಕಾರಗಳು ದಂತ್ಯ ವರ್ಣಗಳು. ಕೊನೆಯಲ್ಲಿರುವ ಯ ಕಾರವು ಅಪ್ರಧಾನವಾದುದು. ಆದ್ದರಿಂದ ಆ ಸ್ಥಳದಲ್ಲಿಯೂ ದಂತ್ಯವರ್ಣಗಳಿಂದಲೇ ನಿರಾಕರಣೆಯು ಪ್ರಾರಂಭವಾಗುತ್ತದೆ. ಆ ಕಾರಣದಿಂದ ದಂಸುರೋಹತಿ ಎಂಬುದು ಬಹಳ ಉಚಿತವಾಗಿದೆ.

ಅಥವಾ ವೀರುಧಃ ವೀ= ಭಗವದ್ವಿರೋಧಿಗಳಾಗಿ, ರುಧಃ= ಉತ್ಪನ್ನರಾದ, ಪೃಕ್ಷುಧಃ= ತಮ್ಮ ಸೈನ್ಯದ ಕ್ಷೋಭೆಯನ್ನು ಉಂಟುಮಾಡುವ ಕಲ್ಯಾದಿ ದೈತ್ಯ ಸಮೂಹವನ್ನು ದಂಸು= ತನ್ನ ದಂತಗಳಲ್ಲಿ (ದಂತಗಳನ್ನು), ಆರೋಹತಿ= ತಮ್ಮ ಪಾದದಿಂದ ಮೆಟ್ಟಿನಿಲ್ಲುತ್ತಾರೆ. ಕಲ್ಯಾದಿ ದೈತ್ಯರನ್ನು ಪರಾಭವಗೊಳಿಸಿ ಅವರ ದಂತಭಂಗವನ್ನು ಮಾಡುತ್ತಾರೆ ಎಂದು ಅರ್ಥ. ಪರಾಜಯ ಎಂಬ ಅರ್ಥದಲ್ಲಿ ದಂತಭಂಗ ಎಂಬ ಪ್ರಯೋಗವು ಲೋಕದಲ್ಲಿ ಪ್ರಸಿದ್ಧವಾಗಿದೆಯಷ್ಟೆ. ಅಲ್ಲದೇ, ಭೀಮಸೇನನು ದುಶ್ಶಾಸನಾದಿಗಳಿಗೆ ಸಾಕ್ಷಾತ್ ದಂತಭಂಗವನ್ನು ಮಾಡಿದುದನ್ನು ಇಲ್ಲಿ ತೆಗೆದುಕೊಳ್ಳಬಹುದು. 'ಅಧಸಪತ್ನಾಮೇ ಪದೋರಿಮೇ ಸರ್ವೇ ಅಭಿಷ್ಠಿತಾಃ' (ನನ್ನ ಈ ಎರಡು ಪಾದಗಳ ಕೆಳಗೆ ಎಲ್ಲ ಶತ್ರುಗಳು ಇದ್ದಾರೆ) ಎಂಬ ಶ್ರುತಿಯು 'ತ್ವಯಾಭಿಗುಪ್ತಾ ವಿಚರಂತಿ ನಿರ್ಭಯಾ ವಿನಾಯಕಾನೀಕಪಮೂರ್ಧಸು ಪ್ರಭೋ' (ಪ್ರಭುವೇ ನಿನ್ನಿಂದ ರಕ್ಷಿತರಾಗಿ ನಿನ್ನ ಭಕ್ತರು ನಾಯಕರಹಿತರಾದ ಶತ್ರುಸೈನ್ಯದ ಪ್ರಧಾನರ ತಲೆಯನ್ನು ಮೆಟ್ಟಿನಿಲ್ಲುತ್ತಾರೆ) ಎಂಬ ಭಾಗವತ ಸ್ಮೃತಿಯು ಈ ಅರ್ಥವನ್ನು ಪೋಷಿಸುತ್ತವೆ.

ಯತ್=ಯಾವ ಕಾರಣದಿಂದ, ಉಭೌ= ಲಕ್ಷ್ಮೀನಾರಾಯಣರಿಬ್ಬರೂ, ಅಸ್ಯ= ಈ ಮಧ್ವಾಚಾರ್ಯರ ಸ್ವಾಮಿಗಳಾದ ಪ್ರಯುಕ್ತ ಯತ್= ಯಾವ ಕಾರಣದಿಂದ, ಜನುಷಂ= ಜನನವನ್ನು, ಇನ್ವತಃ= ಪ್ರೇರಿಸುತ್ತಾರೆಯೋ, ಇನ್ವತಿ ಎಂಬುದು ಇಣ್ ಗತೌ ಎಂಬ ಧಾತುವಿನ ವೈದಿಕರೂಪ, ಆತ್= ಈ ಕಾರಣದಿಂದ ಅಥವಾ ಅಕಾರವಾಚ್ಯನಾದ ಪ್ರೇರಕನಾದ ಭಗವಂತನ ಬಲದಿಂದ, ಯವಿಷ್ಠಃ= ಸೂಕ್ಷ್ಮರೂಪವುಳ್ಳ ಮಧ್ವರು, ಗೃಣಾ= ಗೃಣಾವಾನ್= ಕರುಣೆಯುಳ್ಳವರಾಗಿ, ಅಭವತ್= ಆದರು. ಯತಿರೂಪವನ್ನು ಧರಿಸಿ ಭೀಮಾದಿಗಳಂತೆ ಶತ್ರುಹಿಂಸೆಯನ್ನು ಮಾಡಲಿಲ್ಲ ಎಂದು ಅರ್ಥ. ಈ ಕರುಣೆಯು ಲೋಕಮರ್ಯಾದಾರಕ್ಷಣೆಗಾಗಿಯೇ ಹೊರತು ಅವರಿಗೆ ಸ್ವಾಭಾವಿಕವಾದುದಲ್ಲ ಎಂದು ತಿಳಿಸಲು ಗೃಣೀ ಎಂಬ ಶಬ್ದಕ್ಕೆ ಬದಲಾಗಿ ಗೃಣಾ ಎಂದು ವ್ಯತ್ಯಾಸವಾಗಿ ಪ್ರಯೋಗ ಮಾಡಿದ್ದಾರೆ. ಹಾಗೆಯೇ ಶುಚಿಃ ಪರಮಹಂಸರ ಧರ್ಮಾಚರಣೆಯನ್ನು ಮಾಡಿದುದರಿಂದ ಪರಮಪವಿತ್ರರೂ, ಅಭವತ್= ಆದರು. ಆತ್= ಅಕಾರವಾಚ್ಯನಾದ ಪರಮಾತ್ಮನ ಪ್ರೇರಣೆಯಿಂದಲೇ, ಇತ್= ಇತ್ಥಂ= ಇದೇ ರೀತಿಯಾಗಿ ಪ್ರತಿಯೊಂದು ಕಲ್ಪದಲ್ಲಿ ಮಾತೃಃ= ತಮ್ಮ ತಾಯಿಯರನ್ನು ಆವಿಶತ್= ಪ್ರವೇಶಿಸಿದರು. ಎಂದರೆ ತಾಯಿಯ ಉದರದಲ್ಲಿ ಶುಕ್ಲಶೋಣಿತಸಂಯೋಗಪರಿಣಾಮರೂಪವಾದ ದೇಹದ ಉತ್ಪತ್ತಿ ಸಮಯದಲ್ಲಿ ತಾವಾಗಿಯೇ ಪ್ರವೇಶಿಸಿದರು ಹೊರತಾಗಿ ಮೊದಲಿಂದಲೂ

ತಂದೆಯ ಉದರದಲ್ಲಿ ಅಥವಾ ತಾಯಿಯ ಉದರದಲ್ಲಿದ್ದು ಗರ್ಭವಾಸದುಃಖವನ್ನು ಅನುಭವಿಸಲಿಲ್ಲ ಎಂದು ಅಭಿಪ್ರಾಯ. ಆದ್ದರಿಂದಲೇ ಯಾವ ಈ ತಾಯಿಯರಲ್ಲಿ ಆಶುಚಿಃ ಪರಿಪೂರ್ಣಶುಚಿಗಳಾಗಿ ಎಂದರೆ ಪಾಪಾದಿಕರ್ಮಲೇಪರಹಿತರಾಗಿ ಅಹಿಂಸ್ಯಮಾನಃ ಗರ್ಭದಲ್ಲಾಗಲೀ, ಗರ್ಭದಿಂದ ಹೊರಗೆ ಬಂದ ಮೇಲಾಗಲೀ ಕಲ್ಯಾದಿದೈತ್ಯರ ಹಿಂಸೆಗೆ ಒಳಗಾಗದವರಾಗಿ ಉರ್ವಿಯಾ= ಉರ್ವ್ಯಾ= ಎಂದರೆ ವಿಸ್ತಾರವಾದ ತಮ್ಮ ಶಕ್ತಿಯಿಂದ ವಿವಾವೃಧೇ= ವಿಶೇಷೇಣ ಅಭಿವೃದ್ಧಿಯನ್ನು ಹೊಂದಿದರು. ದೇವತೆಗಳ ಈ ಅಭಿವೃದ್ಧಿಯು ನೂರು ವರ್ಷಗಳ ಕಾಲ ಎಂಬ ವಾಯುಪುರಾಣ ವಚನಕ್ಕೆ ಅನುಸಾರವಾಗಿ ಈ ಅಭಿವೃದ್ಧಿಯು ದೀರ್ಘವಾದುದು ಎಂದು ತಿಳಿಸಲು ವವೃಧೇ ಎಂಬ ಶಬ್ದಕ್ಕೆ ಬದಲಾಗಿ ವಾವೃಧೇ ಎಂದು ದೀರ್ಘವನ್ನು ಆಶ್ರಯಿಸಿದ್ದಾರೆ.

ಯತ್= ಯಾವ ಕಾರಣದಿಂದ ಈ ಮಧ್ವರು ಸನಾಜುವಃ ಸನಾಜುಷಃ ಸನಾತ್ ಎಂದರೆ ಸನಾತನನಾದ ನಾರಾಯಣನನ್ನು ಜುಷಃ ಜುಷಂತೇ= ಗುಣಗಳನ್ನು ಸ್ತೋತ್ರ ಮಾಡುವುದರಿಂದ ಸೇವಿಸುತ್ತಾರೆಯೋ, ಜುಷಃ ಎಂಬ ಅರ್ಥದಲ್ಲಿ ಜುವಃ ಎಂಬುದು ವೈದಿಕ ಪ್ರಯೋಗ, ಪೂರ್ವಾಃ ಸಪ್ತವಿದ್ಯೆಗಳಲ್ಲಿ ಮೊದಲನೆಯವುಗಳಾದ ನಾಲ್ಕು ವಿದ್ಯೆಗಳನ್ನು ಅನುಃ ಅಲ್ಲಿಯ ಉಪಕ್ರಮಉಪಸಂಹಾರಗಳಿಗೆ ಅನುಗುಣವಾಗಿ ಆರುಹತ್= ಮನಸ್ಸಿನಿಂದ ಆರೋಹವನ್ನು ಮಾಡಿ ಅಥವಾ ಅಭಿಮಾನಿಗಳಾದ್ದರಿಂದ ಆರೋಹವನ್ನು ಮಾಡಿ ಇರುತ್ತಾರೆ. ಹೇಗೆ ಅಶ್ವಾರೋಹನಾದ ಪುರುಷನು ಶತ್ರುಗಳು ಆ ಅಶ್ವವನ್ನು ಕೊಲ್ಲುವುದಕ್ಕೆ ಅವಕಾಶವನ್ನು ಕೊಡುವುದಿಲ್ಲವೋ ಅದರಂತೆ ವೇದಾಭಿಮಾನಿಗಳಾದ್ದರಿಂದ ಮಧ್ವರೂ ಸಹ ವೇದಗಳಿಗೆ ಅನ್ಯಾರ್ಥವನ್ನು ಮಾಡಲು ಅವಕಾಶವನ್ನು ಕೊಡುವುದಿಲ್ಲ ಎಂದು ಸೂಚಿಸಲು ಆರೋಹತ್ ಎಂದು ಪ್ರಯೋಗಿಸಲ್ಪಟ್ಟಿದೆ. ಯಾವ ಕಾರಣದಿಂದ ನಾರಾಯಣನನ್ನು ಸ್ತೋತ್ರ ಮಾಡುತ್ತಾರೆಯೋ ಮತ್ತು ವೇದವಿದ್ಯೆಗಳಲ್ಲಿ ಉಪಕ್ರಮಾದಿಗಳಿಗೆ ಅನುಗುಣವಾಗಿ ನಡೆಯುತ್ತಾರೆಯೋ, ತಸ್ಮಾತ್= ಆ ಕಾರಣದಿಂದ, ನಿನವ್ಯಸೀಷುಃ ಬಹಳ ಹೊಸದಾದ ವಿದ್ಯೆಗಳಾದ ಎಂದರೆ ನಾರಾಯಣನ ಮೂಲರೂಪದಿಂದಾಗಲೀ ಅಥವಾ ವ್ಯಾಸಾದಿ ಅವತಾರ ರೂಪದಿಂದಾಗಲೀ ಉತ್ಪನ್ನವಾದಂತಹ ಅವರಾಸುಃ ವೇದವಿದ್ಯೆಯ ಅನಂತರದ ವಿದ್ಯೆಯಾದ ಪುರಾಣಪಂಚರಾತ್ರಮೂಲರಾಮಾಯಣಾದಿಗಳಲ್ಲಿ ಧಾವತೇ= ಓಡುತ್ತಾರೆ, ಅನುಕೂಲವಾದ ವರಬಲದಿಂದಲೂ ಸಾಕ್ಷಾತ್ ಭಗವದುಪದೇಶ ಇರುವುದರಿಂದಲೂ ವೇದದಲ್ಲಿ ನಡೆದುದಕ್ಕಿಂತ ತ್ವರಿತವಾಗಿ ಅರ್ಥಗಳ ಅವಗಾಹನೆಯನ್ನು ಮಾಡುತ್ತಾರೆ. ವೇದಗಳೂ ಸಹ ಸೃಷ್ಟಿಕಾಲದಲ್ಲಿಯೇ ಪ್ರಾದುರ್ಭೂತವಾದ್ದರಿಂದ ಹೊಸದೇ ಆಗಿದ್ದರೂ ಭಗವತ್ಕೃತತ್ವವು ಇಲ್ಲದಿರುವುದರಿಂದ ಅವುಗಳಲ್ಲಿ ವಿಶೇಷವಾದ ನವ್ಯತ್ವವು ಇಲ್ಲ ಪುರಾಣಾದಿಗಳಲ್ಲಿ ಇದೆ ಎಂದು ಸೂಚಿಸಲು

'ನಿ' ಎಂಬ ಉಪಸರ್ಗವನ್ನು ಸೇರಿಸಿ ನಿನವ್ಯಸೀಷು ಎಂದು ಪ್ರಯೋಗಿಸಲ್ಪಟ್ಟಿದೆ. ಪುರಾಣಾದಿಗಳಾದರೂ ಕಾಳಿದಾಸನ ಮೇಘಸಂದೇಶಾದಿಕಾವ್ಯಗಳಂತೆ ಶಬ್ದದಿಂದ ಮತ್ತು ಅರ್ಥದಿಂದ ನವ್ಯತ್ವವನ್ನು ಹೊಂದಿದವುಗಳಲ್ಲ. ಶಬ್ದಗಳ ಕ್ರಮಮಾತ್ರದಲ್ಲಿ ವ್ಯತ್ಯಾಸವಿದ್ದರೂ ಅರ್ಥತಃ (ಅರ್ಥದಲ್ಲಿ) ಮತ್ತು ಶಬ್ದತಃ (ಶಬ್ದದ ಸ್ವರೂಪದಲ್ಲಿ) ವ್ಯತ್ಯಾಸವಿಲ್ಲ ಎಂಬ ವೈಲಕ್ಷಣ್ಯವನ್ನು ಸೂಚಿಸಲು ನವೀಯಸೀಷು ಎಂಬ ಪ್ರಯೋಗಕ್ಕೆ ಬದಲಾಗಿ ನವ್ಯಸೀಷು ಎಂದು ಪ್ರಯೋಗವನ್ನು ಮಾಡಿದ್ದಾರೆ.

ಮತ್ತು ಮೊದಲನೆಯ ಶರೀರ ಎಂದು ಹೇಳಿದ್ದರಿಂದ ಹನುಮಂತನಿಗೆ ವಾಯುಪುತ್ರ ನಾಮವು ಋತಸ್ಯ ಉಪ.... ಎಂದು ಹೇಳಿದ್ದರಿಂದ ರಾಮೇಷ್ಟನಾಮವು ಸಾಧತೇ ಎಂಬ ಪದದಿಂದ ಮಹಾಬಲ ಮತ್ತು ದಶಗ್ರೀವಸ್ಯ ದರ್ಪಹಾ ಎಂಬ ನಾಮಗಳು ಧೇನಾ ಅನಯಂತ ಎಂಬ ಶಬ್ದಗಳಿಂದ ಅಮಿತವಿಕ್ರಮ ಎಂಬ ನಾಮವೂ, ಉದಧಿಕ್ರಮಣ ಎಂಬ ನಾಮವೂ, ಸೀತಾಶೋಕ ವಿನಾಶನ ಎಂಬ ನಾಮವೂ ಸೂಚಿಸಲ್ಪಡುತ್ತವೆ. ಹನುಮಾನ್ ಎಂಬ ನಾಮವಾದರೂ ಪ್ರತಿಯೊಂದು ಪದ ಅಥವಾ ಪದಬಂಧದಿಂದ ಸೂಚಿಸಲ್ಪಡುತ್ತದೆ. ದ್ವಿತೀಯಶರೀರ ಎಂದು ಹೇಳಿದ್ದರಿಂದ ಮತ್ತು ಭೀಮಶ್ರುತಿಯಿಂದಲೂ ಮಾರುತಿ ಎಂಭ ನಾಮವು, ಪೃಕ್ಷ ಎಂಬ ಪದದಿಂದ ಮಹಾಬಲ, ಗದಾಪಾಣಿ, ದುಶ್ಶಾಸನವಿನಾಶನ, ಜರಾಸಂಧಾಂತಕೃತ್, ವೀರ ಎಂಬ ನಾಮಗಳು, ಪಿತುಮಾನ್ ಎಂಬ ಶಬ್ದದಿಂದ ವೃಕ ಎಂಬ ಅಗ್ನಿಯನ್ನು ಉದರದಲ್ಲಿ ಹೊಂದಿರುವ ಕಾರಣದಿಂದ ವೃಕೋದರ ಎಂಬ ನಾಮವು, ಮಾತೃಷು ಆವಿಶತ್ ಎಂಬ ಪದಗಳಿಂದ ಕೃಷ್ಣದಯಿತ ಎಂಬ ನಾಮವು ಸೂಚಿತವಾಗುತ್ತದೆ. ಭೀಮನಾಮಾರ್ಥ-ವಾದರೂ ಸರ್ವತ್ರ ಸೂಚಿತವಾಗುತ್ತದೆ. ಮಧ್ವಶ್ರುತಿಯಿಂದಲೂ ಮತ್ತು ತೃತೀಯಮಸ್ಯ ಎಂಬ ವಾಕ್ಯದಿಂದಲೂ ಆನಂದತೀರ್ಥ, ಪೂರ್ಣಪ್ರಜ್ಞ ಮತ್ತು ಯತೀಶ್ವರ ಎಂಬ ನಾಮಗಳು ನಿರ್ಯದೀಂ ಎಂಬ ವಾಕ್ಯದಿಂದ ಜ್ಞಾನದಾತಾ, ವೈಷ್ಣವಾಚಾರ್ಯ ಎಂಬ ನಾಮಗಳು, ಯದೀಮನು ಎಂಬ ವಾಕ್ಯದಿಂದ ಮಧ್ವ, ತತ್ವಜ್ಞ ನಾಮಗಳು, ಪ್ರಯತ್ ಪಿತುಃ ಎಂಬ ವಾಕ್ಯದಿಂದ ವ್ಯಾಸಶಿಷ್ಯ, ಧ್ವಸ್ತದುರಾಗಮ, ಜಿತವಾದೀ ಎಂಬ ನಾಮಗಳು ಸೂಚಿಸಲ್ಪಡುತ್ತವೆ. ಉಭಾ ಯದಸ್ಯ ಎಂಬ ವಾಕ್ಯದಲ್ಲಿ ಶುಚಿಪದದಿಂದ ಜಿತೇಂದ್ರಿಯನಾಮವು ಸೂಚಿಸಲ್ಪಡುತ್ತದೆ. ಆದ್ದರಿಂದ ಈ ವರ್ಗವು ಲೋಕ ಪ್ರವಾದದಿಂದಲೂ ಹನುಮದಾದಿರೂಪತ್ರಯಪ್ರತಿಪಾದಕವಾಗಿದೆ ಎಂದು ಸಿದ್ಧವಾಗುತ್ತದೆ ಎಂದು ತಿಳಿಯಬೇಕು.

ಯಸ್ಯಚೋರ್ ಮಧ್ವನಾಮಾಂಕಾಃ ಶ್ಲೋಕಾನೇಕಾದಶಾಗೃಣನ್ ।
ಸ ಮಧ್ವೋ ವೈದಿಕಾಚಾರ್ಯೋ ಗುರುರ್ಜಯತಿ ದುರ್ಜನಾನ್ ॥ ೭೧೩ ॥

**ಅರ್ಥ–** ಮಧ್ವನಾಮಾಂಕಾಃ= ಮಧ್ವ ಎಂಬ ನಾಮವನ್ನು ಹೊಂದಿದ, ಏಕಾದಶ ಋಚಃ= ಹನ್ನೊಂದು ಋಕ್‌ಗಳು, ಯಸ್ಯ= ಯಾವ ಮಧ್ವಾಚಾರ್ಯರ, ಶ್ಲೋಕಾನ್= ಮಹಿಮೆಗಳನ್ನು, ಅಗೃಣನ್= ಹೇಳಿದವೋ, ಸಃ= ಅಂತಹ, ವೈದಿಕಾಚಾರ್ಯಃ= ವೈದಿಕಾಚಾರ್ಯರಾದ, ಮಧ್ವಃ= ಮಧ್ವಾಚಾರ್ಯರೆಂಬ, ಗುರುಃ= ಗುರುಗಳು, ದುರ್ಜನಾನ್= ದುರ್ವಾದಿಗಳನ್ನು, ಜಯತಿ= ಜಯಿಸುತ್ತಾರೆ.

**ಅನುವಾದ–** ಮಧ್ವನಾಮವನ್ನು ಹೊಂದಿದ ಹನ್ನೊಂದು ಮಂತ್ರಗಳು ಯಾವ ಮಧ್ವಾಚಾರ್ಯರ ಮಹಿಮೆಗಳನ್ನು ಹೊಗಳಿದವೋ ಅಂತಹ ಮಧ್ವಾಚಾರ್ಯರು ವೈದಿಕಾಚಾರ್ಯರಾದ ಗುರುಗಳು. ಅವರು ದುರ್ವಾದಿಗಳನ್ನು ಜಯಿಸುತ್ತಾರೆ.

**ಭಾವವಿಲಾಸಿನೀ–** ಯಸ್ಯ ಮಧ್ವಸ್ಯ ಋಚಃ ಪೂರ್ವೋಕ್ತಾಃ ಮಧ್ವನಾಮಾಂಕಾಃ, ಮಧ್ವ ಇತಿ ನಾಮ್ನಃ ಅಂಕೋ ಯಾಸು ತಾಃ । ಏಕಾದಶ ಪವಮಾನಪೂಯಮಾನಸ್ಥಾಃ ಸಪ್ತ, ಅನ್ಯತ್ರ ವಿದ್ಯಮಾನಾಶ್ಚತಸ್ರಃ । ಏವಮೇಕಾದಶ ॥ ೭೧೩ ॥

**ವಿವರಣೆ–** ಪವಮಾನ ಮತ್ತು ಪೂಯಮಾನ ಸೂಕ್ತಗಳನ್ನು ಸೇರಿಸಿ ಏಳು ಋಕ್‌ಗಳಲ್ಲಿ ಮಧ್ವ ಎಂಬ ನಾಮವಿದೆ. ಅವುಗಳನ್ನು ಬಿಟ್ಟು ಉಳಿದ ನಾಲ್ಕು ಕಡೆಗಳಲ್ಲಿ ಮಧ್ವ ಎಂಬ ನಾಮವಿದೆ. ಹೀಗೆ ಒಟ್ಟು ಹನ್ನೊಂದು ಮಂತ್ರಗಳಲ್ಲಿ ಮಧ್ವ ಎಂಬ ನಾಮವು ವೇದದಲ್ಲಿ ಬಂದಿದೆ ಎಂದು ಅಭಿಪ್ರಾಯ.

ವಾಯೋರ್ದಿವ್ಯಾನಿ ರೂಪಾಣಿ ಪದ್ಮತ್ರಯಯುತಾನಿ ಚ ॥ ೭೧೪ ॥

ತ್ರಿಕೋಟಿಮೂರ್ತಿಸಂಯುಕ್ತಸ್ತ್ರೇತಾಯಾಂ ರಾಕ್ಷಸಾಂತಕಃ ।
ಹನುಮಾನಿತಿ ವಿಖ್ಯಾತೋ ರಾಮಕಾರ್ಯಧುರಂಧರಃ ॥ ೭೧೫ ॥

ಸ ವಾಯುರ್ಭೀಮಸೇನೋಽಭೂದ್ ದ್ವಾಪರಾಂತೇ ಕುರೂದ್ವಹಃ ।
ಕೃಷ್ಣಂ ಸಂಪೂಜಯಾಮಾಸ ಹತ್ವಾ ದುರ್ಯೋಧನಾದಿಕಾನ್ ॥ ೭೧೬ ॥

**ಅರ್ಥ–** ವಾಯೋಃ= ವಾಯುದೇವರ, ದಿವ್ಯಾನಿರೂಪಾಣಿ= ದಿವ್ಯರೂಪಗಳು, ಪದ್ಮತ್ರಯಯುತಾನಿ ಚ= ಮೂರು ಪದ್ಮ ಸಂಖ್ಯೆಯನ್ನು ಹೊಂದಿವೆ, ತ್ರೇತಾಯಾಂ= ತ್ರೇತಾಯುಗದಲ್ಲಿ, ತ್ರಿಕೋಟಿಮೂರ್ತಿಸಂಯುಕ್ತಃ= ಮೂರು ಕೋಟಿ ರೂಪಗಳನ್ನು ಹೊಂದಿದವರಾಗಿ, ರಾಕ್ಷಸಾಂತಕಃ= ರಾಕ್ಷಸರನ್ನು ಸಂಹಾರ ಮಾಡುವವರಾಗಿ, ರಾಮಕಾರ್ಯ ಧುರಂಧರಃ= ರಾಮಕಾರ್ಯ ಧುರಂಧರರಾಗಿ, ಹನುಮಾನಿತಿ= ಹನುಮಾನ್ ಎಂದು, ವಿಖ್ಯಾತಃ= ವಿಖ್ಯಾತರಾದರು, ಸ ವಾಯುಃ= ಆ ವಾಯುದೇವರು, ದ್ವಾಪರಾಂತೇ= ದ್ವಾಪರ ಯುಗದ ಕೊನೆಯಲ್ಲಿ, ಕುರೂದ್ವಹಃ= ಕುರುವಂಶೋತ್ಪನ್ನರಲ್ಲಿ

ಶ್ರೇಷ್ಠರಾದ, ಭೀಮಸೇನಃ ಅಭೂತ್= ಭೀಮಸೇನರಾದರು, ದುರ್ಯೋಧನಾದಿಕಾನ್= ದುರ್ಯೋಧನಾದಿಗಳನ್ನು, ಹತ್ವಾ= ಕೊಂದು, ಕೃಷ್ಣಂ= ಕೃಷ್ಣನನ್ನು, ಸಂಪೂಜಯಾಮಾಸ= ಚೆನ್ನಾಗಿ ಪೂಜಿಸಿದರು.

**ಅನುವಾದ–** ವಾಯುದೇವರ ದಿವ್ಯರೂಪಗಳು ಮೂರು ಪದ್ಮಸಂಖ್ಯೆಯನ್ನು ಹೊಂದಿದವುಗಳಾಗಿ ವಿಷ್ಣುವಿನ ಸೇವೆಗಾಗಿ ಇವೆ. ಮೂರು ಕೋಟಿ ರೂಪಗಳನ್ನು ಧರಿಸಿದ ವಾಯುದೇವರು ತ್ರೇತಾಯುಗದಲ್ಲಿ ರಾಮಕಾರ್ಯಧುರಂಧರರಾಗಿ ರಾಕ್ಷಸರನ್ನು ಸಂಹಾರ ಮಾಡಿ ಪ್ರಖ್ಯಾತರಾದರು. ಆ ವಾಯುದೇವರು ದ್ವಾಪರಯುಗದ ಅಂತ್ಯದಲ್ಲಿ ಕುರುವಂಶದಲ್ಲಿ ಭೀಮಸೇನರಾಗಿ ಜನಿಸಿ ದುರ್ಯೋಧನಾದಿಗಳನ್ನು ಸಂಹರಿಸಿ ಕೃಷ್ಣನನ್ನು ಚೆನ್ನಾಗಿ ಪೂಜಿಸಿದರು.

**ಭಾವವಿಲಾಸಿನೀ–** ವಾಯೋರವತಾರಪ್ರತಿಪಾದಕವಾಯುಪುರಾಣವಚನಾನಿ ಸಂಗೃಹ್ಣಾತಿ ॥ **ವಾಯೋರ್ದಿವ್ಯಾನಿ ರೂಪಾಣೀತ್ಯಾದಿನಾ** ॥ ವಾಯೋಃ ಮೂಲರೂಪವಾಯೋಃ। ಪದ್ಮತ್ರಯಯುತಾನಿ ದಿವ್ಯಾನಿ ರೂಪಾಣಿ ವಿಷ್ಣೋಃ ಸೇವಾರ್ಥಂ ಸಂತೀತ್ಯರ್ಥಃ। ಪದ್ಮಂ ಮಹಾಪದ್ಮಮಿತಿ ಸಂಖ್ಯಾವಿಶೇಷಸ್ಯ ನಾಮ ॥ ೭೧೪-೭೧೬ ॥

**ವಿವರಣೆ–** 714 ರಿಂದ 718 ರವರೆಗೆ ರಾಜರು ವಾಯುಪುರಾಣದ ವಚನಗಳನ್ನು ಉದಾಹರಿಸಿ ವಾಯುದೇವರ ಅವತಾರತ್ರಯವನ್ನು ಸ್ಪಷ್ಟಪಡಿಸುತ್ತಾರೆ.

ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂ ತು ಕಲೌ ಯುಗೇ ।
ವಾಯುಶ್ಚ ಯತಿರೂಪೇಣ ಕೃತ್ವಾ ದುಃಶಾಸ್ತ್ರಖಂಡನಮ್ ॥ ೭೧೭ ॥

ತತಃ ಕಲಿಯುಗೇ ಪ್ರಾಪ್ತೇ ತೃತೀಯೋ ಮಧ್ವನಾಮಕಃ ।
ಭೂರೇಖಾದಕ್ಷಿಣೇ ಭಾಗೇ ಮಣಿಮದ್ಗರ್ವಶಾಂತಯೇ ।
ಧಿಕ್ಕುರ್ವಂಸ್ತತ್ಪ್ರಭಾಂ ಸದ್ಯೋಽವತೀರ್ಣೋಽತ್ರ ದ್ವಿಜಾನ್ವಯೇ ॥ ೭೧೮ ॥

**ಅರ್ಥ–** ಕಲೌಯುಗೇತು= ಕಲಿಯುಗದಲ್ಲಾದರೂ, ಬದರ್ಯಾಂ= ಬದರಿಕ್ಷೇತ್ರದಲ್ಲಿ, ದ್ವೈಪಾಯನಸ್ಯ= ವೇದವ್ಯಾಸದೇವರ, ಸೇವಾರ್ಥಂ= ಸೇವೆಗೋಸ್ಕರವಾಗಿ, ವಾಯುಶ್ಚ= ವಾಯುದೇವರು, ದುಃಶಾಸ್ತ್ರಖಂಡನಂ= ದುಃಶಾಸ್ತ್ರ ನಿರಾಕರಣೆಯನ್ನು, ಕೃತ್ವಾ= ಮಾಡಿ, ಯತಿರೂಪೇಣ= ಯತಿರೂಪದಿಂದ ಇರುತ್ತಾರೆ. ತತಃ= ಅನಂತರ, ಕಲಿಯುಗೇ ಪ್ರಾಪ್ತೇ= ಕಲಿಯುಗವು ಪ್ರಾಪ್ತವಾಗುತ್ತಿರಲು, ತೃತೀಯಃ= ವಾಯುದೇವರ ಮೂರನೆಯ ರೂಪವಾದ, ಮಧ್ವನಾಮಕಃ= ಮಧ್ವ ಎಂಬ ರೂಪವು, ಭೂರೇಖಾದಕ್ಷಿಣೇ ಭಾಗೇ= ಭೂಮಧ್ಯರೇಖೆಯ ದಕ್ಷಿಣಭಾಗದಲ್ಲಿ, ಮಣಿಮದ್ಗರ್ವಶಾಂತಯೇ= ಮಣಿಮಂತನ ಗರ್ವವನ್ನು ನಿರಾಕರಿಸಲು, ತತ್ಪ್ರಭಾಂ= ಮಣಿಮಂತನ ಕಾಂತಿಯನ್ನು, ಧಿಕ್ಕುರ್ವನ್=

ನಿರಾಕರಿಸುತ್ತಾ, ಸದ್ಯಃ= ತಕ್ಷಣದಲ್ಲಿಯೇ, ಅತ್ರ= ಭೂಮಿಯಲ್ಲಿ (ಪಾಜಕ ಕ್ಷೇತ್ರದಲ್ಲಿ), ದ್ವಿಜಾನ್ವಯೇ= ಬ್ರಾಹ್ಮಣ ಕುಲದಲ್ಲಿ, ಅವತೀರ್ಣಃ= ಅವತರಿಸಿದರು.

**ಅನುವಾದ–** ಕಲಿಯುಗದಲ್ಲಾದರೂ ಬದರಿ ಕ್ಷೇತ್ರದಲ್ಲಿ ವೇದವ್ಯಾಸದೇವರ ಸೇವೆಗಾಗಿ ವಾಯುದೇವರು ಯತಿರೂಪವನ್ನು ಧರಿಸಿ ದುಃಶಾಸ್ತ್ರಗಳನ್ನು ನಿರಾಕರಿಸಿ ವೇದವ್ಯಾಸರ ಸಮೀಪದಲ್ಲಿ ಇರುತ್ತಾರೆ. ಅನಂತರ ಕಲಿಯುಗವು ಪ್ರಾಪ್ತವಾದಾಗ ವಾಯುದೇವರ ಮೂರನೆಯ ಅವತಾರವಾದ ಮಧ್ವಾಚಾರ್ಯರು ಭೂಮಧ್ಯ-ರೇಖೆಯ ದಕ್ಷಿಣ ಭಾಗದಲ್ಲಿ ಮಣಿಮಂತನ ಗರ್ವವನ್ನು ಅಡಗಿಸಲು ಅವನ ಕಾಂತಿಯನ್ನು ಧಿಕ್ಕರಿಸುತ್ತಾ ತಕ್ಷಣದಲ್ಲಿಯೇ ಬ್ರಾಹ್ಮಣ ಕುಲದಲ್ಲಿ ಭೂಮಿಯಲ್ಲಿ (ಪಾಜಕ ಕ್ಷೇತ್ರದಲ್ಲಿ) ಅವತಾರ ಮಾಡುತ್ತಾರೆ.

**ಭಾವವಿಲಾಸಿನೀ–** ವ್ರತಿರೂಪೇಣ ಯತಿರೂಪೇಣ ಆಸ್ತೇ ಇತಿ ಶೇಷಃ । ಕೃತ್ವಾ ದುಶ್ಶಾಸ್ತ್ರ-ಖಂಡನಮಿತ್ಯೇತದಂತಂ ವಾಕ್ಯಂ ಭಾಗಾಂತರಸ್ಥಮ್ । ತತಃ ಕಲಿಯುಗೇ ಪ್ರಾಪ್ತ ಇತಿ ಸಾರ್ಧಶ್ಲೋಕಸ್ತು ವಾಯುಪುರಾಣೇ ಮಧ್ವಮಹಿಮಪ್ರತಿಪಾದಕಾಧ್ಯಾಯಸ್ಥ ಇತಿ ವಿವೇಕೋ ದ್ರಷ್ಟವ್ಯಃ ॥ ೭೦೭ ॥

**ಇತ್ಯಾದ್ಯಾಃ ಸೂಕ್ತಯೋ ವಾಯುಪುರಾಣಸ್ಥಾಃ ಸಹಸ್ರಶಃ ।**
**ಅವತಾರತ್ರಯಂ ವಾಯೋಃ ಕಥಯಂತಿ ಮಹಾತ್ಮನಃ ॥ ೭೦೯ ॥**

**ಅರ್ಥ–** ಇತ್ಯಾದ್ಯಾಃ= ಇವೇ ಮೊದಲಾದ, ವಾಯುಪುರಾಣಸ್ಥಾಃ= ವಾಯುಪುರಾಣದಲ್ಲಿರುವ, ಸಹಸ್ರಶಃ= ಸಹಸ್ರಾರು, ಸೂಕ್ತಯಃ= ಶುಭವಚನಗಳು, ಮಹಾತ್ಮನಃ= ಮಹಾತ್ಮರಾದ, ವಾಯೋಃ= ವಾಯುದೇವರ, ಅವತಾರತ್ರಯಂ= ಮೂರು ಅವತಾರಗಳನ್ನು, ಕಥಯಂತಿ= ಕೀರ್ತಿಸುತ್ತವೆ.

**ಅನುವಾದ–** ಇವೇ ಮೊದಲಾದ ವಾಯುಪುರಾಣದಲ್ಲಿರುವ ಸಹಸ್ರಾರು ಸೂಕ್ತಿಗಳು ಮಹಾತ್ಮರಾದ ವಾಯುದೇವರ ಮೂರು ಅವತಾರಗಳನ್ನು ಕೀರ್ತಿಸುತ್ತವೆ.

**ಭಾವವಿಲಾಸಿನೀ–** ತತ್‌ಪ್ರಭಾಂ ಭೂಮಾವುತ್ಪನ್ನಮಣಿಮನ್ನಾಮಕದೈತ್ಯಸ್ಯ ವಿದ್ಯಾಖ್ಯಪ್ರಭಾಮ್ ॥ ೭೦೮-೭೦೯ ॥

**ಅತಃ ಶ್ರುತಿಸ್ಮೃತಿಸ್ತುತ್ಯಚಿತ್ರಚಾರಿತ್ರವಿಸ್ಕೃತೇಃ ।**
**ಮಧ್ವಸ್ಯೈವ ಮತಂ ಯುಕ್ತ್ಯನ್ವಿತಂ ಪರಮಮಂಗಲಮ್ ॥ ೭೨೦ ॥**

**ಅರ್ಥ–** ಶ್ರುತಿಸ್ಮೃತಿಸ್ತುತ್ಯ= ಶ್ರುತಿಸ್ಮೃತಿಗಳು ಸ್ತೋತ್ರ ಮಾಡಲ್ಪಡುವ, ಚಿತ್ರಚಾರಿತ್ರವಿಸ್ಕೃತೇಃ= ಚಿತ್ರವಾದ ಮತ್ತು ವಿಸ್ತಾರವಾದ ಚರಿತ್ರೆಯುಳ್ಳ, ಮಧ್ವಸ್ಯ

ಮತಮೇವ= ಮಧ್ವಾಚಾರ್ಯರ ಮತವೇ, ಯುಕ್ತನ್ವಿತಂ= ಯುಕ್ತಿಯುಕ್ತವಾದುದು ಮತ್ತು, ಪರಮಮಂಗಲಂ= ಪರಮ ಮಂಗಲವಾದುದು.

**ಅನುವಾದ–** ಆದ್ದರಿಂದ ಶ್ರುತಿ-ಸ್ಮೃತಿಗಳು ಹೀಗೆ ಹೊಗಳುವುದರಿಂದ ವಿಸ್ತಾರವಾದ ಮತ್ತು ವಿಚಿತ್ರವಾದ ಚರಿತ್ರೆಯುಳ್ಳ ಮಧ್ವಾಚಾರ್ಯರ ಮತವೇ ಯುಕ್ತಿಯುಕ್ತ-ವಾದುದು ಮತ್ತು ಪರಮಮಂಗಲವಾದುದು.

**ಭಾವವಿಲಾಸಿನೀ–** ಅತಃ ಉಕ್ತಯುಕ್ತಿಶ್ರುತಿಸ್ಮೃತಿಮೂಲತ್ವಾತ್ ॥ ೭೨೦ ॥

**ಹಿತಂ ನ ಜಾನಾಮ್ಯಹಿತಂ ನ ಜಾನೇ ನಾಕರ್ತುಮೀಶೋ ನ ಚ ಕರ್ತುಮೀಶಃ ।**
**ಯಥಾ ನಟಾನ್ನಾಟಕದಾರುಯಂತ್ರಂ ತಥಾ ಹರೇಃ ಪ್ರೇರಣಯೈವ ವರ್ತೇ ॥ ೭೨೧ ॥**

**ಅರ್ಥ–** ಹಿತಂ= ಹಿತವನ್ನು, ನ ಜಾನಾಮಿ= ನಾನು ತಿಳಿದಿಲ್ಲ, ಅಪಿ= ಮತ್ತು, ಅಹಿತಂ= ಅಹಿತವನ್ನು, ನ ಜಾನೇ= ತಿಳಿದಿಲ್ಲ, ಅಕರ್ತುಂ= ಒಂದು ಕಾರ್ಯವನ್ನು ಮಾಡದೇ ಇರಲು, ಈಶೋ ನ= ನಾನು ಸಮರ್ಥನಲ್ಲ, ಚ= ಮತ್ತು, ಕರ್ತುಂ= ಒಂದು ಕಾರ್ಯವನ್ನು ಮಾಡಲೂ ಸಹ, ಈಶೋ ನ= ನಾನು ಸಮರ್ಥನಲ್ಲ, ಯಥಾ= ಹೇಗೆ, ನಟಾತ್= ಕುಣಿಸುವ ನಟನ ಅಧೀನವಾಗಿ, ನಾಟಕದಾರುಯಂತ್ರಂ= ನಾಟಕದಲ್ಲಿರುವ ಮರದ ಗೊಂಬೆಯು ಇರುತ್ತದೆಯೋ, ತಥಾ= ಹಾಗೆ, ಹರೇಃ= ಹರಿಯ, ಪ್ರೇರಣಯೈವ= ಪ್ರೇರಣೆಯಿಂದಲೇ, ವರ್ತೇ= ಇರುತ್ತೇನೆ.

**ಅನುವಾದ–** ನಾನು ಹಿತವನ್ನೂ ತಿಳಿದಿಲ್ಲ, ಅಹಿತವನ್ನೂ ತಿಳಿದಿಲ್ಲ. ನಾನು ಒಂದು ಕಾರ್ಯವನ್ನು ಮಾಡಲೂ ಸಮರ್ಥನಲ್ಲ, ಮಾಡದೇ ಇರಲು ಸಮರ್ಥನಲ್ಲ. ಸೂತ್ರಧಾರನು ಕುಣಿಸಿದಂತೆ ಹೇಗೆ ನಾಟಕದ ಗೊಂಬೆಯು ಕುಣಿಯುತ್ತದೆಯೋ ಅದರಂತೆ ಹರಿಯ ಪ್ರೇರಣೆಯಿಂದಲೇ ನಾನು ಇದ್ದೇನೆ.

**ಭಾವವಿಲಾಸಿನೀ–** ಜೀವಕರ್ತೃತ್ವಾದಿನಾನಾಮತನಿರಾಕರಣಾಯ ಗ್ರಂಥಕಾರೇಣೈವ ಕೃತಂ ಸ್ತೋತ್ರಮಸ್ಮಿನ್‌ಗ್ರಂಥೇ ಪ್ರವೇಶಯತಿ । ಸ್ವಪ್ನೇ ಜಾತೇ ಪ್ರವೇಶಿತಂ ಕಿಲ । ತಸ್ಯಾರ್ಥೋ ಲೇಶತಃ ಕಥ್ಯತೇ । ಸ್ವಾನಿಷ್ಟಕರ್ಮಣಃ ಸ್ವೇನೈವ ಕ್ರಿಯಮಾಣತ್ವಾದಕರ್ತೃಮೀಶೋ ನೇತ್ಯುಕ್ತಮ್ । ದಾರುಮಯನರ್ತಕ್ಯಾದಿಪ್ರತಿಮಾಂ ಸೂತ್ರೇಣ ನರ್ತಯನ್ನಟಃ । ತಸ್ಮಾತ್ । ಉತ್ತಮಪುರುಷ-ಪ್ರಯೋಗಬಲಾತ್ ಅಹಮಿತಿ ಲಭ್ಯತೇ । ತೇನ ಚ ಜೀವಕರ್ತೃತ್ವವಾದ ನಿರಾಸಂ ಸೂಚಯತಿ । ಅನೇನ (ಸ್ವಾ)ಸಾಸ್ವತಂತ್ರಾನಕಲ್ಪ್ಯಾಸೀದ್ಯೋಗಕ್ಷೇಮಂ ಮಮೇಚ್ಛತೀ । ಈಶಸ್ಯ ಹಿ ವಶೋ ಲೋಕೋ ಯೋಷಾ ದಾರುಮಯೀ ಯಥಾ॥ ಇತಿ ಭಾಗವತ ಶ್ಲೋಕಂ ಸೂಚಯತಿ ॥೭೨೧॥

**ವಿವರಣೆ–** ಜೀವಕರ್ತೃತ್ವಾದಿ ನಾನಾ ಮತಗಳನ್ನು ನಿರಾಕರಿಸಲು ಗ್ರಂಥಕಾರರು ತಾವೇ ಮಾಡಿದ ಸ್ತೋತ್ರದ ಒಂದು ಶ್ಲೋಕವನ್ನು ಈ ಗ್ರಂಥದಲ್ಲಿ ಸೇರಿಸುತ್ತಾರೆ. ಸ್ವಪ್ನದಲ್ಲಿ

ವಾದಿರಾಜರು ಈ ಶ್ಲೋಕವನ್ನು ಗ್ರಂಥದಲ್ಲಿ ಸೇರಿಸಿದರು ಎಂದು ಸಂಪ್ರದಾಯ. ನಮಗೆ ಅನಿಷ್ಟವಾದ ಕರ್ಮಗಳನ್ನು ನಾವೇ ಮಾಡುವುದರಿಂದ ನಾವು ಒಂದು ಕಾರ್ಯವನ್ನು ಮಾಡದೇ ಇರಲು ಸಮರ್ಥರಲ್ಲ. ಇಷ್ಟವಾದ ಕಾರ್ಯವನ್ನು ಮಾಡಲೂ ನಮಗೆ ಸಾಮರ್ಥ್ಯವಿಲ್ಲ ಎಂದು ಅನುಭವ ಸಿದ್ಧವಾಗಿದೆ. ಆದ್ದರಿಂದ ಜೀವನಿಗೆ ಸ್ವತಂತ್ರವಾದ ಕರ್ತೃತ್ವವಿಲ್ಲವೆಂದು ಸಿದ್ಧವಾಗುತ್ತದೆ. ಇದರಿಂದ 'ಸಾಽಸ್ವತಂತ್ರಾ ನ ಕಲ್ಪಾಸೀತ್ ಯೋಗಕ್ಷೇಮಂ ಮಮೇಚ್ಛತೀ । ಈಶಸ್ಯ ಹಿ ವಶೇ ಲೋಕೋ ಯೋಷಾ ದಾರುಮಯೀ ಯಥಾ ।' ಎಂಬ ಭಾಗವತದ ಶ್ಲೋಕವನ್ನು ಗ್ರಂಥಕಾರರು ಸೂಚಿಸುತ್ತಾರೆ.

**ಯದಭೂತ್ ತದ್ಧರೇರ್ಯಚ್ಚ ನಾಭೂತ್ ತಚ್ಚ ಹರೇಃ ಪರಾತ್ ।**
**ಜೀವೋ ವಿಷ್ಟಿಗೃಹೀತೋಽಸ್ಮಾತ್ ಕಿಂ ಭವೇತ್ ಕಿಂ ಚ ನೋ ಭವೇತ್**
**॥ ೭೨೨ ॥**

**ಅರ್ಥ–** ಯತ್= ಯಾವ ಸುಖಸಂಪದಾದಿಯು, ಅಭೂತ್= ಉಂಟಾದವೋ, ತತ್= ಅವು, ಹರೇಃ= ಹರಿಯಿಂದಲೇ, ಅಭೂತ್= ಉಂಟಾಯಿತು, ಯಚ್ಚ= ಮತ್ತು ಯಾವ ದುಃಖ ಮರಣಾದಿಗಳು, ನ ಭೂತ್= ಉಂಟಾಗಲಿಲ್ಲವೋ, ತತ್ ಚ= ಅದೂ ಕೂಡ, ಪರಾತ್= ಪರಮಾತ್ಮನಾದ, ಹರೇಃ= ಹರಿಯಿಂದಲೇ, ಅಭೂತ್= ಆಯಿತು, ಜೀವಃ= ಜೀವನು, ವಿಷ್ಟಿಗೃಹೀತಃ= ಬಿಟ್ಟಿ ದುಡಿಯುವವನಂತೆ ಇದ್ದಾನೆ, ಅಸ್ಮಾತ್= ಈ ಜೀವನಿಂದ, ಕಿಂ ಭವೇತ್= ಏನು ಆದೀತು? ಚ= ಮತ್ತು, ಕಿಂ ನೋ ಭವೇತ್= ಏನು ಆಗಲಾರದು?

**ಅನುವಾದ–** ಯಾವ ಸುಖಸಂಪದಾದಿಯು ಉಂಟಾಯಿತೋ ಅದು ಹರಿಯಿಂದಲೇ ಉಂಟಾಯಿತು. ಯಾವ ದುಃಖಮರಣಾದಿಗಳು ಉಂಟಾಗಲಿಲ್ಲವೋ ಅದೂ ಸರ್ವೋತ್ತಮನಾದ ಹರಿಯ ಇಚ್ಛೆಯಂತೆಯೇ ಆಯಿತು. ಜೀವನು ಬಿಟ್ಟಿ ದುಡಿಯುವ ಪುರುಷನಿದ್ದಂತೆ. ಅವನಿಂದ ಏನು ಆದೀತು? ಅಥವಾ ಏನು ಆಗಲಾರದು? (ಜೀವನಿಂದ ಸ್ವತಂತ್ರವಾಗಿ ಏನೂ ಆಗುವುದಿಲ್ಲ).

**ಭಾವವಿಲಾಸಿನೀ–** ಯತ್ ಸುಖಸಂಪದಾದಿಕಮ್ । ಯಚ್ಚ ದುಃಖಮರಣಾದಿಕಮ್ । ಸ್ವಹಿತಕರಣೇ ಶಕ್ತ್ಯಭಾವಾತ್ ಸ್ವಾಹಿತಸ್ಯೈವ ಕರಣಾಚ್ಚ ಸ್ವಾನಿಷ್ಟಾಭಾರಾದ್ಯುದ್ವಹನಾಯ ರಾಜ್ಞಾವಿಷ್ಟಂ ಗೃಹೀತಪುರುಷವತ್ ಸ್ವಾನಿಷ್ಟಸಂಸಾರೇ ಉತ್ಪತ್ತುಂ ಸ್ಥಾತುಂ ಮರ್ತುಂ ಚ ನಿಯಾಮಕಃ ಕಶ್ಚಿದೀಶೋಽಪ್ಯಪೇಕ್ಷಿತ ಇತಿ ಭಾವೇನ ವಿಷ್ಟಿಗೃಹೀತ ಇತ್ಯುಕ್ತಮ್ । ಅನೇನ ಇತರ-ವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿರಿತಿ ಬ್ರಹ್ಮಸೂತ್ರೋಕ್ತಯುಕ್ತ್ಯಾ ಜೀವಕರ್ತೃತ್ವವಾದೋ ಜೀವೇಶ್ವರಾಭೇದವಾದಶ್ಚ ನಿರಾಕೃತ ಇತಿ ಜ್ಞಾತವ್ಯಮ್ ॥ ೭೨೨ ॥

**ವಿವರಣೆ–** ಜೀವನಿಗೆ ತನ್ನ ಹಿತವನ್ನು ಮಾಡಿಕೊಳ್ಳಲು ಶಕ್ತಿ ಇಲ್ಲದಿರುವುದರಿಂದ ಮತ್ತು ಜೀವನು ತನಗೆ ಅಹಿತವನ್ನೇ ಮಾಡಿಕೊಳ್ಳುವುದರಿಂದ ತನಗೆ ಇಷ್ಟವಲ್ಲದ ಭಾರವನ್ನು

ಹೊರುವ ಬಿಟ್ಟಿ ಪುರುಷನಂತೆ ತನಗೆ ಅನಿಷ್ಟವಾದ ಸಂಸಾರದಲ್ಲಿ ಹುಟ್ಟಲು, ಇರಲು ಮತ್ತು ಮರಣ ಹೊಂದಲು ನಿಯಾಮಕನಾಗಿ ಒಬ್ಬ ಈಶ್ವರನು ಅಪೇಕ್ಷಿತನಾಗುತ್ತಾನೆ ಎಂದು ತಿಳಿಸಲು ವಿಷ್ಟಿಗೃಹೀತ ಪುರುಷನ ಒಂದು ದೃಷ್ಟಾಂತವನ್ನು ಕೊಟ್ಟಿದ್ದಾರೆ. ಇಲ್ಲಿ ಇತರವ್ಯಪದೇಶಾತ್ ಹಿತಾಕರಣಾದಿದೋಷ ಪ್ರಸಕ್ತಿಃ ಎಂಬ ಬ್ರಹ್ಮಸೂತ್ರವು ಸೂಚಿಸಿದ ಯುಕ್ತಿಯನ್ನು ಸೂಚಿಸಿ ಜೀವಕರ್ತೃತ್ವವಾದವನ್ನು, ಜೀವೇಶ್ವರಾಭೇದವಾದವನ್ನು ನಿರಾಕರಿಸುತ್ತಿದ್ದಾರೆ. ಜೀವನು ತಾನೇ ಸ್ವತಂತ್ರ ಕರ್ತೃವಾದರೆ ಅಥವಾ ಸ್ವತಂತ್ರ ಕರ್ತೃವಾದ ಈಶ್ವರನಿಂದ ಅಭಿನ್ನನಾದರೆ ತನಗೆ ಅನಿಷ್ಟವಾದ ದುಃಖವನ್ನು ತಾನು ಹೇಗೆ ಮಾಡಿಕೊಳ್ಳುತ್ತಾನೆ? ಆದ್ದರಿಂದ ಜೀವನು ಸ್ವತಂತ್ರ ಕರ್ತೃವು ಅಲ್ಲ, ಸ್ವತಂತ್ರ ಕರ್ತೃವಾದ ಈಶ್ವರನಿಂದ ಅಭಿನ್ನನೂ ಅಲ್ಲ ಎಂದು ಅಭಿಪ್ರಾಯ.

**ಕರ್ಮಣೋ ಯದಿ ತತ್ಕರ್ಮ ಸ್ವಾನಿಷ್ಟಂ ಕುರುತೇ ಕುತಃ ।**
**ಅನಾದ್ಯನಿಷ್ಟಕರ್ಮಾಣಿ ಕರೋತ್ಯನ್ಯವಶೋ ಧ್ರುವಮ್ ॥ ೭೨೩ ॥**

**ಅರ್ಥ–** ಯದಿ= ಒಂದು ಪಕ್ಷ, ಕರ್ಮಣಃ= ಕರ್ಮದಿಂದಲೇ, ತತ್ಕರ್ಮ= ಜೀವಪ್ರವರ್ತಕವಾದ ಕರ್ಮವು ಉಂಟಾಗುತ್ತದೆ ಎಂದಾದರೆ, ಸ್ವ ಅನಿಷ್ಟಂ= ತನ್ನ ಅನರ್ಥಕ್ಕೆ ಕಾರಣವಾದ ಬ್ರಹ್ಮಹತ್ಯಾದಿ ಕರ್ಮವನ್ನು, ಕುತಃ ಕುರುತೇ= ಏಕೆ ಮಾಡುತ್ತಾನೆ? ಜೀವನು, ಅನಾದ್ಯನಿಷ್ಟ ಕರ್ಮಾಣಿ= ಅನಾದಿಯಾದ ಅನಿಷ್ಟ ಕರ್ಮಗಳನ್ನು (ಅನಿಷ್ಟ ಕರ್ಮಗಳ ಅನಾದಿ ಪರಂಪರೆಯನ್ನು), ಧ್ರುವಂ= ನಿಶ್ಚಯವಾಗಿ, ಅನ್ಯವಶಃ= ಅನ್ಯಾಧೀನನಾಗಿಯೇ, ಕರೋತಿ= ಮಾಡುತ್ತಾನೆ.

**ಅನುವಾದ–** ಜೀವಪ್ರವರ್ತಕವಾದ ಕರ್ಮವು ಕರ್ಮದಿಂದಲೇ ಉಂಟಾಗುತ್ತದೆ ಎಂದು ಅಂಗೀಕರಿಸಿದರೆ ಜೀವನು ತನ್ನ ಅನರ್ಥಕ್ಕೆ ಕಾರಣವಾದ ಬ್ರಹ್ಮಹತ್ಯಾದಿ ಕರ್ಮಗಳನ್ನು ಏಕೆ ಮಾಡುತ್ತಾನೆ? ಜೀವನು ತನ್ನ ಅನರ್ಥಕ್ಕೆ ಕಾರಣವಾದ ಅನಾದಿ ದುಷ್ಕರ್ಮ ಪರಂಪರೆಯನ್ನು ನಿಶ್ಚಯವಾಗಿ ಅನ್ಯವಶನಾಗಿಯೇ ಮಾಡುತ್ತಾನೆ.

**ಭಾವವಿಲಾಸಿನೀ–** ಸ್ವಸ್ಯೈವ ಸ್ವತಂತ್ರಕರ್ತೃತ್ವೇ ಸ್ವತಂತ್ರಕರ್ತ್ರೀಶ್ವರಾಭಿನ್ನತ್ವೇ ಚ ಸ್ವಾನಿಷ್ಟದುಃಖಾದಿ ಕರಣಾಯೋಗಾತ್ । ತರ್ಹಿ ಈಶಾನಪೇಕ್ಷ ಪುಣ್ಯಪಾಪಾದಿಕರ್ಮವಶಾದೇವ ಜನನಮರಣಾದಿಕಂ ಜಾಯತಾಮಿತಿ ಮೀಮಾಂಸಕಮತಮನೂದ್ಯ ದೂಷಯತಿ ॥ **ಕರ್ಮಣ ಇತಿ** ॥ ತತ್ ಜೀವಪ್ರವರ್ತಕತಯಾಂಗೀಕೃತಮ್ । ಸ್ವಾನಿಷ್ಟಂ ಸ್ವಸ್ಯ ದುಃಖಾದ್ಯನರ್ಥಹೇತುಭೂತಂ ಬ್ರಹ್ಮಹನನಾದಿ ಕರ್ಮ । ನ ತಾವತ್ತದೇವ ಕರ್ಮ ಸ್ವಕರ್ತಾರಂ ಪ್ರೇರಯತಿ । ಆತ್ಮಾಶ್ರಯಾತ್ । ರಾಗದ್ವೇಷಾದಿ ದೋಷವಶಾಚ್ಚೇತ್ । ತರ್ಹಿ ಕರ್ಮಣ ಇತಿ ಮತಂ ಗತಮ್ । ಸ್ವೇನೈವ ಸ್ವಜಿಹ್ವಾದಂಶನೇ ಕ್ರಿಯಮಾಣೇ ತಯೋರಪ್ಯಯೋಗಾಚ್ಚ । ನ ಹಿ ಜಿಹ್ವಾಯಾಂ ದೋಷಃ ತದ್ದಂಶನೇ ರಾಗೋ ವಾ ಕಸ್ಯಚಿದಸ್ತಿ ।

ಕಿಂಚ ಅಪರಾಧಿನಿ ವಿಪ್ರೇ ದ್ವೇಷೋದ್ರೇಕಾತ್ ತದೀಯಧನವನಿತಾದೌ ರಾಗೋದ್ರೇಕಾಚ್ಚ ವಿಪ್ರಹನನೇ ಪ್ರವೃತ್ತಿರಿತಿ ವದತಾ ತತೋಽಪ್ಯತಿಶಯಿತರಾಜಯಾತಾನಾನರಕಯಾತನಾದೌ ದ್ವೇಷೋದ್ರೇಕಾತ್ ಕೀರ್ತಿಸ್ವರ್ಗಾದೌ ರಾಗೋದ್ರೇಕಾಚ್ಚ ಸಜ್ಜನಸ್ಯೈವ ಕುತೋ ನ ನಿವೃತ್ತಿಃ ಕಥ್ಯತೇ । ಅತಃ ಪ್ರವರ್ತಕ ನಿವರ್ತಕಯೋರುಕ್ತವಿಧಾಯಾ ಸಾಮ್ಯೇಽಪಿ ಬಲಾತ್ಕಾರೇಣ ತಂ ತತ್ರ ಪ್ರವರ್ತಯಿತುಂ ಲಾಘವಾದೀಶ್ವರಸ್ಯೈವಾಂಗೀಕರ್ತುಮುಚಿತತ್ವಾಚ್ಚ । ಪುರುಷಾಂತರೇಷ್ವ-ದೃಷ್ಟಾದ್ರಾಗದ್ವೇಷಾದೇರತ್ರೈವೋತ್ಪತ್ತೌ ಕಾರಣಂ ಚ ವಕ್ತವ್ಯಮ್ । ಕರ್ಮಣ ಏವ ತದಿತಿ ಚೇತ್ ಪುನರನ್ಯೋನ್ಯಾಶ್ರಯಃ । ಪ್ರಾಚೀನಕರ್ಮಾಂತರಾದಿತಿ ಚೇತ್ ನ । ಕರ್ಮಣೋ ಜಡತ್ವೇನ ಸ್ವನರಕಾದ್ಯನರ್ಥಸಾಧನತಯಾ ಜ್ಞಾತೇ ತಸ್ಮಿನ್‌ಕರ್ಮಣಿ ಬಲಾದ್ಗೃಹೀತ್ವಾ ಪಾತಯಿತುಂ ಸ್ವತಂತ್ರಚೇತನಸ್ಯೈವ ಕಸ್ಯಚಿದಂಗೀಕಾರ್ಯತ್ವಾತ್ । ನ ಹಿ ಘಟಕಾರಣೀಭೂತಾಪಿ ಮೃತ್ಪಿಂಡಾದಿ-ಪರಂಪರಾ ಸ್ವಯಮೇವ ದಂಡಂ ಗೃಹೀತ್ವಾ ಚಕ್ರಮಾವರ್ತಯಂತೀ ಘಟಂ ಕರೋತಿ । ಅನಾದಿತ್ವೇನ ಸಮಾಧಾನಸ್ಯ ತತ್ರಾಪಿ ಕರ್ತುಂ ಶಕ್ಯತ್ವಾತ್ । ಕಿಂತು ಘಟಮಾತ್ರಕರಣೇ ಸ್ವತಂತ್ರ-ಕುಲಾಲಾದಿಚೇತನಾಂತರೇ ಸತ್ಯೇವ । ಏತದೇವಾಭಿಪ್ರೇತ್ಯೋಕ್ತಮ್ ॥ **ಅನಾದೀತಿ** ॥ ಕಿಂಚಾ-ನಂತಾನ್ಯಪಿ ತಾನಿ ಕರ್ಮಾಣಿ ಸ್ವಾನಿಷ್ಟಾನಿ ಸ್ವಕೃತಾನಿ ಚ ಭವೇಯುಃ । ಅನಿಷ್ಟಮೂಲಕರ್ಮಣಾ-ಮಪ್ಯನಿಷ್ಟತ್ವಾವಶ್ಯಂಭಾವಾತ್ । ಪರಕೃತಕರ್ಮಣಾಂ ಸ್ವಫಲದಾಯಕತ್ವಾಯೋಗಾಚ್ಚ । ಏವಂ ಚಾನಿಷ್ಟಭೂತಸ್ಯ ತಸ್ಯ ಕರ್ಮಸಮುದಾಯಸ್ಯ ಕರಣಾಯ ವಿಪ್ರಗೃಹೀತಸ್ಯ ಕರ್ಮಕರಣ ಇವ ಕರ್ಮಾತಿರಿಕ್ತಃ ಪ್ರಯೋಜಕೋಽನ್ಯೋಽವಶ್ಯಮಂಗೀಕಾರ್ಯಃ । ನ ಹಿ ವಿಪ್ರಗೃಹೀತಸ್ಯ ಕರ್ಮೈವ ತತ್‌ಕರ್ಮ ಕಾರಯತಿ । ನ ವಾ ಪೂರ್ವಪೂರ್ವದಿನೇ ಬಲಾತ್ಕಾರಿತಂ ಭಾರೋದ್ವಹನಾಖ್ಯ-ಕರ್ಮೈವೋತ್ತರೋತ್ತರಭಾರೋದ್ವಹನ ಕರ್ಮ ಕಾರಯತಿ । ನ ವಾ ತದೀಯದುಷ್ಕರ್ಮ-ಪರಂಪರಾಮಾತ್ರಂ ಕಿಂತು ತಸ್ಮಾದ್ವಿಶಿಷ್ಟಗೃಹೀತಪುರುಷಕೃತ ಭಾರೋದ್ವಹನಾದಿಕರ್ಮ-ಸಮುದಾಯಾತ್ ತೇನ ಪೂರ್ವಂ ಪೂರ್ವಂ ಕೃತ ದುಷ್ಕರ್ಮಸಮುದಾಯಾತ್ ತಸ್ಮಾದ್ವಿಪ್ರ-ಗೃಹೀತಪುರುಷಾಚ್ಚಾನ್ಯ ಏವ ಬಲಾತ್ಕಾರಯಿತಾ ಕಶ್ಚಿದಧಿಕೃತ ಪುರುಷೋಽಪೇಕ್ಷಣೀಯಃ । ಏವಂ ಚ ನ ಕಥಂ ಕರ್ಮಣೋ ಜೀವಾಚ್ಚಾತಿರಿಕ್ತೇಶ್ವರಸಿದ್ಧಿಃ । ಏತದಪಿ ಸೂಚಯಿತುಂ ಪ್ರಥಮವಾಕ್ಯೇ ಜೀವೋ ವಿಪ್ರಗೃಹೀತ ಇತ್ಯುಕ್ತಮ್ । ಅಸ್ಮಿನ್ನಪಿ ವಾಕ್ಯೇ ಅನಿಷ್ಟಪದಂ ಪ್ರಯುಕ್ತಮ್ ॥ ೭೨ ॥

**ವಿವರಣೆ–** ಹಾಗಾದರೆ ಈಶ್ವರ ನಿರಪೇಕ್ಷವಾದ ಪುಣ್ಯಪಾಪಾದಿ ಕರ್ಮಗಳಿಂದಲೇ ಜೀವನಿಗೆ ಜನನ ಮರಣಾದಿಗಳು ಉಂಟಾಗುತ್ತವೆ ಎಂಬ ಮೀಮಾಂಸಕ ಮತವನ್ನು ಅನುವಾದ ಮಾಡಿ ಇಲ್ಲಿ ದೂಷಿಸುತ್ತಾರೆ. ಕರ್ಮವೇ ಕರ್ಮಪ್ರವರ್ತಕವೆಂದು ಹೇಳಿದರೆ ಜೀವನು ಯಾವ ಬ್ರಹ್ಮಹತ್ಯಾ ಕರ್ಮವನ್ನು ಮಾಡುತ್ತಾನೋ ಆ ಕರ್ಮವೇ ಪ್ರವರ್ತಕ ಎಂದು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ಆತ್ಮಾಶ್ರಯ ದೋಷವು ಬರುತ್ತದೆ. ರಾಗದ್ವೇಷಾದಿಗಳಿಂದ ಜೀವನು ಪ್ರವೃತ್ತನಾಗುತ್ತಾನೆ ಎಂದು ಹೇಳಿದರೆ ಕರ್ಮವು ಪ್ರವರ್ತಕ ಎಂಬ ಮತವು ಹೊರಟು ಹೋಗುತ್ತದೆ. ಮತ್ತು ತನ್ನ ಹಲ್ಲುಗಳಿಂದ ತಾನೇ ತನ್ನ ನಾಲಿಗೆಯನ್ನು ತಾನೇ ಕಚ್ಚಿಕೊಳ್ಳುವಾಗ ಅಲ್ಲಿ ರಾಗದ್ವೇಷಗಳು ಎಲ್ಲಿವೆ? ತನ್ನ

ನಾಲಿಗೆಯಲ್ಲಿ ದ್ವೇಷಕ್ಕೆ ಕಾರಣವಾದ ದೋಷವಾಗಲೀ ಅದನ್ನು ಕಚ್ಚುವುದರಲ್ಲಿ ಯಾರಿಗೂ ರಾಗವಾಗಲಿ ಇಲ್ಲವಷ್ಟೇ. ಅಲ್ಲದೆ, ತನಗೆ ಅಪರಾಧವನ್ನು ಮಾಡಿದ ಖಿಪ್ರನಲ್ಲಿ ದ್ವೇಷದ ಉದ್ರೇಕದಿಂದ ಮತ್ತು ಆ ವಿಪ್ರನ ಧನವನಿತಾದಿಗಳಲ್ಲಿ ರಾಗೋದ್ರೇಕದಿಂದ ಬ್ರಹ್ಮಹತ್ಯೆಯಲ್ಲಿ ಪ್ರವೃತ್ತಿ ಮಾಡುತ್ತಾನೆ ಎಂದು ಹೇಳುವ ನಿನಗೆ ಅದರಿಂದ ಉಂಟಾಗುವ ಅತಿಶಯವಾದ ರಾಜಯಾತನೆ ಮತ್ತು ನರಕಯಾತನೆಗಳಲ್ಲಿ ದ್ವೇಷೋದ್ರೇಕದಿಂದ ಮತ್ತು ಕೀರ್ತಿ ಮತ್ತು ಸ್ವರ್ಗಾದಿಗಳಲ್ಲಿ ರಾಗೋದ್ರೇಕದಿಂದ ಸಜ್ಜನನಾದವನಿಗೆ ನಿವೃತ್ತಿಯೇ ಏಕೆ ಉಂಟಾಗುವುದಿಲ್ಲ ಎಂದು ನಮ್ಮ ಪ್ರಶ್ನೆ. ಆದ್ದರಿಂದ ಬ್ರಹ್ಮಹತ್ಯೆಯಲ್ಲಿ ಪ್ರವೃತ್ತವಾಗುವುದಕ್ಕೂ ಮತ್ತು ಅದರಿಂದ ನಿವೃತ್ತವಾಗುವುದಕ್ಕೂ ಬೇಕಾದ ಸಾಮಗ್ರಿಗಳು ಸಮಾನವಾಗಿದ್ದರೂ ಬಲಾತ್ಕಾರದಿಂದ ಜೀವನು ಬ್ರಹ್ಮಹತ್ಯೆಯಲ್ಲಿ ಪ್ರವೃತ್ತನಾಗುವಂತೆ ಮಾಡಲು ಒಬ್ಬ ಚೇತನನಾದ ಈಶ್ವರನನ್ನು ಅಂಗೀಕರಿಸಬೇಕಾಗುತ್ತದೆ. ಅಂತಹ ಬ್ರಾಹ್ಮಣ ಹನನದಲ್ಲಿ ಇನ್ನೊಬ್ಬ ಪುರುಷನಿಗೆ ಪ್ರವೃತ್ತಿ ಉಂಟಾಗಲಿಲ್ಲ, ನಿನಗೇ ಪ್ರವೃತ್ತಿ ಉಂಟಾಗಿದೆ ಎಂಬುದಕ್ಕೂ ಕಾರಣವನ್ನು ಹೇಳಬೇಕಷ್ಟೆ. ಈ ಬ್ರಹ್ಮಹತ್ಯಾ ಕರ್ಮವೇ ಕಾರಣವೆಂದು ಹೇಳಿದರೆ ಪುನಃ ಅನ್ಯೋನ್ಯಾಶ್ರಯ ದೋಷವು ಇದ್ದೇ ಇದೆ. ಪ್ರಾಚೀನವಾದ ಇನ್ನೊಂದು ಕರ್ಮವು ಕಾರಣವೆಂದು ಹೇಳಿದರೆ ಆ ಕರ್ಮವು ಜಡವಾದ್ದರಿಂದ ಅನರ್ಥ ಹೇತುವೆಂದು ತಿಳಿದ ಬ್ರಹ್ಮಹತ್ಯಾರೂಪವಾದ ಕರ್ಮದಲ್ಲಿ ಬಲಾತ್ಕಾರದಿಂದ ಪ್ರವರ್ತಿಸುವಂತೆ ಮಾಡಲು ಒಬ್ಬ ಸ್ವತಂತ್ರ ಚೇತನನನ್ನೇ ಅಂಗೀಕರಿಸಬೇಕಾಗುತ್ತದೆ. ಘಟಕಾರಣವಾದ ಮೃತ್ಪಿಂಡಾದಿಗಳು ತಾವೇ ದಂಡವನ್ನು ತೆಗೆದುಕೊಂಡು ಚಕ್ರವನ್ನು ತಿರುಗಿಸಿ ಘಟವನ್ನು ಮಾಡುವುದಿಲ್ಲವಷ್ಟೆ. ಘಟವನ್ನು ಮಾಡಲು ಸ್ವತಂತ್ರನಾದ ಕುಲಾಲಾದಿ ಚೇತನನ ಅಪೇಕ್ಷೆಯು ಇದೆ ಎಂಬುದೇ ಸರ್ವಾನುಭವ ಸಿದ್ಧವಾಗಿದೆ. ಈ ಕರ್ಮವು ಅನಾದಿಯಾಗಿದೆ ಎಂಬ ವಚನವೂ ಸಹ ಯಾವ ಪ್ರಶ್ನೆಗೂ ಉತ್ತರವನ್ನು ಕೊಡುವುದಿಲ್ಲ. ಮತ್ತು ಒಂದು ಅನಿಷ್ಟಕರ್ಮಕ್ಕೆ ಕಾರಣವಾದುದು ಇನ್ನೊಂದು ಅನಿಷ್ಟಕರ್ಮವೇ ಆಗಬೇಕು. ಏಕೆಂದರೆ ಒಂದು ಸತ್ಕರ್ಮದಿಂದ ಅನಿಷ್ಟವು ಉಂಟಾಗುವುದಿಲ್ಲ. ಅನಿಷ್ಟ ಕರ್ಮಕ್ಕೆ ಕಾರಣವಾದ ಕರ್ಮವನ್ನು ತಾನೇ ಮಾಡಿರಬೇಕು. ಏಕೆಂದರೆ ಒಬ್ಬನು ಮಾಡಿದ ಅನಿಷ್ಟಕರ್ಮವು ಇನ್ನೊಬ್ಬನಿಗೆ ಫಲವನ್ನು ಉಂಟು ಮಾಡುವುದಿಲ್ಲ. ಹೀಗೆಯೇ ಒಬ್ಬನೇ ಜೀವನಿಗೆ ಕಾರಣಕ್ಕೆ ಕಾರಣವಾದ ಮತ್ತು ಅದಕ್ಕೆ ಕಾರಣವಾದ ಅನಿಷ್ಟ ಕರ್ಮಗಳ ಪರಂಪರೆಯೇ ಸಿದ್ಧವಾಗುತ್ತದೆ. ಆದ್ದರಿಂದ ಬಿಟ್ಟಿ ಪುರುಷನಿಂದ ಬಲಾತ್ಕಾರದಿಂದ ಕರ್ಮವನ್ನು ಮಾಡಿಸಿದಂತೆ ಈ ಅನಿಷ್ಟ ಕರ್ಮಗಳ ಪರಂಪರೆಯನ್ನು ಜೀವನಿಂದ ಮಾಡಿಸಲು ಪ್ರಯೋಜಕನಾದ ಒಬ್ಬ ಈಶ್ವರನನ್ನು ಅಂಗೀಕರಿಸಬೇಕಾಗುತ್ತದೆ. ಬಿಟ್ಟಿ ಪುರುಷನು ಮಾಡುವ ಕರ್ಮವೇ ಅವನನ್ನು ಅದರಲ್ಲಿ ಪ್ರೇರಿಸುವುದಿಲ್ಲವಷ್ಟೆ. ಅಥವಾ ಹಿಂದಿನ ದಿನ ಮಾಡಿದ ಬಿಟ್ಟಿ ಕೆಲಸವು ಮರುದಿನ ಮಾಡುವ ಬಿಟ್ಟಿ ಕೆಲಸಕ್ಕೆ ಪ್ರವರ್ತಕವಾಗುವುದಿಲ್ಲವಷ್ಟೆ. ಆದರೆ ಇನ್ನೊಬ್ಬ ಪುರುಷನೇ

ಬಲಾತ್ಕಾರದಿಂದ ಅವನಿಂದ ಹಿಂದಿನ ದಿನವೂ ಮತ್ತು ಮರುದಿನವೂ ಬಿಟ್ಟಿ ಕೆಲಸವನ್ನು ಮಾಡಿಸುತ್ತಾನೆ ಎಂಬುದು ಅನುಭವ ಸಿದ್ಧವಾಗಿದೆ. ಅದರಂತೆ ಇಲ್ಲಿಯೂ ಕೂಡ ಇಂತಹ ಅನಿಷ್ಟ ಕರ್ಮಗಳ ಸಮುದಾಯವನ್ನು ಮಾಡುವಂತೆ ಜೀವನನ್ನು ಪ್ರೇರಿಸಲು ನಿಯಾಮಕನಾದ ಒಬ್ಬ ಈಶ್ವರನನ್ನು ಅಂಗೀಕರಿಸಬೇಕು. ಆದ್ದರಿಂದ ಕರ್ಮದಿಂದಲೂ ಮತ್ತು ಜೀವರಿಂದಲೂ ಭಿನ್ನನಾದ ಈಶ್ವರನ ಸಿದ್ಧಿಯು ಹೇಗೆ ಆಗದಿರಲು ಸಾಧ್ಯ? ಈ ಯುಕ್ತಿಯನ್ನು ಸೂಚಿಸುವುದಕ್ಕಾಗಿಯೇ ಗ್ರಂಥಕಾರರು ಹಿಂದಿನ ಶ್ಲೋಕದಲ್ಲಿ ವಿಷ್ಟಿಗೃಹೀತ ಎಂಬ ಪದವನ್ನೂ, ಈ ಶ್ಲೋಕದಲ್ಲಿ ಅನಿಷ್ಟ ಎಂಬ ಪದವನ್ನೂ ಪ್ರಯೋಗಿಸಿದ್ದಾರೆ.

**ನಿತ್ಯೋ ಜೀವೋಽಸ್ವತಂತ್ರಶ್ಚೇದನಿತ್ಯಂ ಕರ್ಮಜನ್ಮನಿ ।**
**ಸ್ಥಿತೌ ಲಯೇ ಪರಾಪೇಕ್ಷಮನ್ಯಾಧೀನಂ ಕಥಂ ನ ತತ್ ॥ ೭೨೪ ॥**

**ಅರ್ಥ–** ನಿತ್ಯೋ ಜೀವಃ= ನಿತ್ಯನಾದ ಜೀವನು, ಅಸ್ವತಂತ್ರಶ್ಚೇತ್= ಅಸ್ವತಂತ್ರನಾದರೆ, ಅನಿತ್ಯಂ ಕರ್ಮ= ಅನಿತ್ಯವಾದ ಕರ್ಮವು, ಜನ್ಮನಿ= ಉತ್ಪತ್ತಿಯಲ್ಲಿಯೂ, ಸ್ಥಿತೌ= ಸ್ಥಿತಿಯಲ್ಲಿಯೂ, ಲಯೇ= ವಿನಾಶದಲ್ಲಿಯೂ, ಪರಾಪೇಕ್ಷಂ= ಪರಾಪೇಕ್ಷವಾದ, ತತ್= ಆ ಕರ್ಮವು, ಕಥಂ= ಹೇಗೆ, ಅನ್ಯಾಧೀನಂ ನ= ಅನ್ಯಾಧೀನವಾಗುವುದಿಲ್ಲ?

**ಅನುವಾದ–** ನಿತ್ಯನಾದ ಜೀವನೇ ಅಸ್ವತಂತ್ರನಾದರೆ ಅನಿತ್ಯವಾದ ಕರ್ಮವು ಉತ್ಪತ್ತಿಯಲ್ಲಿಯೂ, ಸ್ಥಿತಿಯಲ್ಲಿಯೂ ಮತ್ತು ನಾಶದಲ್ಲಿಯೂ ಪರಾಪೇಕ್ಷವಾದುದು. ಆ ಕರ್ಮವು ಹೇಗೆ ಅನ್ಯಾಧೀನವಾಗುವುದಿಲ್ಲ?

**ಭಾವವಿಲಾಸಿನೀ–** ಅಪಿ ಚ ಅಸತ್ಸು ದುಷ್ಕರ್ಮಪರಂಪರಾನಿಯಮಸ್ಯ ಸತ್ಸು ಸತ್ಕರ್ಮಪರಂಪರಾನಿಯಮಸ್ಯ ಚ ಕರ್ಮಾತಿರಿಕ್ತಃ ಕಶ್ಚಿನ್ನಿಯಾಮಕೋ ವಕ್ತವ್ಯಃ । ತತ್ತದ್ಯೋಗ್ಯತಾವಶಾತ್ತಥಾ ತಥಾ ಜಾಯತ ಇತಿ ಚೇತ್ ನ । ಜೀವೇಷು ಯೋಗ್ಯಾಯೋಗ್ಯವಿಭಾಗಸ್ಯ ಪರೇಣಾನಂಗೀಕಾರಾತ್ । ಅಗತ್ಯಾ ತದಂಗೀಕಾರೇ ಕಿಮಪರಾದ್ಧಂ ಲಘುನೇಶ್ವರೇಣ । ಜೀವಗತಯೋಗ್ಯತಾಯಾ ಜೀವವದಸ್ವತಂತ್ರತಯಾ ಪರನಿಯಮ್ಯತ್ವಾವಶ್ಯಂ ಭಾವಾಚ್ಚ । ನಿತ್ಯಸ್ಯ ಚೇತನಸ್ಯ ಚ ಜೀವಸ್ಯ ಸ್ವಾತಂತ್ರ್ಯಾಭಾವೇನ ಕರ್ಮಸಾಚಿವ್ಯಾಂಗೀಕಾರೇ ಅನಿತ್ಯಸ್ಯ ಜಡಸ್ಯ ಚ ಕರ್ಮಣಃ ಸುತರಾಂ ಸ್ವಾತಂತ್ರ್ಯಾಯೋಗೇನ ಉಭಯೋರಪಿ ನಿಯಾಮಕಃ ಕಶ್ಚಿದೀಶೋ ಬಲಾತ್‌ಸಿದ್ಧ್ಯತೀತ್ಯಾಹ – ನಿತ್ಯ ಇತಿ ॥ ತತ್ ಕರ್ಮ ॥ ೭೨೪ ॥

**ವಿವರಣೆ–** ಅಸಜ್ಜನರು ಮಾಡುವ ದುಷ್ಕರ್ಮಪರಂಪರೆಗೂ, ಸಜ್ಜನರು ಮಾಡುವ ಸತ್ಕರ್ಮಪರಂಪರೆಗೂ ನಿಯಾಮಕನಾಗಿ ಕರ್ಮಾತಿರಿಕ್ತವಾದ ಒಬ್ಬ ಚೇತನವನ್ನು ಅಂಗೀಕರಿಸಬೇಕು. ಆ ಜೀವರ ಯೋಗ್ಯತೆಯಿಂದಲೇ ಅಂತಹ ಕರ್ಮಪರಂಪರೆಗಳು ಉಂಟಾಗುತ್ತದೆ ಎಂಬ ಸಮಾಧಾನವನ್ನು ಜೀವರಲ್ಲಿ ಯೋಗ್ಯಾಯೋಗ್ಯ ವಿಭಾಗವನ್ನು

ಒಪ್ಪದಿದ್ದ ಪರವಾದಿಯು ಹೇಳಲು ಸಾಧ್ಯವಿಲ್ಲ. ಗತ್ಯಂತರವಿಲ್ಲದೆ ಯೋಗ್ಯಾಯೋಗ್ಯ ವಿಭಾಗವನ್ನು ಅಂಗೀಕರಿಸುವುದಾದರೆ ಅದಕ್ಕಿಂತ ಈಶ್ವರನನ್ನು ಅಂಗೀಕರಿಸುವುದು ಒಳ್ಳೆಯದು ಮತ್ತು ಲಘುಭೂತವಾದುದು. ಮತ್ತು ಜೀವನ ಯೋಗ್ಯತೆಯೂ ಸಹ ಜೀವನಂತೆ ಅಸ್ವತಂತ್ರವೇ ಆಗಿರುವುದರಿಂದ ಅದೂ ಸಹ ಅನ್ಯನಿಯಮ್ಯವಾಗಲೇಬೇಕು. ನಿತ್ಯನಾದ ಚೇತನನಾದ ಜೀವನಿಗೆ ಸ್ವಾತಂತ್ರ್ಯವಿಲ್ಲದೆ, ಕರ್ಮಸಹಕಾರದಿಂದ ಕರ್ತೃತ್ವವನ್ನು ಒಪ್ಪುವುದಾದರೆ ಅನಿತ್ಯವಾದ ಮತ್ತು ಜಡವಾದ ಕರ್ಮಗಳಿಗೆ ಸುತರಾಂ ಸ್ವಾತಂತ್ರ್ಯವು ಕೂಡುವುದಿಲ್ಲವಾದ್ದರಿಂದ ಅಂತಹ ಜೀವ-ಜಡ ಉಭಯನಿಯಮಕನಾದ ಒಬ್ಬ ಈಶ್ವರನು ಸಿದ್ಧನಾಗುತ್ತಾನೆ ಎಂದು ಅಭಿಪ್ರಾಯ.

**ಯತ ಇತ್ಯೇಕವಚನಾದೇಕೋ ದಾಧಾರ ಚೇತ್ಯಲಂ ।**
**ಸ್ಪಷ್ಟಶ್ರುತೇರ್ನ ಕರ್ಮಾಣಿ ಕರ್ಮದ್ವಾರಾ ನ ಚೇತನಾಃ ।**
**ಅನಂತಾಃ ಸರ್ವಜಗತಾಂ ಕರ್ತಾರೋ ಲಾಘವಾದಪಿ ॥ ೭೨೫ ॥**

**ಅರ್ಥ–** ಯತಃ ಇತಿ= ಯತಃ ಎಂದು, ಏಕವಚನಾತ್= ಏಕವಚನವಿರುವುದರಿಂದಲೂ, ಚ= ಮತ್ತು, ಏಕೋ ದಾಧಾರ ಇತಿ= ಒಬ್ಬನೇ ಧರಿಸಿದ್ದಾನೆ ಎಂದು, ಅಲಂ= ಚೆನ್ನಾಗಿ, ಸ್ಪಷ್ಟಶ್ರುತೇಃ= ಸ್ಪಷ್ಟಶ್ರುತಿ ಇರುವುದರಿಂದಲೂ, ಕರ್ಮಾಣಿ= ಕರ್ಮಗಳು, ನ ಜಗತ್ ಕರ್ತಾರಃ= ಜಗತ್ ಕರ್ತೃಗಳಲ್ಲ, ಅನಂತಾಃ= ಅನಂತರಾದ, ಚೇತನಾಃ= ಜೀವರೂ ಸಹ, ಕರ್ಮದ್ವಾರಾ= ಕರ್ಮದ್ವಾರದಿಂದ, ಸರ್ವಜಗತ್ ಕರ್ತಾರಃ= ಸರ್ವಜಗತ್ತಿನ ಕರ್ತೃಗಳಾಗಿ, ನ= ಆಗುವುದಿಲ್ಲ, ಲಾಘವಾದಪಿ= ಲಾಘವ ಯುಕ್ತಿಯಿಂದಲೂ ಕೂಡ ಈಶ್ವರನೇ ಸಿದ್ಧನಾಗುತ್ತಾನೆ.

**ಅನುವಾದ–** 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬಲ್ಲಿ ಯತಃ ಎಂಬಲ್ಲಿ ಏಕವಚನವಿರುವುದರಿಂದಲೂ, 'ಏಕೋದಾಧಾರ ಭುವನಾನಿ' ಎಂಬ ಸ್ಪಷ್ಟವಾದ ಶ್ರುತಿಯು ಒಬ್ಬನಿಗೇ ಲೋಕಾಧಾರತ್ವವನ್ನು ಹೇಳಿರುವುದರಿಂದಲೂ ಮತ್ತು ಲಾಘವ ಯುಕ್ತಿಯಿಂದಲೂ ಈಶ್ವರನು ಸಿದ್ಧಿಸುತ್ತಾನೆ. ಅನಂತವಾದ ಕರ್ಮಗಳಾಗಲೀ ಅಥವಾ ಕರ್ಮದ್ವಾರಾ ಅನಂತ ಚೇತನರಾಗಲೀ ಜಗತ್ಕರ್ತೃಗಳೆಂದು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ಅನಂತಾನಾಂ ಜೀವಾನಾಂ ಕರ್ಮಣಾಂ ಚ ಕರ್ತೃತ್ವೇ ಕರ್ತೃರೇಕತ್ವ ಪ್ರತಿಪಾದಕಶ್ರುತಿವಿರೋಧಂ ದರ್ಶಯನ್ ಶ್ರುತ್ಯುಪಸ್ಕಾರಕಲಾಘವಾಖ್ಯಯುಕ್ತಿವಿರೋಧಂ ಚ ದರ್ಶಯತಿ ॥ **ಯತ ಇತಿ** ॥ ಅನೇನ ಯತೋ ವಾ ಇಮಾನಿ ಭೂತಾನಿ ಜಾಯಂತ ಇತಿ ಶ್ರುತಿಂ ಗೃಹ್ಣಾತಿ । ನ ಚ ವಾಚ್ಯಂ ಸಾರ್ವವಿಭಕ್ತಿಕ ತಸಿಲಂತಪ್ರಯೋಗೇಽಸ್ಮಿನ್ಯೇಭ್ಯ ಇತ್ಯಪಿ ವಕ್ತುಂ ಶಕ್ಯತ್ವಾತ್ ನ ಕರ್ತುರೇಕತ್ವಂ ಸಿದ್ಧ್ಯೇದಿತಿ । ವಾಕ್ಯಶೇಷೇ ಯೇನ ತದಿತಿ ಚ ಸ್ಪಷ್ಟೈಕ-

ವಚನಾಂತಪ್ರಯೋಗಪಂಕ್ತಿಪತಿತತ್ವೇನ ಆದಾವೇಕವಚನಸ್ಯೈವ ನ್ಯಾಯ್ಯತ್ವಾತ್ । ಅಧೀಹಿ ಭಗವೋ ಬ್ರಹ್ಮೇತಿ ಏಕಸ್ಯ ಬ್ರಹ್ಮಣ ಏವೋಪಕ್ರಾಂತತಯಾ ಅತ್ರಾಪ್ಯೇಕಸ್ಯ ತಸ್ಯ ಚ ಬ್ರಹ್ಮಣ ಏವ ಪ್ರತಿಪಾದ್ಯತ್ವಾಚ್ಚ। ಅನ್ಯಥಾ ಅಪ್ರಷ್ಟಪರಿಭಾಷಣತ್ವಪ್ರಸಂಗಾತ್ । ಯ ಉ ತ್ರಿಧಾತ್ವಿತಿ ವಕ್ಷ್ಯಮಾಣ ಸಂಹಿತಾವಾಕ್ಯೇ ವಿಷ್ಣುಸೂಕ್ತಬಲೇನ ದ್ಯಾವಾಪೃಥಿವೀಧಾರಕತ್ವಲಿಂಗಬಲೇನ ಸ್ಪಷ್ಟಮೇಕತ್ವೋಕ್ತ್ಯಾ ಚ ಏಕಸ್ಯ ಧಾರಕಪುರುಷಸ್ಯ ವಿಷ್ಣೋರೇವ ವಕ್ತವ್ಯತ್ವಾತ್ । ವಾಕ್ಯದ್ವಯೇ ಚ ಜಗದ್ಧಾರಕತ್ವ-ಸಮಾಖ್ಯಾಯಾ ಏಕಾರ್ಥಸ್ಯೈವ ವಕ್ತವ್ಯತ್ವಾತ್ । ನಿಶ್ಚಿತನಿರವಕಾಶಾನುಸಾರೇಣ ಸಂದಿಗ್ಧ-ಸಾವಕಾಶಸ್ಯ ಯೋಜ್ಯತ್ವಾಚ್ಚ ವಿಷ್ಣೋರೇವ ಬ್ರಹ್ಮತ್ವಸಿದ್ಧೇಃ । ಅತ ಏವ ಗ್ರಂಥಕಾರಸ್ಯ ನ ಪ್ರಕೃತಾಸಂಗತಿರ್ನಾಪಿ ವಾಕ್ಯಾರ್ಥಯೋರ್ವೈಯಧಿಕರಣ್ಯಂ ಮುಕ್ತಾವಪಿ ಯತ್‌ಪ್ರಯಂತ್ಯಭಿ-ಸಂವಿಶಂತೀತಿ ಬ್ರಹ್ಮಣಃ ಪ್ರಾಪ್ಯತ್ವಪ್ರವೇಶ್ಯತ್ವೋಕ್ತ್ಯಾ ಸಮಿತ್ಯುಪಸರ್ಗಬಲೇನ ಮುಖ್ಯಪ್ರಾಪ್ತಿ-ಪ್ರವೇಶಯೋರೇವ ವಕ್ತವ್ಯತಯಾ ಬಹೂನಾಮೇವಾಭಿತಃ ಪ್ರವೇಶಸಂಭವೇನ ವಿಶಂತೀತಿ ಬಹುವಚನಸಂಭಾವಾಯ ಮುಕ್ತಿಕಾಲೀನೈಕ್ಯಸ್ಯೈವ ಶಂಕಿತುಮಶಕ್ಯತ್ವಾತ್ ವ್ಯಾವಹಾರಿಕ-ಭೇದಮಾದಾಯ ಯದದ್ವೈತವಾದಿನಾಹಿತಾಕಾರಣಾದಿಸಮಾಧಾನಂ ತದಪಿ ನಿರಸ್ತಮ್ । ನ ಕೇವಲಂ ಯುಕ್ತ್ಯುಪೋದ್ಬಲಿತಶ್ರುತಿಸಿದ್ಧಂ ಕರ್ತ್ರೈಕತ್ವಂ ಕಿಂತು ಸಾಕ್ಷಾತ್‌ಕರ್ತುರೇಕತ್ವ ಪ್ರತಿಪಾದಿಕೈವ ಶ್ರುತಿರಸ್ತೀತ್ಯಾಹ – **ಏಕೋ ದಾಧಾರೇತಿ** ॥ ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ ಇತಿ ಶ್ರುತಿಂ ಗೃಹ್ಣಾತಿ ॥ ೭೨೫ ॥

**ವಿವರಣೆ–** ಅನಂತರಾದ ಜೀವರಿಗೆ ಅಥವಾ ಕರ್ಮಗಳಿಗೆ ಜಗತ್ಕರ್ತೃತ್ವವನ್ನು ಅಂಗೀಕರಿಸಿದರೆ ಜಗತ್ಕರ್ತೃ ಒಬ್ಬನೇ ಎಂದು ಪ್ರತಿಪಾದಿಸುವ ಶ್ರುತಿಯ ವಿರೋಧವನ್ನು ತೋರಿಸುತ್ತಾ ಶ್ರುತಿಗೆ ಲಾಘವ ರೂಪವಾದ ಯುಕ್ತಿಯೂ ಸಹ ಸಹಾಯವನ್ನು ಆಚರಿಸುತ್ತದೆ ಎಂದು ಹೇಳಿ ಇಲ್ಲದಿದ್ದರೆ ಯುಕ್ತಿವಿರೋಧವು ಬರುತ್ತದೆ ಎಂದು ಇಲ್ಲಿ ಪ್ರತಿಪಾದಿಸುತ್ತಾರೆ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯಲ್ಲಿ ಯತಃ ಶಬ್ದವಿದೆ. ಇದು ತಸಿಲ್ ಪ್ರತ್ಯಯಾಂತವಾದ ಯತ್ ಶಬ್ದ. ಇದು ಏಕವಚನದಲ್ಲಿ ಬಹುವಚನದಲ್ಲಿ ಮತ್ತು ದ್ವಿವಚನದಲ್ಲಿಯೂ ಉಪಪನ್ನವಾಗುತ್ತದೆ. ಆದ್ದರಿಂದ ಯತಃ ಎಂಬಲ್ಲಿ ಏಕವಚನವಿದೆ ಎಂದು ಹೇಗೆ ಹೇಳುವುದು ಎಂಬ ಪ್ರಶ್ನೆ. ಇದಕ್ಕೆ ಉತ್ತರವೆಂದರೆ ಯೇನ ಜಾತಾನಿ ಜೀವಂತಿ ಎಂಬಲ್ಲಿ ಯೇನ ಎಂಬಲ್ಲಿ ಸ್ಪಷ್ಟವಾಗಿ ಏಕವಚನವಿದೆ. ತದ್ಬ್ರಹ್ಮ ಎಂಬ ವಾಕ್ಯಶೇಷದಲ್ಲಿಯೂ ತತ್ ಎಂಬಲ್ಲಿ ಏಕವಚನವಿದೆ. ಯತ್ ಶಬ್ದದಿಂದ ಹೇಳಿದ ವಸ್ತುವೂ, ತತ್ ಶಬ್ದದಿಂದ ಹೇಳಿದ ವಸ್ತುವೂ ಒಂದೇ ಆಗಬೇಕು. ಆದ್ದರಿಂದ ಯತೋ ವಾ ಇಮಾನಿ ಎಂಬಲ್ಲಿ ಹೇಳಿದ ಯತ್ ಶಬ್ದವು ಅದೇ ಆಗಿರುವುದರಿಂದ ಅಲ್ಲಿ ಏಕವಚನವೇ ಇದೆ ಎಂದು ಅಭಿಪ್ರಾಯ. ಅಲ್ಲದೇ, 'ಅಧೀಹಿ ಭಗವೋ ಬ್ರಹ್ಮ' ಎಂದು ಬ್ರಹ್ಮನೊಬ್ಬನನ್ನೇ ಉಪದೇಶಿಸಿ ಎಂದು ಕೇಳಿರುವುದರಿಂದ ಕಾರಣವಾಕ್ಯದಲ್ಲಿಯೂ ಸಹ ಒಬ್ಬ ಬ್ರಹ್ಮನನ್ನೇ ಹೇಳಬೇಕು. ಅನಂತ ಜೀವರನ್ನಾಗಲಿ ಅಥವಾ ಅನಂತ ಕರ್ಮಗಳನ್ನಾಗಲಿ ಕಾರಣಗಳೆಂದು ಹೇಳಿದರೆ ಪ್ರಶ್ನೆ ಪ್ರತಿವಚನಗಳು ಅಸಂಗತವಾಗುತ್ತವೆ.

ಇಷ್ಟೇ ಅಲ್ಲದೆ, 'ಯಉ ತ್ರಿಧಾ ತು ಪೃಥಿವೀಂ ಉತದ್ಯಾಂ' ಎಂಬ ವಿಷ್ಣುಸೂಕ್ತದ ಮಂತ್ರವು ಸ್ಪಷ್ಟವಾಗಿ ದ್ಯಾವಾಪೃಥಿವಿಗಳ ಆಧಾರತ್ವವನ್ನು ಒಬ್ಬ ಪುರುಷನಿಗೆ ಹೇಳುತ್ತದೆ. ಆದ್ದರಿಂದ ಯೇನ ಜಾತಾನಿ ಜೀವಂತಿ ಮತ್ತು ಏಕೋ ದಾಧಾರ ಈ ಎರಡು ವಾಕ್ಯಗಳಿಗೂ ಸಂವಾದವಿರುವುದರಿಂದ ಎರಡೂ ಒಂದೇ ಅರ್ಥವನ್ನು ಹೇಳಬೇಕು. ನಿಶ್ಚಿತವಾದ ನಿರವಕಾಶ ಶ್ರುತಿಗೆ ಅನುಸಾರವಾಗಿ ಸಂದಿಗ್ಧವಾದ ಸಾವಕಾಶ ಶ್ರುತಿಗೆ ಅರ್ಥವನ್ನು ಹೇಳಬೇಕು. ಆದ್ದರಿಂದ ವಿಷ್ಣುಸೂಕ್ತದಲ್ಲಿ ದ್ಯಾವಾಪೃಥಿವ್ಯಾಧಾರತ್ವೇನ ಹೇಳಲ್ಪಟ್ಟ ವಿಷ್ಣು ಒಬ್ಬನೇ ಯತೋ ವಾ ಎಂಬಲ್ಲಿಯೂ ಕಾರಣನಾಗಿ ಹೇಳಲ್ಪಟ್ಟಿದ್ದಾನೆ ಎಂದು ಆ ವಿಷ್ಣುವಿಗೇ ಬ್ರಹ್ಮತ್ವವು ಸಿದ್ಧವಾಗುತ್ತದೆ. ಆದ್ದರಿಂದ ಏಕೋದಾಧಾರ ಎಂಬ ವಾಕ್ಯವನ್ನು ಗ್ರಂಥಕಾರರು ಉದಾಹರಿಸಿರುವುದರಿಂದ ಯಾವ ಅಸಂಗತಿಯಾಗಲೀ ಅಥವಾ ವೈಯಧಿಕರಣವಾಗಲೀ ಇಲ್ಲ. 'ಯತ್ಪ್ರಯಂತಿ ಅಭಿಸಂವಿಶಂತಿ' ಎಂದು ಮುಕ್ತಿಯಲ್ಲಿ ಪ್ರಾಪ್ತಿ ಮತ್ತು ಸರ್ವತಃ ಪ್ರವೇಶವನ್ನು ಹೇಳಿರುವುದರಿಂದ ಅದರಲ್ಲಿಯೂ ಅಭಿ ಸಂ ಎಂಬ ಎರಡು ಉಪಸರ್ಗಗಳಿಂದ ಮುಖ್ಯವಾದ ಪ್ರವೇಶವನ್ನೇ ಹೇಳಿರುವುದರಿಂದ ಮತ್ತು ಬಹುವಚನದಿಂದ ಅನೇಕ ಜೀವರಿಗೆ ಮುಕ್ತಿಕಾಲದಲ್ಲಿ ವಿಷ್ಣುವಿನಲ್ಲಿ ಪ್ರವೇಶವೇ ಸಿದ್ಧವಾಗುವುದರಿಂದ ಮುಕ್ತಿಕಾಲೀನವಾದ ಐಕ್ಯವಾಗಲೀ ಅಥವಾ ಮುಕ್ತಿಕಾಲೀನ ಪಾರಮಾರ್ಥಿಕ ಐಕ್ಯವನ್ನು ಆಧರಿಸಿ ಸಂಸಾರ ಕಾಲದಲ್ಲಿ ವ್ಯಾವಹಾರಿಕ ಭೇದವನ್ನು ಅಂಗೀಕರಿಸಿ ಅದ್ವೈತವಾದಿಗಳು ಮಾಡುವ ವ್ಯವಸ್ಥೆಯಾಗಲೀ ಸರಿಯಲ್ಲ ಎಂದು ನಿರಾಕರಿಸಿದಂತಾಯಿತು.

**ಲೋಕೇಽದೃಷ್ಟದ್ವಾರಕರ್ತೃಮಾತ್ರಾತ್ ಕ್ವಾಪಿ ಕ್ರಿಯಾಽಜನೇಃ ।**
**ಕೃತಿಪೂರ್ವಕಕರ್ತ್ರೈವ ಕರ್ತಾಽನ್ಯಸ್ತೂಪಚಾರತಃ ।**
**ಅನ್ಯಥಾ ಕನ್ಯಕಾಯಾಃ ಸ್ಯಾದ್ ಭರ್ತಾಪಿ ಪಿತೃವತ್ ಪಿತಾ ॥ ೭೨೬ ॥**

**ಅರ್ಥ–** ಲೋಕೇ= ಲೋಕದಲ್ಲಿ, ಅದೃಷ್ಟದ್ವಾರಕರ್ತೃಮಾತ್ರಾತ್= ಕೇವಲ ಅದೃಷ್ಟದ್ವಾರಕ ಕರ್ತೃವಿನಿಂದ, ಕ್ವಾಪಿ= ಎಲ್ಲಿಯೂ, ಕ್ರಿಯಾಽಜನೇಃ= ಉತ್ಪತ್ತಿರೂಪವಾದ ಕ್ರಿಯೆಯು ಕಾಣುವುದಿಲ್ಲವಾದ್ದರಿಂದ, ಕೃತಿಪೂರ್ವಕಕರ್ತ್ರೈವ= ಪ್ರಯತ್ನಪೂರ್ವಕವಾದ ಕರ್ತೃವೇ, ಕರ್ತಾ= ಮುಖ್ಯವಾದ ಕರ್ತೃ. ಅನ್ಯಸ್ತು= ಅದೃಷ್ಟದ್ವಾರಕರ್ತೃವಾದರೂ, ಉಪಚಾರತಃ= ಅಮುಖ್ಯವೃತ್ತಿಯಿಂದ ಕರ್ತೃವೆನಿಸುತ್ತಾನೆ, ಅನ್ಯಥಾ= ಇಲ್ಲದಿದ್ದರೆ, ಕನ್ಯಕಾಯಾಃ= ಕನ್ಯಕೆಗೆ, ಭರ್ತಾಪಿ= ಅದೃಷ್ಟದ್ವಾರಾ ಕರ್ತೃವಾದ ಪತಿಯೂ ಸಹ, ಪಿತೃವತ್= ಕೃತಿಪೂರ್ವಕ ಕರ್ತೃವಾದ ಪಿತೃವಿನಂತೆ, ಪಿತಾ ಸ್ಯಾತ್= ಪಿತೃವೇ ಆಗಬೇಕಾಗುತ್ತದೆ.

**ಅನುವಾದ–** ಲೋಕದಲ್ಲಿ ಕೇವಲ ಅದೃಷ್ಟದ್ವಾರಕ ಕರ್ತೃವಿನಿಂದ ಎಲ್ಲಿಯೂ ಕಾರ್ಯದ ಉತ್ಪತ್ತಿ ರೂಪವಾದ ಕ್ರಿಯೆಯು ಕಂಡಿಲ್ಲ. ಆದ್ದರಿಂದ ಕೃತಿಪೂರ್ವಕವಾದ ಕರ್ತೃವೇ ಮುಖ್ಯಕರ್ತೃವಾದವನು. ಅದೃಷ್ಟದ್ವಾರಾ ಕರ್ತೃವಾದವನು ಉಪಚಾರದಿಂದ

**ಎಂದರೆ ಅಮುಖ್ಯವಾಗಿ ಕರ್ತೃವೆನಿಸುತ್ತಾನೆ. ಇಲ್ಲದಿದ್ದರೆ ಕನ್ನಿಕೆಯನ್ನು ಕುರಿತು ಅದೃಷ್ಟದ್ವಾರಾ ಕರ್ತೃವಾದ ಅವಳ ಪತಿಯೂ ಸಹ ಕನ್ನಿಕೆಯ ತಂದೆಯಂತೆ ತಂದೆಯೇ ಆಗಬೇಕಾಗುತ್ತದೆ.**

**ಭಾವವಿಲಾಸಿನೀ–** ಅದೃಷ್ಟದ್ವಾರಾ ಜೀವಾನಾಮೇವ ಜಗತ್ಕರ್ತೃತ್ವಪಕ್ಷೇಽಪ್ಯದೃಷ್ಟಕಲ್ಪನಾಖ್ಯ ದೂಷಣಂ ಚಾಹ – **ಲೋಕ ಇತಿ ॥** ಕ್ವಾಪಿ ಘಟಪಟಾದಿಕಾರ್ಯೇ ಕ್ರಿಯಾಽಜನೇಃ ಜನ್ಮರೂಪಕ್ರಿಯಾಯಾ ಅಜನೇಃ ಘಟಾಪಟಾದಿಕಾರ್ಯೇಷು ಭೋಜಕಾದೃಷ್ಟದ್ವಾರಾ ಕರ್ತೃಭೂತಯಜ್ಞದತ್ತದೇವದತ್ತಾದಿಷು ಸತ್ಸ್ವಪಿ ಕೃತಿಪೂರ್ವಕಕರ್ತೃಕುಲಾಲಕುವಿಂದಾದಿ-ವ್ಯತಿರೇಕೇಣ ಘಟಪಟಾದಿ ಕಾರ್ಯಾದೃಷ್ಟೇಃ ಮಹೀಮಹೀಧರಾದಿಕಾರ್ಯೇಽಪಿ ಕೃತಿ-ಪೂರ್ವಕಕರ್ತಾಪಿ ಕಶ್ಚಿದಪೇಕ್ಷಿತಃ । ಅನ್ಯಥಾ ಅದೃಷ್ಟಕಲ್ಪನಾಪ್ರಸಂಗಾತ್ । ನ ಚ ವಾಚ್ಯ-ಮಂಕುರಾದಿಕಾರ್ಯೇ ಕೃತಿಪೂರ್ವಕರ್ತೃರದರ್ಶನಾತ್ ಪಟಾದೌ ದೃಷ್ಟೋಽಪಿ ಕೃತಿಪೂರ್ವ-ಕರ್ತಾ ನ ಕಾರಣಮಿತಿ । ಅಪಸಿದ್ಧಾಂತಾತ್ । ಕುಲಾಲಾದೇರಕಾರಣತ್ವೇ ತದ್ವ್ಯತಿರೇಕೇಣಾಪಿ ಕ್ವಚಿತ್ ಘಟೋತ್ಪತ್ತಿಪ್ರಸಂಗಾಚ್ಚ । ಅನ್ಯಥಾಸಿದ್ಧನಿಯತಪೂರ್ವಭಾವವತಃ ಕುಲಾಲದೇರ-ಕಾರಣತ್ವೇ ತಾದೃಶಕಾರಣಾಂತರಸ್ಯಾಪ್ಯಕಾರಣತ್ವಾಪತ್ತೇರಕಾರಣಕಾರ್ಯೋತ್ಪತ್ತಿ ಪ್ರಸಂಗಾಚ್ಚ ।

ಕಪಾಲದ್ವಯಸಂಯೋಗಕರಣಮಾತ್ರೇಣ ಕುಲಾಲಸ್ಯಾನ್ಯಥಾಸಿದ್ಧಿರಿತಿ ಚೇತ್ ನ । ಕಪಾಲದ್ವಯಸಂಯೋಗಸ್ಯಾಪಿ ತದ್ವಿಭಾಗನಾಶೋಪಕ್ಷೀಣತ್ವಪ್ರಸಂಗೇನ ವಿಭಾಗನಾಶಸ್ಯ ಚ ಜಲಸ್ರವಣ ಪ್ರತಿಬಂಧಕರಣಮಾತ್ರೋಪಕ್ಷೀಣತ್ವಾಪತ್ತೇಃ ಪುನರಕಾರಣಕಾರ್ಯೋತ್ಪತ್ತಿ-ಪ್ರಸಂಗತಾದವಸ್ಥ್ಯಾತ್ । ಕಪಾಲದ್ವಯಸಂಯೋಗಾನಂತರಮಪಿ ದಂಡಚಕ್ರಾದಿನಾ ಪೃಥುಬುಧ್ನೋದರಾಕಾರಕರಣಕಂಠಪೀಠಕರಣಾದಿನಾ ಕುಲಾಲವ್ಯಾಪಾರದರ್ಶನಾಚ್ಚ । ಏವಮಪಿ ಕುಲಾಲಸ್ಯಾಕಾರಣತ್ವಘಟನೇ ಕುಂಭಾಕಾರಶಬ್ದಸ್ಯ ತ್ವಯ್ಯೈವೋಪನಿಪಾತಾಚ್ಚ । ಸಂದಿಗ್ಧಾನುಸಾರೇಣ ನಿಶ್ಚಿತಸ್ಯೈವ ಭಂಗೇ ಅನುಮಾನಮಾತ್ರೋಚ್ಛೇದಪ್ರಸಂಗಾಚ್ಚ । ತಸ್ಮಾದಪರಿಹಾರ್ಯೈವಾದೃಷ್ಟಕಲ್ಪನಾ । ಕೃತಿಪೂರ್ವಕಕರ್ತೃತ್ವಾಭಾವೇ ಜಗದ್ರೂಪಕಾರ್ಯತ್ವಂ ನ ಭವತೀತ್ಯತ್ರ ಯುಕ್ತಿಮಾಹ – **ಕೃತೀತಿ ॥** ಅನ್ಯಃ ಅದೃಷ್ಟದ್ವಾರಾ ಕರ್ತಾ । ಅದೃಷ್ಟಸ್ಯ ಸರ್ವೋತ್ಪತ್ತಿ-ಮನ್ನಿಮಿತ್ತಕಾರಣತ್ವವದ- ದೃಷ್ಟಾಧಾರಜೀವಾನಾಂ ತತ್ಪ್ರಸಿದ್ಧ್ಯಭಾವಾದಿತಿ ಭಾವಃ । ವಿಪಕ್ಷೇ ಬಾಧಕಂ ಚಾಹ – **ಅನ್ಯಥೇತಿ ॥** ಅನ್ಯಥಾ ಕೃತಿಪೂರ್ವಕಕರ್ತೃವತ್ ಅದೃಷ್ಟದ್ವಾರಕಕರ್ತೃರಪಿ ಮುಖ್ಯಕರ್ತೃತ್ವೇ ಅದೃಷ್ಟದ್ವಾರಾ ಭಾರ್ಯಾಕರ್ತೃರ್ಭರ್ತುರಪಿ ಪಿತೃವತ್ಪಿತೃತ್ವಂ ಸ್ಯಾತ್ । ನ ಚ ತದ್ಯುಕ್ತಮ್ । ತಸ್ಮಾತ್ಕೃತಿ ಪೂರ್ವಕಕರ್ತೈವ ಮುಖ್ಯತಃ ಕರ್ತೇತಿ ಭಾವಃ ॥ ೭೨ ॥

**ವಿವರಣೆ–** ಅದೃಷ್ಟದ್ವಾರಾ ಜೀವರೇ ಜಗತ್ಕರ್ತೃಗಳು ಎಂಬ ಪಕ್ಷದಲ್ಲಿ ಇಲ್ಲಿ ಅದೃಷ್ಟಕಲ್ಪನಾರೂಪವಾದ ದೋಷವನ್ನು ಹೇಳುತ್ತಾರೆ. ಘಟಪಟಾದಿಗಳನ್ನು ಕುಲಾಲಾದಿಗಳು ಮಾಡುತ್ತಾರೆ. ಅದನ್ನು ಭೋಗಿಸುವವರು ಚೈತ್ರಮೈತ್ರಾದಿಗಳು. ಚೈತ್ರಮೈತ್ರಾದಿಗಳಿಗೆ ಅದೃಷ್ಟದ್ವಾರಾ ಘಟಾದಿ ಜನಕತ್ವವು ಇದೆ. ಆದರೆ ಲೋಕದಲ್ಲಿ

ಯಾರೂ ಚೈತ್ರಾದಿಗಳನ್ನು ಘಟಕರ್ತೃಗಳೆಂದು ಕರೆಯುವುದಿಲ್ಲ. ಹಾಗೇನಾದರೂ ಇದ್ದಿದ್ದರೆ ಚೈತ್ರಮೈತ್ರಾದಿಗಳಿದ್ದು ಕುಲಾಲನು ಇಲ್ಲದಿರುವಾಗಲೂ ಘಟದ ಉತ್ಪತ್ತಿಯು ಆಗಬೇಕಾಗುತ್ತಿತ್ತು. ಆದ್ದರಿಂದ ಕುಲಾಲನೇ ಮುಖ್ಯಕರ್ತೃ, ಚೈತ್ರಮೈತ್ರಾದಿಗಳು ಉಪಚಾರದಿಂದ ಕರ್ತೃಗಳೆನಿಸುತ್ತಾರೆ. ಅದರಂತೆ ಮಹೀಮಹೀಧರಾದಿ ಕಾರ್ಯಗಳಲ್ಲಿಯೂ ಸಹ ತನ್ನ ಕೃತಿಯಿಂದ (ಪ್ರಯತ್ನದಿಂದ) ಉತ್ಪತ್ತಿಯನ್ನು ಮಾಡುವ ಒಬ್ಬ ಚೇತನನು ಅಪೇಕ್ಷಿಸಲ್ಪಡುತ್ತಾನೆ. ಇಲ್ಲದಿದ್ದರೆ ಅದೃಷ್ಟಕಲ್ಪನಾ ಪ್ರಸಂಗವು ಬರುತ್ತದೆ. ಘಟಾದಿ ಕಾರ್ಯಗಳಲ್ಲಿ ಕೃತಿಪೂರ್ವಕ ಕರ್ತೃವು ಕಂಡಿದ್ದರೂ ಅಂಕುರಾದಿಗಳಲ್ಲಿ ಕೃತಿಪೂರ್ವಕ ಕರ್ತೃವು ಕಾಣದಿರುವುದರಿಂದ ಅಲ್ಲಿ ಅಂತಹ ಕರ್ತೃವಿಲ್ಲ ಎಂದು ಹೇಳಿದರೆ ಮೀಮಾಂಸಕರಿಗೂ ಅಪಸಿದ್ಧಾಂತ ದೋಷವು ಬರುತ್ತದೆ. ಕುಲಾಲಾದಿಗಳು ಘಟವನ್ನು ಕುರಿತು ಕಾರಣರೇ ಅಲ್ಲ ಎಂದಾದರೆ ಕುಲಾಲನು ಇಲ್ಲದೆಯೂ ಘಟೋತ್ಪತ್ತಿಯಾಗಲಿ ಎಂಬ ಅತಿಪ್ರಸಕ್ತಿಯು ಬರುತ್ತದೆ. ಅನನ್ಯಥಾ ಸಿದ್ಧ ನಿಯತಪೂರ್ವಭಾವಿಯಾದ ಕುಲಾಲಾದಿಗಳಿಗೆ ಕಾರಣತ್ವವು ಇಲ್ಲದಿದ್ದರೆ ಅನನ್ಯಥಾ ಸಿದ್ಧ ನಿಯತಪೂರ್ವಭಾವಿಯಾದ ಮೃದಾದಿಗಳಿಗೂ ಕಾರಣತ್ವವು ಬೇಡ ಎಂದು ಆಪತ್ತಿಯು ಬಂದು ಅಕಾರಣಕಾರ್ಯೋತ್ಪತ್ತಿಯ ಪ್ರಸಂಗವು ಉಂಟಾಗುತ್ತದೆ. ಕುಲಾಲನು ಘಟದ ಉತ್ಪತ್ತಿಗೆ ಕಾರಣನಲ್ಲ ಕಪಾಲದ್ವಯಸಂಯೋಗಕ್ಕೆ ಮಾತ್ರ ಕಾರಣ. ಕಪಾಲದ್ವಯಸಂಯೋಗದಿಂದ ಘಟವು ತಾನೇ ಆಗುತ್ತದೆ ಎಂದು ಹೇಳುವುದಾದರೆ ಕಪಾಲದ್ವಯಸಂಯೋಗವೂ ಸಹ ಆ ಸಂಯೋಗದಿಂದ ಉಂಟಾಗುವ ವಿಭಾಗವನ್ನು ಉತ್ಪಾದನೆ ಮಾಡಿ ಚರಿತಾರ್ಥವಾಗುತ್ತದೆ. ಅದೂ ಕೂಡ ಘಟೋತ್ಪತ್ತಿಯನ್ನು ಕುರಿತು ಕಾರಣವಲ್ಲ ಎಂಬ ಆಪತ್ತಿಯು ಬರುತ್ತದೆ. ಆ ವಿಭಾಗನಾಶವೂ ಕೂಡ ಜಲಸ್ರವಣಪ್ರತಿಬಂಧ, ನೀರು ಸೋರಿಹೋಗುವುದನ್ನು ತಡೆಯುವಿಕೆ ರೂಪವಾದ ಕಾರ್ಯವನ್ನು ಮಾಡಿ ಉಪಕ್ಷೀಣವಾಗುತ್ತದೆ ಹೊರತು ಘಟವನ್ನು ಕುರಿತು ಕಾರಣವಾಗುವುದಿಲ್ಲ ಎಂದು ಅಕಾರಣಕಾರ್ಯೋತ್ಪತ್ತಿಪ್ರಸಂಗವು ಬಂದೇ ಬರುತ್ತದೆ. ಕಪಾಲದ್ವಯಸಂಯೋಗವನ್ನು ಮಾಡಿದ ಮೇಲೆಯೂ ಕುಂಬಾರನು ದಂಡಚಕ್ರಾದಿ ಗಳಿಂದ ಘಟಕ್ಕೆ ಕಂಠ ಮತ್ತು ಪೀಠವನ್ನು ಮಾಡುವುದು ವ್ಯರ್ಥವಾಗುತ್ತದೆ. ಇಷ್ಟಾದರೂ ಕುಲಾಲನು ಘಟವನ್ನು ಕುರಿತು ಕಾರಣನಲ್ಲ ಎಂದು ಹೇಳಿದರೆ ಘಟಕರ್ತೃ ಎಂಬ ಅರ್ಥದಲ್ಲಿ ಕುಂಭಕಾರಾದಿ ಶಬ್ದಗಳನ್ನು ನಿಪಾತನೆ ಮಾಡಿರುವ ವ್ಯಾಕರಣಶಾಸ್ತ್ರದ ವಿರೋಧವು ಉಂಟಾಗುತ್ತದೆ. ಸಂದಿಗ್ಧವಾದ ಪ್ರಮಾಣಕ್ಕೆ ಪ್ರಾಬಲ್ಯವನ್ನು ಕೊಟ್ಟು ಅದನ್ನು ಅನುಸರಿಸಿ ನಿಶ್ಚಿತಾರ್ಥವಾದ ವಾಕ್ಯಕ್ಕೆ ಭಂಗವನ್ನು ಉಂಟುಮಾಡಿದರೆ ಎಲ್ಲಾ ಅನುಮಾನಗಳೂ ಉಚ್ಛೇದವನ್ನು ಹೊಂದುತ್ತವೆ. ಆದ್ದರಿಂದ ಕೃತಿಪೂರ್ವಕ ಕರ್ತೃವನ್ನು ಅಂಗೀಕರಿಸದಿದ್ದರೆ ಅದೃಷ್ಟಕಲ್ಪನಾ ದೋಷವು ಬಂದೇ ಬರುತ್ತದೆ. ಅದೃಷ್ಟಕ್ಕೆ ಸರ್ವೋತ್ಪತ್ತಿಯನ್ನು ಕುರಿತು ನಿಮಿತ್ತ ಕಾರಣತ್ವವು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುವಂತೆ

ಕಾರ್ಯವನ್ನು ಕುರಿತು ಅದೃಷ್ಟದ್ವಾರಕರ್ತೃಗಳಾದ ಅದೃಷ್ಟಾಧಾರರಾದ ಜೀವರಲ್ಲಿ ಕರ್ತೃತ್ವ ಪ್ರಸಿದ್ಧಿ ಇಲ್ಲದಿರುವುದು ಲೋಕಸಿದ್ಧವಾಗಿದೆ. ಆದರೂ ಜೀವರಿಗೆ ಅದೃಷ್ಟದ್ವಾರಾ ಜಗತ್ಕರ್ತೃತ್ವವನ್ನು ಅಂಗೀಕರಿಸಿದರೆ ಕನ್ಯೆಯ ಪತಿಯಾದವನೂ ಸಹ ಅದೃಷ್ಟದ್ವಾರಾ ಕನ್ಯಾಕರ್ತೃವಾದ್ದರಿಂದ ಕನ್ಯೆಯ ಪಿತೃವಿನಂತೆ ಅವನಿಗೂ ಸಹ ಆ ಕನ್ಯೆಯನ್ನು ಕುರಿತು ಪಿತೃತ್ವವೇ ಬರಬೇಕಾಗುತ್ತದೆ. ಇದು ಅಪ್ರಾಮಾಣಿಕವಾದುದು. ಆದ್ದರಿಂದ ಪ್ರಯತ್ನ ಪೂರ್ವಕ ಕರ್ತೃವನ್ನೇ ಮುಖ್ಯವಾದ ಕರ್ತೃ ಎಂದು ಅಂಗೀಕರಿಸಬೇಕು ಎಂದು ಅಭಿಪ್ರಾಯ.

**ಅತೋ ನಾಮುಖ್ಯಕರ್ತ್ರೈವ ಮಹಾಕಾರ್ಯಮಿದಂ ಭವೇತ್ ।**
**ಕಿಂ ಸ್ತ್ರೀಪುಂಸೌ ವಿನಾಪಿ ಸ್ಯಾತ್ ಪುತ್ರಃ ಪುತ್ರೇಷ್ಟಿಮಾತ್ರತಃ ॥ ೭೨೭॥**

**ಅರ್ಥ–** ಅತಃ= ಆದ್ದರಿಂದ, ಅಮುಖ್ಯಕರ್ತ್ರೈವ= ಅದೃಷ್ಟದ್ವಾರಾಕರ್ತೃವಾದ ಅಮುಖ್ಯಕರ್ತೃವಿನಿಂದಲೇ, ಇದಂ ಮಹಾಕಾರ್ಯಂ= ಈ ಮಹಾಕಾರ್ಯವು, ನ ಭವೇತ್= ಉಂಟಾಗಲಾರದು. ಸ್ತ್ರೀಪುಂಸೌ ವಿನಾ= ಸ್ತ್ರೀಪುರುಷರಿಲ್ಲದೆ, ಪುತ್ರೇಷ್ಟಿಮಾತ್ರತಃ= ಕೇವಲ ಪುತ್ರೇಷ್ಟಿಯಾಗದಿಂದ, ಪುತ್ರಃ= ಪುತ್ರನು, ಸ್ಯಾತ್ ಕಿಂ= ಜನಿಸುತ್ತಾನೆಯೇ?

**ಅನುವಾದ–** ಆದ್ದರಿಂದ ಅದೃಷ್ಟದ್ವಾರಾ ಕರ್ತೃವಾದ ಅಮುಖ್ಯಕರ್ತೃವಿನಿಂದಲೇ ಈ ಜಗದ್ರೂಪವಾದ ಮಹಾಕಾರ್ಯವು ಉಂಟಾಗಲಾರದು. ಸ್ತ್ರೀ ಪುರುಷರಿಲ್ಲದೆ ಪುತ್ರೇಷ್ಟಿಯಾಗ ಜನ್ಯವಾದ ಅದೃಷ್ಟದಿಂದಲೇ ಎಂದಾದರೂ ಪುತ್ರನು ಜನಿಸುತ್ತಾನೆಯೇ?

**ಭಾವವಿಲಾಸಿನೀ–** ಅತಃ ಕೃತಿಪೂರ್ವಕಕರ್ತುರೇವ ಮುಖ್ಯಕರ್ತೃತ್ವಾತ್ । ಇದಂ ಮಹೀ ಮಹೀಧರಾದಿಕಮ್ । ಘಟಾದ್ಯಲ್ಪಕಾರ್ಯಸ್ಯಾಪಿ ಕರ್ತೃದ್ವಯಸಾಪೇಕ್ಷತ್ವೇ ಮಹಾಕಾರ್ಯಸ್ಯಾಸ್ಯ ಕಥಂ ಕರ್ತೃದ್ವಯಾನಪೇಕ್ಷೇತಿ ಭಾವಃ । ಅದೃಷ್ಟವಿಶೇಷಾದ್ಭವತೀತ್ಯತ ಆಹ – **ಕಿಮಿತಿ** ॥ ಪುತ್ರೇಷ್ಟಿಮಾತ್ರತಃ ಪುತ್ರೇಷ್ಟಿ ಜನ್ಯಾದೃಷ್ಟಮಾತ್ರತಃ ॥ ೭೨೭ ॥

**ವಿವರಣೆ–** ಕೃತಿಪೂರ್ವಕ ಕರ್ತೃವನ್ನೇ ಮುಖ್ಯಕರ್ತೃವೆಂದು ಅಂಗೀಕರಿಸಬೇಕು. ಅಂತಹ ಕರ್ತೃವು ಇಲ್ಲದಿದ್ದಾಗ ಪುತ್ರೇಷ್ಟಿಯಾಗದಿಂದ ಉಂಟಾದ ಅದೃಷ್ಟವಿದ್ದರೂ ಹೇಗೆ ಪುತ್ರನು ಜನಿಸುವುದಿಲ್ಲವೋ, ಅದರಂತೆ ಅದೃಷ್ಟಾಧಾರವಾದ ಕರ್ತೃಗಳಿದ್ದರೂ ಅವರಿಂದ ಜಗತ್ತು ಉತ್ಪತ್ತಿಯಾಗುವುದಿಲ್ಲ ಎಂದು ಅಭಿಪ್ರಾಯ.

**ನಚೇದುಪಾದಾನಮಪಿ ತದ್ವತ್ ಸ್ಯಾದೌಪಚಾರಿಕಂ ।**
**ದೃಷ್ಟಾನುಸಾರತಸ್ತಚ್ಚೇತ್ ಕರ್ತಾಪಿ ಸ್ಯಾತ್ ತಥೈವ ಹಿ ॥ ೭೨೮ ॥**

**ಅರ್ಥ–** ನ ಚೇತ್= ಇಲ್ಲದಿದ್ದರೆ, ಉಪಾದಾನಮಪಿ= ಉಪಾದಾನ ಕಾರಣವೂ ಕೂಡ, ತದ್ವತ್= ಕರ್ತೃವಿನಂತೆ, ಔಪಚಾರಿಕಂ ಸ್ಯಾತ್= ಔಪಚಾರಿಕವೇ ಆಗಲಿ, ದೃಷ್ಟಾನುಸಾರತಃ=

ದೃಷ್ಟವಾದ ಘಟಾದಿಗಳ ಕಾರ್ಯಕ್ಕೆ ಅನುಸಾರವಾಗಿ, ತಚ್ಚೇತ್= ಪರಮಾಣ್ವಾದಿ ಮುಖ್ಯೋಪಾದಾನವನ್ನು ಅಂಗೀಕರಿಸುವುದಾದರೆ, ತಥೈವ= ಅದರಂತೆಯೇ, ಕರ್ತಾಪಿ= ಕೃತಿಪೂರ್ವಕ ಕರ್ತೃವೂ ಸಹ, ಸ್ಯಾತ್= ಅಂಗೀಕರಿಸಲ್ಪಡಬೇಕು.

**ಅನುವಾದ–** ಕರ್ತೃವು ಉಪಚರಿತ ಕರ್ತೃವೆಂದು ಸ್ವೀಕರಿಸಿದರೆ ಉಪಾದಾನವನ್ನೂ ಸಹ ಉಪಚರಿತವಾದುದನ್ನೇ ಸ್ವೀಕರಿಸಬೇಕು ಎಂಬ ಆಪತ್ತಿಯು ಬರುತ್ತದೆ. ಘಟಪಟಾದಿ ದೃಷ್ಟ ಕಾರ್ಯವನ್ನು ಅನುಸರಿಸಿ ಆ ಸ್ಥಳದಲ್ಲಿ ಪರಮಾಣು ಕಪಾಲ ಮೊದಲಾದ ಮುಖ್ಯ ಉಪಾದಾನವನ್ನು ಅಂಗೀಕರಿಸುವುದಾದರೆ ಅದರಂತೆಯೇ ಕುಲಾಲಕುವಿಂದಾದಿಗಳನ್ನು ಅನುಸರಿಸಿ ಕೃತಿಪೂರ್ವಕ ಕರ್ತೃವನ್ನೇ ಮುಖ್ಯ-ಕರ್ತೃವೆಂದು ಅಂಗೀಕರಿಸಬೇಕಾಗುತ್ತದೆ.

**ಭಾವವಿಲಾಸಿನೀ–** ಉಪಾದಾನಪ್ರತಿಬಂದ್ಯಾ ಚೋತ್ತರಮಾಹ – ನ ಚೇದಿತಿ ॥ ತದ್ವತ್ ಔಪಚಾರಿಕಕರ್ತೃವತ್ । ಅದೃಷ್ಟಜನಕಕ್ರಿಯಾಹೇತುಭೂತಹವಿರಾದ್ಯುಪಾದಾನೇನೈವ ಜಗಜ್ಜನ್ಮಾಪಿ ಸ್ಯಾದಿತಿ ಭಾವಃ । ದೃಷ್ಟಾನುಸಾರತಃ ದೃಷ್ಟಘಟಾದಿಕಾರ್ಯಾನುಸಾರತಃ । ತತ್ ಪರಮಾಣ್ವಾದಿ ಮುಖ್ಯೋಪಾದಾನಮ್ । ಕರ್ತಾ ಕೃತಿಪೂರ್ವಕಕರ್ತಾ ॥ ೭೨೮ ॥

**ವಿವರಣೆ–** ಅಮುಖ್ಯವಾದ ಉಪಾದಾನದಿಂದ ಹೇಗೆ ಕಾರ್ಯವು ಉಂಟಾಗುವುದಿಲ್ಲವೋ ಹಾಗೆ ಅಮುಖ್ಯವಾದ ಕರ್ತೃವಿನಿಂದಲೂ ಯಾವ ಕಾರ್ಯ ಉಂಟಾಗುವುದಿಲ್ಲ ಎಂದು ಅಭಿಪ್ರಾಯ.

ಅದೃಷ್ಟಮಪಿ ಬೀಜಾದ್ಯಂ ಕಲ್ಪ್ಯಂ ಫಲಬಲಾದ್ ಯಥಾ ।
ತಥಾಽದೃಷ್ಟೋಽಪಿ ಕರ್ತಾಽಸ್ಯ ಕಲ್ಪ್ಯಃ ಕೋಽಪ್ಯುರುಶಕ್ತಿಮಾನ್ ॥ ೭೨೯ ॥

**ಅರ್ಥ–** ಯಥಾ= ಹೇಗೆ, ಫಲಬಲಾತ್= ಅಂಕುರರೂಪವಾದ ಕಾರ್ಯದ ಬಲದಿಂದ, ಅದೃಷ್ಟಮಪಿ= ಅದೃಷ್ಟವಾದರೂ ಕೂಡ, ಬೀಜಾದ್ಯಂ= ಬೀಜಾದಿಗಳು, ಕಲ್ಪ್ಯಂ= ಕಲ್ಪಿಸಲ್ಪಡುತ್ತವೆಯೋ, ತಥಾ= ಅದರಂತೆ, ಅದೃಷ್ಟೋಪಿ= ಕಣ್ಣಿಗೆ ಕಾಣಿಸದಿದ್ದರೂ ಜಗದ್ರೂಪ ಫಲಬಲದಿಂದ, ಪುರುಶಕ್ತಿಮಾನ್= ಮಹಾಶಕ್ತಿಸಂಪನ್ನನಾದ, ಕೋಪಿ= ಒಬ್ಬ ವಿಲಕ್ಷಣ ಚೇತನನು, ಕರ್ತಾ= ಕರ್ತೃವೆಂದು, ಕಲ್ಪ್ಯಃ= ಕಲ್ಪಿಸಲ್ಪಡಬೇಕು.

**ಅನುವಾದ–** ಅಂಕುರ ಸ್ಥಳದಲ್ಲಿ ಬೀಜಾದಿಗಳು ಕಣ್ಣಿಗೆ ಕಾಣಿಸದಿದ್ದರೂ ಅಂಕುರ ರೂಪವಾದ ಕಾರ್ಯದ ಬಲದಿಂದ ಹೇಗೆ ಬೀಜಾದಿಗಳು ಕಲ್ಪಿಸಲ್ಪಡುತ್ತದೆಯೋ ಅದರಂತೆ ಕರ್ತೃವು ಅದೃಷ್ಟನಾದರೂ ಸಹ ಜಗದ್ರೂಪವಾದ ಕಾರ್ಯದ ಬಲದಿಂದ ಮಹಾಶಕ್ತಿ ಸಂಪನ್ನನಾದ ಒಬ್ಬ ಕರ್ತೃವು ಕಲ್ಪಿಸಲ್ಪಡಬೇಕು.

ಕಾರ್ಯವನ್ನು ಕುರಿತು ಅದೃಷ್ಟದ್ವಾರಕರ್ತೃಗಳಾದ ಅದೃಷ್ಟಾಧಾರರಾದ ಜೀವರಲ್ಲಿ ಕರ್ತೃತ್ವ ಪ್ರಸಿದ್ಧಿ ಇಲ್ಲದಿರುವುದು ಲೋಕಸಿದ್ಧವಾಗಿದೆ. ಆದರೂ ಜೀವರಿಗೆ ಅದೃಷ್ಟದ್ವಾರಾ ಜಗತ್ಕರ್ತೃತ್ವವನ್ನು ಅಂಗೀಕರಿಸಿದರೆ ಕನ್ಯೆಯ ಪತಿಯಾದವನೂ ಸಹ ಅದೃಷ್ಟದ್ವಾರಾ ಕನ್ಯಾಕರ್ತೃವಾದ್ದರಿಂದ ಕನ್ಯೆಯ ಪಿತೃವಿನಂತೆ ಅವನಿಗೂ ಸಹ ಆ ಕನ್ಯೆಯನ್ನು ಕುರಿತು ಪಿತೃತ್ವವೇ ಬರಬೇಕಾಗುತ್ತದೆ. ಇದು ಅಪ್ರಾಮಾಣಿಕವಾದುದು. ಆದ್ದರಿಂದ ಪ್ರಯತ್ನ ಪೂರ್ವಕ ಕರ್ತೃವನ್ನೇ ಮುಖ್ಯವಾದ ಕರ್ತೃ ಎಂದು ಅಂಗೀಕರಿಸಬೇಕು ಎಂದು ಅಭಿಪ್ರಾಯ.

**ಅತೋ ನಾಮುಖ್ಯಕರ್ತ್ರೈವ ಮಹಾಕಾರ್ಯಮಿದಂ ಭವೇತ್ ।**
**ಕಿಂ ಸ್ತ್ರೀಪುಂಸೌ ವಿನಾಪಿ ಸ್ಯಾತ್ ಪುತ್ರಃ ಪುತ್ರೇಷ್ಟಿಮಾತ್ರತಃ ॥ ೭೨॥**

**ಅರ್ಥ–** ಅತಃ= ಆದ್ದರಿಂದ, ಅಮುಖ್ಯಕರ್ತ್ರೈವ= ಅದೃಷ್ಟದ್ವಾರಾಕರ್ತೃವಾದ ಅಮುಖ್ಯಕರ್ತೃವಿನಿಂದಲೇ, ಇದಂ ಮಹಾಕಾರ್ಯಂ= ಈ ಮಹಾಕಾರ್ಯವು, ನ ಭವೇತ್= ಉಂಟಾಗಲಾರದು. ಸ್ತ್ರೀಪುಂಸೌ ವಿನಾ= ಸ್ತ್ರೀಪುರುಷರಿಲ್ಲದೆ, ಪುತ್ರೇಷ್ಟಿಮಾತ್ರತಃ= ಕೇವಲ ಪುತ್ರೇಷ್ಟಿಯಾಗದಿಂದ, ಪುತ್ರಃ= ಪುತ್ರನು, ಸ್ಯಾತ್ ಕಿಂ= ಜನಿಸುತ್ತಾನೆಯೇ?

**ಅನುವಾದ–** ಆದ್ದರಿಂದ ಅದೃಷ್ಟದ್ವಾರಾ ಕರ್ತೃವಾದ ಅಮುಖ್ಯಕರ್ತೃವಿನಿಂದಲೇ ಈ ಜಗದ್ರೂಪವಾದ ಮಹಾಕಾರ್ಯವು ಉಂಟಾಗಲಾರದು. ಸ್ತ್ರೀ ಪುರುಷರಿಲ್ಲದೆ ಪುತ್ರೇಷ್ಟಿಯಾಗ ಜನ್ಯವಾದ ಅದೃಷ್ಟದಿಂದಲೇ ಎಂದಾದರೂ ಪುತ್ರನು ಜನಿಸುತ್ತಾನೆಯೇ?

**ಭಾವವಿಲಾಸಿನೀ–** ಅತಃ ಕೃತಿಪೂರ್ವಕಕರ್ತುರೇವ ಮುಖ್ಯಕರ್ತೃತ್ವಾತ್ । ಇದಂ ಮಹೀ ಮಹೀಧರಾದಿಕಮ್ । ಘಟಾದ್ಯಲ್ಪಕಾರ್ಯಸ್ಯಾಪಿ ಕರ್ತೃದ್ವಯಸಾಪೇಕ್ಷತ್ವೇ ಮಹಾಕಾರ್ಯಸ್ಯಾಸ್ಯ ಕಥಂ ಕರ್ತೃದ್ವಯಾನಪೇಕ್ಷೇತಿ ಭಾವಃ । ಅದೃಷ್ಟವಿಶೇಷಾದ್ಭವತೀತ್ಯತ ಆಹ – **ಕಿಮಿತಿ ॥** ಪುತ್ರೇಷ್ಟಿಮಾತ್ರತಃ ಪುತ್ರೇಷ್ಟಿ ಜನ್ಯಾದೃಷ್ಟಮಾತ್ರತಃ ॥ ೭೨ ॥

**ವಿವರಣೆ–** ಕೃತಿಪೂರ್ವಕ ಕರ್ತೃವನ್ನೇ ಮುಖ್ಯಕರ್ತೃವೆಂದು ಅಂಗೀಕರಿಸಬೇಕು. ಅಂತಹ ಕರ್ತೃವು ಇಲ್ಲದಿದ್ದಾಗ ಪುತ್ರೇಷ್ಟಿಯಾಗದಿಂದ ಉಂಟಾದ ಅದೃಷ್ಟವಿದ್ದರೂ ಹೇಗೆ ಪುತ್ರನು ಜನಿಸುವುದಿಲ್ಲವೋ, ಅದರಂತೆ ಅದೃಷ್ಟಾಧಾರವಾದ ಕರ್ತೃಗಳಿದ್ದರೂ ಅವರಿಂದ ಜಗತ್ತು ಉತ್ಪತ್ತಿಯಾಗುವುದಿಲ್ಲ ಎಂದು ಅಭಿಪ್ರಾಯ.

**ನಚೇದುಪಾದಾನಮಪಿ ತದ್ವತ್ ಸ್ಯಾದೌಪಚಾರಿಕಂ ।**
**ದೃಷ್ಟಾನುಸಾರತಸ್ತಚ್ಚೇತ್ ಕರ್ತಾಪಿ ಸ್ಯಾತ್ ತಥೈವ ಹಿ ॥ ೭೩ ॥**

**ಅರ್ಥ–** ನ ಚೇತ್= ಇಲ್ಲದಿದ್ದರೆ, ಉಪಾದಾನಮಪಿ= ಉಪಾದಾನ ಕಾರಣವೂ ಕೂಡ, ತದ್ವತ್= ಕರ್ತೃವಿನಂತೆ, ಔಪಚಾರಿಕಂ ಸ್ಯಾತ್= ಔಪಚಾರಿಕವೇ ಆಗಲಿ, ದೃಷ್ಟಾನುಸಾರತಃ=

ದೃಷ್ಟವಾದ ಘಟಾದಿಗಳ ಕಾರ್ಯಕ್ಕೆ ಅನುಸಾರವಾಗಿ, ತಚ್ಚೇತ್= ಪರಮಾಣ್ವಾದಿ ಮುಖ್ಯೋಪಾದಾನವನ್ನು ಅಂಗೀಕರಿಸುವುದಾದರೆ, ತಥೈವ= ಅದರಂತೆಯೇ, ಕರ್ತಾಪಿ= ಕೃತಿಪೂರ್ವಕ ಕರ್ತೃವೂ ಸಹ, ಸ್ಯಾತ್= ಅಂಗೀಕರಿಸಲ್ಪಡಬೇಕು.

**ಅನುವಾದ–** ಕರ್ತೃವು ಉಪಚರಿತ ಕರ್ತೃವೆಂದು ಸ್ವೀಕರಿಸಿದರೆ ಉಪಾದಾನವನ್ನೂ ಸಹ ಉಪಚರಿತವಾದುದನ್ನೇ ಸ್ವೀಕರಿಸಬೇಕು ಎಂಬ ಆಪತ್ತಿಯು ಬರುತ್ತದೆ. ಘಟಪಟಾದಿ ದೃಷ್ಟ ಕಾರ್ಯವನ್ನು ಅನುಸರಿಸಿ ಆ ಸ್ಥಳದಲ್ಲಿ ಪರಮಾಣು ಕಪಾಲ ಮೊದಲಾದ ಮುಖ್ಯ ಉಪಾದಾನವನ್ನು ಅಂಗೀಕರಿಸುವುದಾದರೆ ಅದರಂತೆಯೇ ಕುಲಾಲಕುವಿಂದಾದಿಗಳನ್ನು ಅನುಸರಿಸಿ ಕೃತಿಪೂರ್ವಕ ಕರ್ತೃವನ್ನೇ ಮುಖ್ಯ-ಕರ್ತೃವೆಂದು ಅಂಗೀಕರಿಸಬೇಕಾಗುತ್ತದೆ.

**ಭಾವವಿಲಾಸಿನೀ–** ಉಪಾದಾನಪ್ರತಿಬಂದ್ಯಾ ಚೋತ್ತರಮಾಹ – ನ ಚೇದಿತಿ ॥ ತದ್ವತ್ ಔಪಚಾರಿಕಕರ್ತೃವತ್ । ಅದೃಷ್ಟಜನಕಕ್ರಿಯಾಹೇತುಭೂತಹವಿರಾದ್ಯುಪಾದಾನೇನೈವ ಜಗಜ್ಜನ್ಮಾಪಿ ಸ್ಯಾದಿತಿ ಭಾವಃ । ದೃಷ್ಟಾನುಸಾರತಃ ದೃಷ್ಟಘಟಾದಿಕಾರ್ಯಾನುಸಾರತಃ । ತತ್ ಪರಮಾಣ್ವಾದಿ ಮುಖ್ಯೋಪಾದಾನಮ್ । ಕರ್ತಾ ಕೃತಿಪೂರ್ವಕಕರ್ತಾ ॥ ೭೨೮ ॥

**ವಿವರಣೆ–** ಅಮುಖ್ಯವಾದ ಉಪಾದಾನದಿಂದ ಹೇಗೆ ಕಾರ್ಯವು ಉಂಟಾಗುವುದಿಲ್ಲವೋ ಹಾಗೆ ಅಮುಖ್ಯವಾದ ಕರ್ತೃವಿನಿಂದಲೂ ಯಾವ ಕಾರ್ಯ ಉಂಟಾಗುವುದಿಲ್ಲ ಎಂದು ಅಭಿಪ್ರಾಯ.

**ಅದೃಷ್ಟಮಪಿ ಬೀಜಾದ್ಯಂ ಕಲ್ಪ್ಯಂ ಫಲಬಲಾದ್ ಯಥಾ ।**
**ತಥಾಽದೃಷ್ಟೋಽಪಿ ಕರ್ತಾಽಸ್ಯ ಕಲ್ಪ್ಯಃ ಕೋಽಪ್ಯುರುಶಕ್ತಿಮಾನ್ ॥ ೭೨೯ ॥**

**ಅರ್ಥ–** ಯಥಾ= ಹೇಗೆ, ಫಲಬಲಾತ್= ಅಂಕುರರೂಪವಾದ ಕಾರ್ಯದ ಬಲದಿಂದ, ಅದೃಷ್ಟಮಪಿ= ಅದೃಷ್ಟವಾದರೂ ಕೂಡ, ಬೀಜಾದ್ಯಂ= ಬೀಜಾದಿಗಳು, ಕಲ್ಪ್ಯಂ= ಕಲ್ಪಿಸಲ್ಪಡುತ್ತವೆಯೋ, ತಥಾ= ಅದರಂತೆ, ಅದೃಷ್ಟೋಪಿ= ಕಣ್ಣಿಗೆ ಕಾಣಿಸದಿದ್ದರೂ ಜಗದ್ರೂಪ ಫಲಬಲದಿಂದ, ಪುರುಶಕ್ತಿಮಾನ್= ಮಹಾಶಕ್ತಿಸಂಪನ್ನನಾದ, ಕೋಪಿ= ಒಬ್ಬ ವಿಲಕ್ಷಣ ಚೇತನನು, ಕರ್ತಾ= ಕರ್ತೃವೆಂದು, ಕಲ್ಪ್ಯಃ= ಕಲ್ಪಿಸಲ್ಪಡಬೇಕು.

**ಅನುವಾದ–** ಅಂಕುರ ಸ್ಥಳದಲ್ಲಿ ಬೀಜಾದಿಗಳು ಕಣ್ಣಿಗೆ ಕಾಣಿಸದಿದ್ದರೂ ಅಂಕುರ ರೂಪವಾದ ಕಾರ್ಯದ ಬಲದಿಂದ ಹೇಗೆ ಬೀಜಾದಿಗಳು ಕಲ್ಪಿಸಲ್ಪಡುತ್ತದೆಯೋ ಅದರಂತೆ ಕರ್ತೃವು ಅದೃಷ್ಟನಾದರೂ ಸಹ ಜಗದ್ರೂಪವಾದ ಕಾರ್ಯದ ಬಲದಿಂದ ಮಹಾಶಕ್ತಿ ಸಂಪನ್ನನಾದ ಒಬ್ಬ ಕರ್ತೃವು ಕಲ್ಪಿಸಲ್ಪಡಬೇಕು.

**ಭಾವವಿಲಾಸಿನೀ–** ನನು ದರ್ಶನಾದಸ್ತು ಕುಲಾಲಾದಿಃ ಕರ್ತಾ । ಜಗತ್ಕರ್ತೃರದರ್ಶನಾತ್ಕಥಂ ಕಲ್ಪನೇತ್ಯತ ಆಹ – **ಅದೃಷ್ಟಮಪೀತಿ** ॥ ಫಲಬಲಾತ್ ಅಂಕುರಾಖ್ಯಫಲಬಲಾತ್ । ಅಸ್ಯ ಜಗತಃ ॥ ೭೨೯ ॥

ನ ಚ ಕಾಲಾದಿಕಂ ತಸ್ಯ ಪ್ರೇರಕಂ ಜಡವಸ್ತುನಃ ।
ಸ್ವತಃ ಪ್ರವೃತ್ತ್ಯಯೋಗೇನ ಪ್ರೇರ್ಯತ್ವಾತ್ ಕರ್ತೃತೋಽನ್ಯತಃ ॥ ೭೩೦ ॥

**ಅರ್ಥ–** ಕಾಲಾದಿಕಂ= ಕಾಲಪ್ರಧಾನಾದಿಗಳು, ತಸ್ಯ= ಆ ಕರ್ಮಕ್ಕೆ, ನಚಪ್ರೇರಕಂ= ಪ್ರೇರಕವಾಗುವುದಿಲ್ಲ, ಜಡವಸ್ತುನಃ= ಜಡವಸ್ತುವಿಗೆ, ಸ್ವತಃ ಪ್ರವೃತ್ತ್ಯಯೋಗೇನ= ಸ್ವತಃ ಪ್ರವೃತ್ತಿಯು ಕೂಡುವುದಿಲ್ಲವಾದ್ದರಿಂದ, ಅನ್ಯತಃ ಕರ್ತೃತಃ= ಇನ್ನೊಬ್ಬ ಕರ್ತೃವಿನಿಂದ, ಪ್ರೇರ್ಯತ್ವಾತ್= ಪ್ರೇರಿಸಲ್ಪಡಬೇಕಾಗುವುದರಿಂದ (ಸ್ವತಃ ಪ್ರವೃತ್ತಿಯು ಕೂಡುವುದಿಲ್ಲ).

**ಅನುವಾದ–** ಕಾಲಪ್ರಧಾನಾದಿಗಳು ಉತ್ಪನ್ನವಾದ ಅದೃಷ್ಟಕ್ಕೆ ಪ್ರೇರಕವಾಗಲಿ ಎಂದು ಶಂಕೆಯನ್ನು ಮಾಡಬಾರದು. ಏಕೆಂದರೆ ಕಾಲಪ್ರಧಾನಾದಿಗಳು ಜಡವಾದ್ದರಿಂದ ಅವುಗಳಿಗೆ ಸ್ವತಃ ಪ್ರವೃತ್ತಿಯು ಕೂಡದಿರುವುದರಿಂದ ಅವು ಇನ್ನೊಬ್ಬ ಕರ್ತೃವಿನಿಂದಲೇ ಪ್ರೇರಿತವಾಗಬೇಕಾಗುತ್ತದೆ.

**ಭಾವವಿಲಾಸಿನೀ–** ಅಸ್ತು ತರ್ಹಿ ಜನ್ಮಾದಿಮತಃ ಕರ್ಮಣಃ ಕೋಽಪಿ ನಿಯಾಮಕಃ। ಸ ಚೇಶ್ವರೋ ಮಾಸ್ತು । ಕಿಂತು ಜನ್ಮಾದಿಶೂನ್ಯಃ ಕಾಲಾದಿರೇವ ಸ್ಯಾತ್ । ಜಗತ್ಕಾರ್ತಾ ಸ ಏವ ಸ್ಯಾದಿತ್ಯತ ಆಹ – **ನ ಚೇತಿ** ॥ ಆದಿಪದೇನ ಪ್ರಕೃತ್ಯಾದಿಕಂ ಗೃಹ್ಯತೇ । ತಸ್ಯ ಕರ್ಮಣಃ । ಕುತ ಇತ್ಯತ ಆಹ – **ಜಡವಸ್ತುನ ಇತ್ಯಾದಿನಾ** ॥ ಜಡವಸ್ತುನಃ ಕಾಲಾದೇಃ । ಅನ್ಯತಃ ಕರ್ತೃತಃ ಜಡಭಿನ್ನಚೇತನಕರ್ತೃತಃ । ಜಡತ್ವಸಾಮ್ಯೇ ನಿತ್ಯತ್ವಮಪ್ರಯೋಜಕಂ ಪ್ರತ್ಯುತ ಸದಾಜಡತ್ವೇ ಸದಾಪರಪ್ರೇರ್ಯತ್ವ ರೂಪನೈಚ್ಯಾಪಾದಕಂ ಚೇತಿ ಭಾವಃ। ಉಪಲಕ್ಷಣಂ ಚೈತತ್ । ಉಭಯೋರಪಿ ಜಡತ್ವೇನ ನಿಯಮ್ಯ ನಿಯಾಮಕ ಭಾವಾಯೋಗಾಚ್ಚೇತ್ಯಪಿ ದ್ರಷ್ಟವ್ಯಮ್ । ಅನೇನ ಕಾಲಚಿಂತಕಮತಂ ಪ್ರಧಾನಸ್ಯೈವ ಜಗತ್ಕರ್ತೃತ್ವಪ್ರತಿಪಾದಕಸಾಂಖ್ಯಮತಂ ಚ ನಿರಸ್ತಂ ವೇದಿತವ್ಯಮ್ ॥ ೭೩೦ ॥

**ವಿವರಣೆ–** ಉತ್ಪನ್ನವಾಗುವ ಅದೃಷ್ಟಾದಿ ಕರ್ಮಗಳಿಗೆ ಒಂದು ನಿಯಾಮಕವನ್ನು ಒಪ್ಪೋಣ. ಆದರೆ ಅವನು ಈಶ್ವರನಾಗಬೇಕೆಂದಿಲ್ಲ. ಜನ್ಮಾದಿರಹಿತವಾದ ಕಾಲಾದಿಗಳೇ ನಿಯಾಮಕವಾಗಬಹುದು. ಅದಕ್ಕೇ ಜಗತ್ಕರ್ತೃತ್ವವು ಕೂಡುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಕಾಲವಾಗಲೀ ಅಥವಾ ಪ್ರಕೃತಿಯಾಗಲೀ ಅದು ಜಡವಾದುದು. ಅದನ್ನು ಪ್ರೇರಿಸಲು ಇನ್ನೊಬ್ಬ ಚೇತನನೇ ಬೇಕು. ಜಡತ್ವವಿರುವಾಗ ನಿತ್ಯತ್ವವು ಪರಪ್ರೇರಣಾ ವಿಷಯದಲ್ಲಿ ಅಪ್ರಯೋಜಕವಾದುದು ಮತ್ತು ಕಾಲವೂ ಜಡ ಮತ್ತು ಕರ್ಮವೂ ಜಡವಾದರೆ ಎರಡೂ ಜಡವಾದ್ದರಿಂದ ಪರಸ್ಪರ ನಿಯಮ್ಯನಿಯಾಮಕ ಭಾವವೂ ಕೂಡುವುದಿಲ್ಲ. ಆದ್ದರಿಂದ ಕಾಲಕ್ಕಾಗಲೀ ಅಥವಾ

ಪ್ರಧಾನಕ್ಕಾಗಲೀ ಜಗತ್ಕರ್ತೃತ್ವವನ್ನು ಹೇಳುವ ಮತಗಳು ನಿರಸ್ತವಾಗುತ್ತವೆ ಎಂದು ಅಭಿಪ್ರಾಯ.

**ನಾಪಿ ತತ್ಪ್ರೇರಕೋ ಬ್ರಹ್ಮಾ ನೇಶೋ ನೇಂದ್ರೋಽಪರೇ ಕುತಃ ।**
**ಅಂಘ್ರ್ಯರ್ಚನೇನ ತತ್ತೀರ್ಥಜುಷ್ಟ್ಯಾ ತದ್ದತ್ತಭೂತ್ವತಃ ॥ ೭೩೧ ॥**

**ಅರ್ಥ–** ತತ್ ಪ್ರೇರಕಃ= ಆ ಪ್ರೇರಕನಾದವನು, ನಾಪಿ ಬ್ರಹ್ಮಾ= ಚತುರ್ಮುಖ ಬ್ರಹ್ಮನೂ ಆಗುವುದಿಲ್ಲ, ನೇಶಃ= ರುದ್ರನೂ ಆಗುವುದಿಲ್ಲ, ನೇಂದ್ರಃ= ಇಂದ್ರನೂ ಆಗುವುದಿಲ್ಲ, ಅಪರೇಕುತಃ= ಉಳಿದವರು ಹೇಗಾಗುತ್ತಾರೆ ಏಕೆಂದರೆ ಅವರು, ಅಂಘ್ರ್ಯರ್ಚನೇನ= ಹರಿಯ ಪಾದಾರ್ಚನೆಯನ್ನು ಮಾಡುವುದರಿಂದ, ತತ್ತೀರ್ಥಜುಷ್ಟ್ಯಾ= ಹರಿಯ ಪಾದೋದಕವನ್ನು ಸೇವಿಸುವುದರಿಂದ, ತದ್ದತ್ತಭೂತ್ವತಃ= ಹರಿಯು ಕೊಟ್ಟ ಭೂಮ್ಯಾದಿ ಲೋಕತ್ರಯವನ್ನು ಪಾಲಿಸುವುದರಿಂದ (ಹರಿಯ ದಾಸರೇ ಆಗಿದ್ದಾರೆ).

**ಅನುವಾದ–** ಬ್ರಹ್ಮದೇವರಾಗಲೀ, ರುದ್ರನಾಗಲೀ ಅಥವಾ ಇಂದ್ರನಾಗಲೀ ಕರ್ಮಪ್ರೇರಕರಲ್ಲ. ಇನ್ನುಳಿದವರು ಹೇಗೆ ಕರ್ಮಪ್ರೇರಕರಾಗುತ್ತಾರೆ? ಅವರೆಲ್ಲರೂ ದೇವರ ಪಾದಾರ್ಚನೆಯನ್ನು ಮಾಡುವುದರಿಂದ ಹರಿಯ ಪಾದೋದಕವನ್ನು ಸೇವಿಸುವುದರಿಂದ ಹರಿಯು ಕೊಟ್ಟ ಭೂಮ್ಯಾದಿಲೋಕತ್ರಯವನ್ನು ಪಾಲಿಸುವುದರಿಂದ ಹರಿಯ ದಾಸರಾದವರು.

**ಭಾವವಿಲಾಸಿನೀ–** ಸಂತು ಬ್ರಾಹ್ಮಶೈವಾದಿಮತರೀತ್ಯಾ ಬ್ರಹ್ಮಶಿವಾದಯ ಏವ ಕರ್ಮನಿಯಾಮಕಾ ಇತ್ಯತ ಆಹ – **ನಾಪೀತಿ** ॥ ತತ್ ಪ್ರೇರಕಃ ಕರ್ಮಪ್ರೇರಕಃ । ಅಪರೇ ಸ್ಕಂದ-ಸೂರ್ಯವಿನಾಯಕಾದಯಃ । ಅಂಘ್ರ್ಯರ್ಚನೇನ ಬಾಹ್ಯಜಲಧಾರಯಾ ಅಂಘ್ರಿಪಕ್ಷಾಲನ-ರೂಪಾರ್ಚನೇನ । ತತ್ ಪ್ರೇರಕೋ ಬ್ರಹ್ಮಾ ನೇತಿ ಸಂಬಂಧಃ । ಸಾ ಶ್ರೀಃ ಸ್ವಾವಾಸಮರ-ವಿಂದವನಂ ವಿಹಾಯ ಯತ್ಪಾದಸೌಭಗಮಲಂಭಜತೇಽನುರಕ್ತೇತಿ ಭಾಗವತವಚನಾತ್ ಹರ್ಯಂಘ್ರಿಸೇವಕಶಕ್ತ್ಯಾತ್ಮಕಲಕ್ಷ್ಮ್ಯಾ ಅಪಿ ಜಗತ್ಕರ್ತೃತ್ವಾ ಭಾವಸೂಚನಾಯ ಅಂಘ್ರ್ಯರ್ಚನೇನೇತ್ಯುಕ್ತಮ್ । ಅನ್ಯಥಾ ಕ್ಷಾಲನೇನೇತ್ಯವಕ್ಷ್ಯತ್ । ತತ್ತೀರ್ಥಜುಷ್ಟ್ಯಾ ಅಂಘ್ರೀತೀರ್ಥಜುಷ್ಟ್ಯಾ ಶಿವೋ ನೇತಿ ಸಂಬಂಧಃ । ತದ್ದತ್ತಭೂತ್ವತಃ ತೇನ ವಿಷ್ಣ್ವಂಘ್ರಿಣಾ ದತ್ತಾ ಭೂಃ ತ್ರೈಲೋಕ್ಯಪದವೀ ಯಸ್ಯೇಂದ್ರಸ್ಯ ತಸ್ಯ ಭಾವಃ ತಸ್ಮಾತ್ । ಇಂದ್ರೋ ನೇತಿ ಸಂಬಂಧಃ । ಇತರದೇವಾನಾಮೇತದಾಜ್ಞಾಧಾರಿತ್ವಾತ್ ಕರ್ಮಪ್ರೇರಕತ್ವಾಭಾವಃ ಕೈಮುತ್ಯಸಿದ್ಧ ಇತಿ ಭಾವೇನೋಕ್ತಮುಪರೇ ಕುತ ಇತಿ । ಅಂಘ್ರಿಪದಪ್ರಯೋಗಾದೇವ ಈಶ್ವರಸ್ಯಾಶರೀರತಾಂ ವದಂತಸ್ತಾರ್ಕಿಕಾದಯೋಽಪಿ ನಿರಸ್ತಾಃ । ಹರೇರನ್ಯಸ್ಯ ಕಸ್ಯಚಿನ್ನಿರಾಕಾರಸ್ಯೇಶ್ವರಸ್ಯ ಸದ್ಭಾವೇ ಸರ್ವಜ್ಞಾ ಬ್ರಹ್ಮಾದಯಸ್ತಮೇವ ಪೂಜಯೇಯುಃ । ನ ಚ ತದಸ್ತಿ । ತಸ್ಮಾದ್ಧರಿರೇವೇಶ್ವರ ಇತಿ ಭಾವಃ ॥ ೭೩೧ ॥

**ವಿವರಣೆ–** ಅಂಘ್ರ್ಯರ್ಚನೆ ಮಾಡುವವರು ಎಂದು ಹೇಳುವುದರಿಂದ ಅಂಘ್ರ್ಯರ್ಚನೆಯನ್ನು ಮಾಡುವ ಲಕ್ಷ್ಮಿಯೂ ಕೂಡ ಕರ್ಮಪ್ರೇರಕಳಲ್ಲ ಎಂದು ಗ್ರಂಥಕಾರರು ತಿಳಿಸುತ್ತಾರೆ. ಲಕ್ಷ್ಮಿಯೂ ಕೂಡ ಹರಿಯ ಅಂಘ್ರ್ಯರ್ಚನೆಯನ್ನು ಮಾಡುತ್ತಾಳೆ ಎಂಬುದು 'ಸಾ ಶ್ರೀಃ ಸ್ವವಾಸಮರವಿಂದವನಂ ವಿಹಾಯ ಯತ್ಪಾದ ಪಂಕಜರಜೋ ಭಜತೇ ಅನುರಕ್ತಾ' ಎಂಬ ಭಾಗವತ ವಚನದಿಂದ ಪ್ರಸಿದ್ಧವಾಗಿದೆ. ಬರೀ ಬ್ರಹ್ಮದೇವರಿಗೆ ಸರ್ವಪ್ರೇರಕತ್ವವನ್ನು ನಿರಾಕರಣೆ ಮಾಡುವುದಾಗಿದ್ದರೆ ಗ್ರಂಥಕಾರರು ಅಂಘ್ರಿಕ್ಷಾಲನೇನ ಪಾದವನ್ನು ತೊಳೆಯುವುದರಿಂದ ಎಂದಿಷ್ಟೇ ಹೇಳುತ್ತಿದ್ದರು. ಉಳಿದ ದೇವತೆಗಳು ಬ್ರಹ್ಮರುದ್ರೇಂದ್ರರ ಆಜ್ಞಾಧಾರಕರಾದ್ದರಿಂದ ಅವರಿಗೂ ಕರ್ಮಪ್ರೇರಕತ್ವವು ಕೂಡುವುದಿಲ್ಲ ಎಂದು ಕೈಮುತ್ಯ ನ್ಯಾಯದಿಂದ ಸಿದ್ಧವಾಗುತ್ತದೆ. ಅಂಘ್ರಿಪದವನ್ನು ಪ್ರಯೋಗಿಸಿರುವುದರಿಂದ ಈಶ್ವರನಿಗೆ ಶರೀರವನ್ನು ಒಪ್ಪದಿರುವ ತಾರ್ಕಿಕ ಮತವು ನಿರಾಕೃತವಾಗುತ್ತದೆ. ಹರಿಗಿಂತ ಭಿನ್ನವಾದ ಇನ್ನೊಬ್ಬ ನಿರಾಕಾರನಾದ ಈಶ್ವರನು ಇದ್ದಿದ್ದರೆ ಬ್ರಹ್ಮಾದಿಗಳು ಅವನನ್ನೇ ಪೂಜೆ ಮಾಡಿರುತ್ತಿದ್ದರು. ಹಾಗಿಲ್ಲದೆ ಅವರು ಹರಿಯನ್ನೇ ಪೂಜಿಸುವುದರಿಂದ ಹರಿಯೇ ಈಶ್ವರನೆಂದು ಸಿದ್ಧವಾಗುತ್ತದೆ.

**ಕಿಂಚ ಸೃಜ್ಯಂ ವಶೇ ಸ್ರಷ್ಟುರ್ಹಾರ್ಯಂ ಹರ್ತುರ್ವಶೇ ಪರಮ್ ।**
**ಪಾತುರ್ವಶೇ ಸ್ಥಿತಂ ಸರ್ವಮತೋ ವಿಷ್ಣೋರ್ವಶೇಽಖಿಲಮ್ ॥ ೭೩.೨ ॥**

**ಅರ್ಥ–** ಕಿಂಚ= ಮತ್ತು, ಸೃಜ್ಯಂ= ಸೃಷ್ಟಿಸಲ್ಪಡುವ ವಸ್ತುಗಳೆಲ್ಲವೂ, ಸ್ರಷ್ಟುಃ= ಸೃಷ್ಟಿಮಾಡುವವನ, ವಶೇ= ವಶದಲ್ಲಿರುತ್ತವೆ, ಹಾರ್ಯಂ= ಸಂಹಾರ ಮಾಡಲ್ಪಡುವ ವಸ್ತುಗಳೆಲ್ಲವೂ, ಹರ್ತುಃ= ಸಂಹಾರ ಮಾಡುವವನ, ವಶೇ= ವಶದಲ್ಲಿರುತ್ತವೆ, ಪರಂ= ಆದರೆ, ಪಾತುಃ= ಪಾಲಿಸುವವನ ವಶದಲ್ಲಿ, ಸರ್ವಂ ಸ್ಥಿತಂ= ಎಲ್ಲವೂ ಇರುತ್ತದೆ, ಅತಃ= ಆದ್ದರಿಂದ, ಅಖಿಲಂ= ಎಲ್ಲವೂ, ವಿಷ್ಣೋಃ ವಶೇ= ವಿಷ್ಣುವಿಗೆ ಅಧೀನವಾಗಿರುತ್ತದೆ.

**ಅನುವಾದ–** ಮತ್ತು ಸೃಜ್ಯವಾದುದೆಲ್ಲವೂ ಸೃಷ್ಟಿಕರ್ತನ ವಶದಲ್ಲಿರುತ್ತವೆ. ಸಂಹರಿಸಲ್ಪಡುವ ವಸ್ತುಗಳೆಲ್ಲವೂ ಸಂಹರ್ತೃವಿನ ವಶವಾಗಿರುತ್ತವೆ. ಆದರೆ ಪಾಲಕನ ವಶದಲ್ಲಿ ಎಲ್ಲವೂ ಇರುತ್ತದೆ. ಆದ್ದರಿಂದ ಪಾಲಕನಾದ ವಿಷ್ಣುವಿನ ವಶದಲ್ಲೇ ಎಲ್ಲವೂ ಇರುತ್ತದೆ.

**ಭಾವವಿಲಾಸಿನೀ–** ಸೃಷ್ಟಿಕರ್ತಾ ಬ್ರಹ್ಮಾ ಸ್ಥಿತಿಕರ್ತಾ ವಿಷ್ಣುಃ, ಸಂಹಾರಕರ್ತಾ ರುದ್ರ ಇತಿ ಸಾರ್ವಜನೀನತಯಾ ಪ್ರಸಿದ್ಧ ಪ್ರಮೇಯೇನಾಪಿ ವಿಷ್ಣೋರೇವ ಸರ್ವೇಶ್ವರತಾಂ ಸಾಧಯತಿ– **ಕಿಂಚೇತ್ಯಾದಿನಾ ಶ್ಲೋಕಷಟ್ಕೇನ ॥** ಸೃಜ್ಯಂ ಸೃಷ್ಟಿಯೋಗ್ಯಂ ವಸ್ತು ತದೇವ ಸ್ರಷ್ಟುಃಬ್ರಹ್ಮಣೋ ವಶೇ ನ ತು ಸೃಷ್ಟಿಶೂನ್ಯಂ ಕಾಲಾಕಾಶಾದಿಕಂ, ಸೃಷ್ಟೇರೇವ ತದಧೀನವ್ಯಾಪಾರತ್ವಾದಿತಿ ಭಾವಃ ।

ಹಾರ್ಯಂ ಸಂಹಾರಯೋಗ್ಯಮ್ । ತದೇವ ಸಂಹರ್ತುಃಶಿವಸ್ಯ ವಶೇ । ಸಂಹಾರಸ್ಯೈವ ತದಧಿ ೀನವ್ಯಾಪಾರತ್ವಾತ್ । ಯತಃ ಸ್ಥಿತಂ ಸ್ಥಿತಿಮತ್ ಸರ್ವಂ ಕಾಲಾಕಾಶಾದಿ ಸಕಲಜಗತ್ ಪಾತುಃ ಸ್ಥಿತಿಕರ್ತುರ್ನಾರಾಯಣಸ್ಯ ವಶೇ ಅತ ಇತಿ ಸಂಬಂಧಃ । ಜನ್ಮಮರಣಶೂನ್ಯಾನಾಮ- ಪ್ಯನಾದಿನಿತ್ಯಾನಾಂ ಸ್ಥಿತಿರಹಿತಂ ವಸ್ತ್ವಸ್ತೀತ್ಯಸ್ಯ ವ್ಯಾಹತತ್ವೇನ ಸ್ಥಿತೇರವಶ್ಯಂ ವಕ್ತವ್ಯತ್ವಾತ್। ತಸ್ಯಾಶ್ಚ ವಿಷ್ಣುವ್ಯಾಪಾರತ್ವೇನ ಸ್ಥಿತಿಮತಃ ಸರ್ವಸ್ಯಾಪಿ ವಿಷ್ಣುವಶತ್ವಾವಶ್ಯಂಭಾವಾತ್ ವಿಷ್ಣುರೇವ ಸರ್ವೇಶ್ವರಃ । ನ ತು ಬ್ರಹ್ಮಶೀವಾದಯ ಇತಿ ಭಾವಃ ॥ ೭೩೨ ॥

**ವಿವರಣೆ–** ಬ್ರಹ್ಮನು ಸೃಷ್ಟಿಕರ್ತ, ವಿಷ್ಣುವು ಸ್ಥಿತಿಕರ್ತ ಮತ್ತು ರುದ್ರನು ಸಂಹಾರಕರ್ತ ಎಂದು ಸಾರ್ವಜನೀನವಾಗಿ ಪ್ರಸಿದ್ಧವಾದ ಪ್ರಮೇಯದಿಂದಲೂ ಕೂಡ ವಿಷ್ಣುವಿಗೇ ಸರ್ವೇಶ್ವರತ್ವವು ಸಿದ್ಧವಾಗುತ್ತದೆ ಎಂದು ಆರು ಶ್ಲೋಕಗಳಿಂದ ಪ್ರತಿಪಾದಿಸುತ್ತಾರೆ. ಸೃಷ್ಟಿಗೆ ಯೋಗ್ಯವಾದುದೆಲ್ಲವೂ ಸ್ರಷ್ಟೃವಿನ ವಶ. ಸಂಹಾರಕ್ಕೆ ಯೋಗ್ಯವಾದುದೆಲ್ಲವೂ ಶಿವನ ವಶ. ಆದರೆ ಜಗತ್ತಿನಲ್ಲಿ ಸೃಷ್ಟಿ-ಸಂಹಾರಗಳಿಲ್ಲದ ಕಾಲಾಕಾಶಾದಿ ಅನೇಕ ಪದಾರ್ಥಗಳಿವೆ. ಅವೆಲ್ಲವೂ ಭಗವಂತನಾದ ವಿಷ್ಣುವಿನ ವಶ. ಜನನ ಮರಣಗಳಿಲ್ಲದ ವಸ್ತುವು ಇರಬಹುದು. ಆದರೆ ಸ್ಥಿತಿ ಇಲ್ಲದ ವಸ್ತುವಿಲ್ಲ. ಆದ್ದರಿಂದ ಎಲ್ಲ ವಸ್ತುಗಳೂ ವಿಷ್ಣುವಿನ ಅಧೀನ. ಆದ್ದರಿಂದ ಸ್ಥಿತಿಕರ್ತನಾದ ವಿಷ್ಣುವೇ ಸರ್ವಸ್ವಾಮಿ ಎಂದು ಸಿದ್ಧವಾಗುತ್ತದೆ.

**ಯತ್ಕರ್ತುಶ್ಚ ಸ್ಥಿತಿರ್ವಾಚ್ಯಾ ಹರ್ತುಶ್ಚಾವಶ್ಯಕೀ ಸ್ಥಿತಿಃ ।**
**ನ ಹ್ಯಸತ್ ಕಾರಣಂ ದೃಷ್ಟಂ ಬ್ರಹ್ಮೇಶೌ ತದ್ವಶೌ ಹರೇಃ ॥ ೭೩೩ ॥**

**ಅರ್ಥ–** ಯತ್= ಯಾವ ಕಾರಣದಿಂದ, ಕರ್ತುಶ್ಚ= ಕರ್ತೃವಿಗೂ, ಸ್ಥಿತಿಃ= ಸ್ಥಿತಿಯು, ವಾಚ್ಯಾ= ಅವಶ್ಯವಾಗಿ ಹೇಳಲ್ಪಡಬೇಕು, ಹರ್ತುಶ್ಚ= ಸಂಹರ್ತೃವಿಗೂ, ಸ್ಥಿತಿಃ= ಸ್ಥಿತಿಯು, ಆವಶ್ಯಕೀ= ಆವಶ್ಯಕವಾದುದು, ಅಸತ್= ತಾನೇ ಇಲ್ಲದಿರುವುದು (ತನಗೇ ಸ್ಥಿತಿ ಇಲ್ಲದಿದ್ದರೆ) ಅದು, ಕಾರಣಂ ಅದೃಷ್ಟಂ= ಯಾವುದಕ್ಕೂ ಕಾರಣವಾಗುವುದು ಕಂಡಿಲ್ಲ, ತದ್= ಆದ್ದರಿಂದ, ಬ್ರಹ್ಮೇಶೌ= ಬ್ರಹ್ಮರುದ್ರರು, ಹರೇಃ ವಶೌ= ಹರಿಗೆ ವಶರಾದವರು.

**ಅನುವಾದ–** ಕರ್ತೃವಿಗೂ ಸ್ಥಿತಿಯು ಅಪೇಕ್ಷಿತವಾಗಿದೆ. ಸಂಹರ್ತೃವಿಗೂ ಸ್ಥಿತಿಯು ಅವಶ್ಯಕವಾಗಿದೆ. ತನಗೇ ಸ್ಥಿತಿ ಇಲ್ಲದೇ ಇದ್ದ ವಸ್ತುವು ಯಾವುದಕ್ಕೂ ಕಾರಣವಾಗುವುದು ಕಂಡಿಲ್ಲ. ಆದ್ದರಿಂದ ಸೃಷ್ಟಿ-ಸಂಹಾರ ಕರ್ತೃಗಳಾದ ಬ್ರಹ್ಮರುದ್ರರು ಸ್ಥಿತಿಕರ್ತೃವಾದ ವಿಷ್ಣುವಿನ ಅಧೀನವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ ಕರ್ತ್ರುಃ ಸ್ರಷ್ಟುಃ । ಅಸತ್ ಸ್ಥಿತಿರಹಿತಮ್ । ಅವಿದ್ಯಮಾನಂ ಶಶವಿಷಾಣಾದಿಕಂ ವಾ । ಅಜಾತನಷ್ಟಘಟಾದಿಕಂ ವಾ । ಸ್ಥಿತಿರಹಿತತ್ವಾದೇವ ಹಿ ತತ್ ಅಕಾರಣಮ್ । ಏವಂ ಚ ಸೃಷ್ಟಿಸಂಹಾರಕಾರಣತಯಾ ಬ್ರಹ್ಮಶಿವಯೋಃ ಸ್ಥಿತಿರವಶ್ಯಂ ವಾಚ್ಯೇತಿ ಭಾವಃ । ತತ್ ತಸ್ಮಾತ್ ಹರ್ಯಧೀನಸ್ಥಿತಿಸಾಪೇಕ್ಷತ್ವಾತ್ । ಉಪಲಕ್ಷಣಂ ಚೈತತ್ ।

**ವಿವರಣೆ–** ಅಂಘ್ರ್ಯರ್ಚನೆ ಮಾಡುವವರು ಎಂದು ಹೇಳುವುದರಿಂದ ಅಂಘ್ರ್ಯರ್ಚನೆಯನ್ನು ಮಾಡುವ ಲಕ್ಷ್ಮಿಯೂ ಕೂಡ ಕರ್ಮಪ್ರೇರಕಳಲ್ಲ ಎಂದು ಗ್ರಂಥಕಾರರು ತಿಳಿಸುತ್ತಾರೆ. ಲಕ್ಷ್ಮಿಯೂ ಕೂಡ ಹರಿಯ ಅಂಘ್ರ್ಯರ್ಚನೆಯನ್ನು ಮಾಡುತ್ತಾಳೆ ಎಂಬುದು 'ಸಾ ಶ್ರೀಃ ಸ್ವವಾಸಮರವಿಂದವನಂ ವಿಹಾಯ ಯತ್ಪಾದ ಪಂಕಜರಜೋ ಭಜತೇ ಅನುರಕ್ತಾ' ಎಂಬ ಭಾಗವತ ವಚನದಿಂದ ಪ್ರಸಿದ್ಧವಾಗಿದೆ. ಬರೀ ಬ್ರಹ್ಮದೇವರಿಗೆ ಸರ್ವಪ್ರೇರಕತ್ವವನ್ನು ನಿರಾಕರಣೆ ಮಾಡುವುದಾಗಿದ್ದರೆ ಗ್ರಂಥಕಾರರು ಅಂಘ್ರಿಕ್ಷಾಲನೇನ ಪಾದವನ್ನು ತೊಳೆಯುವುದರಿಂದ ಎಂದಿಷ್ಟೇ ಹೇಳುತ್ತಿದ್ದರು. ಉಳಿದ ದೇವತೆಗಳು ಬ್ರಹ್ಮರುದ್ರೇಂದ್ರರ ಆಜ್ಞಾಧಾರಕರಾದ್ದರಿಂದ ಅವರಿಗೂ ಕರ್ಮಪ್ರೇರಕತ್ವವು ಕೂಡುವುದಿಲ್ಲ ಎಂದು ಕೈಮುತ್ಯ ನ್ಯಾಯದಿಂದ ಸಿದ್ಧವಾಗುತ್ತದೆ. ಅಂಘ್ರಿಪದವನ್ನು ಪ್ರಯೋಗಿಸಿರುವುದರಿಂದ ಈಶ್ವರನಿಗೆ ಶರೀರವನ್ನು ಒಪ್ಪದಿರುವ ತಾರ್ಕಿಕ ಮತವು ನಿರಾಕೃತವಾಗುತ್ತದೆ. ಹರಿಗಿಂತ ಭಿನ್ನವಾದ ಇನ್ನೊಬ್ಬ ನಿರಾಕಾರನಾದ ಈಶ್ವರನು ಇದ್ದಿದ್ದರೆ ಬ್ರಹ್ಮಾದಿಗಳು ಅವನನ್ನೇ ಪೂಜೆ ಮಾಡಿರುತ್ತಿದ್ದರು. ಹಾಗಿಲ್ಲದೆ ಅವರು ಹರಿಯನ್ನೇ ಪೂಜಿಸುವುದರಿಂದ ಹರಿಯೇ ಈಶ್ವರನೆಂದು ಸಿದ್ಧವಾಗುತ್ತದೆ.

**ಕಿಂಚ ಸೃಜ್ಯಂ ವಶೇ ಸ್ರಷ್ಟುರ್ಹಾರ್ಯಂ ಹರ್ತುರ್ವಶೇ ಪರಮ್ ।**
**ಪಾತುರ್ವಶೇ ಸ್ಥಿತಂ ಸರ್ವಮತೋ ವಿಷ್ಣೋರ್ವಶೇಽಖಿಲಮ್ ॥ ೭೩೨ ॥**

**ಅರ್ಥ–** ಕಿಂಚ= ಮತ್ತು, ಸೃಜ್ಯಂ= ಸೃಷ್ಟಿಸಲ್ಪಡುವ ವಸ್ತುಗಳೆಲ್ಲವೂ, ಸ್ರಷ್ಟುಃ= ಸೃಷ್ಟಿಮಾಡುವವನ, ವಶೇ= ವಶದಲ್ಲಿರುತ್ತವೆ, ಹಾರ್ಯಂ= ಸಂಹಾರ ಮಾಡಲ್ಪಡುವ ವಸ್ತುಗಳೆಲ್ಲವೂ, ಹರ್ತುಃ= ಸಂಹಾರ ಮಾಡುವವನ, ವಶೇ= ವಶದಲ್ಲಿರುತ್ತವೆ, ಪರಂ= ಆದರೆ, ಪಾತುಃ= ಪಾಲಿಸುವವನ ವಶದಲ್ಲಿ, ಸರ್ವಂ ಸ್ಥಿತಂ= ಎಲ್ಲವೂ ಇರುತ್ತದೆ, ಅತಃ= ಆದ್ದರಿಂದ, ಅಖಿಲಂ= ಎಲ್ಲವೂ, ವಿಷ್ಣೋಃ ವಶೇ= ವಿಷ್ಣುವಿಗೆ ಅಧೀನವಾಗಿರುತ್ತದೆ.

**ಅನುವಾದ–** ಮತ್ತು ಸೃಜ್ಯವಾದುದೆಲ್ಲವೂ ಸೃಷ್ಟಿಕರ್ತನ ವಶದಲ್ಲಿರುತ್ತವೆ. ಸಂಹರಿಸಲ್ಪಡುವ ವಸ್ತುಗಳೆಲ್ಲವೂ ಸಂಹರ್ತೃವಿನ ವಶವಾಗಿರುತ್ತವೆ. ಆದರೆ ಪಾಲಕನ ವಶದಲ್ಲಿ ಎಲ್ಲವೂ ಇರುತ್ತದೆ. ಆದ್ದರಿಂದ ಪಾಲಕನಾದ ವಿಷ್ಣುವಿನ ವಶದಲ್ಲೇ ಎಲ್ಲವೂ ಇರುತ್ತದೆ.

**ಭಾವವಿಲಾಸಿನೀ–** ಸೃಷ್ಟಿಕರ್ತಾ ಬ್ರಹ್ಮಾ ಸ್ಥಿತಿಕರ್ತಾ ವಿಷ್ಣುಃ, ಸಂಹಾರಕರ್ತಾ ರುದ್ರ ಇತಿ ಸಾರ್ವಜನೀನತಯಾ ಪ್ರಸಿದ್ಧ ಪ್ರಮೇಯೇನಾಪಿ ವಿಷ್ಣೋರೇವ ಸರ್ವೇಶ್ವರತಾಂ ಸಾಧಯತಿ– **ಕಿಂಚೇತ್ಯಾದಿನಾ ಶ್ಲೋಕಷಟ್ಕೇನ ॥** ಸೃಜ್ಯಂ ಸೃಷ್ಟಿಯೋಗ್ಯಂ ವಸ್ತು ತದೇವ ಪ್ರಷ್ಟುಬ್ರಹ್ಮಣೋ ವಶೇ ನ ತು ಸೃಷ್ಟಿಶೂನ್ಯಂ ಕಾಲಾಕಾಶಾದಿಕಂ, ಸೃಷ್ಟೇರೇವ ತದಧೀನವ್ಯಾಪಾರತ್ವಾದಿತಿ ಭಾವಃ ।

ಹಾರ್ಯಂ ಸಂಹಾರಯೋಗ್ಯಮ್ । ತದೇವ ಸಂಹರ್ತುಃಶಿವಸ್ಯ ವಶೇ । ಸಂಹಾರಸ್ಯೈವ ತದಧೀನವ್ಯಾಪಾರತ್ವಾತ್ । ಯತಃ ಸ್ಥಿತಂ ಸ್ಥಿತಿಮತ್ ಸರ್ವಂ ಕಾಲಾಕಾಶಾದಿ ಸಕಲಜಗತ್ ಪಾತುಃ ಸ್ಥಿತಿಕರ್ತುರ್ನಾರಾಯಣಸ್ಯ ವಶೇ ಅತ ಇತಿ ಸಂಬಂಧಃ । ಜನ್ಮಮರಣಶೂನ್ಯಾನಾಮಪ್ಯನಾದಿನಿತ್ಯಾನಾಂ ಸ್ಥಿತಿರಹಿತಂ ವಸ್ತು ಸ್ತೀತ್ಯಸ್ಯ ವ್ಯಾಹತತ್ವೇನ ಸ್ಥಿತೇರವಶ್ಯಂ ವಕ್ತವ್ಯತ್ವಾತ್ । ತಸ್ಯಾಶ್ಚ ವಿಷ್ಣುವ್ಯಾಪಾರತ್ವೇನ ಸ್ಥಿತಿಮತಃ ಸರ್ವಸ್ಯಾಪಿ ವಿಷ್ಣುವಶತ್ವಾವಶ್ಯಂಭಾವಾತ್ ವಿಷ್ಣುರೇವ ಸರ್ವೇಶ್ವರಃ । ನ ತು ಬ್ರಹ್ಮಶೀವಾದಯ ಇತಿ ಭಾವಃ ॥ ೭೩೨ ॥

**ವಿವರಣೆ–** ಬ್ರಹ್ಮನು ಸೃಷ್ಟಿಕರ್ತ, ವಿಷ್ಣುವು ಸ್ಥಿತಿಕರ್ತ ಮತ್ತು ರುದ್ರನು ಸಂಹಾರಕರ್ತ ಎಂದು ಸಾರ್ವಜನೀನವಾಗಿ ಪ್ರಸಿದ್ಧವಾದ ಪ್ರಮೇಯದಿಂದಲೂ ಕೂಡ ವಿಷ್ಣುವಿಗೇ ಸರ್ವೇಶ್ವರತ್ವವು ಸಿದ್ಧವಾಗುತ್ತದೆ ಎಂದು ಆರು ಶ್ಲೋಕಗಳಿಂದ ಪ್ರತಿಪಾದಿಸುತ್ತಾರೆ. ಸೃಷ್ಟಿಗೆ ಯೋಗ್ಯವಾದುದೆಲ್ಲವೂ ಸ್ರಷ್ಟೃವಿನ ವಶ. ಸಂಹಾರಕ್ಕೆ ಯೋಗ್ಯವಾದುದೆಲ್ಲವೂ ಶಿವನ ವಶ. ಆದರೆ ಜಗತ್ತಿನಲ್ಲಿ ಸೃಷ್ಟಿ-ಸಂಹಾರಗಳಿಲ್ಲದ ಕಾಲಾಕಾಶಾದಿ ಅನೇಕ ಪದಾರ್ಥಗಳಿವೆ. ಅವೆಲ್ಲವೂ ಭಗವಂತನಾದ ವಿಷ್ಣುವಿನ ವಶ. ಜನನ ಮರಣಗಳಿಲ್ಲದ ವಸ್ತುವು ಇರಬಹುದು. ಆದರೆ ಸ್ಥಿತಿ ಇಲ್ಲದ ವಸ್ತುವಿಲ್ಲ. ಆದ್ದರಿಂದ ಎಲ್ಲ ವಸ್ತುಗಳೂ ವಿಷ್ಣುವಿನ ಅಧೀನ. ಆದ್ದರಿಂದ ಸ್ಥಿತಿಕರ್ತನಾದ ವಿಷ್ಣುವೇ ಸರ್ವಸ್ವಾಮಿ ಎಂದು ಸಿದ್ಧವಾಗುತ್ತದೆ.

**ಯತ್ಕರ್ತುಶ್ಚ ಸ್ಥಿತಿರ್ವಾಚ್ಯಾ ಹರ್ತುಶ್ಚಾವಶ್ಯಕೀ ಸ್ಥಿತಿಃ ।**
**ನ ಹ್ಯಸತ್ ಕಾರಣಂ ದೃಷ್ಟಂ ಬ್ರಹ್ಮೇಶೌ ತದ್ವಶೌ ಹರೇಃ ॥ ೭೩೩ ॥**

**ಅರ್ಥ–** ಯತ್= ಯಾವ ಕಾರಣದಿಂದ, ಕರ್ತುಶ್ಚ= ಕರ್ತೃವಿಗೂ, ಸ್ಥಿತಿಃ= ಸ್ಥಿತಿಯು, ವಾಚ್ಯಾ= ಅವಶ್ಯವಾಗಿ ಹೇಳಲ್ಪಡಬೇಕು, ಹರ್ತುಶ್ಚ= ಸಂಹರ್ತೃವಿಗೂ, ಸ್ಥಿತಿಃ= ಸ್ಥಿತಿಯು, ಆವಶ್ಯಕೀ= ಆವಶ್ಯಕವಾದುದು, ಅಸತ್= ತಾನೇ ಇಲ್ಲದಿರುವುದು (ತನಗೇ ಸ್ಥಿತಿ ಇಲ್ಲದಿದ್ದರೆ) ಅದು, ಕಾರಣಂ ಅದೃಷ್ಟಂ= ಯಾವುದಕ್ಕೂ ಕಾರಣವಾಗುವುದು ಕಂಡಿಲ್ಲ, ತದ್= ಆದ್ದರಿಂದ, ಬ್ರಹ್ಮೇಶೌ= ಬ್ರಹ್ಮರುದ್ರರು, ಹರೇಃ ವಶೌ= ಹರಿಗೆ ವಶರಾದವರು.

**ಅನುವಾದ–** ಕರ್ತೃವಿಗೂ ಸ್ಥಿತಿಯು ಅಪೇಕ್ಷಿತವಾಗಿದೆ. ಸಂಹರ್ತೃವಿಗೂ ಸ್ಥಿತಿಯು ಅವಶ್ಯಕವಾಗಿದೆ. ತನಗೇ ಸ್ಥಿತಿ ಇಲ್ಲದೇ ಇದ್ದ ವಸ್ತುವು ಯಾವುದಕ್ಕೂ ಕಾರಣವಾಗುವುದು ಕಂಡಿಲ್ಲ. ಆದ್ದರಿಂದ ಸೃಷ್ಟಿ-ಸಂಹಾರ ಕರ್ತೃಗಳಾದ ಬ್ರಹ್ಮರುದ್ರರು ಸ್ಥಿತಿಕರ್ತೃವಾದ ವಿಷ್ಣುವಿನ ಅಧೀನವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ ಕರ್ತೃಃ ಸ್ರಷ್ಟುಃ । ಅಸತ್ ಸ್ಥಿತಿರಹಿತಮ್ । ಅವಿದ್ಯಮಾನಂ ಶಶವಿಷಾಣಾದಿಕಂ ವಾ । ಅಜಾತನಷ್ಟಘಟಾದಿಕಂ ವಾ । ಸ್ಥಿತಿರಹಿತತ್ವಾದೇವ ಹಿ ತತ್ ಅಕಾರಣಮ್ । ಏವಂ ಚ ಸೃಷ್ಟಿಸಂಹಾರಕಾರಣತಯಾ ಬ್ರಹ್ಮಶಿವಯೋಃ ಸ್ಥಿತಿರವಶ್ಯಂ ವಾಚ್ಯೇತಿ ಭಾವಃ । ತತ್ ತಸ್ಮಾತ್ ಹರ್ಯಧೀನಸ್ಥಿತಿಸಾಪೇಕ್ಷತ್ವಾತ್ । ಉಪಲಕ್ಷಣಂ ಚೈತತ್ ।

ಸ್ಥಿತಿರಹಿತವಸ್ತುನಃ ಕಾರಣತ್ವಾಸಂಭವವತ್ ಸೃಷ್ಟಿಸಂಹಾರರಹಿತವಸ್ತುನಃ ಕಾಲಾದೇಃ ಕಾರಣತ್ವಾಸಂಭವಾಭಾವೇನ ವಿಷ್ಣೋರಪಿ ನಿತ್ಯತಯಾ ತದ್ವತ್‌ಕಾರಣತ್ವಸಂಭವಾತ್ । ನ ವಿರುದ್ಧ ವ್ಯಾಪಾರಾಧೀನತ್ವಮ್ । ಅತ ಏವ ನ ತದ್ವಶತ್ವಮಿತ್ಯಪಿ ದ್ರಷ್ಟವ್ಯಮ್ ॥ ೭೩೩ ॥

ಯತಶ್ಚ ಸ್ವಸ್ಥಿತಿಃ ಸ್ವೀಯವ್ಯಾಪಾರತ್ವಾತ್ ಸ್ವತೋ ಹರೇಃ ।
ಅತಃ ಸ್ವತಂತ್ರತಾ ತಸ್ಯ ಸಿದ್ಧಾ ಸಿದ್ಧಾರ್ಥಪದ್ಧತೇಃ ॥ ೭೩೪ ॥

**ಅರ್ಥ–** ಯತಶ್ಚ= ಯಾವಕಾರಣದಿಂದ, ಸ್ವಸ್ಥಿತಿಃ= ತನ್ನ ಸ್ಥಿತಿಯಾದರೂ, ಸ್ವೀಯವ್ಯಾಪಾರತ್ವಾತ್= ತನ್ನ ವ್ಯಾಪಾರವೇ ಆದ್ದರಿಂದ, ಹರೇಃ= ಹರಿಗೆ, ಸ್ವತಃ= ಸ್ವತಃ ಸಿದ್ಧವಾಗಿದೆ, ಅತಃ= ಆದ್ದರಿಂದ, ಸಿದ್ಧಾರ್ಥಪದ್ಧತೇಃ= ಸಿದ್ಧರಿಂದ ಗಮ್ಯವಾದ, ತಸ್ಯ= ಆ ವಿಷ್ಣುವಿಗೆ, ಸ್ವತಂತ್ರತಾ= ಸ್ವಾತಂತ್ರ್ಯವು, ಸಿದ್ಧಾ= ಸಿದ್ಧವಾಗುತ್ತದೆ.

**ಅನುವಾದ–** ಯಾವ ಕಾರಣದಿಂದ ತನ್ನ ಸ್ಥಿತಿಯು ತನ್ನ ವ್ಯಾಪಾರವೇ ಆಗಿದೆಯೋ ಆದ್ದರಿಂದ ಹರಿಯ ಸ್ಥಿತಿಯು ಸ್ವತಃ ಸಿದ್ಧವಾಗಿದೆ. ಆದ್ದರಿಂದ ಸಿದ್ಧಗಮ್ಯನಾದ ವಿಷ್ಣುವಿಗೆ ಸ್ವಾತಂತ್ರ್ಯವೂ ಸಿದ್ಧವಾಯಿತು.

**ಭಾವವಿಲಾಸಿನೀ–** ಸ್ವಸ್ಥಿತಿಃ ಸ್ವಸ್ಯ ವಿಷ್ಣೋಃಸ್ಥಿತಿಃ । ಯದ್ಯಪಿ ಸ್ಥಿತಿರ್ವಿಷ್ಣೋರಪ್ಯಪೇಕ್ಷಿತಾ । ಅನ್ಯಥಾ ಕಾರಣತ್ವಸ್ಯೈವಾಯೋಗಾತ್ । ತಥಾಪಿ ಸ್ಥಿತೇರ್ವಿಷ್ಣುವ್ಯಾಪಾರತ್ವೇನ ವಿಷ್ಣ್ವಧೀನೈವ ಸಾ ಸ್ಯಾತ್ । ತೇನ ಚ ವಿಷ್ಣೋಃ ಸ್ವಾಧೀನಪ್ರವೃತ್ತಿಮತ್ವರೂಪಸ್ವಾತಂತ್ರ್ಯಮೇವ ಸಿದ್ಧ್ಯೇತ್ ನ ತು ಬ್ರಹ್ಮರುದ್ರಯೋರಿವ ಪರಾಧೀನತ್ವಮಿತಿ ಭಾವಃ ॥ ೭೩೪ ॥

**ವಿವರಣೆ–** ಸೃಷ್ಟಿಸಂಹಾರ ಕರ್ತೃಗಳಿಗೆ ಸ್ಥಿತಿಯು ಅಪೇಕ್ಷಿತವಾದಂತೆ ಸ್ಥಿತಿಕರ್ತೃವಿಗೂ ಸ್ಥಿತಿಯು ಅಪೇಕ್ಷಿತ. ಆದರೆ ಆ ಸ್ಥಿತಿಯು ತನ್ನ ವ್ಯಾಪಾರವೇ ಆದ್ದರಿಂದ ತನ್ನ ಸ್ಥಿತಿಗಾಗಿ ವಿಷ್ಣುವು ಅನ್ಯಾಧೀನನಲ್ಲ. ಬ್ರಹ್ಮರುದ್ರರು ಮಾತ್ರ ತಮ್ಮ ಸ್ಥಿತಿಗಾಗಿ ವಿಷ್ಣುವಿಗೆ ಅಧೀನರು. ಆದ್ದರಿಂದ ವಿಷ್ಣುವಿಗೆ ಸ್ವಾತಂತ್ರ್ಯವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ನ ಹ್ಯಂಡಜಃ ಸೃಜೇದಂಡಮಹಂಕಾರಂ ಹರೋ ಹರೇತ್ ।
ಮಹತ್ತತ್ವಂ ಕುತಃ ಸೃಷ್ಟಂ ಕುತೋ ನಷ್ಟಂ ವಿಚಾರ್ಯತಾಮ್ ॥ ೭೩೫ ॥

**ಅರ್ಥ–** ಅಂಡಜಃ= ಬ್ರಹ್ಮಾಂಡದಲ್ಲಿ ಉತ್ಪನ್ನನಾದ ಬ್ರಹ್ಮನು, ಅಂಡಂ= ಬ್ರಹ್ಮಾಂಡವನ್ನು, ನ ಹಿ ಸೃಜೇತ್= ಸೃಷ್ಟಿಸುವುದಿಲ್ಲವಷ್ಟೆ? ಹರಃ= ರುದ್ರನು, ಅಹಂಕಾರಂ= ಅಹಂಕಾರತತ್ವವನ್ನು, ನ ಹರೇತ್= ಸಂಹಾರ ಮಾಡುವುದಿಲ್ಲವಷ್ಟೆ? ಮಹತ್ತತ್ವಂ= ಮಹತ್ತತ್ವವು, ಕುತಃ= ಯಾರಿಂದ, ಸೃಷ್ಟಂ= ಸೃಷ್ಟವಾಯಿತು, ಕುತಃ= ಯಾರಿಂದ, ನಷ್ಟಂ= ನಷ್ಟವಾಯಿತು ಎಂದು, ವಿಚಾರ್ಯತಾಂ= ವಿಚಾರಿಸಲ್ಪಡಲಿ.

**ಅನುವಾದ–** ಬ್ರಹ್ಮಾಂಡದ ಒಳಗೆ ಉತ್ಪನ್ನನಾದ ಬ್ರಹ್ಮನು ಬ್ರಹ್ಮಾಂಡವನ್ನೇ ಸೃಷ್ಟಿಸುವುದಿಲ್ಲವಷ್ಟೆ? ರುದ್ರನಾದರೂ ಅಹಂಕಾರತತ್ವವನ್ನೇ ಸಂಹಾರ ಮಾಡುವುದಿಲ್ಲವಷ್ಟೆ? ಮಹತ್ತತ್ವವು ಯಾರಿಂದ ಸೃಷ್ಟವಾಯಿತು ಮತ್ತು ಯಾರಿಂದ ನಷ್ಟವಾಯಿತು ಎಂದು ವಿಚಾರಿಸಲ್ಪಡಲಿ.

**ಭಾವವಿಲಾಸಿನೀ–** ಸೃಷ್ಟಿಸಂಹಾರಾವಪಿ ನ ಸರ್ವೌ ಬ್ರಹ್ಮರುದ್ರಾಧೀನಾವಿತಿ ಭಾವೇನೋಕ್ತಮ್ ॥ **ನಹೀತಿ** ॥ ಅಂಡಜಃ ಅಂಡಾಂತರವರ್ತಿಪದ್ಮನಾಭನಾಭಿಕಮಲಾಜ್ಜಃ ಸತ್ಯಲೋಕಾಧಿಪತಿಃ ಚತುರ್ಮುಖಬ್ರಹ್ಮೇತ್ಯರ್ಥಃ । ಅಸ್ಯ ಸ್ವೋತ್ಪತ್ತೇಃ ಪೂರ್ವಂ ವಿದ್ಯಮಾನಾಂಡಸ್ರಷ್ಟೃತ್ವಮ್ ಅಂಡಾತ್ ಪೂರ್ವಮೇವ ಸೃಷ್ಟಚತುರ್ವಿಂಶತಿ ತತ್ವಸ್ರಷ್ಟೃತ್ವಮ್, ಅಂಡಾಂತರೇಽಪಿ ಪಾದ್ಮ-ಕಲ್ಪಾತಿರಿಕ್ತದೈನಂದಿನ ಕಲ್ಪೇಷೂತ್ಪನ್ನನಾನಾನಾಪದಾರ್ಥಸ್ರಷ್ಟೃತ್ವಂ ಚ ನಾಸ್ತಿ । ಏತದುಭಯ-ಸ್ಯಾಪ್ಯಂಡಪದಮುಪಲಕ್ಷಣಮ್ ।

ಹರಸ್ಯ ಚ ಕಾಲಾಗ್ನಿರುದ್ರಜನಕೋ ಮುಸಲಾಸ್ತ್ರೋ ಹಲಾಯುಧ ಇತಿ ವಾಸುದೇವ-ಸಹಸ್ರನಾಮಸು ಪಾಠಾತ್ ಕೇವಲಂ ಶೇಷಸ್ಯೈವ ಗ್ರಹಣೇ ವಾಸುದೇವಸಹಸ್ರ-ನಾಮತ್ವಾಯೋಗೇನ ಸಂಕರ್ಷಣಮುಖಾನಲ ಇತಿ ಭಾಗವತೋಕ್ತ್ಯಾ ಚ ಶೇಷಾಂತರ್ಗತ-ಸಂಕರ್ಷಣಾಖ್ಯಭಗವತೋ ಮುಖಾದಭಿಮಾನಿಭೂತಕಲಾಗ್ನಿರುದ್ರೇಣ ಸಹ ಪ್ರಲಯಕಾಲೇ ಉತ್ಪನ್ನಸ್ಯ ಜಗತೋ ದಾಹೇ ಕರಣಭೂತಕಾಲಾಗ್ನೇಃ ಸಕಾಶಾತ್ ಜಲಾವರಣಾಂತರ್ಗತ ಬ್ರಹ್ಮಾಂಡದಾಹೇ ಜಾಯಮಾನೇ ಲಂಕಾದಾಹಕಹನುಮದ್ವತ್ ತ್ರಿಪುರದಾಹಕ ಶಿವವಚ್ಚ ಜಗದ್ದಾಹೇ ಕರ್ತೃತ್ವಂ ಸಂಕರ್ಷಣಸ್ಯೈವ । ಅತ ಏವೋಕ್ತಂ ಭಗವತ್ಪಾದಚಾರ್ಯೈಃ ಸಂಕರ್ಷಣಶ್ಚ ಸ ಬಭೂವ ಪುನಃ ಸುನಿತ್ಯಃ ಸಂಹಾರಕಾರಣ ವಪುರಿತಿ । ಅಗ್ನೇರಗ್ನ್ಯಭಿಮಾನಿಶಿವಸ್ಯ ಚ ದಾಹಕರಣತ್ವಮೇವ ನತು ಕರ್ತೃತ್ವಂ ತದ್ದೈವ ಭಗವದಾಜ್ಞಯಾ ಶಿವೇನಾಪಿ ತ್ರಿಶೂಲಂ ಸಂಗೃಹ್ಯ ದಹ್ಯಮಾನೇ ಜಲಾಂತರ್ಜಗತಿ ಸ್ಥಿತಾನಾಂ ದಾಹಾಂತರೇಽಪಿ ಸ್ಥಿತ್ವಾ ಸ್ವಸ್ವಾಹುತಿ-ಗೃಹೀತೃತ್ವೇನಾದಹ್ಯಮಾನಾನಾಂ ಸ್ಥಾವರದೇವಾದೀನಾಂ ಹನನಾತ್ಪಾವನ್‌ಮಾತ್ರ ಸಂಹರ್ತೃತ್ವ-ಸಂಭವೇಽಪಿ ತದಂತರಜೀವಜಡಾತ್ಮಕಜಗತಾಂ ದೈನಂದಿನಕಲ್ಪೇ ಸಂಹ್ರಿಯಮಾಣಜಗತಾಂ ಚ ಸಂಹರ್ತೃತ್ವಾಭಾವಾನ್ನಸರ್ವಸಂಹರ್ತೃತ್ವಮ್ । ಅಹಂಕಾರಾತ್ಮಕಶಿವಸ್ಯ । ಭಗವತೈವ ಕ್ರಿಯಮಾಣೇ ಅಂಡೋಪರಿಸ್ಥಿತಚತುರ್ವಿಂಶತಿತತ್ವಸಂಹಾರೇ ಆಕಾಶಾಭಿಮಾನಿವಿನಾಯಕಾಂತಸ್ಯ ಬುದ್ಧೀಂದ್ರಿಯಾಭಿಮಾನಿಪಾರ್ವತ್ಯಂತ ತಾತ್ವಿಕದೇವತಾಸಮೂಹಸ್ಯ ಕಥಂಚಿದೇವಾಂತರ-ಸಂಹರ್ತೃತ್ವಮ್ । ಸಂಕರ್ಷಣಮುಖಾನಲೇನೈವ ದಹ್ಯಮಾನಜಗತ್‌ಸಂಹರ್ತೃತ್ವಂ ಚ ನ ಕಥಂಚಿದಪಿ । ಅತೋ ನ ತಸ್ಯಾಪಿ ಸರ್ವಸಂಹರ್ತೃತ್ವಮ್ । ಮಹತ್ತತ್ವಾಭಿಮಾನಿನೋ ಬ್ರಹ್ಮಣಶ್ಚ ಜಗೃಹೇ ಪೌರುಷಂ ರೂಪಂ ಭಗವಾನ್ಮಹದಾದಿಭಿಃ । ಸಂಭೂತಂ ಷೋಡಶ-ಕಲಮಾದೌ ಲೋಕಸಿಸೃಕ್ಷಯಾ ॥

ಇತಿ ವಚನಾತ್ । ಪುರುಷರೂಪೇಣ ಭಗವತಾ ಸೃಜ್ಯಮಾನಾಹಂಕಾರಾದಿಪಿಪೀಲಿಕಾಂತ-ಸಕಲಜಗತ್‌ಸೃಷ್ಟಾವನ್ಯಥಾಸಿದ್ಧತ್ವೇನ ಪಾದ್ಮಸೃಷ್ಟೌ ಚ ಪಾದ್ಮಬ್ರಹ್ಮಣೈವಾನ್ಯಥಾಸಿದ್ಧತ್ವೇನ ನ

ಜಗತ್‌ಸೃಷ್ಟೃತ್ವಂ ಮಹತ್ತತ್ವಸ್ಯಾಹಂಕಾರತತ್ವಂ ಪ್ರತ್ಯುಪಾದಾನಕಾರಣತಯಾ ತದಭಿಮಾನಿನೋ ಬ್ರಹ್ಮಣೋಽಪಿ ಕಾರಣತ್ವಮೇವ ನ ಕರ್ತೃತ್ವಮ್ । ಕಾರಣೇ ಕರ್ತೃತ್ವೋಪಚಾರೇಽಪಿ ಸ್ವಶರೀರ-ಭೂತ ಮಹತ್ತತ್ವಂ ಪ್ರತಿ ನತರಾಂ ಕರ್ತೃತ್ವಮ್ । ಅತಃ ಸರ್ವತ್ರ ಸ್ವತಂತ್ರತಯಾ ಮುಖ್ಯತಃ ಕಾರಣೀಭೂತಸ್ಯ ಹರೇರೇವ ಸರ್ವಸ್ರಷ್ಟೃತ್ವಂ ಸರ್ವಸಂಹರ್ತೃತ್ವಂ ಚ । ವಿಧಿರುದ್ರಯೋಸ್ತು ಕಥಂಚಿತ್ ಸ್ವಯೋಗ್ಯಕತಿಪಯಜಗತ್‌ಸ್ರಷ್ಟೃತ್ವ ಸಂಹರ್ತೃತ್ವಸಂಭವೇಽಪಿ ಸಕಲಜಗತ್‌ಸೃಷ್ಟೃತ್ವ-ಸಂಹರ್ತೃತ್ವೇ ನ ಕಥಂಚಿದಪಿ ಘಟೇತೇ । ಅತ ಏವ ಸೂತ್ರೇ ಶ್ರುತೌ ಚ ಪರಬ್ರಹ್ಮಣ ಏವ ಜಗತ್-ಸೃಷ್ಟೃತ್ವಾದಿಕಂ ಲಕ್ಷಣತಯಾಽಭಿಹಿತಮ್ । ಸಸರ್ಜ ಭಗವಾನಿತ್ಯಾರಭ್ಯ ತಸ್ಮಿಂಸ್ತು ಭಗವಾನ್ ಭೂಯೋ ಭುವನಾನಿ ಚತುರ್ದಶೇತ್ಯಂತಾಃ ಪ್ರಾಚಾಂ ವಾಚಶ್ಚೇತಿ ಭಾವಃ ॥ ೭೩೫ ॥

**ವಿವರಣೆ–** ಎಲ್ಲ ಸೃಷ್ಟಿಸಂಹಾರವೂ ಸಹ ಬ್ರಹ್ಮ-ರುದ್ರರ ಅಧೀನವಲ್ಲ ಎಂದು ಇಲ್ಲಿ ಪ್ರತಿಪಾದಿಸುತ್ತಾರೆ. ಬ್ರಹ್ಮಾಂಡದ ಒಳಗೆ ಮಲಗಿದ ಪದ್ಮನಾಭನ ನಾಭಿಕಮಲದಿಂದ ಉತ್ಪನ್ನನಾದ ಚತುರ್ಮುಖ ಬ್ರಹ್ಮನು ತನಗಿಂತ ಮೊದಲು ಉತ್ಪನ್ನವಾದ ಬ್ರಹ್ಮಾಂಡವನ್ನಾಗಲೀ, ಬ್ರಹ್ಮಾಂಡಕ್ಕಿಂತ ಮೊದಲೇ ಸೃಷ್ಟವಾದ 24 ತತ್ತ್ವಗಳನ್ನಾಗಲೀ, ಬ್ರಹ್ಮಾಂಡದ ಒಳಗೂ ಸಹ ಪಾದ್ಮಕಲ್ಪವ್ಯತಿರಿಕ್ತವಾದ ದೈನಂದಿನ ಕಲ್ಪಗಳಲ್ಲಿ ಉತ್ಪನ್ನವಾದ ಪದಾರ್ಥಗಳನ್ನಾಗಲೀ ಸೃಷ್ಟಿಸುವುದಿಲ್ಲವಷ್ಟೆ? ಈಶ್ವರನ ವಿಷಯದಲ್ಲಾದರೂ 'ಕಾಲಾಗ್ನಿ ರುದ್ರಜನಕಃ ಮುಸಲಾಸ್ತ್ರೋ ಹಲಾಯುಧಃ' ಎಂದು ವಾಸುದೇವ ಸಹಸ್ರನಾಮವಿದೆ. ಇದು ಕೇವಲ ಶೇಷನ ವರ್ಣನೆ ಎಂದು ಗ್ರಹಿಸಿದರೆ ವಾಸುದೇವ ಸಹಸ್ರನಾಮ ವಾಗುವುದಿಲ್ಲ. ಆದ್ದರಿಂದ ಶೇಷಾಂತರ್ಗತನಾದ ಸಂಕರ್ಷಣ ನಾಮಕ ಪರಮಾತ್ಮನ ನಾಮಗಳು ಎಂದು ಗ್ರಹಿಸಬೇಕು. ಆ ಸಂಕರ್ಷಣನು ಕಾಲಾಗ್ನಿರುದ್ರಜನಕನಾದವನು. ಸಂಕರ್ಷಣ ಮುಖದಿಂದ ಕಾಲಾಗ್ನಿಗೆ ಅಭಿಮಾನಿಯಾಗಿ ರುದ್ರನು ಅವತರಿಸಿ ಪ್ರಳಯಕಾಲದಲ್ಲಿ ಜಲಾವರಣಾಂತರ್ಗತವಾದ ಬ್ರಹ್ಮಾಂಡದ ದಾಹವನ್ನು ಮಾಡುವಾಗ ಲಂಕೆಯನ್ನು ಸುಟ್ಟ ಹನುಮಂತನಂತೆ, ತ್ರಿಪುರವನ್ನು ಸುಟ್ಟ ಶಿವನಂತೆ ಜಗದ್ದಾಹದಲ್ಲಿ ಸಂಕರ್ಷಣನಿಗೇ ಕರ್ತೃತ್ವವು ಇರುತ್ತದೆ. ಭಗವದಾಜ್ಞೆಯಿಂದ ಶಿವನೂ ಸಹ ತನ್ನ ತ್ರಿಶೂಲವನ್ನು ಹಿಡಿದು ಜಲಾವರಣಾಂತರ್ಗತ ಜಗತ್ತು ದಾಹವನ್ನು ಹೊಂದುತ್ತಿರಲು ಅದರ ಮಧ್ಯದಲ್ಲಿ ನಿಂತು ದಹ್ಯಮಾನರಾದ ತನಗಿಂತ ಅಧಮರಾದ ದೇವತೆಗಳನ್ನು ಹನನ ಮಾಡಿ ಆಹುತಿ ರೂಪದಿಂದ ಸ್ವೀಕರಿಸುವುದರಿಂದ ಶಿವನಿಗೆ ತನಗಿಂತ ಅವರರಾದ ಬ್ರಹ್ಮಾಂಡದ ಒಳಗಿನ ದೇವತೆಗಳ ಸಂಹರ್ತೃತ್ವವು ಮಾತ್ರ ಇದೆ. ಅದನ್ನು ಬಿಟ್ಟು ಉಳಿದ ಜೀವಜಡಾತ್ಮಕ ಜಗತ್ತಿಗೂ ಅಥವಾ ದೈನಂದಿನ ಕಲ್ಪದಲ್ಲಿ ಸಂಹಾರವನ್ನು ಹೊಂದುವ ಜಗತ್ತಿಗೂ ಸಂಹರ್ತೃತ್ವವು ಇಲ್ಲದಿರುವುದರಿಂದ ಸರ್ವಸಂಹರ್ತೃತ್ವವು ಅವರಿಗೂ ಇಲ್ಲ. ಅಹಂಕಾರಾತ್ಮಕ ರುದ್ರದೇವರಿಗೆ ಬ್ರಹ್ಮಾಂಡದ ಹೊರಗೆ ಹರಿಯಿಂದ ಮಾಡಲ್ಪಡುವ ಇಪತ್ತನಾಲ್ಕು ತತ್ತ್ವಗಳ ಸಂಹಾರದಲ್ಲಿ ಶಕ್ತಿ ಇಲ್ಲ. ಆಕಾಶ ಅಭಿಮಾನಿಯಾದ ಗಣಪತಿಯವರೆಗೆ ಮತ್ತು ಬುದ್ಧಿ ಅಭಿಮಾನಿಯಾದ ಪಾರ್ವತಿಯವರೆಗೆ ಇರುವ

ದೇವತೆಗಳ ಸಂಹರ್ತೃತ್ವವು ಮಾತ್ರ ಇದೆ. ಸಂಕರ್ಷಣ ಮುಖದ ಅಗ್ನಿಯಿಂದಲೇ ದಗ್ಧವಾಗುವ ಉಳಿದ ಜಗತ್ ಸಂಹರ್ತೃತ್ವವು ಯಾವ ರೀತಿಯಲ್ಲಿಯೂ ಇಲ್ಲ. ಆದ್ದರಿಂದ ಅವರಿಗೂ ಸರ್ವಸಂಹರ್ತೃತ್ವವು ಇಲ್ಲ ಮತ್ತು **'ಜಗೃಹೇ ಪೌರುಷಂ ರೂಪಂ ಭಗವಾನ್ ಮಹದಾಧಿಭಿಃ । ಸಂಭೂತಂ ಷೋಡಶ ಕಲಮಾದೌ ಲೋಕಸಿಸೃಕ್ಷಯಾ'** ಎಂಬ ಭಾಗವತದ ವಚನದಂತೆ ಹರಿಯು ಪುರುಷರೂಪವನ್ನು ಧರಿಸಿ ಸೃಷ್ಟಿಮಾಡುವ ಅಹಂಕಾರಾದಿ ಪಿಪೀಲಿಕಾಂತ ಸರ್ವಜಗತ್ ಸೃಷ್ಟಿಯಲ್ಲಿ ಬ್ರಹ್ಮದೇವರು ಅನ್ಯಥಾಸಿದ್ಧರಾದ್ದರಿಂದ ಮತ್ತು ಪಾದ್ಮಸೃಷ್ಟಿಯಲ್ಲಿ ಪಾದ್ಮಬ್ರಹ್ಮ ರೂಪದಿಂದಲೇ ಅನ್ಯಥಾ ಸಿದ್ಧರಾದ್ದರಿಂದ ಅವರಿಗೂ ಸರ್ವಜಗತ್‌ಸ್ರಷ್ಟೃತ್ವವು ಇಲ್ಲ. ಮಹತ್ತತ್ವವು ಅಹಂಕಾರತತ್ವಕ್ಕೆ ಉಪಾದಾನಕಾರಣವಾದ್ದರಿಂದ ಮಹತ್ತತ್ವಾದಿ ಅಭಿಮಾನಿಯಾದ ಬ್ರಹ್ಮದೇವರಿಗೂ, ಅಹಂಕಾರತತ್ವಾಭಿಮಾನಿಗಳಾದ ರುದ್ರದೇವರನ್ನು ಕುರಿತು ಕಾರಣತ್ವವೇ ಇರುತ್ತದೆಯೇ ಹೊರತು ಕರ್ತೃತ್ವವು ಇರುವುದಿಲ್ಲ. ಕಾರಣದಲ್ಲಿ ಕಥಂಚಿತ್ ಕರ್ತೃತ್ವವನ್ನು ಉಪಚಾರ ಮಾಡಿದರೂ, ತಮ್ಮ ಶರೀರವಾದ ಮಹತ್ತತ್ವದ ಕರ್ತೃತ್ವವು ಬ್ರಹ್ಮದೇವರಿಗೆ ಎಂದೂ ಇಲ್ಲ. ಆದ್ದರಿಂದ ಎಲ್ಲ ಕಡೆಗಳಲ್ಲಿಯೂ ಸ್ವತಂತ್ರವಾಗಿ ಎಲ್ಲದಕ್ಕೂ ಮುಖ್ಯಕಾರಣನಾದ ಹರಿಯೇ ಸರ್ವಸ್ರಷ್ಟ ಮತ್ತು ಸರ್ವಸಂಹರ್ತೃ. ಬ್ರಹ್ಮರುದ್ರರಿಗೆ ಸ್ವಯೋಗ್ಯವಾದ ಅಲ್ಪಜಗತ್‌ಸ್ರಷ್ಟತ್ವ ಮತ್ತು ಸಂಹರ್ತೃತ್ವವು ಕೂಡುವುದಾದರೂ ಸಕಲಜಗತ್‌ಸ್ರಷ್ಟತ್ವ ಮತ್ತು ಸಂಹರ್ತೃತ್ವವು ಎಂದೂ ಕೂಡುವುದಿಲ್ಲ. ಆದ್ದರಿಂದಲೇ ಬ್ರಹ್ಮಸೂತ್ರದಲ್ಲಿ ಸರ್ವಜಗತ್‌ಸ್ರಷ್ಟೃತ್ವ ಮತ್ತು ಸಂಹರ್ತೃತ್ವವು ಬ್ರಹ್ಮನ ಲಕ್ಷಣವೆಂದು ಹೇಳಲ್ಪಟ್ಟಿವೆ. ಮತ್ತು 'ಸಸರ್ಜ ಭಗವಾನ್' ಎಂದು ಪ್ರಾರಂಭಿಸಿ 'ತಸ್ಮಿಂಸ್ತು ಭಗವಾನ್ ಭೂಯೋ ................' ಎಂಬಲ್ಲಿಯವರೆಗೆ ಇರುವ ಭಾಗವತವಚನಗಳೂ ಸಹ ಆ ಕಾರಣದಿಂದಲೇ ಹರಿಗೆ ಸರ್ವಸ್ರಷ್ಟೃತ್ವವನ್ನು ಹೇಳುತ್ತವೆ ಎಂದು ಅಭಿಪ್ರಾಯ.

**ಅತಃ ಸ್ವಯೋಗ್ಯಕಾರ್ಯಸ್ಯ ಕರ್ತಾರೌ ತೌ ಹರೀಚ್ಛಯಾ ।**
**ಹರಿಸ್ತು ಕರ್ತಾ ಸರ್ವಸ್ಯ ಭರ್ತಾ ಹರ್ತಾ ತ್ರಿಶಕ್ತಿಧೃತ್ ॥ ೭೩೬ ॥**

**ಅರ್ಥ–** ಅತಃ= ಆದ್ದರಿಂದ, ತೌ= ಆ ಬ್ರಹ್ಮ-ರುದ್ರರು, ಹರೀಚ್ಛಯಾ= ಹರಿಯ ಇಚ್ಛೆಗೆ ಅನುಸಾರವಾಗಿ, ಸ್ವಯೋಗ್ಯಕಾರ್ಯಸ್ಯ= ತಮಗೆ ಯೋಗ್ಯವಾದ ಸೃಷ್ಟಿ ಮತ್ತು ಸಂಹಾರ ಕಾರ್ಯಗಳನ್ನು, ಕರ್ತಾರೌ= ಮಾಡುವವರು, ತ್ರಿಶಕ್ತಿಧೃತ್= ಮೂರು ಶಕ್ತಿಗಳನ್ನು ಧರಿಸಿದ, ಹರಿಸ್ತು= ಹರಿಯಾದರೂ, ಸರ್ವಸ್ಯ= ಎಲ್ಲದಕ್ಕೂ, ಕರ್ತಾ= ಸೃಷ್ಟಿಕರ್ತನಾದವನು, ಭರ್ತಾ= ಪಾಲನಕರ್ತನಾದವನು ಮತ್ತು, ಹರ್ತಾ= ಸಂಹಾರಕರ್ತನಾದವನು.

**ಅನುವಾದ– ಆದ್ದರಿಂದ ಬ್ರಹ್ಮರುದ್ರರು ಹರಿಯ ಇಚ್ಛಾವಶರಾಗಿ ತಮಗೆ ಯೋಗ್ಯವಾದ ಸೃಷ್ಟಿಮತ್ತು ಸಂಹಾರ ಕಾರ್ಯಗಳನ್ನು ಮಾಡುತ್ತಾರೆ. ಮೂರು ಶಕ್ತಿಗಳನ್ನು ಧರಿಸಿದ**

**ಹರಿಯಾದರೂ ಸರ್ವಜಗತ್ತಿಗೆ ಸೃಷ್ಟಿಕರ್ತನೂ, ಪಾಲನಕರ್ತನೂ ಮತ್ತು ಸಂಹಾರಕರ್ತನೂ ಆಗಿದ್ದಾನೆ.**

**ಭಾವವಿಲಾಸಿನೀ—** ತ್ರಿಶಕ್ತಿಧೃತಿತ್ಯನೇನ ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ । ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃದಿತಿ ಭಾಗವತವಚನಮುಕ್ತಾರ್ಥೇ ಪ್ರಮಾಣಂ ಸೂಚಯತಿ । ತ್ರಿಶಕ್ತಿಧೃತ್ ಸೃಷ್ಟಿಸ್ಥಿತಿಸಂಹಾರಾಖ್ಯವ್ಯಾಪಾರತ್ರಯೋಚಿತಶಕ್ತಿತ್ರಯಧಾರೀ । ಇದಂ ಚ ಶಕ್ತಿತ್ರಯಧಾರಣಂ ತನ್ನಿಯುಕ್ತೋಽಹಮಿತ್ಯತ್ರೋಕ್ತನಿಯೋಗೋ ಬಹಿಃ ಸ್ಥಿತರಾಜ್ಞ ಇವ ನಾಜ್ಞಾಮಾತ್ರಂ ಶಕ್ತಿಮದಾಗಮನಂ ವಿನಾ ಶಕ್ತೇರಾಗಮನಾಯೋಗೇನ ಬಹಿಃಸ್ಥಿತಭಗವಚ್ಛಕ್ತೇಃ ಬ್ರಹ್ಮಣಿ ಶಿವೇ ಚ ಪ್ರವೇಶಾಯೋಗಾತ್ ಭಗವತ್ಯೇವ ತ್ರಿಶಕ್ತಿಧೃದಿತ್ಯುಕ್ತ್ಯಾ ಬ್ರಹ್ಮಶಿವಯೋಃ ಪೃಥಕ್ ಶಕ್ತ್ಯಭಾವಾಚ್ಚ । ಅತಃ ಸ್ವಾವಿಷ್ಟಭೂತಶಕ್ತ್ಯಾ ಸ್ವಸಾಧ್ಯಮಪಿ ಕಾರ್ಯಂ ಕುರ್ವನ್ ಪುರುಷ ಇವ ಬ್ರಹ್ಮಾ ಪಾದ್ಮೇ ಕಲ್ಪೇ ಸ್ವಾವಿಷ್ಟಭಗವಚ್ಛಕ್ತ್ಯಾ ಭಗವತ್‌ಸನ್ನಿಧಾನೋದ್ಭೂತಾಲ್ಪಸ್ವಶಕ್ತ್ಯಾ ಚ ಸ್ವಾವರದೇವಾದೀನಾಂ ಸೃಷ್ಟಿಮಾತ್ರಂ ಕರೋತಿ । ತತ್ರಾಪಿ ಸ್ಥಿತಿಸಂಹಾರೌ ಭಗವಾನೇವ ಕರೋತಿ । ಶಿವಶ್ಚ ದೈನಂದಿನಸಂಹಾರೇಷ್ವಂತಿಮಸಂಹಾರೇಷ್ವಾವಿಷ್ಟಭಗವಚ್ಛಕ್ತ್ಯಾ ತದ್ದತ್ತಾಲ್ಪಸ್ವಶಕ್ತ್ಯಾ ಚ ಸ್ವಾವರದೇವಾದೀನಾಂ ಸಂಹಾರಮಾತ್ರಂ ಕರೋತಿ । ತತ್ರಾಪಿ ಸೃಷ್ಟಿಸ್ಥಿತೀ ಪ್ರಧ್ವಂಸ ಸೃಷ್ಟಿಸ್ಥಿತ್ಯಾದೀಮ್ । ದಹ್ಯಮಾನದೇಹಾಂತಃಸ್ಥ ಜೀವಸ್ಥಿತ್ಯಾದೀಂಶ್ಚ ಭಗವಾನೇವ ಕರೋತಿ । ತಾವಪಿ ಸೃಷ್ಟಿಸಂಹಾರೌ ಮುಖ್ಯತೋ ಭಗವಾನೇವ ಕುರುತೇ । ತದಿತರಸೃಷ್ಟಿಸಂಹಾರಾಂಸ್ತು ಕೇವಲಂ ಭಗವಾನೇವ ಕುರುತ ಇತಿ ಸೂಚನಾರ್ಥಮುಕ್ತಂ ಭಗವತ್ಪಾದಾಚಾರ್ಯೈಃ ಶೇಷಾಹಿವೈರಿಶಿವಶಕ್ರಮನುಪ್ರಧಾನಚಿತ್ರೋರುಕರ್ಮರಚನಂ ಯದಪಾಂಗಲೇಶಮ್ । ಆಶ್ರಿತ್ಯ ವಿಶ್ವಮಖಿಲಂ ವಿದಧಾತಿ ಧಾತಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥

ಶಕ್ರೋಗ್ರದೀಧಿತಿಹಿಮಾಕರಸೂರ್ಯಸೂನುಪೂರ್ವಂ ನಿಹತ್ಯ ನಿಖಿಲಂ ಯಪದಪಾಂಗಲೇಶಮ್ । ಆಶ್ರಿತ್ಯ ನೃತ್ಯತಿ ಶಿವಃ ಪ್ರಕಟೋರುಶಕ್ತಿಃ ಶ್ರೀರ್ಯತ್‌ಕಟಾಕ್ಷಬಲವತ್ಯಜಿತಂ ನಮಾಮೀತಿ ॥ ನಿತರಾಂ ಯೋಗೋ ನಿಯೋಗ ಇತಿ ವಶತಾ ಚ ತದಿಂದ್ರಿಯಾಣಾಂ ಭಗವದಿಂದ್ರಿಯಚೇಷ್ಟಯೈವ ಚೇಷ್ಟನಮಿತಿ ಉಭಯತ್ರಾಪ್ಯಂತಃ ಪ್ರವೇಶ ಏವ ಲಭ್ಯತೇ । ಅತ ಏವೋಕ್ತಂ ಭಾಗವತೇಪ್ರಸುಪ್ತಲೋಕತಂತ್ರಾಣಾಂ ನಿಶಾಮ್ಯಗತಿಮೀಶ್ವರಃ । ಚತುರ್ವಿಂಶತಿತತ್ವಾನಾಂ ಗುಣಂ ಯುಗಪದಾವಿಶತ್ । ಸೋಽನುಪ್ರವಿಷ್ಟೋ ಭಗವಾನ್ ಚೇಷ್ಟಾರೂಪೇಣ ತಂ ಗಣಮ್ । ಭಿನ್ನಂ ಸಂಯೋಜಯಾಮಾಸ ಸುಪ್ತಂ ಕರ್ಮ ಪ್ರಬೋಧಯನ್ನಿತಿ ॥ ೭೩೬ ॥

**ವಿವರಣೆ—** ರಾಜರು ತ್ರಿಶಕ್ತಿಧೃತ್ ಎಂಬ ಪದದಿಂದ 'ಸೃಜಾಮಿ ತನ್ನಿಯುಕ್ತೋಹಂ ಹರೋ ಹರತಿ ತದ್ವಶಃ । ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃತ್' ಎಂಬ ಭಾಗವತವಚನವನ್ನು ಸೂಚಿಸುತ್ತಾರೆ. ತ್ರಿಶಕ್ತಿಧೃತ್ ಎಂದರೆ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಅನುಕೂಲವಾದ ಮೂರು ಶಕ್ತಿಗಳನ್ನು ಹೊಂದಿರುವವನು ಎಂದು ಅರ್ಥ. ಸೃಜಾಮಿ ತನ್ನಿಯುಕ್ತೋಹಂ ಎಂಬಲ್ಲಿ ಬ್ರಹ್ಮದೇವರು ಹರಿಯ ನಿಯೋಗದಿಂದ ಸೃಷ್ಟಿ ಮಾಡುತ್ತಾರೆ

ಎಂದರೆ ಹರಿಯು ರಾಜನಂತೆ ಹೊರಗೆ ನಿಂತು ಆಜ್ಞೆಮಾಡುತ್ತಾನೆ ಎಂದಷ್ಟೇ ಅರ್ಥವಲ್ಲ. ಶಕ್ತಿಯುಳ್ಳ ವಸ್ತುವಿನ ಆಗಮನವಿಲ್ಲದೆ ಶಕ್ತಿಯ ಆಗಮನ ಇರುವುದಿಲ್ಲವಾದ ಕಾರಣ ಆ ಶಕ್ತಿಯುಳ್ಳ ಭಗವಂತನು ಬ್ರಹ್ಮರುದ್ರರಲ್ಲಿ ಪ್ರವೇಶ ಮಾಡಿ ಬ್ರಹ್ಮರುದ್ರರಿಗೂ ತಮ್ಮ ಅಲ್ಪಶಕ್ತಿಯನ್ನು ಉದ್ಬೋಧಿಸಿ ಸೃಷ್ಟಿಯನ್ನು ಮಾಡಿ ಮಾಡಿಸುತ್ತಾನೆ ಎಂದು ಅರ್ಥ. ಹೊರಗಿದ್ದ ಹರಿಯ ರೂಪವು ಹೊರಗೇ ಇರುವುದರಿಂದ ಬ್ರಹ್ಮರುದ್ರರ ಒಳಗೆ ಶಕ್ತಿಯುಳ್ಳ ಹರಿಯ ಇನ್ನೊಂದು ರೂಪದ ಪ್ರವೇಶವನ್ನು ಅಂಗೀಕರಿಸಬೇಕು. ಆದ್ದರಿಂದ ತನ್ನಲ್ಲಿ ಆವಿಷ್ಟವಾದ ಭೂತದ ಶಕ್ತಿಯಿಂದ ಪುರುಷನು ತನಗೆ ಅಸಾಧ್ಯವಾದ ಕೆಲಸವನ್ನು ಮಾಡುವಂತೆ ಬ್ರಹ್ಮದೇವರು ಪಾದ್ಮಕಲ್ಪದಲ್ಲಿ ತಮ್ಮಲ್ಲಿ ಪ್ರವೇಶಿಸಿದ ಭಗವಂತನ ಶಕ್ತಿಯಿಂದ ಮತ್ತು ಭಗವಂತನ ಸನ್ನಿಧಾನದಿಂದ ಉದ್ಭೂತವಾದ ತಮ್ಮ ಅಲ್ಪಶಕ್ತಿಯಿಂದ ತಮಗಿಂತ ಅವರರಾದ ದೇವಾದಿಗಳ ಸೃಷ್ಟಿಯನ್ನು ಮಾತ್ರ ಮಾಡುತ್ತಾರೆ. ಅಲ್ಲಿಯೂ ಸ್ಥಿತಿ ಸಂಹಾರಗಳನ್ನು ಹರಿಯೇ ಮಾಡುತ್ತಾನೆ. ಶಿವನೂ ಸಹ ದೈನಂದಿನ ಸಂಹಾರದಲ್ಲಿಯೂ ಅಂತಿಮ ಸಂಹಾರದಲ್ಲಿಯೂ ತನ್ನಲ್ಲಿ ಪ್ರವೇಶಿಸಿದ ಹರಿಯ ಶಕ್ತಿಯಿಂದ ಮತ್ತು ತನಗೆ ಹರಿಯು ನೀಡಿದ ಅಲ್ಪಶಕ್ತಿಯಿಂದ ತನಗಿಂತ ಅವರರಾದ ದೇವತಾದಿಗಳನ್ನು ಮಾತ್ರ ಸಂಹಾರ ಮಾಡುತ್ತಾನೆ. ಅಲ್ಲಿಯೂ ಸಹ ಸೃಷ್ಟಿ-ಸ್ಥಿತಿಗಳನ್ನು ಹರಿಯೇ ಮಾಡುತ್ತಾನೆ. ಬ್ರಹ್ಮರುದ್ರರು ಮಾಡುವ ಸೃಷ್ಟಿಸಂಹಾರಗಳೂ ಸಹ ಮುಖ್ಯವಾಗಿ ಹರಿಯ ವ್ಯಾಪಾರವೇ ಆಗಿದೆ. ಅದನ್ನು ಬಿಟ್ಟು ಉಳಿದ ಸೃಷ್ಟಿ-ಸಂಹಾರಗಳನ್ನು ಕೇವಲ ಹರಿಯೇ ಮಾಡುತ್ತಾನೆ. ಈ ಎಲ್ಲಾ ಪ್ರಮೇಯವನ್ನು ಸೂಚಿಸಲು ಭಗವತ್ಪಾದಾಚಾರ್ಯರು ದ್ವಾದಶ ಸ್ತೋತ್ರದಲ್ಲಿ 'ಶೇಷಾಹಿವೈರಿಶಿವಶಕ್ರಮನುಪ್ರಧಾನಚಿತ್ರೋರುಕರ್ಮರಚನಂ ಯದಪಾಂಗಲೇಶಂ । ಆಶ್ರಿತ್ಯವಿಶ್ವಮಖಿಲಂ ವಿಧದಾತಿ ಧಾತಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ ಶಕ್ರೋಗ್ರದೀಧಿತಿಹಿಮಾಕರಸೂರ್ಯಸೂನು ಪೂರ್ವಂ ನಿಹತ್ಯ ನಿಖಿಲಂ ಯದಪಾಂಗ-ಲೇಶಂ । ಆಶ್ರಿತ್ಯ ನೃತ್ಯತಿ ಶಿವಃ ಪ್ರಕಟೋರುಶಕ್ತಿಃ ಶ್ರೀರ್ಯತ್ಕಟಾಕ್ಷಬಲವ ತ್ಯಜಿತಂ ನಮಾಮಿ ॥' ಎಂದು ಸ್ತೋತ್ರ ಮಾಡಿದ್ದಾರೆ. ನಿಯೋಗ ಎಂದರೆ ನಿತರಾಂ ಯೋಗ ಎಂಬ ವ್ಯುತ್ಪತ್ತಿಯಿಂದ ಬ್ರಹ್ಮರುದ್ರರ ಇಂದ್ರಿಯಗಳಿಗೆ ಭಗವದ್ವಶತ್ವವು ಮತ್ತು ಭಗವಂತನ ಇಂದ್ರಿಯದ ಚೇಷ್ಟೆಯಿಂದಲೇ ಚೇಷ್ಟೆಯೂ ಸಹ ಲಭ್ಯವಾಗುತ್ತದೆ. ಇಂತಹ ನಿಯೋಗವು ಹರಿಯು ಒಳಗೆ ಪ್ರವೇಶ ಮಾಡಿದರೆ ಮಾತ್ರ ಉಂಟಾಗುತ್ತದೆ. ಆದ್ದರಿಂದಲೇ ಭಾಗವತದಲ್ಲಿ 'ಪ್ರಸುಪ್ತಲೋಕತಂತ್ರಾಣಾಂ ನಿಶಾಮ್ಯ ಗತಿಮೀಶ್ವರಃ । ಚತುರ್ವಿಂಶತಿ ತತ್ವಾನಾಂ ಗಣಂ ಯುಗಪದಾವಿಶತ್ । ಸೋನುಪ್ರವಿಷ್ಟೋ ಭಗವಾನ್ ಚೇಷ್ಟಾರೂಪೇಣ ತಂ ಗಣಂ । ಭಿನ್ನಂ ಸಂಯೋಜಯಾಮಾಸ ಸುಪ್ತಂ ಕರ್ಮ ಪ್ರಬೋಧಯನ್।' ಎಂದು ಸಕಲತತ್ವಾಭಿಮಾನಿಗಳಲ್ಲಿ ಹರಿಯ ಪ್ರವೇಶವನ್ನೇ ಹೇಳಿದ್ದಾರೆ.

ನ ಪಿತಾಽಧಿಪತಿರ್ನೃಣಾಂ ನ ಹರ್ತಾ ಯಾಮಿಕೋಪಿ ವಾ ।
ಕಿಂತು ರಕ್ಷಕ ಏವಾತೋ ವಿಷ್ಣುರೇವ ಜಗತ್ಪತಿಃ ॥ ೭೩೭ ॥

**ಅರ್ಥ–** ನೃಣಾಂ= ಮನುಷ್ಯರಿಗೆ, ಪಿತಾ= ತಂದೆಯು, ನ ಅಧಿಪತಿಃ= ಅಧಿಪತಿಯಲ್ಲ, ಹರ್ತಾ= ಸಂಹಾರ ಮಾಡುವ, ಯಾಮಿಕೋಪಿ= ರಾತ್ರಿಯ ಕಾವಲುಗಾರನಾದ ರಾಜಭಟನೂ, ನ ಅಧಿಪತಿಃ= ಅಧಿಪತಿಯಲ್ಲ, ಕಿಂತು= ಆದರೆ, ರಕ್ಷಕ ಏವ= ಧನ-ಭೂ-ವೇತನ ದಾನಗಳಿಂದ ರಕ್ಷಿಸುವ ರಾಜನೇ ಅಧಿಪತಿಯಾದವನು, ಅತಃ= ಆದ್ದರಿಂದ, ವಿಷ್ಣುರೇವ= ರಕ್ಷಕನಾದ ವಿಷ್ಣುವೇ, ಜಗತ್ಪತಿಃ= ಜಗತ್ಪತಿಯಾದವನು.

**ಅನುವಾದ– ಜನ್ಮವನ್ನು ಕೊಟ್ಟ ತಂದೆಯು ಮನುಷ್ಯರಿಗೆ ಅಧಿಪತಿಯಲ್ಲ. ಚೋರರನ್ನು ಸಂಹರಿಸುವ ರಾತ್ರಿಯ ಕಾವಲುಗಾರನಾದ ರಾಜಭಟನೂ ಮನುಷ್ಯರಿಗೆ ಅಧಿಪತಿಯಲ್ಲ. ಆದರೆ ಧನ-ಭೂ-ವೇತನ ದಾನಗಳಿಂದ ರಕ್ಷಿಸುವ ರಾಜನೇ ಅಧಿಪತಿಯಾಗಿರುತ್ತಾನೆ. ಆದ್ದರಿಂದ ರಕ್ಷಕನಾದ ವಿಷ್ಣುವೇ ಜಗತ್ತಿಗೆ ಅಧಿಪತಿಯಾದವನು.**

**ಭಾವವಿಲಾಸಿನೀ–** ಲೌಕರೀತ್ಯಾಪಿ ಸ್ರಷ್ಟುರ್ಹರ್ತುಶ್ಚ ನ ಸರ್ವಾಧಿಪತ್ಯಮ್ । ಕಿಂತು ರಕ್ಷಕಸ್ಯೇತಿ ಸ್ಪಷ್ಟೀಕರ್ತುಮುದಿತಮ್ ॥ **ನ ಪಿತೇತಿ** ॥ ಅನೇನ ಪ್ರಷ್ಟುರ್ನಾಧಿಪತ್ಯಮಿತಿ ಸೂಚಿತಮ್ । ಯಾಮಿಕಪದೇನ ತ್ರಿಯಾಮಾ ಯಾಮತ್ರಯೇಽಪ್ಯುತ್ಥಾಯ ಪುರಂ ಪಾಲಯನ್ ಪುರುಷೋಽಭಿಧೀಯತೇ । ತಸ್ಯೈವಾಪರಾಧಿನಾಂ ಶಿರಃ ಛೇದೇಽಪ್ಯಧಿಕಾರಾದ್ಧರ್ತೃತ್ವಮುಕ್ತಮ್ । ಅನೇನ ಚ ಸಂಹರ್ತುರ್ನಾಧಿಪತ್ಯಮಿತಿ ಸೂಚಿತಮ್ । ರಕ್ಷಪದೇನ ಧನಭೂವೇತನದಾನಾದಿನಾ ಸಕಲಪ್ರಜಾನಾಂ ರಕ್ಷಣಾಪರಪರ್ಯಾಯಸ್ಥಿತಿಕೃದ್ರಾಜೋಚ್ಯತೇ । ಅತೋ ಲೋಕೇ ಸ್ಥಿತಿಕರ್ತೃರೇವ ಜಗತ್ಪತಿತ್ವದರ್ಶನಾತ್ ಸ್ಥಿತಿಕರ್ತುರ್ವಿಷ್ಣೋರೇವ ಸಕಲಜಗತ್ಪತಿತ್ವಮಿತಿ ಭಾವಃ ॥೭೩೭॥

**ವಿವರಣೆ–** ಲೋಕರೀತಿಯಿಂದಲೂ ಸೃಷ್ಟಿ ಮಾಡುವವನಿಗೆ ಮತ್ತು ಸಂಹಾರ ಮಾಡುವವನಿಗೆ ಸರ್ವಾಧಿಪತ್ಯವು ಇಲ್ಲ. ಆದರೆ ರಕ್ಷಕನಿಗೇ ಸರ್ವಾಧಿಪತ್ಯವು ಇದೆ ಎಂದು ಇಲ್ಲಿ ಸ್ಪಷ್ಟಪಡಿಸುತ್ತಾರೆ.

ದಶದಿಕ್ಪತಿಭಾವೇನ ದೇವಾ ಬ್ರಹ್ಮೇಶಪೂರ್ವಕಾಃ ।
ಖಂಡಾಧಿಪತಯೋ ವಿಷ್ಣುಸ್ತದಭಾವಾಜ್ಜಗತ್ಪತಿಃ ॥ ೭೩೮ ॥

**ಅರ್ಥ–** ಬ್ರಹ್ಮೇಶಪೂರ್ವಕಾಃ= ಬ್ರಹ್ಮರುದ್ರ ಮೊದಲಾದ, ದೇವಾಃ= ದೇವತೆಗಳು, ದಶದಿಕ್ಪತಿಭಾವೇನ= ದಶದಿಕ್ಕುಗಳಲ್ಲಿ ಒಂದೊಂದು ದಿಕ್ಕಿಗೆ ಅಧಿಪತಿಗಳಾದ ಕಾರಣ, ಖಂಡಾಧಿಪತಯಃ= ಖಂಡಾಧಿಪತಿಗಳು, ತದಭಾವಾತ್= ಒಂದೊಂದು ದಿಕ್ಕಿಗೆ ಮಾತ್ರ ನಿಯಾಮಕತ್ವವು ಇಲ್ಲದಿರುವುದರಿಂದ, ವಿಷ್ಣುಃ= ವಿಷ್ಣುವು, ಜಗತ್ಪತಿಃ= ಜಗತ್ಪತಿಯಾದವನು.

**ಅನುವಾದ–** ಬ್ರಹ್ಮರುದ್ರಾದಿ ದೇವತೆಗಳು ಹತ್ತು ದಿಕ್ಕುಗಳಲ್ಲಿ ಒಂದೊಂದು ದಿಕ್ಕಿಗೆ ಮಾತ್ರ ಅಧಿಪತಿಗಳಾದ್ದರಿಂದ ಖಂಡಾಧಿಪತಿಗಳು. ವಿಷ್ಣುವಾದರೂ ಒಂದು ದಿಕ್ಕಿಗೆ ಅಧಿಪತಿಯಲ್ಲವಾದ ಕಾರಣ ಜಗತ್ಪತಿಯಾದವನು.

**ಭಾವವಿಲಾಸಿನೀ–** ಸಂಧ್ಯಾವಂದನಮಾತ್ರವೇದಿಭಿರಪಿ ಹರ್ಯನ್ಯದೇವತಾನಾಂ ಖಂಡಾಧಿಪತಿತ್ವಂ ಹರೇಶ್ಚ ಪರಿಶೇಷಾದಖಂಡಾಧಿಪತಿತ್ವಮೇವ ವಕ್ತವ್ಯಮಿತ್ಯಾಹ–**ದಶದಿಕ್ಪತಿ ಭಾವೇನೇತಿ** । ಪ್ರಾಚ್ಯಾದಿದಶದಿಶಾಂ ಪತಿತ್ವೇನೇತ್ಯರ್ಥಃ । ತದಭಾವಾತ್ ದಶದಿಕ್ಷು ಏಕದಿಶೋಽಧಿಪತಿತ್ವಾಭಾವಾತ್ । ನ ಹಿ ಸಂಧ್ಯಾವಂದನಕಾರಿಣೋಽಪಿ ಏಕಸ್ಯಾಂ ದಿಶಿ ಇಂದ್ರಾದೀನಿವ ವಿಷ್ಣುಮಪಿ ಕಸ್ಯಾಶ್ಚಿದ್ದಿಶಃ ಪತಿತ್ವೇನ ನಮಂತಿ । ತಸ್ಮಾದಿಂದ್ರಾದಿವದ್ವಿಷ್ಣೋರಪ್ಯೇಕಸ್ಯಾದಿಶಃ ಪತಿತ್ವಂ ನ ಕಲ್ಪಯಿತುಂ ಶಕ್ಯಮ್ । ಮಹಾಪುರುಷಸ್ಯ ಚ ತಸ್ಯ ಸರ್ವಾಥಾ ಆಧಿಪತ್ಯಾಭಾವೋಽಪಿ ನ ವಕ್ತುಮುಚಿತಃ । ಅತಃ ಪರಿಶೇಷಾದ್ವಿಷ್ಣುಃ ಸಕಲಜಗತಾಂ ಪತಿರಿತಿ ಭಾವಃ ॥ ೭೩೮ ॥

**ವಿವರಣೆ–** ಸಂಧ್ಯಾವಂದನೆಯನ್ನು ಮಾಡುವವರು ದಿಗುಪಸ್ಥಾನವನ್ನು ಮಾಡುತ್ತಾ ಪೂರ್ವಾದಿ ದಿಕ್ಕುಗಳಲ್ಲಿ ಇಂದ್ರಾದಿ ಒಬ್ಬೊಬ್ಬ ದೇವತೆಗಳಿಗೆ ಆ ದಿಕ್ಕಿನ ಅಧಿಪತಿ ಎಂದು ನಮಸ್ಕಾರ ಮಾಡುತ್ತಾರೆ. ಹತ್ತು ದಿಕ್ಕುಗಳಲ್ಲಿ ವಿಷ್ಣುವಿಗೆ ಮಾತ್ರ ಯಾವ ದಿಕ್ಕಿನಲ್ಲಿಯೂ ನಮಸ್ಕಾರವಿಲ್ಲ. ಮಹಾಪುರುಷನಾದ ಅವನಿಗೆ ಯಾವ ಆಧಿಪತ್ಯವೂ ಇಲ್ಲವೆಂದು ಹೇಳುವುದು ಸರಿಯಲ್ಲ. ಆದ್ದರಿಂದ ಪರಿಶೇಷದಿಂದ ವಿಷ್ಣುವಿಗೆ ಸಕಲಾಧಿಪತ್ಯವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅಖಿಲೈರ್ಲೋಕಪಾಲೈಶ್ಚಾಪ್ಯದೃಶ್ಯಃ ಸನ್ನುರುಶ್ಚ ಸನ್ ।**
**ತೇಷಾಮಂತರ್ಬಹಿಶ್ಚ ತ್ವಂ ಸದಾ ವಿಚರಸೀತಿ ವಾಕ್ ॥ ೭೩೯ ॥**

**ಅರ್ಥ–** ಅಖಿಲೈಃ ಲೋಕಪಾಲೈಶ್ಚ= ಎಲ್ಲ ಲೋಕಪಾಲಕರಿಂದಲೂ, ಅದೃಶ್ಯಃ ಸನ್= ಅದೃಶ್ಯನಾಗಿ, ಉರುಶ್ಚ ಸನ್= ಅವರಿಗಿಂತ ಶ್ರೇಷ್ಠನಾಗಿ, ತೇಷಾಂ= ಅವರ, ಅಂತರ್ಬಹಿಶ್ಚ= ಒಳಗೂ ಮತ್ತು ಹೊರಗೂ, ತ್ವಂ= ನೀನು, ಸದಾ= ಯಾವಾಗಲೂ, ವಿಚರಸಿ= ಸಂಚರಿಸುತ್ತೀಯೆ, ಇತಿ= ಎಂಬ, ವಾಕ್= ವಾಕ್ಯವು ಭಾಗವತದಲ್ಲಿದೆ.

**ಅನುವಾದ–** ಎಲ್ಲ ಲೋಕಪಾಲಕರಿಂದಲೂ ಅದೃಶ್ಯನಾಗಿ ಅವರಿಗಿಂತ ಶ್ರೇಷ್ಠನಾಗಿ ಅವರ ಒಳಗೂ ಮತ್ತು ಹೊರಗೂ ನೀನು ಸದಾ ಸಂಚರಿಸುತ್ತೀಯೆ ಎಂಬ ಭಾಗವತ ವಾಕ್ಯವಿದೆ.

**ಭಾವವಿಲಾಸಿನೀ–** ಅಂತರ್ಬಹಿಶ್ಚಾಖಿಲಲೋಕಪಾಲಕೈರದೃಷ್ಟರೂಪೋ ವಿಚಾರಸ್ಯುರುಶ್ವನಃ । ಸ ಈಶ್ವರಸ್ತ್ವಂ ಯ ಇದಂ ವಶೇನ ಯನ್ನಾತ್ಮಾ ಯಥಾ ದಾರುಮಯೀಂ ನರಃ ಸ್ತ್ರಿಯಮ್ । ಯಲ್ಲೋಕಪಾಲಾಃ ಕಿಲಮತ್ಸರಜ್ವರಾನ್ ಹಿತ್ವಾ ಯತಂತೋಽಪಿ ಪೃಥಕ್ ಸಮೇತ್ಯ ಚ । ಪಾತುಂ ನ ಶೇಕುರ್ದ್ವಿಪದಶ್ಚತುಷ್ಪದಃ ಸರೀಸೃಪಸ್ಥಾಸ್ನು ಯದತ್ರ ದೃಶ್ಯತ ಇತಿ

ಪಂಚಮಸ್ಕಂಧಸ್ಥಮನುವಚನಮರ್ಥತಃ ಸಂಗೃಹ್ಣನ್ ಇತರದೇವತಾನಾಂ ಖಂಡಾಧಿಪತ್ಯಂ ತತ್ರಾಪಿ ಹರಿಪ್ರೇರಣಾಂ ವಿನಾ ಸ್ವತಃ ಸಾಮರ್ಥ್ಯಾಭಾವಂ ಹರೇಶ್ಚ ಸರ್ವೇಷಾಮಂತರ್ಬಹಿಃಪ್ರೇರಕತಯಾ ಸರ್ವೇಶ್ವರತ್ವಂ ತೇಷಾಂ ಸರ್ವೇಷಾಂ ತದ್ವಶತ್ವಂ ಚ ನ ಕೇವಲಂ ಯುಕ್ತಿಸಿದ್ಧಂ ಕಿಂತು ಪ್ರಮಾಣಮೂಲಮಪೀತ್ಯಾಹ – **ಅಖಿಲೈರಿತಿ** ॥ ತೇಷಾಂ ಲೋಕಪಾಲಾನಾಂ ಇದಂ ಚ ನಃ ಅಸ್ಮಾಕಮ್ ಉರುರಿತಿ ಮನೋರ್ಬಹುವಚನಪ್ರಯೋಗೇಣ ಸ್ವಸಮಾನಲೋಕಪಾಲಾನಾಂ ಗ್ರಹಣಾಲ್ಲಭ್ಯತೇ ॥ ೭೩೯ ॥

**ವಿವರಣೆ–** 'ಅಂತರ್ಬಹಿಶ್ಚಾಖಿಲಲೋಕಪಾಲಕೈಃ ಅದೃಷ್ಟರೂಪಃ ವಿಚರಸ್ಯುರುಶ್ಚ ನಃ । ಸ ಈಶ್ವರಸ್ತ್ವಂ ಯ ಇದಂ ವಶೇ ನಯತ್ ಆತ್ಮಾಯಥಾ ದಾರುಮಯೀಂ ನರಃ ಸ್ತ್ರಿಯಂ ॥ ಯಲ್ಲೋಕಪಾಲಾಃ ಕಿಲ ಮತ್ಸರಜ್ವರಾಃ ಹಿತ್ವಾ ಯತಂತೋಽಪಿ ಪೃಥಕ್ ಸಮೇತ್ಯ ಚ । ಪಾತುಂ ನ ಶೇಕುರ್ಶ್ಚದ್ವಿಪದತುಷ್ಪದಃ ಸರೀಸೃಪಸ್ಥಾಸ್ನು ಯದತ್ರ ದೃಶ್ಯತೇ ॥' ಇವು ಪಂಚಮಸ್ಕಂಧದ ಮನುವಿನ ವಚನಗಳು. ಅವುಗಳು 'ಎಲ್ಲ ಲೋಕಪಾಲಕರಿಗೂ ಅದೃಶ್ಯನಾಗಿ ನಮಗಿಂತ ಶ್ರೇಷ್ಠನಾದ ನೀನು ನಮಗೆ ಪ್ರಭುವಾದವನು. ಸೂತ್ರಧಾರನು ದಾರುಮಯವಾದ ಹೆಣ್ಣಿನ ಗೊಂಬೆಯನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುವಂತೆ ಸ್ವಾಮಿಯಾದ ನೀನು ಈ ಜಗತ್ತನ್ನು ನಿನ್ನ ವಶದಲ್ಲಿ ಇಟ್ಟುಕೊಂಡಿದ್ದೀಯೆ', 'ಲೋಕ-ಪಾಲಕರೆಲ್ಲರೂ ಪರಸ್ಪರ ಮತ್ಸರಗ್ರಸ್ತರಾಗಿ ನಿನ್ನನ್ನು ಬಿಟ್ಟು ಒಟ್ಟಾಗಿ ಮತ್ತು ಬೇರೆ ಬೇರೆಯಾಗಿ ಪ್ರಯತ್ನಪಟ್ಟರೂ ಸಹ ಈ ಲೋಕದಲ್ಲಿರುವ ದ್ವಿಪದ ಚತುಷ್ಪದ ಪ್ರಾಣಿಗಳನ್ನು, ಸ್ಥಾವರ-ಜಂಗಮಾದಿಗಳನ್ನು ರಕ್ಷಣೆ ಮಾಡಲು ಸಮರ್ಥರಾಗಲಿಲ್ಲ' ಎಂದು ಆ ವಾಕ್ಯಗಳ ಅಭಿಪ್ರಾಯ. ಈ ವಾಕ್ಯಗಳಿಂದ ಇತರ ದೇವತೆಗಳಿಗೆ ಖಂಡಾಧಿಪತ್ಯವೂ ಹರಿಯ ಪ್ರೇರಣೆ ಇಲ್ಲದೆ ಸ್ವತಃ ಸಾಮರ್ಥ್ಯಾಭಾವವೂ, ಹರಿಗೆ ಸರ್ವಪ್ರೇರಕತ್ವವೂ, ಸರ್ವೇಶ್ವರತ್ವವೂ, ಸರ್ವಲೋಕ ನಿಯಾಮಕತ್ವವೂ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಯಂ ಹಿತ್ವಾ ರಾಕ್ಷಸಾವೇಶಾನ್ಮತ್ಸರಜ್ವರಸಂಯುತಾಃ ।
ಯತಮಾನಾಃ ಪೃಥಕ್ ಸರ್ವೇ ಲೋಕಪಾಲಾಃ ಸಮೇತ್ಯ ಚ ॥ ೭೪೦ ॥

ತ್ರಾತುಂ ನ ಶೇಕುರಿತಿವಾಕ್ ಚಾಸ್ತಿ ಭಾಗವತೇ ಯತಃ ।
ಅಖಂಡಾಧಿಪತಿಸ್ತಸ್ಮಾದ್ ವಿಷ್ಣುರೇವ ನ ಸಂಶಯಃ ।
ಮನೋರ್ಹಿ ವಾಗಿಯಂ ಕೈರ್ವಾ ಮಾನನೀಯಾ ನ ಮಾನವೈಃ॥ ೭೪೧ ॥

**ಅರ್ಥ–** ರಾಕ್ಷಸಾವೇಶಾತ್= ಅಸುರಾವೇಶದಿಂದ, ಯಂ= ಯಾವ ಹರಿಯನ್ನು, ಹಿತ್ವಾ= ಬಿಟ್ಟು, ಮತ್ಸರಜ್ವರಸಂಯುತಾಃ= ಪರಸ್ಪರ ಮಾತ್ಸರ್ಯ ಮತ್ತು ಸ್ಪರ್ಧಾಮನೋಭಾವ ಉಳ್ಳವರಾಗಿ, ಸರ್ವೇ ಲೋಕಪಾಲಾಃ= ಎಲ್ಲ ಲೋಕಪಾಲಕರು, ಪೃಥಕ್ ಸಮೇತ್ಯ ಚ=

ಬೇರೆ ಬೇರೆಯಾಗಿ ಮತ್ತು ಒಟ್ಟಾಗಿ, ಯತಮಾನಾಃ= ಪ್ರಯತ್ನಪಡುವವರಾದರೂ, ತ್ರಾತುಂ= ರಕ್ಷಿಸಲು, ನ ಶೇಕುಃ= ಸಮರ್ಥರಾಗಲಿಲ್ಲ, ಇತಿ= ಎಂಬ, ವಾಕ್= ವಾಕ್ಯವು, ಯತಃ= ಯಾವ ಕಾರಣದಿಂದ, ಭಾಗವತೇ= ಭಾಗವತದಲ್ಲಿ, ಅಸ್ತಿ= ಇದೆಯೋ, ತಸ್ಮಾತ್= ಆ ಕಾರಣದಿಂದ, ವಿಷ್ಣುರೇವ= ವಿಷ್ಣುವೇ, ಅಖಂಡಾಧಿಪತಿಃ= ಅಖಂಡಾಧಿಪತಿಯಾದವನು, ನ ಸಂಶಯಃ= ಈ ವಿಷಯದಲ್ಲಿ ಸಂಶಯವಿಲ್ಲ, ಮನೋಃ= ಸ್ವಾಯಂಭು ಮನುವಿನ, ಇಯಂ ವಾಕ್= ಈ ವಚನವು, ಕೈರ್ವಾ ಮಾನವೈಃ= ಯಾವ ಮಾನವರಿಂದ, ನ ಮಾನನೀಯಾ= ಮಾನ್ಯವಾಗುವುದಿಲ್ಲ?

**ಅನುವಾದ–** ಅಸುರಾವೇಶದಿಂದ ಹರಿಯನ್ನು ಬಿಟ್ಟು ಪರಸ್ಪರ ಮತ್ಸರಗ್ರಸ್ತರಾಗಿ ಯಾವ ಲೋಕಪಾಲಕರೆಲ್ಲರೂ ಪ್ರತ್ಯೇಕರಾಗಿ ಮತ್ತು ಒಟ್ಟಾಗಿ ಪ್ರಯತ್ನಪಟ್ಟರೂ ಸಹ ಲೋಕವನ್ನು ರಕ್ಷಿಸಲು ಸಮರ್ಥರಾಗಲಿಲ್ಲ ಎಂಬ ವಾಕ್ಯವು ಭಾಗವತದಲ್ಲಿ ಇರುವುದರಿಂದ ವಿಷ್ಣುವೇ ಅಖಂಡಾಧಿಪತಿಯಾದವನು, ಈ ವಿಷಯದಲ್ಲಿ ಸಂಶಯವಿಲ್ಲ. ಮನುವಿನ ಈ ಮಾತು ಯಾವ ಮಾನವರಿಂದ ಮಾನ್ಯವಾಗುವುದಿಲ್ಲ?

**ಭಾವವಿಲಾಸಿನೀ–** ಪೃಥಕ್ ಪ್ರತ್ಯೇಕಂ ಸಮೇತ್ಯ ಪುಂಜೀಭೂಯ । ಮಾನವೈಃ ಮನುಸಂಬಂಧಿತ್ವಾತ್ ಮಾನವಶಬ್ದವಾಚ್ಯೈಃ ॥ ೭೪೦, ೭೪೧ ॥

**ವಿವರಣೆ–** ಪಂಚಮಸ್ಕಂಧದ ಮನುವಚನದಿಂದಲೂ ವಿಷ್ಣುವಿಗೆ ಸರ್ವಾಧಿಪತ್ಯವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ತಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಿತಾ ಮುಕ್ತಸಂಶಯಾಃ ।**
**ಭೂಯಾಂಸಂ ಶ್ರದ್ಧಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಂ ।**
**ಇತಿ ಭಾಗವತೇ ಪ್ರೋಕ್ತಂ ಮುನೀನಾಂ ವಚನಂ ಸ್ಮರ ॥ ೭೪೨ ॥**

**ಅರ್ಥ–** ತಚ್ಛ್ರುತ್ವಾ= ಆ ಭೃಗು ಋಷಿಗಳ ಮಾತುಗಳನ್ನು ಕೇಳಿ, ಸರ್ವೇ ಮುನಯಃ= ಎಲ್ಲ ಋಷಿಗಳು, ವಿಸ್ಮಿತಾಃ= ವಿಸ್ಮಯವುಳ್ಳವರಾಗಿ, ಮುಕ್ತಸಂಶಯಾಃ= ತಮ್ಮ ಸಂಶಯವನ್ನು ಪರಿಹರಿಸಿಕೊಂಡವರಾಗಿ, ಯತಃ= ಯಾವ ವಿಷ್ಣುವಿನಿಂದ, ಶಾಂತಿಃ= ಪರಮ ಸುಖವು, ಮತ್ತು ಯತಃ= ಯಾವ ವಿಷ್ಣುವಿನಿಂದ, ಅಭಯಂ= ಸಂಸಾರ ಭಯರಾಹಿತ್ಯವು ಉಂಟಾಗುತ್ತದೆಯೋ, ಅಂತಹ, ವಿಷ್ಣುಂ= ವಿಷ್ಣುವನ್ನು, ಭೂಯಾಂಸಂ= ಸರ್ವೋತ್ತಮನೆಂದು, ಶ್ರದ್ಧಧುಃ= ಶ್ರದ್ಧಾಪೂರ್ವಕವಾಗಿ ತಿಳಿದರು, ಇತಿ= ಈ ರೀತಿಯಾಗಿ, ಭಾಗವತೇ ಪ್ರೋಕ್ತಂ= ಭಾಗವತದಲ್ಲಿ ಹೇಳಿದ, ಮುನೀನಾಂ ವಚನಂ= ಋಷಿಗಳ ವಚನವನ್ನು, ಸ್ಮರ= ಸ್ಮರಿಸು.

**ಅನುವಾದ–** ಆ ಭೃಗುಋಷಿಗಳ ಮಾತುಗಳನ್ನು ಕೇಳಿ ಎಲ್ಲ ಋಷಿಗಳು ವಿಸ್ಮಿತರೂ ಮತ್ತು ಛಿನ್ನಸಂಶಯರೂ ಆಗಿ ನಿರತಿಶಯವಾದ ಸುಖವನ್ನು ಕೊಡುವ ಹುಟ್ಟು ಭಯಪರಿಹಾರವನ್ನು ಮಾಡುವ ವಿಷ್ಣುವನ್ನೇ ಸರ್ವೋತ್ತಮನೆಂದು ತಿಳಿದರು ಎಂಬ ಭಾಗವತದಲ್ಲಿ ಹೇಳಿದ ಋಷಿಗಳ ವಚನವನ್ನು ಸ್ಮರಿಸು.

**ಭಾವವಿಲಾಸಿನೀ–** ಭಾಗವತವಾಕ್ಯಾಂತರೇಣಾಪಿ ವಿಷ್ಣೋರಖಂಡಾಧಿಪತಿತ್ವಂ ದೃಢಯತಿ ॥ **ತದ್ಗೋತ್ರೇತಿ** ॥ ೭೪೨ ॥

ತದ್ಗೋತ್ರಜಾತಃ ಪೂರ್ವೇಷಾಂ ತೇಷಾಂ ವಾಕ್ಯಂ ನ ವಿಸ್ಮರ ।
ಯದ್ಗೋತ್ರಪ್ರವರೇಶಾಸ್ತೇ ತಾನುದಾಸ್ತೇ ಕಥಂ ಭವಾನ್ ॥ ೭೪೩ ॥

**ಅರ್ಥ–** ತದ್ಗೋತ್ರಜಾತಃ= ಆ ಋಷಿಗಳ ಗೋತ್ರದಲ್ಲಿ ಹುಟ್ಟಿದ ನೀನು, ಪೂರ್ವೇಷಾಂ ತೇಷಾಂ= ನಿನ್ನ ಪೂರ್ವಜರಾದ ಅವರ, ವಾಕ್ಯಂ= ವಾಕ್ಯವನ್ನು, ನ ವಿಸ್ಮರ= ಮರೆಯಬೇಡ, ಯತ್= ಯಾವ ಕಾರಣದಿಂದ, ತೇ= ಅವರು, ಗೋತ್ರಪ್ರವರೇಶಾಃ= ನಿನ್ನ ಗೋತ್ರ ಮತ್ತು ಪ್ರವರಗಳಿಗೆ ಅಧಿಪತಿಗಳೋ ಆ ಕಾರಣದಿಂದ, ತಾಂ= ಅವರನ್ನು, ಭವಾನ್= ನೀನು, ಕಥಂ ಉದಾಸ್ತೇ= ಹೇಗೆ ಉದಾಸೀನ ಮಾಡುತ್ತೀಯೆ?

**ಅನುವಾದ–** ಆ ಋಷಿಗಳ ಗೋತ್ರದಲ್ಲಿ ಜನಿಸಿದ ನೀನು ನಿನ್ನ ಪೂರ್ವಜರಾದ ಅವರ ಮಾತನ್ನು ಮರೆಯಬೇಡ. ಅವರು ನಿನ್ನ ಗೋತ್ರ ಮತ್ತು ಪ್ರವರಗಳ ಒಡೆಯರಾದ್ದರಿಂದ ನೀನು ಅವರನ್ನು ಹೇಗೆ ಉದಾಸೀನ ಮಾಡುತ್ತೀಯೆ?

**ಭಾವವಿಲಾಸಿನೀ–** ತದ್ಗೋತ್ರಜಾತಃ ತೇಷಾಂ ಕಶ್ಯಪ ವಿಶ್ವಾಮಿತ್ರಾದಿಮುನೀನಾಂ ಗೋತ್ರೇ ಜಾತಃ । ತೇ ಮುನಯಃ ಯತ್ ಯಸ್ಮಾತ್ ಗೋತ್ರಪ್ರವರೇಶಾಃ ಗೋತ್ರಪ್ರವರಮೂಲೀ-ಭೂತಾಃ ॥ ೭೪೩ ॥

ಅಸ್ಯ ದೇವಸ್ಯೇತಿ ವೇದೇ ಯಥಾವಿಷ್ಣೋರ್ವಶೇ ಹರಃ ।
ಸ್ಪಷ್ಟಂ ಶ್ರುತಸ್ತಥಾ ವೇದೇ ನ ಕ್ವಾಪೀಶವಶೋ ಹರಿಃ ॥ ೭೪೪ ॥

**ಅರ್ಥ–** ಅಸ್ಯ ದೇವಸ್ಯೇತಿ ವೇದೇ= ಅಸ್ಯದೇವಸ್ಯ ಎಂಬ ವೇದದಲ್ಲಿ, ಯಥಾ= ಹೇಗೆ, ಹರಃ= ರುದ್ರನು, ವಿಷ್ಣೋಃ ವಶೇ= ವಿಷ್ಣುವಿನ ವಶದಲ್ಲಿ, ಸ್ಪಷ್ಟಂ= ಸ್ಪಷ್ಟವಾಗಿ, ಶ್ರುತಃ= ಹೇಳಲ್ಪಟ್ಟಿದ್ದಾನೆಯೋ, ತಥಾ= ಅದರಂತೆ, ವೇದೇ= ವೇದದಲ್ಲಿ, ಕ್ವಾಪಿ= ಎಲ್ಲಿಯೂ, ಹರಿಃ= ಹರಿಯು, ಈಶ ವಶಃ= ರುದ್ರವಶನೆಂದು, ನ ಶ್ರುತಃ= ಹೇಳಲ್ಪಟ್ಟಿಲ್ಲ.

**ಅನುವಾದ–** ಅಸ್ಯದೇವಸ್ಯ ಎಂಬ ಮಂತ್ರದಲ್ಲಿ ಹೇಗೆ ರುದ್ರನು ವಿಷ್ಣುವಿನ ವಶವೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನೆಯೋ ಹಾಗೆ ವೇದದಲ್ಲಿ ಎಲ್ಲಿಯೂ ವಿಷ್ಣುವು ರುದ್ರನ ವಶನೆಂದು ಹೇಳಲ್ಪಟ್ಟಿಲ್ಲ.

**ಭಾವವಿಲಾಸಿನೀ–** ಕಿಂಚ ಪ್ರಸಿದ್ಧಶ್ರುತೌ ಪ್ರಸಿದ್ಧವಿಷ್ಣುರುದ್ರಪದಾಭ್ಯಾಂ ವಿಷ್ಣುರುದ್ರಾವುದೀರ್ಯ ಯಥಾವಿಷ್ಣೋರ್ವಶತಾ ರುದ್ರಸ್ಯೋಚ್ಯತೇ ತಥಾ ಪ್ರಸಿದ್ಧವಿಷ್ಣುರುದ್ರಪದಾಭ್ಯಾಂ ವಿಷ್ಣುರುದ್ರಾವುದೀರ್ಯ ರುದ್ರವಶತಾ ವಿಷ್ಣೋರ್ನ ಕ್ವಾಪಿ ಕಥ್ಯತೇ । ಯದ್ಯಪಿ ಸೋಮಃ ಪವತ ಇತಿ ಶ್ರುತೌ ಸೋಮಸ್ಯ ವಿಷ್ಣುಜನಯಿತೃತ್ವಂ ಕಥ್ಯತೇ । ತಥಾಪಿ ಸೋಮಪದಸ್ಯ ಪವಮಾನಾಖ್ಯಸೋಮೇ ಚಂದ್ರೇ ಚಂದ್ರಾಭಿಮನ್ಯಮಾನ ಸೋಮಲತಾಯಾಂ ಚ ಲೋಕವೇದಯೋಃ ಪ್ರಸಿದ್ಧತ್ವೇನ ರುದ್ರೇಪ್ರಸಿದ್ಧ್ಯಭಾವೇನನಚ (ಚ ನ) ಸಾ ಪರಾಭಿಲಷಿತಾರ್ಥಸಾಧಿಕೇತ್ಯಾಹ**–ಅಸ್ಯ ದೇವಸ್ಯೇತಿ** । ಅನೇನ ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹರ್ವಿರ್ಭಿಃ । ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವದಿತಿ ಶ್ರುತಿಂ ಗೃಹ್ಣಾತಿ ॥೭೪೪॥

**ವಿವರಣೆ–** ಈಗ 'ಅಸ್ಯದೇವಸ್ಯ ಮೀಳ್ಹುಷೋ ವಯಾವಿಷ್ಣೋರೇಷಸ್ಯ ಪ್ರಭೃತೇ ಹವಿರ್ಭಿಃ । ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್' ಎಂಬ ಮಂತ್ರವನ್ನು ವಿಮರ್ಶೆ ಮಾಡಿ ರುದ್ರನಿಗೆ ವಿಷ್ಣುವಶತ್ವವನ್ನು ಸಮರ್ಥನೆ ಮಾಡುತ್ತಾರೆ. ಮಂತ್ರದ ಅರ್ಥವು ಹೀಗಿದೆ:- ಅಸ್ಯ= ಈ, ಏಷಸ್ಯ= ಇಚ್ಛಾರೂಪನಾದ, ದೇವಸ್ಯ= ಕ್ರೀಡಾವಿಶಿಷ್ಟನಾದ, ಮೀಳ್ಹುಷಃ= ಭಕ್ತಾಭೀಷ್ಟಸೇಚಕನಾದ, ವಿಷ್ಣೋಃ= ವಿಷ್ಣುವಿಗೆ, ಹವಿರ್ಭಿಃ= ಹವಿಸ್ಸಿನಿಂದ, ಪ್ರಭೃತೇ= ಪ್ರಭರಣವು (ಪೂಜೆಯು) ಮಾಡಲ್ಪಡುತ್ತಿರಲು, ವಯಾ= ಬಂಧಕನಾದ, ರುದ್ರಃ= ರುದ್ರನು, ರುದ್ರಿಯಂ ಮಹಿತ್ವಂ= ರುದ್ರ ಪದವಿಯನ್ನು, ವಿದೇ ಹಿ= ಪಡೆದನಷ್ಟೇ, ಅಶ್ವಿನೌ= ಎಲೈ ದೇವತೆಗಳೇ ನೀವೂ ಸಹ, ಇರಾವತ್ ವರ್ತಿಃ= ಅನ್ನದಿಂದ ಕೂಡಿದ ವರ್ತನೆಯನ್ನು (ಯಜ್ಞಭಾಗವನ್ನು), ಯಾಸಿಷ್ಟಂ= ಅವನ ಅನುಗ್ರಹದಿಂದಲೇ ಹೊಂದಿದ್ದೀರಿ ಎಂದಾಗುತ್ತದೆ. ಇದರ ವಿವರಗಳು ಮುಂದಿನ ಶ್ಲೋಕಗಳಲ್ಲಿ ಮೂಲದಲ್ಲಿಯೇ ಹೇಳಲ್ಪಟ್ಟಿವೆ.

**ಇಷೇರಿಚ್ಛಾರ್ಥಕಾದ್ ಧಾತೋಃ ಪಚಾದ್ಯಚಿಕೃತೇ ಸತಿ ।**
**ಗುಣೇ ಜಾತೇ ಪಾಲನೇಚ್ಛಾ ಕೃಪಾ ಯಸ್ಯ ಸ್ವಸೇವಿಷು ।**
**ತಸ್ಯೈಷಸ್ಯ ನ ಚೇದೇತಸ್ಯೇತಿ ಸ್ಯಾಚ್ಛಬ್ದವಿನ್ಮತೇ ॥ ೭೪೫ ॥**

**ಅರ್ಥ–** ಇಚ್ಛಾರ್ಥಕಾತ್= ಇಚ್ಛಾರ್ಥಕವಾದ, ಇಷೇಃ ಧಾತೋಃ= ಇಷು ಎಂಬ ಧಾತುವಿಗೆ, ಪಚಾದ್ಯಚಿಕೃತೇ ಸತಿ= ಪಚಾದ್ಯಚ್ ಪ್ರತ್ಯಯವನ್ನು ಮಾಡಿದರೆ, ಗುಣೇ ಜಾತೇ= ಧಾತುವಿನ 'ಇ'ಕಾರಕ್ಕೆ ಗುಣವು ಬಂದರೆ ಏಷಃ ಎಂಬ ರೂಪವಾಗುತ್ತದೆ, ಸ್ವಸೇವಿಷು= ತನ್ನ ಭಕ್ತರಲ್ಲಿ, ಯಸ್ಯ= ಯಾವನಿಗೆ, ಕೃಪಾ= ಕೃಪಾರೂಪವಾದ, ಪಾಲನೇಚ್ಛಾ= ಪಾಲನೇಚ್ಛೆಯು ಇದೆಯೋ, ತಸ್ಯ= ಅಂತಹ, ಏಷಸ್ಯ= ಇಚ್ಛಾರೂಪನಾದ ವಿಷ್ಣುವಿನ (ಎಂದು ಅನ್ವಯವಾಗುತ್ತದೆ), ನಚೇತ್= ಇಲ್ಲದಿದ್ದರೆ, ಶಬ್ದವಿನ್ಮತೇ= ಶಬ್ದವನ್ನು ತಿಳಿದವರ ಮತದಲ್ಲಿ, ಏತಸ್ಯ ಇತಿ= ಏತಸ್ಯ ಎಂದು, ಸ್ಯಾತ್= ಆಗಬೇಕಾಗಿದ್ದಿತು.

**ಅನುವಾದ–** ಇಷು ಇಚ್ಛಾಯಾಂ ಎಂಬ ಧಾತುವಿನ ಮೇಲೆ ಅಚ್ ಪ್ರತ್ಯಯವು ಬಂದಾಗ ಇಷ್+ಅ ಎಂದು ಇರುವಾಗ ಸಾರ್ವಧಾತುಕಾರ್ಧಧಾತುಕಯೋಃ ಎಂಬ ಸೂತ್ರದಿಂದ ಇಕಾರಕ್ಕೆ ಗುಣವು ಬಂದರೆ ಏಷಃ ಎಂಬ ಶಬ್ದವು ನಿಷ್ಪನ್ನವಾಗಿ ಇಚ್ಛೆಯುಳ್ಳವನು ಎಂಬ ಅರ್ಥವನ್ನು ಹೇಳುತ್ತದೆ. ಯೋಗ್ಯತೆ ಇರುವುದರಿಂದ ಪಾಲನೇಚ್ಛಾ ಎಂದರೆ ತನ್ನ ಸೇವೆಯನ್ನು ಮಾಡುವವರಲ್ಲಿ ಕೃಪೆಯುಳ್ಳವನು ಎಂದು ಅರ್ಥವಾಗುತ್ತದೆ. ಹಾಗಲ್ಲದೆ ಏಷಸ್ಯ ಎಂಬುದು ಏತತ್ ಪದದ ರೂಪವಾಗಿದ್ದರೆ ಏತಸ್ಯ ಎಂದೇ ರೂಪವಾಗಬೇಕಾಗಿದ್ದಿತು. (ಆದ್ದರಿಂದ ಈ ಶಬ್ದವು ನಾವು ಹೇಳಿದಂತೆಯೇ ವ್ಯುತ್ಪನ್ನವಾಗಿದೆ ಎಂದು ಅಭಿಪ್ರಾಯ).

**ಭಾವವಿಲಾಸಿನೀ–** ಶ್ರೌತಪದಾನಾಮರ್ಥಮಾಹ – ಇಷೇರೇತಿ ॥ ಇಷೇಃ ಇಷ ಇಚ್ಛಾಯಾಮಿತ್ಯತ್ರೋಕ್ತೇಷುಧಾತೋಃ ಗುಣೇ ಸಾರ್ವಧಾತುಕಾರ್ಧಧಾತುಕಯೋರಿತಿ ಸೂತ್ರಾದಿಕಾರಸ್ಯೈಕಾರಾಖ್ಯಗುಣೇ ಏಷ ಇತ್ಯಕಾರಾಂತಂ ಇಚ್ಛಾವಂತಂ ವಕ್ತಿ । ಯೋಗ್ಯತಯಾ ಚ ಪಾಲನಂ ಲಭ್ಯತೇ । ಏವಂ ಚ ಕಃ ಪಿಂಡಿತಾರ್ಥ ಇತ್ಯತ ಆಹ । ಸ್ವಸೇವಿಷು ಪಾಲನೇಚ್ಛಾ ಪಾಲನೇಚ್ಛಾರೂಪಾ ಕೃಪಾ ಯಸ್ಯೇತಿ । ಏಷಸ್ಯ ಏಷಪದವಾಚ್ಯಸ್ಯ । ನಚೇತ್ ಉಕ್ತವಿಧಯಾ ಏಷಪದವ್ಯುತ್ಪತ್ತಿರ್ನ ಚೇತ್ । ಏತಚ್ಛಬ್ದಸ್ಯೇದಂ ರೂಪಂ ಚೇದಿತಿ ಯಾವತ್ । ಏತಸ್ಯೇತಿ ಏತಚ್ಛಬ್ದಸ್ಯ ಷಷ್ಠ್ಯಾಮೇತಸ್ಯೇತಿ ಪ್ರಯೋಗಃ ಸ್ಯಾತ್ । ನ ತು ಏಷಸ್ಯೇತಿ । ಅತೋಽಯಂ ಶಬ್ದ ಉಕ್ತವಿಧಯೈವ ವ್ಯುತ್ಪನ್ನ ಇತಿ ಭಾವಃ ॥ ೭೪೫ ॥

ತಸ್ಯಾಸ್ಯ ವಿಷ್ಣೋರ್ದೇವಸ್ಯ ಭಕ್ತಾಭೀಷ್ಟಸ್ಯ ಸೇಚನಾತ್ ।
ಮೀಳ್ಹುಷೋ ಯನ್ಮಿಹಃಸೇಕೇ ಹವಿರ್ಭಿರ್ಯಜ್ಞಸಾಧನೈಃ ।
ಪ್ರಭೃಥಂ ಪ್ರಭೃತಂ ಶಸ್ತಂ ತೃತೀಯೋಽತಿಶಯೇ ಯತಃ ॥ ೭೪೬ ॥

ಅಚೋ ಹಲಶ್ಚ ಯತಸ್ತ್ವಾತ್ ತೃತೀಯೋಽಸೌ ತತಃ ಕಿಲ ।
ತತಃ ಪ್ರಭರಣೇ ಪೂಜಾತ್ಮಕೇ ಸಮ್ಯಕ್ ಕೃತೇ ಸತಿ ॥ ೭೪೭ ॥

**ಅರ್ಥ–**ತಸ್ಯ= ಅಂತಹ, ಅಸ್ಯ= ಈ, ದೇವಸ್ಯ= ಕ್ರೀಡಾದಿಗುಣವಿಶಿಷ್ಟನಾದ, ಭಕ್ತಾಭೀಷ್ಟಸ್ಯ ಸೇಚನಾತ್= ಭಕ್ತಾಭೀಷ್ಟವನ್ನು ಮಳೆಯಂತೆ ಸುರಿಸುವುದರಿಂದ, ಮೀಹ್ಳುಷಃ= ಮೀಢ್ವಾನ್ ಶಬ್ದವಾಚ್ಯವಾದ, ವಿಷ್ಣೋಃ= ವಿಷ್ಣುವಿನ, ಹವಿರ್ಭಿಃ= ಯಜ್ಞಸಾಧನೆಗಳಿಂದ (ಇದಕ್ಕೆ ಮುಂದಿನ ಶ್ಲೋಕದಿಂದ ಅನ್ವಯವಿದೆ), ಯತ್= ಯಾವ ಕಾರಣದಿಂದ, ಮಿಹಃ= ಮಿಹ ಧಾತುವಿಗೆ, ಸೇಕೇ= ಸೇಕ ಎಂಬ ಅರ್ಥವಿದೆಯೋ (ಆದ್ದರಿಂದ ಮೀಹ್ಳುಷ ಎಂಬ ಪದಕ್ಕೆ ಭಕ್ತಾಭೀಷ್ಟಸೇಚಕ ಎಂದು ಅರ್ಥವಾಗುತ್ತದೆ), ಪ್ರಭೃಥಂ= ಪ್ರಶಸ್ತವಾದ ಶಸ್ತಂ= ಶಸ್ತವಾದ ಎಂದು ಅರ್ಥ (ಥಕಾರಕ್ಕೆ ತಕಾರವು ತೃತೀಯವರ್ಣವಾಗಿ ಬಂದಿದೆ. ತ ಕಾರ ಮತ್ತು ಅದರಮೇಲಿರುವ ಅಕಾರದ ನಂತರ ಥ ಕಾರವು ಬರುವುದರಿಂದ ತ ಕಾರದಿಂದ ಥ ಕಾರವು

ತೃತೀಯವರ್ಣವಾಗುತ್ತದೆ). ಅಚಃ ಹಲಶ್ಚ ಪಶ್ಚಾತ್= ಅಚ್, ಹಲ್‌ನ ನಂತರ, ಯತ್= ಯಾವ ವರ್ಣವು ಬರುತ್ತದೋ, ಅಸೌ= ಅದು, ತತಃ= ಮೊದಲನೆಯ ವರ್ಣದಿಂದ, ತೃತೀಯಃ ಕಿಲ= ಮೂರನೆಯ ವರ್ಣವಾಗುತ್ತದೆಯಷ್ಟೆ, ತತಃ= ಅಂತಹ ಯಜ್ಞಸಾಧನೆಗಳಿಂದ, ಪ್ರಭರಣೇ= ಪೂಜಾತ್ಮಕವಾದ ಸೇವೆಯು ಚೆನ್ನಾಗಿ ಮಾಡಲ್ಪಡುತ್ತಿರಲು (ಇದಕ್ಕೂ ಮುಂದಿನ ಶ್ಲೋಕದಿಂದಲೇ ಅನ್ವಯ).

**ಅನುವಾದ–** ಅಂತಹ ಈ ಕ್ರೀಡಾದಿಗುಣವಿಶಿಷ್ಟನಾದ ಭಕ್ತಾಭೀಷ್ಟಸೇಚಕನಾದ ವಿಷ್ಣುವಿನ ಪ್ರಶಸ್ತವಾದ ಪೂಜಾತ್ಮಕವಾದ ಸೇವೆಯು ಚೆನ್ನಾಗಿ ಮಾಡಲ್ಪಡುತ್ತಿರಲು (ಮುಂದಿನ ಶ್ಲೋಕದಿಂದಲೇ ಮುಂದಿನ ಅನ್ವಯ), ಮಿಹಸೇಚನ ಎಂಬ ಧಾತುವಿರುವುದರಿಂದ ಮೀಢ್ವಷ ಎಂದರೆ ಭಕ್ತಾಭೀಷ್ಟಸೇಚಕ ಎಂದು ಅರ್ಥವಾಗುತ್ತದೆ. ಪ್ರಭೃಥ ಎಂಬ ಶಬ್ದವು ತೃತೀಯೋ ಅತಿಶಯೇ ಎಂಬ ವ್ಯಾಕರಣ ಸೂತ್ರಕ್ಕೆ ಅನುಸಾರವಾಗಿ ಪ್ರಭೃತ ಎಂದಾಗುತ್ತದೆ. ತ ಕಾರದ ಮೇಲೆ ಬರುವ ಸ್ವರದ ಅನಂತರ ಬರುವ ಥ ಕಾರವು ತಕಾರದಿಂದ ಮೂರನೆಯ ಅಕ್ಷರವಾಗುತ್ತದೆ.

**ಭಾವವಿಲಾಸಿನೀ–** ಮಿಹ ಸೇಚನ ಇತಿ ಧಾತೋಃ ಭಕ್ತಾಭೀಷ್ಟಸೇಚನಾತ್ ಮೀಳ್ಹುಷಃ ಮೀಳ್ಹುಟ್ ಪದವಾಚ್ಯಸ್ಯೇತ್ಯರ್ಥಃ । ಯತ್ ಯಸ್ಮಾತ್ ಮಿಹ ಇತಿ ಧಾತುಃ । ಹವಿರ್ಭಿರಿತಿ ಪದಸ್ಯ ಶೇಷಪೂರಣಾಯೋಕ್ತಂ ಯಜ್ಞಸಾಧನೈರಿತಿ । ಪ್ರಭೃಥ ಶಬ್ದಸ್ಯಾರ್ಥಃ ಪ್ರಭೃತಮಿತಿ । ಪ್ರಕರ್ಷೇಣ ಭೃತಂ ಭರಣಂ ಭಾವೇ ಕ್ತ ಪ್ರತ್ಯಯಃ । ಹವಿರ್ದಾನೇನ ಭಗವತಸ್ತೃಪ್ತಿಕರಣಮಿತ್ಯರ್ಥಃ। ತಕಾರಸ್ಯ ಥಕಾರಾದೇಶಃ ಕಿಂ ನಿಮಿತ್ತ ಇತ್ಯತ ಉಕ್ತಮ್ । ಶಸ್ತಃ ತೃತಿಯೋಽತಿಶಯೇ ಯತ ಇತಿ । ತೃತಿಯೋಽತಿಶಯ ಇತಿ ಸೂತ್ರಾತ್ ಏಕವರ್ಗಸ್ಥವರ್ಣೇಷು ತೃತೀಯೋ ವರ್ಣಃ ಯತಃ ಅತಿಶಯೇ ವರ್ತತೇ ಅತಃ ಪ್ರಭೃತಮಿತಿ ಸಂಬಂಧಃ ಸಮ್ಯಕ್ ಪೂರಣಮಿತಿ ಸೂಚನಾಯ ಭೃಥಮಿತ್ಯುಕ್ತಮ್। ಹವಿರ್ಭರಣಸ್ಯ ಬಾಹುಲ್ಯಾಖ್ಯಾತಿಶಯಸೂಚನಾಯ ಪ್ರಾಶಸ್ತ್ಯಸೂಚನಾಯ ಪ್ರೇತ್ಯುಪಸರ್ಗಃ । ಮಂತ್ರಭಕ್ತಿಶ್ರದ್ಧಾದ್ಯತಿಶಯಸೂಚನಾಯ ತೃತಿಯೋ ವರ್ಣ ಇತಿ ಭಾವಃ। ಅಥವಾ ಅಸ್ಯ ಪೂಜಾತ್ಮಕಭರಣತ್ವೇನ ಪ್ರಾಕೃತೈರುದರಪೂರಣಾಯ ಕ್ರಿಯಮಾಣ-ಹವಿರ್ಭರಣಾದತಿಶಯ ಸೂಚನಾಯ ಪ್ರೇತ್ಯುಪಸರ್ಗಃ । ತಸ್ಯ ಬಾಹುಲ್ಯಾಖ್ಯಾತಿಶಯ-ಸೂಚನಾಯ ತೃತಿಯೋ ವರ್ಣಃ । ಏತದೇವಾಭಿಪ್ರೇತ್ಯ ಪೂಜಾತ್ಮಕೇ ಸಮ್ಯಗಿತಿ ಚ ವಕ್ಷ್ಯತಿ । ನನು ಥಕಾರಸ್ಯ ತಕಾರಾಪೇಕ್ಷಯಾ ದ್ವಿತೀಯತ್ವಾತ್ ಕಥಂ ತೃತೀಯತ್ವಮಿತ್ಯುತ ಉಕ್ತಮ್ ॥ ಅಚ ಇತಿ ॥ ಹಲಃ ಹಲ್ ಪ್ರತ್ಯಾಹಾರಪಠಿತಾತ್ ತ್ ಇತಿ ವರ್ಣಾತ್ । ಅಚಃ ತದುಪರಿ ವಿದ್ಯಮಾನಾಕಾರಾತ್ । ಹಲಃ ಅಚಶ್ಚ ಸಾಮಾಹಾರೇ ಹಿ ಕಾದಯೋ ವರ್ಣಾ ಭವಂತಿ । ಅತಃ ತ್ ವರ್ಣಾದಕಾರಾಚ್ಚ ಪರತೋ ವಿದ್ಯಮಾನ ಯಕಾರಃ ಆಪಾತತೋ ದ್ವಿತೀಯೋಽಪಿ ವಿಚಾರ್ಯಮಾಣೇ ತೃತೀಯ ಇತಿ ಭಾವಃ । ಅಸೌ ಥಕಾರಃ ॥ ೭೪೬, ೭೪೭ ॥

ವಯಾ ಭೂತ್ಯಾದಿದಾನೇನ ಬಂಧಕೋ ವಯ ಬಂಧನೇ ।
ಇತಿ ಧಾತೋರ್ಹಿ ಪ್ರಸಿದ್ಧೋ ರುದ್ರಸ್ತ್ರಿಭುವನೇಶ್ವರಃ ॥ ೭೪೮ ॥

**ರುದ್ರಿಯಂ ರುದ್ರಸಂಬಂಧಿ ಮಹಿತ್ವಂ ಮಹಿಮೋಚ್ಚಯಮ್ ।**
**ದ್ರಸ್ಯೇಯಾದೇಶಕರಣೇ ಸಮುದ್ರಿಯಪದಂ ಯಥಾ ।**
**ತಥಾ ಬಾಹುಲಕಾತ್ ತಸ್ಮಾದ್ ರೌದ್ರಮೇವ ಹಿ ರುದ್ರಿಯಮ್ ॥ ೭೪೯ ॥**

**ಅರ್ಥ–** ವಯಾ= ಐಶ್ವರ್ಯಾದಿ ದಾನದಿಂದ ಬಂಧಕನಾದಂತಹ ಎಂದು ಅರ್ಥ, ವಯಬಂಧನೇ ಇತಿ ಧಾತೋಃ= ವಯಬಂಧನೇ ಎಂಬ ಧಾತುವಿನಿಂದ ವಯಾ ಎಂಬ ರೂಪವು ನಿಷ್ಪನ್ನವಾಗುತ್ತದೆ, ಹಿ= ಪ್ರಸಿದ್ಧನಾದ ತ್ರಿಭುವನೇಶ್ವರನಾದ ರುದ್ರನು, ರುದ್ರಿಯಂ= ರುದ್ರಸಂಬಂಧಿಯಾದ, ಮಹಿತ್ವಂ= ಮಹಿಮಾತಿಶಯವನ್ನು (ಎಂದು ಅರ್ಥ), ದ್ರಸ್ಯ= ರುದ್ರ ಎಂಬಲ್ಲಿರುವ ಅಕಾರಕ್ಕೆ, ಇಯಾದೇಶಕರಣೇ= ಇಯಾದೇಶವನ್ನು ಮಾಡಿದರೆ, ಸಮುದ್ರಿಯಪದಂ= ಸಮುದ್ರಿಯ ಎಂಬ ಪದವು, ಯಥಾ= ಹೇಗೆ ಆಗುತ್ತದೆಯೋ (ಹಾಗೆಯೇ ರುದ್ರಿಯ ಎಂಬ ಪದವು ನಿಷ್ಪನ್ನವಾಗುತ್ತದೆ) ಅಥವಾ, ತಥಾ= ಹಾಗೆಯೇ, ಬಾಹುಲಕಾತ್= ಬಾಹುಲಕ ನ್ಯಾಯದಿಂದ, ರೌದ್ರಮೇವ= ರುದ್ರಸಂಬಂಧಿಯಾದುದೇ, ರುದ್ರಿಯಂ= ರುದ್ರಿಯ ಎಂದು ಕರೆಯಲ್ಪಡುತ್ತದೆ.

**ಅನುವಾದ–** ವಯಾ ಎಂದರೆ ಐಶ್ವರ್ಯಾದಿ ದಾನದಿಂದ ಬಂಧಕನಾದಂತಹ ಎಂದು ಅರ್ಥ. ವಯಬಂಧನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಈ ಅರ್ಥವನ್ನು ಕೊಡುತ್ತದೆ. ಹಿ ಎಂದರೆ ಪ್ರಸಿದ್ಧನಾದ ತ್ರಿಭುವನೇಶ್ವರನಾದ ರುದ್ರ ಎಂದು ಅರ್ಥ. ರುದ್ರಿಯಂ ಎಂದರೆ ರುದ್ರಸಂಬಂಧಿಯಾದ ಎಂದು ಅರ್ಥ. ಮಹಿತ್ವಂ ಎಂದರೆ ಮಹಿಮಾತಿಶಯವನ್ನು ಎಂದು ಅರ್ಥ. ರುದ್ರ ಎಂಬಲ್ಲಿರುವ ದ್ರ ಎಂಬಲ್ಲಿ ದಕಾರದಲ್ಲಿರುವ ಅಕಾರಕ್ಕೆ ಇಯಾದೇಶವನ್ನು ಮಾಡಿದರೆ ಸಮುದ್ರಿಯ ಎಂಬ ಪದದಂತೆ ರುದ್ರಿಯ ಎಂಬ ಪದವೂ ನಿಷ್ಪನ್ನವಾಗುತ್ತದೆ. ಹಾಗೆಯೇ, ರುದ್ರಸ್ಯ ಇದಂ ರೌದ್ರಂ ಎಂಬ ಅರ್ಥದಲ್ಲಿ ಬಾಹುಲಕ ಗ್ರಹಣದಿಂದ ತದ್ಧಿತ ಪ್ರತ್ಯಯವನ್ನು ಮಾಡಿದರೂ ರುದ್ರಿಯಂ ಎಂದು ರೂಪವಾಗುತ್ತದೆ. (ಇದಕ್ಕೂ ಮುಂದಿನ ಶ್ಲೋಕದಿಂದಲೇ ಅನ್ವಯ).

**ಭಾವವಿಲಾಸಿನೀ–** ವಯಃ ಶಬ್ದಾರ್ಥಕಥನಾಯೋಕ್ತಮ್ । ಭೂತ್ಯಾದಿದಾನೇನ ಬಂಧಕ ಇತಿ ॥ ವಯಬಂಧನ ಇತಿ ಧಾತೋಃ ವಯಾಃ ಬಂಧಕ ಇತ್ಯೇವಶಬ್ದಾರ್ಥಃ । ತಚ್ಚ ಬಂಧಕತ್ವಂ ಲೌಕಿಕೈಶ್ವರ್ಯಾದಿದಾನೇನ ರುದ್ರಸ್ಯೈವೋಚಿತಮಿತಿ ಭಾವೇನೋಕ್ತಂ ಭೂತ್ಯಾದಿದಾನೇನೇತಿ । ಇದಂ ಚ ರುದ್ರೇ ಪ್ರಸಿದ್ಧಮಿತಿ ಸೂಚಯಿತುಂ ಶ್ರುತೌ ಹಿಶಬ್ದ ಇತಿ ಭಾವೇನೋಕ್ತಮ್ । ಹಿ ಪ್ರಸಿದ್ಧೋ ರುದಸ್ತ್ರಿಭುವನೇಶ್ವರ ಇತಿ ॥ ೭೪೮ ॥

ರುದ್ರಿಯಪದಸ್ಯ ರುದ್ರಸಂಬಂಧಿತ್ವಾರ್ಥಕತ್ವೇ ರೌದ್ರಮಿತಿ ಸ್ಯಾತ್ । ರುದ್ರಿಯಮಿತಿ ತು ಕಥಮಿತ್ಯತೋ ದೃಷ್ಟಾಂತೇನ ತದುಪಪಾದಯತಿ ॥ **ಘಸ್ಯೇತಿ** ॥ ಘಸ್ಯ ಘಪ್ರತ್ಯಯಸ್ಯ

ಸಮುದ್ರಾಭ್ರಾದ್ಘಃ ಇತಿ ಸೂತ್ರಾತ್ ಸಮುದ್ರಪದಾತ್ ಘ ಪ್ರತ್ಯಯೇ ಕೃತೇ ತಸ್ಯ ಚ ಇಯಾದೇಶೇಕೃತೇ ಸಮುದ್ರ ಸಂಬಂಧೀತ್ಯರ್ಥೇ ಸಮುದ್ರಿಯಪದಂ ಯಥಾ ಭವತಿ ತಥಾ ತಸ್ಯ ಪ್ರತ್ಯಯಸ್ಯ ಛಂದಸಿ ಬಹುಲಮಿತ್ಯಾದಿನಾ ಬಾಹುಲಕತ್ವಾತ್ ರುದ್ರಿಯಮಿತ್ಯಪಿ ಪದಂ ಭವತೀತಿ ಭಾವಃ ॥ ೭೪೯ ॥

ವಿದೇ ಲೇಭೇ ತದ್ವದೇವ ಪೂರ್ವಾಭ್ಯಾಸಮುಪೈಕ್ಷತ ।
ಪೂರ್ವಾನಭ್ಯಸ್ತಪದವೀಪ್ರಾಪ್ತಿಂ ಸೂಚಯಿತುಂ ಶ್ರುತಿಃ ॥ ೭೫೦ ॥

ಅನಾವೃತ್ತಿಪದಪ್ರಾಪ್ತಿಸೂಚನಾಯ ಚ ಸೂತ್ರವತ್ ।
ಅಸ್ಮಿನ್ನರ್ಥೇ ಪ್ರಮಾಣಾನಾಂ ಪ್ರಸಿದ್ಧಿಂ ಚ ಹಿನಾ ಜಗೌ ॥ ೭೫೧ ॥

**ಅರ್ಥ–** ವಿದೇ= ವಿದೇ ಎಂದರೆ, ಲೇಭೇ= ಪಡೆದನು ಎಂದು ಅರ್ಥ, ತದ್ವದೇವ= ಲೇಭೇ ಎಂಬ ಪದದಲ್ಲಿ ಹೇಗೆ ಲಿಟ್ ರೂಪದಲ್ಲಿ ಅಭ್ಯಾಸವು ಇಲ್ಲವೋ ಅದರಂತೆ ಪೂರ್ವಾಭ್ಯಾಸಂ= ವಿವಿದೇ ಎಂಬಲ್ಲಿ ಇರಬೇಕಾದ ಮೊದಲನೆಯ ವಿವರ್ಣವನ್ನು, ಉಪೈಕ್ಷತ= ಶ್ರುತಿಯು ಕಡೆಗಣಿಸಿದೆ ಇದರಿಂದ, ಶ್ರುತಿಃ= ಶ್ರುತಿಯು, ಪೂರ್ವಾನಭ್ಯಸ್ತ ಪದವೀಪ್ರಾಪ್ತಿಂ= ಮೊದಲು ಪಡೆಯದಿದ್ದ ರುದ್ರಪದವಿಯ ಪ್ರಾಪ್ತಿಯನ್ನು ಸೂಚಯಿತುಂ= ಸೂಚಿಸುವುದಕ್ಕೋಸ್ಕರ (ಹೀಗೆ ಮಾಡಿದೆ), ಅನಾವೃತ್ತಿಪದಪ್ರಾಪ್ತಿ ಸೂಚನಾಯ= ಅನಾವೃತ್ತಿಯುಳ್ಳ ಮೋಕ್ಷಪದವನ್ನು ಸೂಚನೆ ಮಾಡುವುದಕ್ಕೋಸ್ಕರ, ಸೂತ್ರವತ್= ಬಹ್ವರ್ಥವಾದ ಬ್ರಹ್ಮಸೂತ್ರಗಳಂತೆ (ಶ್ರುತಿಯು ಹೀಗೆ ಮಾಡಿದೆ), ಅಸ್ಮಿನ್ನರ್ಥೇ= ಈ ಅರ್ಥದಲ್ಲಿ, ಪ್ರಮಾಣಾನಾಂ ಪ್ರಸಿದ್ಧಿಂ= ಪ್ರಮಾಣಗಳ ಪ್ರಸಿದ್ಧಿಯನ್ನು, ಹಿನಾ= ಹಿ ಶಬ್ದದಿಂದ, ಜಗೌ= ಶ್ರುತಿಯು ಹೇಳಿದೆ.

**ಅನುವಾದ–** ವಿದೇ ಎಂದರೆ ಲೇಭೇ ಪಡೆದನು ಎಂದು ಅರ್ಥ. ಲೇಭೇ ಎಂಬ ಪದದಲ್ಲಿ ಲಿಟ್ ರೂಪದಲ್ಲಿ ಹೇಗೆ ಪೂರ್ವಾಭ್ಯಾಸವಿಲ್ಲವೋ ಅದರಂತೆ ವಿದೇ ಎಂಬಲ್ಲಿಯೂ ಪೂರ್ವಾಭ್ಯಾಸವಿಲ್ಲ. ಪೂರ್ವಾಭ್ಯಾಸವಿದ್ದಿದ್ದರೆ ವಿವಿದೇ ಎಂದು ರೂಪವಾಗಬೇಕಾಗಿದ್ದಿತು. ಮೊದಲು ಪರಿಚಯವಿರದಿದ್ದ ರುದ್ರಪದವಿಯ ಪ್ರಾಪ್ತಿಯನ್ನು ಸೂಚಿಸುವುದಕ್ಕಾಗಿ ಶ್ರುತಿಯು ಪೂರ್ವಾಭ್ಯಾಸವನ್ನು ತಿರಸ್ಕರಿಸಿದೆ. ಅನಭ್ಯಸ್ತ ಪ್ರಾಪ್ತ್ಯರ್ಥವನ್ನು ತಿಳಿಸುವುದು ಇಷ್ಟೇ ಉದ್ದೇಶವಲ್ಲ. ರುದ್ರಪದವಿಯನ್ನು ಮಾಡಿದ ಸೇವೆಗೆ ಫಲವಾಗಿ ದೊರಕುವ ಮೋಕ್ಷವು ಅನಾವೃತ್ತಿರೂಪವಾದುದು ಎಂದು ಸೂಚಿಸಲೂ ಶ್ರುತಿಯು ವಿವಿದೇ ಎಂಬಲ್ಲಿ ವಿಕಾರದ ಆವೃತ್ತಿಯನ್ನು ಮಾಡಿಲ್ಲ. ಹೀಗೆ ಬ್ರಹ್ಮಸೂತ್ರಗಳಿಗೆ ಅನೇಕ ಅರ್ಥಗಳು ಇರುವಂತೆ ಶ್ರುತಿಗೂ ಕೂಡ ಅನೇಕ ಅಭಿಪ್ರಾಯಗಳಿವೆ. ವಿದೇ ಹಿ ಎಂಬಲ್ಲಿರುವ ಹಿ ಶಬ್ದದಿಂದ ಈ ವಿಷಯದಲ್ಲಿ ಶ್ರುತಿಯು ಪ್ರಮಾಣಗಳ ಪ್ರಸಿದ್ಧಿಯನ್ನು ಹೇಳುತ್ತಿದೆ.

**ಭಾವವಿಲಾಸಿನೀ–** ಏದ ಇತ್ಯಸ್ಯಾರ್ಥಕಥನಂ ಲೇಭ ಇತಿ । ಏದ್‌ಲೃ ಲಾಭ ಇತಿ ಧಾತೋರಿತಿ ಭಾವಃ । ತರ್ಹಿ ಲಿಟಿ ಪೂರ್ವಾಭ್ಯಾಸಸ್ಯ ವಿಹಿತತ್ವಾದ್ವಿವಿದ ಇತಿ ಪ್ರಯೋಗಃ ಸ್ಯಾದಿತ್ಯತ ಆಹ – **ತದ್ವಿದಿತಿ** ॥ ಲೇಭ ಇತಿ ಪ್ರಯೋಗವದಿತ್ಯರ್ಥಃ। ಯಥಾ ಲಿಡಂತತ್ವೇಽಪಿ ಲೇಭ ಇತಿ ಪ್ರಯೋಗೇ ಪೂರ್ವಾಭ್ಯಾಸೋ ನಾಸ್ತಿ ತಥಾ ಛಂದಸಿ ಬಹುಲಮಿತಿ ವಚನಾದತ್ರಾಪಿ ನಾಸ್ತೀತಿ ಭಾವಃ । ಪ್ರಯೋಜನವಶಾಚ್ಚ ಶ್ರುತಿಃ ಪೂರ್ವಾಭ್ಯಾಸಮುಪೈಕ್ಷತೇತ್ಯಾಹ – **ಪೂರ್ವಾನಭ್ಯಸ್ತೇತಿ** ॥ ಭಗವತ್ ಪೂಜನೇನ ಪ್ರಾಪ್ತರುದ್ರಪದವ್ಯಾಃ ಅನೇನ ರುದ್ರೇಣ ಪೂರ್ವಮನನುಭೂತತ್ವಸೂಚನಾಯ ಪ್ರಯೋಗೇಽಪಿ ಪೂರ್ವಾಭ್ಯಾಸೋಪೇಕ್ಷೇತಿ ಭಾವಃ । ಪ್ರಯೋಜನಾಂತರಮಪ್ಯಾಹ – **ಅನಾವೃತ್ತೀತಿ** ॥ ಅನಾವೃತ್ತಿಪದಂ ಪುನರಾವೃತ್ತಿರಹಿತಮೋಕ್ಷಪದಮ್ । ತಸ್ಯ ಪ್ರಾಪ್ತಿಸೂಚನಾಯ ನ ಕೇವಲಮಿದಂ ಭಗವತ್‌ಪೂಜನಮೈಹಿಕ ಫಲಮಾತ್ರಪದಮ್ । ಕಿಂತು ಪುನರಾವೃತ್ತಿ-ಶೂನ್ಯಮೋಕ್ಷಾಖ್ಯಫಲದಮಪಿ ಭವತೀತಿ ಸೂಚನಾಯ ಪದೇಽಪಿ ಪೂರ್ವವರ್ಣಾವೃತ್ತಿರೂಪ ಪೂರ್ವಾಭ್ಯಾಸೋಪೇಕ್ಷಣಮಿತಿ ಭಾವಃ । ಸೂತ್ರವತ್ ಬಹ್ವರ್ಥಸೂಚಕ ಸೂತ್ರವತ್ । ಹಿ ಶಬ್ದಸ್ಯ ಪ್ರಯೋಜನಾಂತರಮಪ್ಯಾಹ – **ಅಸ್ಮಿನ್ನಿತಿ** ॥ ಹಿನಾ ಹಿ ಶಬ್ದೇನ ॥ ೭೫೦, ೭೫೧ ॥

**ವಿವರಣೆ–** ಕೃಪಾಶೀಲನಾದ ವಿಷ್ಣುವಿನ ಪ್ರಕೃಷ್ಟವಾದ ಪೂಜೆಯು ಯಜ್ಞಸಾಧನಗಳಿಂದ ಪ್ರಶಸ್ತವಾಗಿ ನಡೆಯುತ್ತಿರಲು ಬಂಧಕನಾದ ರುದ್ರನು ರುದ್ರಪದವಿಯನ್ನು ಹೊಂದಿದನು ಎಂಬುದು ಈ ಆರು ಶ್ಲೋಕಗಳ ಸರಳವಾದ ಅನ್ವಯ.

ಯುವಾಮಪ್ಯಶ್ವಿನೌ ವರ್ತಿರ್ವರ್ತನಂ ಯಾಜ್ಞಿಕಾನ್ನವತ್ ।
ಇರಾವದ್ ಬ್ರಾಹ್ಮಣೇ ಯಸ್ಮಾದಿಲೇತ್ಯನ್ನಮುದೀರಿತಮ್ ।
ಡಲಯೋ ರಲಯೋಶ್ಚಾಭೇದೇನ ಸ್ಯಾದೀದೃಶಂ ಪದಮ್ ॥ ೭೫೨ ॥

ಯಾಸಿಷ್ಟಂ ತಸ್ಯ ಕೃಪಯೈವಾಯಾಸಿಷ್ಟಂ ಲುಙೀದೃಶಮ್ ।
ಅಮಾಙ್‌ಯೋಗೇಪಿ ಯದ್ ವೇದೇ ಪದಂ ಶಾಸ್ತಿ ಸ ಪಾಣಿನಿಃ॥ ೭೫೩ ॥

**ಅರ್ಥ–** ಅಶ್ವಿನೌ= ಎಲೈ ಅಶ್ವಿನಿಗಳೇ, ಯುವಾಮಪಿ= ನೀವೂ ಸಹ, ಇರಾವತ್= ಯಾಜ್ಞಿಕಾನ್ನವನ್ನು ಉಳ್ಳ, ವರ್ತನಂ ವರ್ತಿಂ= ವೃತ್ತಿಯನ್ನು (ವಿಷ್ಣುವಿನ ಪೂಜೆಯಿಂದಲೇ ಪಡೆದಿದ್ದೀರಿ), ಯತ್= ಏಕೆಂದರೆ, ಬ್ರಾಹ್ಮಣೇ= ಬ್ರಾಹ್ಮಣದಲ್ಲಿ, ಇಲಾ ಇತಿ= ಇಲಾ ಎಂಬ ಶಬ್ದದಿಂದ, ಅನ್ನಂ= ಅನ್ನವು, ಉದೀರಿತಂ= ಹೇಳಲ್ಪಟ್ಟಿದೆ, ಡಲಯೋಃ= ಡಕಾರ ಮತ್ತು ಲ ಕಾರಗಳಿಗೆ, ರಲಯೋಃ= ರೇಫ ಮತ್ತು ಲಕಾರಗಳಿಗೆ, ಅಭೇದೇನ= ಅಭೇದವಿರುವುದರಿಂದ, ಈದೃಶಂ ಪದಂ= ಇಂತಹ ಪದವು (ನಿಷ್ಪನ್ನವಾಗುತ್ತದೆ). ಯಾಸಿಷ್ಟಂ= ಅವನ ಕೃಪೆಯಿಂದ ಪಡೆದಿದ್ದೀರಿ, ಲುಙಿ= ಲುಙ್ ಲಕಾರದಲ್ಲಿ, ಈದೃಶಂ= ಇಂತಹ ರೂಪವು ಆಗುತ್ತದೆ, ವೇದೇ= ವೇದದಲ್ಲಿ, ಪಾಣಿನಿಃ= ಪಾಣಿನಿಯು, ಅಮಾಙ್ ಯೋಗೇಪಿ= ಮಾಙ್ ಯೋಗವು ಇಲ್ಲದಿದ್ದರೂ, ಪದಂ= ಲುಙ್ ಲಕಾರವನ್ನು, ಶಾಸ್ತಿ= ಅನುಶಾಸನ ಮಾಡುತ್ತಾನೆ.

**ಅನುವಾದ–** ಎಲೈ ಅಶ್ವಿನಿದೇವತೆಗಳೇ ನೀವಿಬ್ಬರೂ ಸಹ ಇರಾವತ್ ಎಂದರೆ ಯಾಜ್ಞಿಕಾನ್ನವನ್ನು ಉಳ್ಳ ವರ್ತನಂ ಎಂದರೆ ವೃತ್ತಿಯನ್ನು (ಇದಕ್ಕೆ ಮುಂದಿನ ಶ್ಲೋಕದಿಂದ ಅನ್ವಯ). ಬ್ರಾಹ್ಮಣಗಳಲ್ಲಿ ಇಲಾ ಎಂದರೆ ಅನ್ನ ಎಂದು ಹೇಳಿದೆ. ಡಕಾರ ಲಕಾರಗಳಿಗೆ ಹಾಗೂ ರೇಫಲಕಾರಗಳಿಗೆ ಅಭೇದವಿರುವುದರಿಂದ ಇಲಾ ಎಂಬ ಪದವೇ ಇರಾ ಎಂದಾಗುತ್ತದೆ. ಇಲಾವತ್ ಎಂಬ ಪದವು ಇರಾವತ್ ಎಂದಾಗುತ್ತದೆ. (ಅಂತಹ ಯಾಜ್ಞಿಕಾನ್ನವನ್ನು ಉಳ್ಳ ವರ್ತನೆಯನ್ನು) ತಸ್ಯ ಕೃಪಯೈವ ವಿಷ್ಣುವಿನ ಕೃಪೆಯಿಂದಲೇ ಯಾಸಿಷ್ಟಂ ಎಂದರೆ ಅಯಾಸಿಷ್ಟಂ ಎಂದರೆ ಪಡೆದಿದ್ದೀರಿ ಎಂದು ಅರ್ಥ. ಯಾ ಪ್ರಾಪಣೇ ಧಾತುವಿನ ಲುಙ್ ಲಕಾರದಲ್ಲಿ ಇಂತಹ ರೂಪವಾಗುತ್ತದೆ. ಮಾಙ್ ಯೋಗವಿಲ್ಲದಿದ್ದರೂ ಪಾಣಿನಿಯು ಲುಙ್ ಲಕಾರವನ್ನು ವೇದದಲ್ಲಿ ಅನುಶಾಸನ ಮಾಡುವುದರಿಂದ ಇದು ಲುಙ್ ರೂಪವಾಗುತ್ತದೆ.

**ಭಾವವಿಲಾಸಿನೀ–** ಶ್ರುತೌ ಯಾಸಿಷ್ಟಮಿತಿ ಮಧ್ಯಮಪುರುಷದ್ವಿವಚನ ಪ್ರಯೋಗ-ಬಲಾದ್ಯುವಾಮಿತ್ಯುಕ್ತಮ್ । ವರ್ತಿರಿತ್ಯಸ್ಯಾರ್ಥಕಥನಂ ವರ್ತನಮಿತಿ । ಇರಾವದಿತ್ಯಸ್ಯಾರ್ಥ-ಕಥನಂ ಯಾಜ್ಞಿಕಾನ್ನವದಿತಿ । ಯಜ್ಞೇ ಅಶ್ವಿಭ್ಯಾಂ ಸ್ವಾಹೇತಿ ದೀಯಮಾನಾನ್ನಾಹುತಿ-ಯುಕ್ತಮಿತ್ಯರ್ಥಃ। ಅನ್ನಂ ವಾ । ಬ್ರಾಹ್ಮಣೇ ಇಳೇನ್ನಮೇವಾಸ್ಯೇತಿ ಋಗ್ವೇದಬ್ರಾಹ್ಮಣೇ । ಯದ್ಯಪಿ ಇಳೇತಿ ಪದಮನ್ನಮಾತ್ರವಾಚಿ । ತಥಾಪಿ ಅಶ್ವಿನೋರ್ಯಜ್ಞಾಹುತಾವಧಿಕಾರಾತ್ ತದ್ರೂಪಮೇವಾನ್ನಂ ಯೋಗ್ಯತಯಾ ಲಭ್ಯತ ಇತಿ ಭಾವೇನೋಕ್ತಂ ಯಾಜ್ಞಿಕಾನ್ನವದಿತಿ । ತರ್ಹಿ ಇಳಾವದಿತ್ಯೇವ ವಕ್ತವ್ಯಂ ಇರಾವದಿತಿ ಕಥಮಿತ್ಯತ ಆಹ – ಡಲಯೋರಿತಿ ॥ ಡಲಯೋಃ ಡಕಾರಲಕಾರಯೋಃ । ರಲಯೋಃ ರೇಫಲಕಾರಯೋಃ ॥ ೭೫೨ ॥

ಯಾಸಿಷ್ಟಮಿತ್ಯಸ್ಯಾರ್ಥಃ ತಸ್ಯ ವಿಷ್ಣೋಃ ಕೃಪಯೈವಾಯಾಸಿಷ್ಟಮಿತಿ । ಅಯಾಸಿಷ್ಟಂ ಯುವಾಮಪಿ ವಿಷ್ಣೋಃ ಕೃಪಯೈವ ಇರಾವದ್ವರ್ತನಂ ಪ್ರಾಪ್ತಾವಭೂತಮಿತ್ಯರ್ಥಃ । ತರ್ಹ್ಯಯಾಸಿಷ್ಟಮಿತ್ಯೇವ ವಕ್ತವ್ಯಮ್ । ಅಡಾಗಮಾಭಾವೇ ಕಿಂ ಕಾರಣಮಿತ್ಯತ ಆಹ – ಲುಙೀತಿ ॥ ಈದೃಶಂ ಅಡಾಗಮ-ರಹಿತಮ್ । ಅಮಾಙ್ಯೋಗೇ ಮಾಙ್ಯೋಗಾಭಾವೇ । ಯತ್ಯಸ್ಮಾತ್ ॥ ೭೫೩ ॥

ಔಣಾದಿಕೇಽಸಂತರೂಪಾದ್ ವೃತೇರ್ವರ್ತಿರ್ಭವಿಷ್ಯತಿ ।
ಯಥಾಽರ್ಚಿಃ ಸರ್ಪಿರಿತ್ಯಾದಿ ಪದಂ ತದ್ವದಿದಂ ಪದಮ್ ॥ ೭೫೪ ॥

**ಅರ್ಥ–** ಔಣಾದಿಕೇ= ಔಣಾದಿಕ ಪ್ರಕರಣದಲ್ಲಿ ಸೇರಿದ, ಅಸಂತರೂಪಾತ್= ಅಸ್ ಪ್ರತ್ಯಯಾಂತವಾದ (ಅಸುನ್ ಪ್ರತ್ಯಯಾಂತರೂಪದಿಂದ) ವೃತೇಃ= ವೃತು ವರ್ತನೇ ಎಂಬ ಧಾತುವಿನಿಂದ, ವರ್ತಿಃ= ವರ್ತಿಸ್ ಎಂಬ ಸಕಾರಾಂತ ರೂಪವು, ಭವಿಷ್ಯತಿ= ಆಗುತ್ತದೆ, ಯಥಾ= ಹೇಗೆ, ಅರ್ಚಿಃ= ಅರ್ಚಿಸ್, ಸರ್ಪಿಃ= ಸರ್ಪಿಸ್, ಇತ್ಯಾದಿ ಪದಂ= ಮೊದಲಾದ

ಪದಗಳು ಆಗುತ್ತವೆಯೋ, ತದ್ವತ್= ಅದರಂತೆಯೇ, ಇದಂ= ಈ ಪದವು (ವರ್ತಿಸ್ ಎಂಬ ಪದವು) ಆಗುತ್ತದೆ.

**ಅನುವಾದ–** ವೃತುವರ್ತನೇ ಎಂಬ ಧಾತುವಿನ ಮೇಲೆ ಔಣಾದಿಕವಾದ ಅಸುನ್ ಪ್ರತ್ಯಯವು ಬಂದರೆ ವರ್ತನ ಎಂಬ ಅರ್ಥದಲ್ಲಿ ವರ್ತಿಸ್ ಎಂದು ರೂಪವಾಗುತ್ತದೆ. ಅರ್ಚಿಸ್ ಮತ್ತು ಸರ್ಪಿಸ್ ಎಂಬ ರೂಪಗಳಾದಂತೆಯೇ ಈ ವರ್ತಿಸ್ ಎಂಬ ರೂಪವೂ ಆಗುತ್ತದೆ.

**ಭಾವವಿಲಾಸಿನೀ–** ವರ್ತಿರಿತಿ ದ್ವಿತೀಯಾಂತಂ ಪದಂ ಕಥಂ ಸ್ಯಾದಿತ್ಯ ಆಹ – **ಔಣಾದಿಕೇತಿ** ॥ ಔಣಾದಿಕೇ ಸಂತರೂಪಾತ್ ಔಣಾದಿಕೋ ಯ ಸುನ್‌ಪ್ರತ್ಯಯಃ ತದಂತರೂಪಾದ್ವೃತೇಃ ವೃತುವರ್ತನ ಇತಿ ಧಾತೋರೌಣಾದಿಕೇ ಸುನ್ ಪ್ರತ್ಯಯೇ ತಕಾರಸ್ಯ ದ್ವಿತ್ವೇ ಋಕಾರಸ್ಯ ಗುಣೇ ಚ ಕೃತೇ ವರ್ತ್ತಿರಿತಿ ಸಾಕಾರಾಂತಂ ಪದಂ ಸಿಧ್ಯತೀತ್ಯರ್ಥಃ । ನೇದಮಪೂರ್ವಮಿತ್ಯಾಹ – **ಯಥೇತಿ** ॥ ಯಥಾ ರುಚಕಾಶನ ಇತಿ ಧಾತೋಃ ಅರ್ಚಿಃ ಪದಂ, ಸೃಪ್ಲೃಗತಾವಿತಿ ಧಾತೋಃ ಪರಿತಃ ಸರ್ಪಣಶೀಲಘೃತವಾಚಕಸರ್ಪಿಃ ಪದಂ ತದ್ವದಿದಂ ಪದಮಿತಿ ಯೋಜನಾ ॥ ೭೫೪ ॥

**ವಿವರಣೆ–** ಎಲೈ ಅಶ್ವಿನಿ ದೇವತೆಗಳೇ ನೀವೂ ಸಹ ಅಂತಹ ವಿಷ್ಣುವಿನ ಕೃಪೆಯಿಂದಲೇ ಯಜ್ಞಾನ್ನವುಳ್ಳ ವರ್ತನೆಯನ್ನು ಎಂದರೆ ಯಜ್ಞಭಾಗವನ್ನು ಪಡೆದಿದ್ದೀರಿ ಎಂದು ಹಿಂದಿನ ಮೂರು ಶ್ಲೋಕಗಳ ಸರಳವಾದ ಅನ್ವಯ. ವಿಷ್ಣುವಿನ ಕೃಪೆಯಿಂದ ರುದ್ರದೇವರು ರುದ್ರಪದವಿಯನ್ನು ಪಡೆದಿರುವುದು ಮಾತ್ರವಲ್ಲ, ಅಶ್ವಿನಿ ದೇವತೆಗಳೂ ಸಹ ಯಜ್ಞಭಾಗವನ್ನು ಪಡೆದಿದ್ದಾರೆ ಎಂದು ಅರ್ಥ. ಆದ್ದರಿಂದ ವಿಷ್ಣುವು ರುದ್ರಾದಿ ಸರ್ವದೇವೋತ್ತಮನೆಂದು ಸಿದ್ಧವಾಗುತ್ತದೆ.

ಅತಃ ಸ್ಪಷ್ಟಾರ್ಥವಾಣೀಯಂ ರುದ್ರಸ್ಯಾಭೀಷ್ಟದಾಯಕಂ ।
ವಿಷ್ಣುಂ ಶುಭಗುಣಾಂಭೋಧಿಂ ರುದ್ರಾದಪ್ಯಧಿಕಂ ಜಗೌ ॥ ೭೫೫ ॥

**ಅರ್ಥ–** ಅತಃ= ಆದ್ದರಿಂದ, ಇಯಂ= ಈ, ಸ್ಪಷ್ಟಾರ್ಥವಾಣೀ= ಸ್ಪಷ್ಟವಾದ ಅರ್ಥವನ್ನು ಹೇಳುವ ವಾಕ್ಯವು, ರುದ್ರಸ್ಯ= ರುದ್ರನಿಗೆ, ಅಭೀಷ್ಟದಾಯಕಂ= ಅಭೀಷ್ಟದಾಯಕನಾದ, ವಿಷ್ಣುಂ= ವಿಷ್ಣುವನ್ನು, ಶುಭಗುಣಾಂಭೋಧಿಂ= ಶುಭಗುಣಸಮುದ್ರನೆಂದೂ, ರುದ್ರಾದಪಿ= ರುದ್ರನಿಗಿಂತಲೂ, ಅಧಿಕಂ= ಅಧಿಕನೆಂದೂ, ಜಗೌ= ಹಾಡಿತು.

**ಅನುವಾದ–** ಆದ್ದರಿಂದ ಸ್ಪಷ್ಟಾರ್ಥವಾದ ಈ ಶ್ರುತಿವಾಕ್ಯವು ರುದ್ರನಿಗೆ ಅಭೀಷ್ಟ-ದಾಯಕನಾದ ವಿಷ್ಣುವನ್ನು ಶುಭಗುಣಾಂಭೋಧಿಯೆಂದು ರುದ್ರನಿಗಿಂತಲೂ ಅಧಿಕನೆಂದು ಹಾಡಿತು.

**ಭಾವವಿಲಾಸಿನೀ–** ಅತಃ ಶ್ರುತ್ಯಾ ವಿಷ್ಣೌ ರುದ್ರೇ ಚ ಪ್ರಸಿದ್ಧ ವಿಷ್ಣುರುದ್ರಪದಯೋರೇವ ಗ್ರಹಣಾತ್ । ಅಯಂ ಸಮುದಾಯಾರ್ಥಃ । ಏಷಸ್ಯ ಇಚ್ಛಾರೂಪಸ್ಯ ಕೃಪಾಲೋಃ ದೇವಸ್ಯ

ಸತ್ಯಸಂಕಲ್ಪಸ್ಯ ವಿಜಿಗೀಷಾವತೋ ವಾ ದ್ಯೋತಮಾನಸ್ಯ ಜಗತ್‌ಸರ್ಜನಾದಿ ಕ್ರೀಡಾವತೋ ವಾ । ಮೀಳ್ಹುಷಃ ಭಕ್ತಾಭೀಷ್ಟಸೇಚನಶೀಲಸ್ಯ । ಅಸ್ಯ ಪ್ರಸಿದ್ಧಸ್ಯ ಅಕಾರವಾಚ್ಯಸ್ಯ ವಾ ವಿಷ್ಣೋರ್ಹವಿರ್ಭಿಃ ಪ್ರಭೃಥೇ ಪ್ರಭರಣೇ ನೈವೇದ್ಯಹೋಮಾದಿಪೂಜನೇ ಕೃತೇ ಸತಿ ವಯಾಃ ಲೌಕಿಕೈಶ್ವರ್ಯಾದಿದಾನೇನ ಬಂಧಕಃ ರುದ್ರಃ ರುದ್ರಿಯಂ ರುದ್ರಸಂಬಂಧಿಮಹಿತ್ವಂ ಮಹಿಮಾನಂ ಮಹಃ ಉತ್ಸವೋಽಸ್ಯಾಸ್ತೀತಿ ಮಹೀ ತಸ್ಯ ಭಾವಂ ವಾ । ಯಥಾ ವಿದೇಹಿ ಲೇಭೇ ಹಿ । ಅಥವಾ ಹಿ ಯಸ್ಮಾತ್ ಲೇಭೇ ತಸ್ಮಾತ್ ಹೇ ಅಶ್ವಿನೌ ಯುವಾಂ ಇರಾವತ್ ಅನ್ನವತ್ ವರ್ತಿರ್ವರ್ತ್ತನಂ ಹವಿರ್ಭಿರ್ವಿಷ್ಣೋಃ ಪ್ರಭೃಥೇ ಕೃತೇ ಸತ್ಯೇವ ಯಾಸಿಷ್ಟಮಯಾಸಿಷ್ಟಂ ಯಸ್ಮಾದಿಂದ್ರಾದೀನಾಮಧಿ ೯ಶ್ವರೋಽಪಿ ಶಿವಃ ವಿಷ್ಣ್ವರ್ಚನೇನೈವ ಭಾಗ್ಯಮವಾಪ । ತಸ್ಮಾತ್ತತೋಽಪ್ಯತಿನೀಚದೇವತ-ಯೋರ್ಯುವಯೋರ್ವಿಷ್ಣುಕೃಪಯೈವ ಭಾಗ್ಯಮಭೂದಿತಿ ಕಿಮುವಕ್ತವ್ಯಮಿತಿ ಭಾವಃ । ಅಸ್ಯಾಂ ಶ್ರುತೌ ವಿಷ್ಣೋರಶ್ವಿನೋರ್ಭಾಗ್ಯದಾಯಕತ್ವೇ ದೃಷ್ಟಾಂತತಯಾ ಹೇತುತಯಾ ಚ ವಿಷ್ಣೋಃ ಶಿವಭಾಗ್ಯದಾಯಕತ್ವಮಹಿಮ್ನೋ ವರ್ಣನಾದಸ್ಯ ಮಹಿಮ್ನೋ ಭಗವತಿ ನಿಶ್ಚಿತತ್ವಂ ನಿತ್ಯಸಿದ್ಧತ್ವಂ ಚಾಭೂದಿತ್ಯಪಿ ಜ್ಞಾತವ್ಯಮ್ ॥ ೭೫೫ ॥

**ಶ್ರೌತೋಽಖಂಡಪದಃ ಸೋಮೋ ನೇಶೋ ವೇದವಿದಾಂ ಮತೇ ।**
**ವಿಶ್ವಾಧಿಕತ್ವಗೀಃ ಸಾವಕಾಶೇಂದ್ರಾದಿಶ್ರುತಾವಿವ ॥ ೭೫೬ ॥**

**ಅರ್ಥ—** ವೇದವಿದಾಂ ಮತೇ= ವೇದವನ್ನು ತಿಳಿದವರ ಮತದಲ್ಲಿ, ಶ್ರೌತಃ= ಶ್ರುತಿಯಲ್ಲಿ ಹೇಳಲ್ಪಟ್ಟ, ಅಖಂಡಪದಃ= ಅಖಂಡವಾದ ಸೋಮಪದದಿಂದ ವಾಚ್ಯನಾದವನು, ಈಶೋ ನ= ರುದ್ರನಲ್ಲ, ವಿಶ್ವಾಧಿಕತ್ವಗೀಃ= ವಿಶ್ವಾಧಿಕೋ ರುದ್ರೋ ಮಹರ್ಷಿಃ ಎಂಬ ವಾಕ್ಯವು, ಇಂದ್ರಾದಿಶ್ರುತಾವಿವ= ಇಂದ್ರಾದಿ ಶ್ರುತಿಯಲ್ಲಿದ್ದಂತೆ, ಸಾವಕಾಶಾ= ಅನ್ಯತ್ರ ಅವಕಾಶವನ್ನು ಪಡೆಯುತ್ತದೆ.

**ಅನುವಾದ—** ಶ್ರುತಿಯಲ್ಲಿ ಹೇಳಲ್ಪಟ್ಟ ಅಖಂಡವಾದ ಸೋಮಪದವು ವೇದಜ್ಞರ ಅಭಿಪ್ರಾಯದಲ್ಲಿ ರುದ್ರವಾಚಕವಲ್ಲ. ವಿಶ್ವಾಧಿಕೋ ರುದ್ರೋ ಮಹರ್ಷಿಃ ಎಂಬ ವಾಕ್ಯವು ಸಹ ಇಂದ್ರಶ್ರುತಿಯಂತೆ ಸಾವಕಾಶವಾದುದು.

**ಭಾವವಿಲಾಸಿನೀ—** ಸೋಮಪದೇನ ರುದ್ರಗ್ರಹಣೇ ಪ್ರಕರಣವಿರೋಧಾಪ್ರಸಿದ್ಧತ್ವಾದಿ ದೋಷಾಃ ಕಥಿತಾಃ । ಇದಾನೀಂ ವೈದಿಕಮುದ್ರಯಾ ಅಪರಿಹಾರ್ಯದೋಷಂ ಚಾಹ – ಶ್ರೌತ ಇತಿ ॥ ಅಖಂಡಪದಃ ಸಜೂರಿತಿ । ಸಜೂರಿತಿವತ್ ಸೋಮ ಇತಿ ಸ ಉಮ ಇತಿ ದ್ವಿಖಂಡರಹಿತಂ ಸೋಮಪದಂ ಯಸ್ಯ ವಾಚಕಂ ಸೋಽಖಂಡಪದಃ । ಸೋಮಃ ಸೋಮಪದವಾಚ್ಯಃ ಪದಾರ್ಥಃ ವೇದವಿದಾಂ ಮತೇ ಈಶೋ ನೇತಿ ಸಂಬಂಧಃ । ಈಶಸ್ಯ ಸೋಮಪದವಾಚ್ಯತ್ವಂ ಉಮಯಾ ಸಹಿತ ಇತಿ ವ್ಯುತ್ಪತ್ತ್ಯಾ ಪರೇಣಾಶಾಸ್ಯತೇ । ತತ್ತದಾ ಸ್ಯಾತ್ ಯದಿ ಸೋಮಪದಂ ಸಜೂರಿತಿ ಪದವತ್ ದ್ವಿಖಂಡಂ ಸ್ಯಾತ್ । ನ ಚ ತದುಕ್ತಮ್ । ವೈದಿಕೈರ್ವೇದಸ್ಥಸೋಮಪದೇ ದ್ವಿಖಂಡತಾಯಾಃ ಕುತ್ರಾಪ್ಯನಂಗೀಕಾರಾತ್ । ವೇದಮರ್ಯಾದಾಮುಲ್ಲಂಘ್ಯ ವೇದಾರ್ಥ-

ಕಥನೇ ಅವೈದಿಕತ್ವಪ್ರಸಂಗಾತ್ । ಅತಃ ಪವಮಾನಸೋಮಸ್ಯ ಚಂದ್ರಸ್ಯ ಸೋಮಲತಾಯಾ ವಾ ಶ್ರೌತಂ ಸೋಮಪದವಾಚಕಂ ಸ್ಯಾತ್ । ನಾನ್ಯಸ್ಯ । ಏವಂ ಚ ಶಿವಸ್ಯ ವಿಷ್ಣುಜನಕತ್ವೇನೇಯಂ ಶ್ರುತಿಃ ಶಂಕಿತುಮಪಿ ಶಕ್ಯಾ ವಿಷ್ಣೋಸ್ತು ಶಿವಪೂಜ್ಯತ್ವಂ ಶಿವಾಭೀಷ್ಟದಾಯಕತ್ವಂ ಚ ಉಭಯವಾದಿ ಸಂಪ್ರತಿಪನ್ನಸ್ಪಷ್ಟಶ್ರುತ್ಯೈವೋಕ್ತವಿಧಯಾ ಪ್ರತಿಪಾದಿತಮ್ । ಅತೋ ವೈದಿಕೈರ್ಬಂದೀಕೃತಸ್ಯ ಪರಸ್ಯ ನಾಸ್ಮತ್ ಪ್ರತಿಬಂದೀ ।

ಪವಮಾನಸೋಮಸ್ಯ ವಿಷ್ಣುಜನಕತ್ವಮುಪಪಾದಿತಂ ಚಂದ್ರಸ್ಯ ಚ ಸೋಮವಂಶೇ ಅವತೀರ್ಣಕೃಷ್ಣಂ ಪ್ರತಿ ಲೋಕಮರ್ಯಾದಾ ಮೂಲಕಾರಣತ್ವಾಜ್ಜನಯಿತೃತ್ವಮುಪಪನ್ನಮ್ । ಸೋಮಲತಾಯಾಶ್ಚ ಸತ್ರೇ ಮಮಾಸ ಭಗವಾನ್ ಹಯಶೀರ್ಷ ಇತಿ ವಚನಾದ್ಯಜ್ಞ-ಕುಂಡಾದವತೀರ್ಣ ಹಯಗ್ರೀವಂ ಪ್ರತಿ ಜನಕತಾ ಘಟತೇ । ತಸ್ಮಾದಖಂಡಪದಾಪೀಯಂ ಶ್ರುತಿರಖಂಡಪದತ್ವಾದೇವ ನಾಸ್ಮದಭೀಷ್ಟಖಂಡನಾಯಾಲಮ್ । ಪರಸ್ಯತ್ವಖಂಡದಾಪಿ ಅಖಂಡಿತಾಸ್ಮಾಚ್ಛಾಸ್ತ್ರಪದವದನಿಷ್ಟಸ್ಯೈವ ಹೇತುಃ । ವಿಶ್ವಾಧಿಕೋ ರುದ್ರೋ ಮಹರ್ಷಿರಿತಿ ವಾಕ್ಯ ನಾಸ್ಮಚ್ಛ್ರುತಿವತ್ ಸ್ಪಷ್ಟಂ ನ ವಿಷ್ಣೋರ್ಹರವಶತಾಂ ವಕ್ತಿ । ಕಿಂತು ವಿಶ್ವಸ್ಮಾದಧಿಕ ಇತ್ಯೇವ ವಕ್ತಿ । ಸಾ ಚ ವಿಶ್ವಸ್ಮಾದಿಂದ್ರ ಉತ್ತರ ಇತಿವತ್ ಸ್ವಯೋಗ್ಯಕತಿಪಯವಿಶ್ವಾಧಿಕ್ಯಮೇವ ಬ್ರೂಯಾತ್ ನ ಸರ್ವಾಧಿಕ್ಯಮ್ । ಅನ್ಯಥಾ ಇಂದ್ರಶ್ರುತ್ಯಾ ಇಂದ್ರಸ್ಯಾಪಿ ಸರ್ವೇಶ್ವರತ್ವಪ್ರಸಕ್ತ್ಯಾ ಪುನಸ್ತ್ವದಭಿಲಷಿತ ರುದ್ರಸರ್ವೇಶ್ವರತ್ವಸ್ಯೈವಹಾನಿ ಪ್ರಸಂಗಾತ್ । ಸಾವಕಾಶೇತಿ ವದತಾ ವಿಶ್ವಂ ವಿಷ್ಣುರ್ವಷಟ್ಕಾರ ಇತಿ ವಚನಾತ್ ವಿಶ್ವಮಧಿಕಂ ಯಸ್ಮಾದಿತ್ಯಪಿ ಸಮಾಸಸಂಭವೇನ ಪರಾನಿಷ್ಟಾರ್ಥಲಾಭಃ । ರುದ್ರಃ ವಿಶ್ವಾಧಿಕೋ ಮಹರ್ಷಿರಿತ್ಯಪಿ ಯೋಜನಿಕಾಸಂಭವೇನ ಸರ್ವಾಧಿಕಃ ಸಂನ್ಯಾಸೀತ್ಯುಕ್ತೇ ಸಂನ್ಯಾಸಿಷ್ವೇವಾಧಿಕ್ಯಲಾಭವತ್ ರುದ್ರಸ್ಯ ಮಹರ್ಷಿಷ್ವೇವಾಧಿಕ್ಯಲಾಭಶ್ಚ ಸೂಚಿತಃ । ಇಂದ್ರಶ್ರುತೇರೀದೃಶಾವಕಾಶ ಶೂನ್ಯತ್ವೇನ ಪ್ರಾಬಲ್ಯಂ ಚ ಸೂಚಿತಮ್ ॥ ೭೫೬ ॥

**ವಿವರಣೆ–** ಇದಕ್ಕೆ ಮೊದಲು ಸೋಮಪದದಿಂದ ರುದ್ರನನ್ನು ತೆಗೆದುಕೊಂಡರೆ ಪ್ರಕರಣ ವಿರೋಧವು ಬರುತ್ತದೆ ಮತ್ತು ಸೋಮಪದಕ್ಕೆ ರುದ್ರನಲ್ಲಿ ಪ್ರಸಿದ್ಧಿ ಇಲ್ಲ ಎಂಬ ದೋಷಗಳನ್ನು ಹೇಳಿದ್ದರು. ಈಗ ವೈದಿಕ ಮರ್ಯಾದೆಯಿಂದಲೇ ಅಪರಿಹಾರ್ಯವಾದ ಇನ್ನೊಂದು ದೋಷವನ್ನು ಹೇಳುತ್ತಾರೆ. ಸಜೂಃ ಎಂಬ ಪದದಂತೆ ಸೋಮ ಎಂಬ ಪದವು ಅಖಂಡವಾದುದು. ಉಮಯಾ ಸಹಿತಃ ಎಂಬ ವ್ಯುತ್ಪತ್ತಿಯಿಂದ ಅದು ಸಖಂಡವಾದ ಪದವಲ್ಲ. ಉಮಾಸಹಿತನಾದವನು ಎಂಬ ಅರ್ಥದಲ್ಲಿ ಸೋಮ ಪದವು ಇರಬೇಕಾದರೆ ಸಜೂಃ ಎಂಬ ಪದದಂತೆ ಅದು ಖಂಡದ್ವಯವನ್ನು ಹೊಂದಿರಬೇಕಾಗಿದ್ದಿತು. ಆದರೆ ಅದರಲ್ಲಿ ಎರಡು ಖಂಡಗಳಿಲ್ಲ. ಏಕೆಂದರೆ ಯಾವ ವೈದಿಕರೂ ತಮ್ಮ ಅಧ್ಯಯನ ಸಂದರ್ಭದಲ್ಲಿ ಅಲ್ಲಿ ಎರಡು ಖಂಡಗಳನ್ನು ಅನುಸರಿಸುವುದಿಲ್ಲ. ವೇದ ಮರ್ಯಾದೆಯನ್ನು ಉಲ್ಲಂಘಿಸಿ ವೇದಾರ್ಥವನ್ನು ಹೇಳಿದರೆ ಅವೈದಿಕತ್ವವು ಉಂಟಾಗುತ್ತದೆ. ಆದ್ದರಿಂದ ಸೋಮಪದವು ಪವಮಾನ ಸೋಮನನ್ನಾಗಲೀ, ಚಂದ್ರನನ್ನಾಗಲೀ ಅಥವಾ ಸೋಮಲತೆಯಲ್ಲಾಗಲೀ ಹೇಳುತ್ತದೆ.

ಆದ್ದರಿಂದ ಈ ಶ್ರುತಿಯು ಶಿವನು ವಿಷ್ಣುಜನಕನೆಂದು ಶಂಕಿಸಲೂ ಅವಕಾಶ-ವಿಲ್ಲದಂತಹದು. ವಿಷ್ಣುವಿಗಾದರೂ ಶಿವಪೂಜ್ಯತ್ವವನ್ನು ಮತ್ತು ಶಿವಾಭೀಷ್ಟದಾಯಕತ್ವವನ್ನು ಉಭಯವಾದಿ ಸಂಪ್ರತಿಪನ್ನವಾದ ವೇದಭಾಗದಿಂದಲೇ ಸಮರ್ಥನೆ ಮಾಡಿದ್ದಾಗಿದೆ. ಪವಮಾನ ಸೋಮನಿಗೆ ವಿಷ್ಣುಜನಕತ್ವವನ್ನು ಹಿಂದೆಯೇ ಉಪಪಾದನೆ ಮಾಡಿದ್ದೇವೆ. ಚಂದ್ರವಂಶದಲ್ಲಿ ಕೃಷ್ಣನು ಅವತಾರ ಮಾಡಿದ್ದರಿಂದ ಚಂದ್ರನಿಗೂ ವಿಷ್ಣುಜನಕತ್ವವು ಲೋಕಮರ್ಯಾದೆಯಿಂದ ಉಪಪನ್ನವಾಗುತ್ತದೆ. ಬ್ರಹ್ಮದೇವರು ಮಾಡಿದ ಸೋಮಯಾಗದಲ್ಲಿ ಹಯಗ್ರೀವ ದೇವರು ಅಭಿವ್ಯಕ್ತವಾದ್ದರಿಂದ ಸೋಮಲತೆಗೂ ವಿಷ್ಣುಜನಕತ್ವವು ಕೂಡುತ್ತದೆ. 'ಸತ್ರೇಮಮಾಸ ಭಗವಾನ್ ಹಯಶೀರ್ಷ ಏಷಃ' ಎಂಬ ಭಾಗವತ ವಚನವು ಈ ವಿಷಯವನ್ನು ಹೇಳುತ್ತದೆ. ಆದ್ದರಿಂದ ಸೋಮ ಎಂಬ ಪದವು ಅಖಂಡವಾದ ಕಾರಣದಿಂದ ನಮಗೆ ಅಭೀಷ್ಟವಾದ ಯಾವ ಅರ್ಥವನ್ನು ಖಂಡನೆ ಮಾಡುವುದಿಲ್ಲ. ವಿಶ್ವಾಧಿಕೋ ರುದ್ರೋ ಮಹರ್ಷಿಃ ಎಂಬ ವಾಕ್ಯವೂ ಸಹ ನಾವು ಹೇಳಿದ ಶ್ರುತಿಯು ಸ್ಪಷ್ಟವಾಗಿ ಶಿವನಿಗೆ ವಿಷ್ಣುವಶತ್ವವನ್ನು ಹೇಳಿದಂತೆ ವಿಷ್ಣುವಿಗೆ ಶಿವವಶತ್ವವನ್ನು ಹೇಳುವುದಿಲ್ಲ. ಆದರೆ ವಿಶ್ವಕ್ಕಿಂತ ಅಧಿಕನಾದವನು ಎಂದಿಷ್ಟೇ ಹೇಳುತ್ತದೆ. ಇಂತಹ ಉಕ್ತಿಯಾದರೂ ವಿಶ್ವಸ್ಮಾದಿಂದ್ರ ಉತ್ತರಃ ಎಂಬ ವಾಕ್ಯದಂತೆ ಸ್ವಯೋಗ್ಯವಾದ ಕೆಲವು ವಿಶ್ವಕ್ಕಿಂತ ಅಧಿಕನಾದವನು ಎಂಬ ಇಷ್ಟೇ ಅರ್ಥವನ್ನು ಹೇಳುತ್ತದೆಯೇ ಹೊರತು ಸರ್ವಾಧಿಕತ್ವವನ್ನು ಹೇಳುವುದಿಲ್ಲ. ಇಲ್ಲದಿದ್ದರೆ ವಿಶ್ವಸ್ಮಾದಿಂದ ಉತ್ತರಃ ಎಂಬ ಶ್ರುತಿಯಿಂದ ಇಂದ್ರನಿಗೂ ಸರ್ವೇಶ್ವರತ್ವವು ಪ್ರಸಕ್ತವಾಗಿ ರುದ್ರನ ಸರ್ವೇಶ್ವರತ್ವವು ಹಾನಿಯಾದೀತು. ವಿಶ್ವಾಧಿಕೋ ರುದ್ರೋ ಮಹರ್ಷಿಃ ಎಂಬ ವಾಕ್ಯವನ್ನು 'ರುದ್ರಃ ವಿಶ್ವಾಧಿಕೋ ಮಹರ್ಷಿಃ' ಎಂದೂ ಯೋಜನೆಯನ್ನು ಮಾಡಬಹುದು. ಸರ್ವಾಧಿಕನಾದ ಸಂನ್ಯಾಸಿ ಎಂದು ಹೇಳಿದರೆ ಸಂನ್ಯಾಸಿಗಳಲ್ಲಿಯೇ ಹೇಗೆ ಆಧಿಕ್ಯವು ಲಭ್ಯವಾಗುತ್ತದೆಯೋ, ಅದರಂತೆ ವಿಶ್ವಾಧಿಕೋ ಮಹರ್ಷಿಃ ಎಂದು ಹೇಳಿದರೆ ರುದ್ರದೇವರಿಗೆ ಮಹರ್ಷಿಗಳಲ್ಲಿಯೇ ಆಧಿಕ್ಯವು ಲಭ್ಯವಾಗುತ್ತದೆ ಹೊರತು ಸರ್ವಾಧಿಕ್ಯವು ಸಿದ್ಧವಾಗುವುದಿಲ್ಲ. ಇಂದ್ರ ಶ್ರುತಿಗಾದರೆ ಇಂತಹ ಸಾವಕಾಶತ್ವವು ಇಲ್ಲವಾದ್ದರಿಂದ ಅದು ಪ್ರಬಲವಾಗುತ್ತದೆ ಎಂದು ಅಭಿಪ್ರಾಯ.

**ಸೋಽರೋದೀದಿತಿ ವೇದೇ ಹಿ ರೋದನಾದ್ ರುದ್ರತೋದಿತಾ ।**
**ನ ತೇ ಮಹಿತ್ವಮಿತಿ ತು ವಿಷ್ಣೋರಸಮತೋದಿತಾ ॥ ೭೫೭ ॥**

**ಅರ್ಥ–** ಸೋರೋದೀತ್= ಸೋರೋದಿತ್ ಎಂಬ, ವೇದೇ= ವೇದದಲ್ಲಿ, ರೋದನಾತ್= ಅಳುವುದರಿಂದ, ರುದ್ರತಾ= ರುದ್ರನಿಗೆ ರುದ್ರಶಬ್ದವಾಚ್ಯತ್ವವು, ಉದಿತಾ ಹಿ= ಹೇಳಲ್ಪಟ್ಟಿದೆಯಷ್ಟೆ, ನ ತೇ ಮಹಿತ್ವಮಿತಿ ತು= ನ ತೇ ಮಹಿತ್ವಂ ಎಂಬ ಶ್ರುತಿಯಲ್ಲಾದರೂ, ವಿಷ್ಣೋಃ= ವಿಷ್ಣುವಿಗೆ, ಅಸಮತಾ= ಸಮಾನರು ಇಲ್ಲವೆಂದು, ಉದಿತಾ= ಹೇಳಲ್ಪಟ್ಟಿದೆ.

**ಅನುವಾದ–** 'ಸೋರೋದೀತ್ ಯದರೋದೀತ್ ತದ್ರುದ್ರಸ್ಯರುದ್ರತ್ವಂ' ಎಂಬ ಶ್ರುತಿಯು ರೋದನ ನಿಮಿತ್ತದಿಂದ ಶಿವನಿಗೆ ರುದ್ರಶಬ್ದವಾಚ್ಯತ್ವವನ್ನು ಹೇಳುತ್ತದೆ. 'ಪರೋಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ' ಎಂಬ ಶ್ರುತಿಯಾದರೂ ವಿಷ್ಣುವಿಗೆ ಸಮಾನರಾದವರು ಯಾರೂ ಇಲ್ಲವೆಂದು ಹೇಳುತ್ತದೆ.

**ಭಾವವಿಲಾಸಿನೀ–** ವಾಕ್ಯಾಂತರೈರಪಿ ರುದ್ರಸ್ಯಾವರತಾಂ ವಿಷ್ಣೋಃ ಸರ್ವೋತ್ತಮತಾಂ ಚ ಸಾಧಯತಿ ॥ **ಸೋರೋದೀದಿತಿ** ॥ ಅನೇನ ಸೋರೋದೀದ್ಯದರೋದೀತ್ತತ್ ರುದ್ರಸ್ಯ ರುದ್ರತ್ವ-ಮಿತಿ ಶ್ರುತಿಂ ಗೃಹ್ಣಾತಿ । ಸ್ವಾಭೀಷ್ಟಸಾಧನ ಸಾಮರ್ಥ್ಯಾಭಾವಾದ್ಧಿ ರುದ್ರಸ್ಯ ರೋದನಮ್ । ಅತಃ ಕಥಂ ಯದರೋದೀಃ ಸುರಶ್ರೇಷ್ಠ ಸೋದ್ವೇಗ ಇವ ಬಾಲಕಃ । ತತಸ್ತ್ವಾಮಭಿಧಾನಸ್ಯಂತಿ ನಾಮ್ನಾ ರುದ್ರ ಇತಿ ಪ್ರಜಾಃ ॥ ಇತಿ ಭಾಗವತ ವಚನಾತ್ ಶಿಶೋರಿವ ರುದ ತಸ್ತಸ್ಯ ಸರ್ವೇಶ್ವರತ್ವಮಿತಿ ಭಾವಃ ॥ ೭೫೭ ॥

**ವಿವರಣೆ–** ಇನ್ನು ಬೇರೆ ಬೇರೆ ವಾಕ್ಯಗಳಿಂದಲೂ ರುದ್ರನಿಗೆ ಅವರತ್ವವನ್ನು ಮತ್ತು ವಿಷ್ಣುವಿಗೆ ಸರ್ವೋತ್ತಮತ್ವವನ್ನು ಸಮರ್ಥನೆ ಮಾಡುತ್ತಾರೆ. ಶಿಶುವಿನಂತೆ ಅಳುವ ರುದ್ರನಿಗೆ ಸರ್ವೇಶ್ವರತ್ವವು ಹೇಗೆ ಕೂಡುತ್ತದೆ? ಎಂದೂ ಕೂಡುವುದಿಲ್ಲ ಎಂದು ಅಭಿಪ್ರಾಯ.

ಯಾ ಹ್ಯುಚ್ಛೇಷಣಭಾಗೋ ವೈ ರುದ್ರ ಇತ್ಯಾಹ ವೇದವಾಕ್ ।
ಜುಷೇಥಾಂ ಯಜ್ಞಮಿತ್ಯಾದ್ಯಾ ಸಾ ವಿಷ್ಣುಂ ವಕ್ತ್ಯತಃ ಸ ರಾಟ್ ॥ ೭೫೮ ॥

**ಅರ್ಥ–** ಯಾ= ಯಾವ, ವೇದವಾಕ್= ವೇದವಾಕ್ಯವು, ಉಚ್ಛೇಷಣಭಾಗೋವೈರುದ್ರಃ= ಉಚ್ಛಿಷ್ಟ ಭಾಗವು ರುದ್ರನಿಗೆ ಸೇರಿದುದು, ಇತ್ಯಾಹ= ಎಂದು ಹೇಳುತ್ತದೆಯೋ, ಸಾ= ಆ ಜುಷೇಥಾಂ ಯಜ್ಞಮಿತ್ಯಾದ್ಯಾ= ಜುಷೇಥಾಂ ಯಜ್ಞ ಇತ್ಯಾದಿ ವಾಕ್ಯವು, ವಿಷ್ಣುಂ ವಕ್ತಿ= ವಿಷ್ಣುವನ್ನು ಹೇಳುತ್ತದೆ, ಅತಃ= ಆದ್ದರಿಂದ, ಸಃ= ಆ ವಿಷ್ಣುವು, ರಾಟ್= ಸರ್ವೇಶ್ವರನಾದವನು.

**ಅನುವಾದ–** ಯಾವ ವೇದವಾಕ್ಯವು ಉಚ್ಛೇಷಣ ಭಾಗೋ ವೈ ರುದ್ರಃ ಎಂದು ರುದ್ರನಿಗೆ ಯಜ್ಞೋಚ್ಛಿಷ್ಟ ಭೋಕ್ತೃತ್ವವನ್ನು ಹೇಳುತ್ತದೆಯೋ ಅದೇ ವೇದವು ಜುಷೇಥಾಂ ಯಜ್ಞಂ ಇತ್ಯಾದಿ ಮಂತ್ರದಲ್ಲಿ ವಿಷ್ಣುವಿಗೆ ಯಜ್ಞಭೋಕ್ತೃತ್ವವನ್ನು ಹೇಳುತ್ತದೆ. ಆದ್ದರಿಂದ ವಿಷ್ಣುವೇ ಸರ್ವೇಶ್ವರನಾದವನು.

**ವಿವರಣೆ–** 'ಜುಷೇಥಾಂ ಯಜ್ಞಂ ದ್ರವಿಣಂ ಚ ಧತ್ತಮರಿಷ್ಟೈಃ ನಃ ಪಥಿಭಿಃ ಪಾರಯಂತಾ' ಎಂದು ಶ್ರುತಿ. ಅದರ ಅರ್ಥ ಹೀಗಿದೆ :- ಎಲೈ ಇಂದ್ರ ವಿಷ್ಣುಗಳೇ ಎಂದರೆ ಇಂದ್ರಾಂತರ್ಗತನಾದ ಇಂದ್ರನಾಮಕನಾದ ವಿಷ್ಣುವೇ ಮತ್ತು ವಿಷ್ಣುವೇ ಅಸ್ಯ

ಅಪಸಃ = ಈ ಸಂಸಾರ ಸಮುದ್ರಜಲದ, ಪಾರೇ= ಇನ್ನೊಂದು ದಡದಲ್ಲಿ (ಆಚೆಯ ದಡದಲ್ಲಿ), ಸ್ಥಿತೌ= ಇರುವ, ವಾಂ= ಈ ಎರಡು ರೂಪಗಳುಳ್ಳ ನಿನ್ನನ್ನು, ಸಂ= ಸಮೀಚೀನವಾದ ಕರ್ಮದಿಂದ ಎಂದರೆ ದೇವಯಜ್ಞದಿಂದ, ಅಥವಾ ಸಂ= ಸಮೀಚೀನವಾದ, ಇಶಾ= ಪಿತೃಯಜ್ಞದ ಅನ್ನದಿಂದ, ಹಿನೋಮಿ= ವರ್ಧಯಾಮಿ, ಸಂತೋಷದಿಂದ ಕೂಡಿದವರನ್ನಾಗಿ ಮಾಡುತ್ತೇನೆ. ಹ್ಯಂತೇವ ಪ್ರಾಪ್ನೋಮಿ= ನಿಮ್ಮ ಸಮೀಪಕ್ಕೆ ಬರುತ್ತೇನೆ, ಭವದಂತಿಕೇ ವರ್ಧೇಚ= ಮತ್ತು ನಿಮ್ಮ ಸಮೀಪದಲ್ಲಿ ಅಭಿವೃದ್ಧಿಯನ್ನು ಹೊಂದುತ್ತೇನೆ ಅಥವಾ ನನ್ನ ಸಮೀಪಕ್ಕೆ ನಿಮ್ಮನ್ನು ಕರೆತರುತ್ತೇನೆ ಎಂದು ಅರ್ಥವನ್ನು ಮಾಡಬಹುದು. ಅರಿಷ್ಟೈಃ ಪಥಿಭಿಃ ನಾಶವಿಲ್ಲದ ಮೋಕ್ಷಸಾಧನವಾದ ಭಕ್ತಿವೈರಾಗ್ಯಾದಿ ಮಾರ್ಗಗಳಿಂದ ಅಥವಾ ಅರ್ಚಿರಾದಿ ಮಾರ್ಗಗಳಿಂದ, ಪಾರಯಂತಾ= ಪಾರಯಂತೌ= ಸಂಸಾರ ಸಾಗರವನ್ನು ದಾಟಿಸುವವರಾಗಿ, ಇಂದ್ರಾ-ವಿಷ್ಣೂ= ಎಲೈ ಭಗವದ್ರೂಪಗಳಾದ ಇಂದ್ರವಿಷ್ಣುಗಳೇ, ಯುವಾಂ= ನೀವಿಬ್ಬರೂ, ನಃ ಯಜ್ಞಂ= ನಮ್ಮ ಯಜ್ಞವನ್ನು, ಜುಷೇಥಾಂ= ಸೇವಿಸಿರಿ, ದ್ರವಿಣಂ ಚ= ಜ್ಞಾನಾದಿ ಧನವನ್ನೂ, ಧತ್ತಂ= ದತ್ತಂ ದಯಪಾಲಿಸಿ. ಈ ಮಂತ್ರವು ಇಂದ್ರಾವಿಷ್ಣನಾದ ವಿಷ್ಣುವಿಗೂ ಮತ್ತು ಪೃಥಕ್‌ಸ್ಥಿತನಾದ ವಿಷ್ಣುವಿಗೂ ಯಜ್ಞಭೋಕ್ತೃತ್ವವನ್ನು ಹೇಳುತ್ತದೆ. ಏಕೆಂದರೆ ಇದು ವಿಷ್ಣುಸೂಕ್ತ. ಇಲ್ಲಿ ಸ್ವತಂತ್ರವಾಗಿ ಇಂದ್ರನನ್ನು ಸ್ತೋತ್ರ ಮಾಡುವುದು ಅಯುಕ್ತವಾಗುತ್ತದೆ. ರುದ್ರನಿಗಾದರೂ ಯಜ್ಞೋಚ್ಛಿಷ್ಟಭೋಕ್ತೃತ್ವವನ್ನು ಅದೇ ವೇದವು (ಯಜುರ್ವೇದವು) ಹೇಳುತ್ತದೆ. ಈ ಎರಡು ವಾಕ್ಯಗಳನ್ನು ಪರಿಶೀಲನೆ ಮಾಡಿದರೆ ವಿಷ್ಣುವು ಸರ್ವೋತ್ತಮ-ನೆಂದೂ ರುದ್ರನು ಅವನಿಗಿಂತ ಅವರನೆಂದೂ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ಈ ಮಂತ್ರದ ಅರ್ಥವನ್ನೇ ಮುಂದಿನ ಮೂರು ಶ್ಲೋಕಗಳಲ್ಲಿ ವಿವರಿಸುತ್ತಾರೆ.

ಇಂದ್ರಾವಿಷ್ಣೂ ಯುವಾಂ ಯಜ್ಞಂ ಜುಷೇಥಾಂ ದ್ರವಿಣಂ ಚ ನಃ ।
ಧತ್ತಂ ದತ್ತಂ ಪ್ರದಿಶತಾಮರಿಷ್ಟೈರ್ನಾಶವರ್ಜಿತೈಃ ॥ ೭೫೯ ॥

ಪಥಿಭಿರ್ಮೋಕ್ಷಮಾರ್ಗೈರ್ನಃ ಪಾರಯಂತೌ ಭವಾಂಬುಧೇಃ ।
ಪರಂ ಪಾರಂ ಪ್ರಾಪಯಂತಾವಿತಿ ಯಚ್ಛ್ರುತಿರಂಜಸಾ ॥ ೭೬೦ ॥

ಐಹಿಕಾಮುಷ್ಮಿಕಫಲಪ್ರದಾತಾರಂ ಮಖಸ್ಯ ಚ ।
ಭೋಕ್ತಾರಂ ವಿಷ್ಣುಸೂಕ್ತಸ್ಥಾ ವಿಷ್ಣುಂ ಸ್ತೌತಿ ದ್ವಿರೂಪಿಣಮ್ ॥ ೭೬೧ ॥

**ಅರ್ಥ–** ಇಂದ್ರಾವಿಷ್ಣೂ= ಎಲೈ ಇಂದ್ರಾವಿಷ್ಣುಗಳೇ, ಯುವಾಂ= ನೀವಿಬ್ಬರು, ಯಜ್ಞಂ= ನಮ್ಮ ಯಜ್ಞವನ್ನು, ಜುಷೇಥಾಂ= ಸ್ವೀಕರಿಸಿ, ನಃ= ನಮಗೆ, ದ್ರವಿಣಂ ಚ= ಧನವನ್ನೂ, ಧತ್ತಂ= ದತ್ತಂ= ಪ್ರದಿಶತಾಂ= ದಯಪಾಲಿಸಿ, ಅರಿಷ್ಟೈಃ= ನಾಶವರ್ಜಿತೈಃ= ನಾಶರಹಿತವಾದ, ಪಥಿಭಿಃ= ಮೋಕ್ಷಮಾರ್ಗೈಃ= ಮೋಕ್ಷಮಾರ್ಗಗಳಿಂದ, ನಃ= ನಮ್ಮನ್ನು, ಪಾರಯಂತೌ=

ಭವಾಂಬುಧೇಃ ಪರಂಪಾರಂ ಪ್ರಾಪಯಂತೌ= ಸಂಸಾರ ಸಮುದ್ರದ ಆಚೆ ದಡವನ್ನು ತಲುಪಿಸುವವರಾಗಿರಿ, ಇತಿ= ಎಂದು, ಶ್ರುತಿಃ= ವೇದವಾಕ್ಯವು, ದ್ವಿರೂಪಿಣಂ= ಎರಡು ರೂಪವನ್ನು ಧರಿಸಿದ, ವಿಷ್ಣುಂ= ವಿಷ್ಣುವನ್ನು, ಐಹಿಕಾಮುಷ್ಮಿಕಫಲಪ್ರದಾತಾರಂ= ಐಹಿಕಾ-ಮುಷ್ಮಿಕಫಲದಾತೃವೆಂದು, ಮಖಸ್ಯ ಚ ಭೋಕ್ತಾರಂ= ಯಜ್ಞಭೋಕ್ತೃವೆಂದು, ಅಂಜಸಾ= ಚೆನ್ನಾಗಿ, ವಿಷ್ಣುಸೂಕ್ತಸ್ಥಾ= ವಿಷ್ಣುಸೂಕ್ತದಲ್ಲಿರುವ, ಶ್ರುತಿಃ= ಈ ವಾಕ್ಯವು, ಸ್ತೌತಿ= ಸ್ತೋತ್ರ ಮಾಡುತ್ತದೆಯೋ (ಆದ್ದರಿಂದ ವಿಷ್ಣುವೇ ಸರ್ವೋತ್ತಮನು).

**ಅನುವಾದ–** ಎಲೈ ಇಂದ್ರವಿಷ್ಣುಗಳೆಂಬ ಭಗವದ್ರೂಪಗಳೇ ನೀವು ನಮ್ಮ ಯಜ್ಞವನ್ನು ಸ್ವೀಕರಿಸಿ ನಮಗೆ ಧನವನ್ನೂ ದಯಪಾಲಿಸಿ. ನಾಶರಹಿತವಾದ ಮೋಕ್ಷ-ಮಾರ್ಗಗಳಿಂದ ನಮ್ಮನ್ನು ಸಂಸಾರ ಸಾಗರದ ಆಚೆಯ ದಡಕ್ಕೆ ತಲುಪಿಸಿ ಎಂದು ವಿಷ್ಣುಸೂಕ್ತದಲ್ಲಿರುವ ಈ ವೇದವಾಕ್ಯವು ಎರಡು ರೂಪವನ್ನು ಧರಿಸಿದ ವಿಷ್ಣುವನ್ನು ಐಹಿಕಾಮುಷ್ಮಿಕಫಲದಾತೃವೆಂದೂ, ಯಜ್ಞಭೋಕ್ತೃವೆಂದೂ ಚೆನ್ನಾಗಿ ಸ್ತೋತ್ರ ಮಾಡುವುದರಿಂದ ವಿಷ್ಣುವೇ ಸರ್ವೋತ್ತಮನೆಂದು ಸಿದ್ಧವಾಗುತ್ತದೆ.

**ಯತಶ್ಚ ರುದ್ರಾಹುತಿದಾ ಹಸ್ತಮದ್ಯಾಪಿ ಯಾಜ್ಞಿಕಾಃ ।**
**ಪ್ರಕ್ಷಾಲಯಂತಿ ತೇನಾಸೌ ಯಜ್ಞೋಚ್ಛಿಷ್ಟಾಶನೋ ಧ್ರುವಮ್ ॥ ೭೬೨ ॥**

**ಅರ್ಥ–** ಚ= ಮತ್ತು, ಯತಃ= ಯಾವ ಕಾರಣದಿಂದ, ರುದ್ರಾಹುತಿದಾಃ= ರುದ್ರನಿಗೆ ಆಹುತಿಯನ್ನು ಕೊಡುವ, ಯಾಜ್ಞಿಕಾಃ= ಯಾಜ್ಞಿಕರು, ಅದ್ಯಾಪಿ= ಈಗಲೂ ಕೂಡ, ಹಸ್ತಂ= ಹಸ್ತವನ್ನು, ಪ್ರಕ್ಷಾಲಯಂತಿ= ತೊಳೆದುಕೊಳ್ಳುತ್ತಾರೆಯೋ, ತೇನ= ಆ ಕಾರಣದಿಂದ, ಅಸೌ= ಈ ರುದ್ರನು, ಧ್ರುವಂ= ನಿಶ್ಚಯವಾಗಿ, ಯಜ್ಞೋಚ್ಛಿಷ್ಟಾಶನಃ= ಯಜ್ಞದ ಉಚ್ಛಿಷ್ಟ ಭೋಕ್ತೃವಾಗಿದ್ದಾನೆ.

**ಅನುವಾದ–** ಮತ್ತು ಯಾವ ಕಾರಣದಿಂದ ರುದ್ರನಿಗೆ ಆಹುತಿಯನ್ನು ಕೊಡುವ ಯಾಜ್ಞಿಕರು ಈಗಲೂ ಸಹ ಕೈಗಳನ್ನು ತೊಳೆದುಕೊಳ್ಳುತ್ತಾರೆಯೋ ಆ ಕಾರಣದಿಂದ ರುದ್ರನು ನಿಶ್ಚಯವಾಗಿ ಯಜ್ಞೋಚ್ಛಿಷ್ಟಭೋಕ್ತೃವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಉಚ್ಛೇಷಣಭಾಗೋ ವೈ ರುದ್ರ ಇತಿ ಯಾ ವೇದವಾಗಿತಿ ಸಂಬಂಧಃ । ಹಿ ಶಬ್ದೇನಾಸ್ಯ ವಾಕ್ಯಸ್ಯ ಯಜುಃಶಾಖಾಯಾಂ ಪ್ರಸಿದ್ಧತಾಂ ಸೂಚಯತಿ । ಸಾ ವೇದವಾಕ್ ಜುಷೇಥಾಂ ಯಜ್ಞಮಿತ್ಯಾದ್ಯಾ ಸಾ ವೇದವಾಕ್ ವಿಷ್ಣುಂ ವಕ್ತಿ । ಅತಃ ಸವಿಷ್ಣುಃ ರಾಟ್ ರಾಜಾ ಸರ್ವೇಶ್ವರ ಇತಿ ಯೋಜನಾ । **(ವಷಟ್‌ತೇ ವಿಷ್ಣವಾಸ ಆಕೃಣೋಮಿ ಇತಿ)** ಸಂ ವಾಂ ಕರ್ಮಣಾಮಮಿಷಾದಿನೋಮೀಂದ್ರಾವಿಷ್ಣು ಅಪಸಸ್ಪಾರೇ ಅಸ್ಯ ಜುಷೇಥಾಂ ಯಜ್ಞಂ ದ್ರವಿಣಂ ಚ ಧತ್ತಮರಿಷ್ಟೈರ್ನಃ ಪಥಿಭಿಃ ಪಾರಯಂತೇತಿ ಶ್ರುತಿಃ । (ಅಸ್ಯಾ ಅಯಮರ್ಥಃ । ಹೇ

ಇಂದ್ರಾವಿಷ್ಣೂ ಇಂದ್ರಾಂತರ್ಗತೇಂದ್ರನಾಮಕ ವಿಷ್ಣುನಾಮಕೌ ಭಗವಂತೌ ಅಸ್ಯಾ ಅಪಸಃ ಸಂಸಾರಸಮುದ್ರಜಲಸ್ಯ ಪಾರೇ ಪರತೀರೇ ಸರ್ವಥಾ ತದಸಂಗಸೂಚನಾಯ ವಿಸಂಧಿಕರಣಮ್ । ಸ್ಥಿತೌ ವಾಸಂ ಸಮೀಚೀನೇನ ಕರ್ಮಣಾ ದೇವಯಜ್ಞೇನ ಸಂ ಸಮೀಚೀನೇನ ಇಷಾ ಪಿತೃಯಜ್ಞಾನ್ನೇನ ಚ ಹೀನೋಮಿ ಹಿಗತೌ ವೃದ್ಧೌ ಚೇತಿ ಧಾತೋಃ ವಿರ್ಧಯೇನ ಚ ವರ್ಧಯಾಮಿ ಸಂತೋಷೇಣ ಪೂರಿತಂ ಕರೋಮಿ । ಹ್ಯಂತೇ ವಾ ಪ್ರಾಪ್ನೋಮಿ ಭವದಂತಿಕೇ ವರ್ಧೇ ಚ । ಅಸ್ಮತ್ಸಮೀಪಂ ಪ್ರತ್ಯಾಗಮಯಾಮಿ ।) ಅರಿಷ್ಟೈಃ ಅನಷ್ಟೈಃ ಪಥಿಭಿಃ ಮೋಕ್ಷಮಾರ್ಗಭೂತಜ್ಞಾನಭಕ್ತಿವೈರಾಗ್ಯಾದಿಭಿಃ ಅರ್ಚಿರಾದಿಮಾರ್ಗೈರ್ವಾ ಪಾರಯಂತೌ ಸಂಸಾರಸಾಗರಪಾರಂ ಪ್ರಾಪಯಂತೌ । ಇಂದ್ರಾವಿಷ್ಣೂ ಯುವಾಂ ನಃ ಯಜ್ಞಂ ಜುಷೇಥಾಂ ದ್ರವಿಣಂ ಚ ಧತ್ತಂ ಇದಮುಭಯಂ ಮಧ್ಯಮಪುರುಷದ್ವಿವಚನಮ್ । ಇಯಂ ಶ್ರುತಿಃ ಸ್ವಾರ್ಥಪರ್ಯಾಲೋಚನಯಾ ಇಂದ್ರಾವಿಷ್ಣವಿಷ್ಣೋಃ ಪೃಥಕ್‌ಸ್ಥಿತವಿಷ್ಣೋಃಶ್ಚ ಯಜ್ಞಭೋಕ್ತೃತ್ವಂ ವಕ್ತಿ । ವಿಷ್ಣುಸೂಕ್ತೇಸ್ಮಿನ್ ಕೇವಲೇಂದ್ರಸ್ಯ ಸ್ವಾತಂತ್ರ್ಯೇಣ ಗ್ರಹಣಾಯೋಗಾತ್ । ಉಚ್ಛೇಷಣಭಾಗ ಇತಿ ಶ್ರುತಿಃ ರುದ್ರಸ್ಯ ಯಜ್ಞೋಚ್ಛಿಷ್ಟಭೋಕ್ತೃತಾಂ ವಕ್ತಿ । ಏವಂ ಚ ವಾಕ್ಯದ್ವಯ ಪರ್ಯಾಲೋಚನಯಾ ಹರ್ಯುಚ್ಛಿಷ್ಟಭೋಜೀ ರುದ್ರ ಇತಿ ಪ್ರಾಪ್ತಮ್ । ಅತೋ ವಿಷ್ಣುಃ ಸರ್ವೋತ್ತಮಃ ರುದ್ರಸ್ತದವರ ಇತಿ ಕಥಂ ಸಿದ್ಧ್ಯೇದಿತಿ ಭಾವಃ ಇಮಮೇವಾರ್ಥಂ ವಿಸ್ತರೇಣಾಹ – ಇಂದ್ರಾವಿಷ್ಣೂ ಇತಿ ॥ ೭೫೮-೭೬೨ ॥

ಪ್ರಲಯೇ ವಟಪತ್ರೇಽಪ್ಸು ಶೇತೇ ನಾರಾಯಣಃ ಕಿಲ ।
ತದಾ ಕ್ವಾನ್ಯೇ ಸುರಾಸ್ತಸ್ಮಾತ್ ಸರ್ವೇಶೋ ವಿಷ್ಣುರೇವ ಹಿ ॥ ೭೬೩ ॥

**ಅರ್ಥ**– ಪ್ರಲಯೇ= ಪ್ರಲಯಕಾಲದಲ್ಲಿ, ನಾರಾಯಣಃ= ನಾರಾಯಣನು, ಅಪ್ಸು= ನೀರಿನಲ್ಲಿ, ವಟಪತ್ರೇ= ವಟಪತ್ರದಲ್ಲಿ, ಶೇತೇ ಕಿಲ= ಮಲಗಿರುತ್ತಾನಷ್ಟೆ, ತದಾ= ಆಗ, ಅನ್ಯೇ ಸುರಾಃ= ಉಳಿದ ದೇವತೆಗಳು, ಕ್ವ= ಎಲ್ಲಿದ್ದಾರೆ, ತಸ್ಮಾತ್= ಆದ್ದರಿಂದ, ಸರ್ವೇಶಃ= ಸರ್ವೇಶ್ವರನಾದವನು, ವಿಷ್ಣುರೇವ ಹಿ= ವಿಷ್ಣುವೇ ಅಷ್ಟೆ.

**ಅನುವಾದ**– ಪ್ರಲಯ ಕಾಲದಲ್ಲಿ ನಾರಾಯಣನು ನೀರಿನಲ್ಲಿ ವಟಪತ್ರದಲ್ಲಿ ಮಲಗಿರುತ್ತಾನಷ್ಟೇ. ಆಗ ಉಳಿದ ದೇವತೆಗಳು ಎಲ್ಲಿದ್ದಾರೆ? ಆದ್ದರಿಂದ ವಿಷ್ಣುವೇ ಸರ್ವೇಶ್ವರನೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ಶ್ರೌತಯುಕ್ತಿಂ ಚಾಹ – ಪ್ರಲಯ ಇತಿ ॥ ಕಿಲೇತ್ಯನೇನ "ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ", "ಸದೇವೇದಮಗ್ರ ಆಸೀತ್", "ಏಕಮೇವಾದ್ವಿತೀಯ"ಮಿತ್ಯಾದಿವಾಕ್ಯಂ ಸೂಚಯತಿ । ತಸ್ಮಾತ್ ಸರ್ವಪ್ರಲಯೇಽಪ್ಯುರ್ವರಿತತ್ವಾತ್ ॥ ೭೬೩ ॥

ಕಿಂಚ ಗೀತೋಪನಿಷದಿ ಸರ್ವಂ ದ್ವಿಪುರುಷಾಖ್ಯಯಾ ।
ಸಂಗೃಹೀತಂ ಹರಿಸ್ತ್ವೇಕಃ ಪುರುಷೋತ್ತಮ ಈರಿತಃ ॥ ೭೬೪ ॥

**ಅರ್ಥ–** ಕಿಂಚ= ಮತ್ತು, ಗೀತೋಪನಿಷದಿ= ಭಗವದ್ಗೀತಾರೂಪವಾದ ಉಪನಿಷತ್ತಿನಲ್ಲಿ, ಸರ್ವಂ= ಎಲ್ಲ ಜೀವರನ್ನು, ದ್ವಿಪುರುಷಾಖ್ಯಯಾ= ಕ್ಷರಾಕ್ಷರ ಪುರುಷರೆಂದು ಹೆಸರಿನಿಂದ, ಸಂಗೃಹೀತಂ= ಸಂಗೃಹೀತವಾಗಿದೆ (ಸಂಗ್ರಹಿಸಿ), ಏಕಃ ಹರಿಸ್ತು= ಒಬ್ಬ ಹರಿಯನ್ನೇ, ಪುರುಷೋತ್ತಮ ಈರಿತಃ= ಪುರುಷೋತ್ತಮನೆಂದು ಹೇಳಲಾಗಿದೆ.

**ಅನುವಾದ–** ಮತ್ತು ಭಗವದ್ಗೀತಾರೂಪವಾದ ಉಪನಿಷತ್ತಿನಲ್ಲಿ ಎಲ್ಲ ಜೀವರನ್ನೂ ಕ್ಷರ ಮತ್ತು ಅಕ್ಷರ ಎಂಬ ಹೆಸರಿನಿಂದ ಸಂಗ್ರಹಿಸಿ ಹರಿಯೊಬ್ಬನನ್ನೇ ಪುರುಷೋತ್ತಮನೆಂದು ಹೇಳಲಾಗಿದೆ. ಆದ್ದರಿಂದಲೂ ಹರಿಯೇ ಸರ್ವೋತ್ತಮನೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–ಗೀತಾವಾಕ್ಯೇನಾಪಿ ಹರೇಃ ಸರ್ವೋತ್ತಮತಾಂ ಸ್ಮಾರಯತಿ–ಕಿಂಚೇತಿ ॥೭೬೪॥**

**ರಾಮಃ ಪ್ರಭೂ ರಾಮಭೃತ್ಯಾ ದೇವಾಃ ಸರ್ವೇಽಪಿ ವಾನರಾಃ ।**
**ಕೃಷ್ಣಃ ಪ್ರಭುಃ ಕೃಷ್ಣಭೃತ್ಯಾ ದೇವಾ ಧರ್ಮಾತ್ಮಜಾದಯಃ ॥ ೭೬೫ ॥**

**ಅರ್ಥ–** ರಾಮಪ್ರಭುಃ= ರಾಮನೇ ಪ್ರಭುವಾದವನು, ಸರ್ವೇದೇವಾಃ ವಾನರಾಃ= ಎಲ್ಲ ದೇವತೆಗಳು ಮತ್ತು ವಾನರರು, ರಾಮಭೃತ್ಯಾ= ರಾಮನ ಸೇವಕರು, ಕೃಷ್ಣಃ ಪ್ರಭುಃ= ಕೃಷ್ಣನು ಸ್ವಾಮಿಯಾದವನು, ಧರ್ಮಾತ್ಮಜಾದಯಃ= ಯುದಿಷ್ಠಿರ ಮೊದಲಾದ, ದೇವಾಃ= ದೇವತೆಗಳು, ಕೃಷ್ಣಭೃತ್ಯಾ= ಕೃಷ್ಣಸೇವಕರು.

**ಅನುವಾದ–** ರಾಮನೇ ಪ್ರಭುವು. ವಾನರ ರೂಪದಲ್ಲಿರುವ ಸರ್ವದೇವತೆಗಳು ರಾಮನ ಭೃತ್ಯರು. ಕೃಷ್ಣನೇ ಪ್ರಭುವು. ಯುದಿಷ್ಠಿರಾದಿ ದೇವತೆಗಳೆಲ್ಲವೂ ಕೃಷ್ಣನ ಭೃತ್ಯರು.

**ಭಾವವಿಲಾಸಿನೀ–** ರಾಮಾಯಣ ಭಾರತಯೋಃ ಕಥಯಾಽಪಿ ವಿಷ್ಣೋಃ ಸರ್ವೋತ್ತಮತಾಂ ಸಾಧಯತಿ । ರಾಮಃ ಪ್ರಭುರಿತ್ಯಾದಿನಾ ॥ ೭೬೫ ॥

**ವಿವರಣೆ–** ರಾಮಾಯಣ, ಮಹಾಭಾರತಾದಿ ಕಥೆಯನ್ನು ಪರಿಶೀಲಿಸಿದರೂ ವಿಷ್ಣುವೇ ಸರ್ವೋತ್ತಮನೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅರ್ಹತ್ತಮೋ ಹ್ಯಗ್ರಪೂಜಾಮರ್ಹತ್ಯನ್ಯೋ ನ ಸಂಸದಿ ।**
**ಯಥೈವೇಹ ತಥಾಽಮುತ್ರ ತದ್ ವಿಷ್ಣುರಖಿಲಪ್ರಭುಃ ॥ ೭೬೬ ॥**

**ಅರ್ಥ–** ಸಂಸದಿ= ಸಭೆಯಲ್ಲಿ, ಯಥಾ= ಹೇಗೆ, ಇಹ= ಈ ಭೂಮಿಯಲ್ಲಿ, ಅರ್ಹತ್ತಮಃ= ಪೂಜ್ಯತಮನಾದವನು, ಅಗ್ರಪೂಜಾಂ= ಅಗ್ರಪೂಜೆಯನ್ನು, ಅರ್ಹತಿ= ಹೊಂದಲು ಯೋಗ್ಯನಾಗುತ್ತಾನೆಯೋ, ಅನ್ಯಃ= ಇನ್ನೊಬ್ಬನು, ನ= ಯೋಗ್ಯ-

ನಾಗುವುದಿಲ್ಲವೋ, ತಥಾ= ಅದರಂತೆ, ಅಮುತ್ರ= ಮೂಲ ರೂಪದಲ್ಲಿಯೂ, ತತ್= ಆ ಕಾರಣದಿಂದ, ವಿಷ್ಣುಃ= ವಿಷ್ಣುವು, ಅಖಿಲಪ್ರಭುಃ= ಸರ್ವಸ್ವಾಮಿಯಾಗಿದ್ದಾನೆ.

**ಅನುವಾದ–** ಹೇಗೆ ಈ ಭೂಲೋಕದಲ್ಲಿ ಪೂಜ್ಯತಮನಾದವನೇ ಸಭೆಯಲ್ಲಿ ಅಗ್ರಪೂಜೆಗೆ ಅರ್ಹನಾಗುತ್ತಾನೆಯೋ ಅದರಂತೆ ಪರಲೋಕದಲ್ಲಿಯೇ ಅದೇ ಕಾರಣದಿಂದ ವಿಷ್ಣುವೇ ಅಖಿಲಸ್ವಾಮಿಯಾಗುತ್ತಾನೆ.

**ಭಾವವಿಲಾಸಿನೀ–** ಅರ್ಹತ್ತಮಃ ಪೂಜ್ಯತಮಃ । ನನು ರಾಮಕೃಷ್ಣಯೋಃ ಸರ್ವೋತ್ತಮತ್ವೇ ಮೂಲರೂಪಸ್ಯ ಕಿಮಾಗತಮಿತ್ಯತ ಆಹ – ಯಥೈವೇತಿ ॥ ತತ್ ತಸ್ಮಾತ್ ಅವತಾರಸ್ಯ ಸರ್ವೋತ್ತಮತ್ವೇ ಮೂಲರೂಪಸ್ಯ ಸರ್ವೋತ್ತಮತಾ ಕಿಂ ವಾಚ್ಯೇತಿ ಭಾವಃ ॥ ೭೬೬ ॥

**ವಿವರಣೆ–** ರಾಮಕೃಷ್ಣರಿಗೆ ಸರ್ವೋತ್ತಮತ್ವವಿದ್ದರೆ ಮೂಲರೂಪಕ್ಕೆ ಏನು ವಿಶೇಷ ಉಂಟಾಯಿತು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ರಾಮಕೃಷ್ಣರು ಮೂಲರೂಪಿಯಾದ ನಾರಾಯಣನ ಅವತಾರಗಳು. ಅವತಾರ ರೂಪಗಳೇ ಸರ್ವೋತ್ತಮವೆಂದು ಸಿದ್ಧವಾದ ಮೇಲೆ ಮೂಲರೂಪವು ಸರ್ವೋತ್ತಮವಾದುದೆಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ.

ತಸ್ಮಾತ್ಸರ್ವೇಶ್ವರೋ ವಿಷ್ಣುಃ ಸರ್ವಂ ಸರ್ವತ್ರ ಸರ್ವದಾ ।
ಪ್ರವರ್ತಯತಿ ಸರ್ವಜ್ಞಃ ಸರ್ವಶಕ್ತಿಃ ಸನಾತನಃ ॥ ೭೬೭ ॥

**ಅರ್ಥ–** ತಸ್ಮಾತ್= ಆದ್ದರಿಂದ, ವಿಷ್ಣುಃ= ವಿಷ್ಣುವು, ಸರ್ವೇಶ್ವರಃ= ಸರ್ವೇಶ್ವರ–ನಾದವನು, ಸನಾತನಃ= ಸನಾತನನಾದ (ಎಂದರೆ ವೇದಪ್ರತಿಪಾದ್ಯನಾದ ಮತ್ತು ಅನಾದಿಯಾದ ಅವನು), ಸರ್ವಶಕ್ತಿಃ= ಸರ್ವಶಕ್ತಿಯುಳ್ಳವನು, ಸರ್ವಜ್ಞಃ= ಸರ್ವಜ್ಞನಾದವನು, ಸರ್ವದಾ= ಎಲ್ಲ ಕಾಲದಲ್ಲಿಯೂ, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ಸರ್ವಂ= ಎಲ್ಲವನ್ನೂ, ಪ್ರವರ್ತಯತಿ= ಪ್ರವರ್ತಿಸುತ್ತಾನೆ.

**ಅನುವಾದ–** ಆದ್ದರಿಂದ ವಿಷ್ಣುವೇ ಸರ್ವೇಶ್ವರನಾದವನು. ಸನಾತನನಾದ ಅವನು ಸರ್ವಜ್ಞನೂ ಮತ್ತು ಸರ್ವಶಕ್ತನೂ ಆದವನು. ಅವನೇ ಸರ್ವಕಾಲಗಳಲ್ಲಿಯೂ, ಸರ್ವದೇಶಗಳಲ್ಲಿಯೂ, ಎಲ್ಲವನ್ನೂ ಪ್ರವರ್ತಿಸುತ್ತಾನೆ.

**ಭಾವವಿಲಾಸಿನೀ–** ವಿಷ್ಣೋಃ ಸರ್ವೋತ್ತಮತ್ವ ಸಾಧನಮುಪಸಂಹರತಿ ॥ **ತಸ್ಮಾದಿತಿ** ॥ ೭೬೭ ॥

ತದ್ ಭೂತಂ ಭೂತಮೇತಸ್ಮಾದ್ ಭವಚ್ಚ ಭವತಿ ಪ್ರಭೋಃ ।
ಭಾವ್ಯಂ ಭವಿಷ್ಯತಿ ಹ್ಯಸ್ಯ ಕೃಪಯಾ ನಾನ್ಯತಃ ಕ್ವಚಿತ್ ॥ ೭೬೮ ॥

**ಅರ್ಥ–** ಯತ್= ಯಾವುದು, ಭೂತಂ= ಉತ್ಪನ್ನವಾಗಿದೆಯೋ, ತತ್= ಅದು, ಏತಸ್ಮಾತ್= ಈ ವಿಷ್ಣುವಿನಿಂದಲೇ, ಭೂತಂ= ಉತ್ಪನ್ನವಾಗಿದೆ, ಭವಚ್ಚ= ಯಾವುದು

ವರ್ತಮಾನ ಕಾಲದಲ್ಲಿದೆಯೋ ಅದು, ಪ್ರಭೋಃ= ಪ್ರಭುವಾದ ವಿಷ್ಣುವಿನಿಂದ, ಭವತಿ= ಉಂಟಾಗಿದೆ, ಭಾವ್ಯಂ= ಮುಂದೆ ಉಂಟಾಗುವುದು, ಅಸ್ಯ ಕೃಪಯಾ= ಈ ಪರಮಾತ್ಮನ ದಯದಿಂದ, ಭವಿಷ್ಯತಿ= ಉಂಟಾಗುತ್ತದೆ, ಅನ್ಯತಃ= ಬೇರೆ ಇನ್ನೊಬ್ಬನಿಂದ, ಕ್ವಚಿತ್= ಎಂದೂ, ನ= ಉಂಟಾಗುವುದಿಲ್ಲ.

**ಅನುವಾದ–** ಭೂತಕಾಲದಲ್ಲಿ ಯಾವುದು ಉತ್ಪನ್ನವಾಗಿದೆಯೋ ಅದೆಲ್ಲವೂ ವಿಷ್ಣುವಿನಿಂದಲೇ ಉತ್ಪನ್ನವಾಗಿದೆ. ವರ್ತಮಾನಕಾಲದಲ್ಲಿ ಯಾವುದು ಇದೆಯೋ ಅದು ವಿಷ್ಣುವಿನಿಂದಲೇ ಉತ್ಪನ್ನವಾಗಿದೆ. ಭವಿಷ್ಯತ್ಕಾಲದಲ್ಲಿ ಯಾವುದು ಉತ್ಪನ್ನವಾಗುವುದೋ, ಅದೂ ವಿಷ್ಣುವಿನಿಂದಲೇ ಉತ್ಪನ್ನವಾಗುವುದು. ಇನ್ನೊಬ್ಬನಿಂದ ಅಲ್ಲ.

**ಭಾವವಿಲಾಸಿನೀ–** ತತ್ ತಸ್ಮಾತ್ ॥ ೭೬೮ ॥

**ಅತಃ ಸರ್ವೇಷ್ಟಲಾಭಾಯ ಸರ್ವಾನಿಷ್ಟನಿವೃತ್ತಯೇ ।**
**ತಮರ್ಚ್ಯಮರ್ಚಯ ಸ್ತುತ್ಯಂ ಸ್ತುಹಿ ನಮ್ಯಂ ನಮಾಚ್ಯುತಮ್ ॥ ೭೬೯ ॥**

**ಅರ್ಥ–** ಅತಃ= ಆದ್ದರಿಂದ, ಸರ್ವೇಷ್ಟಲಾಭಾಯ= ಸರ್ವಾಭೀಷ್ಟಪ್ರಾಪ್ತಿಗಾಗಿ, ಸರ್ವಾನಿಷ್ಟನಿವೃತ್ತಯೇ= ಮತ್ತು ಸರ್ವಾನಿಷ್ಟನಿವೃತ್ತಿಗಾಗಿ, ಅರ್ಚ್ಯಂ= ಅರ್ಚನೀಯನಾದ, ತಂ= ಆ ವಿಷ್ಣುವನ್ನು, ಅರ್ಚಯ= ಪೂಜಿಸು, ಸ್ತುತ್ಯಂ= ಸ್ತೋತ್ರಕ್ಕೆ ಅರ್ಹನಾದ ಅವನನ್ನು, ಸ್ತುಹಿ= ಸ್ತೋತ್ರ ಮಾಡು, ನಮ್ಯಂ= ನಮಸ್ಕಾರಕ್ಕೆ ಯೋಗ್ಯನಾದ, ಅಚ್ಯುತಂ= ಆ ಅಚ್ಯುತನನ್ನು, ನಮ= ನಮಸ್ಕರಿಸು.

**ಅನುವಾದ–** ಆದ್ದರಿಂದ ಸರ್ವಾಭೀಷ್ಟಪ್ರಾಪ್ತಿಗಾಗಿ ಮತ್ತು ಸರ್ವಾನಿಷ್ಟ ನಿವೃತ್ತಿಗಾಗಿ ಪೂಜನೀಯನಾದ ಅವನನ್ನು ಪೂಜಿಸು. ಸ್ತೋತ್ರಾರ್ಹನಾದ ಅವನನ್ನು ಸ್ತೋತ್ರಮಾಡು ಮತ್ತು ನಮಸ್ಕಾರಾರ್ಹನಾದ ಆ ಅಚ್ಯುತನಿಗೆ ನಮಸ್ಕಾರವನ್ನು ಮಾಡು.

**ಭಾವವಿಲಾಸಿನೀ–** ಅತಃ ವಿಷ್ಣೋರೇವ ಭೂತಭವ್ಯಭವತ್‌ಪ್ರಭುತ್ವಾತ್ ॥ ೭೬೯ ॥

**ವಿವರಣೆ–** ಇಲ್ಲಿಗೆ ವಿಷ್ಣುಸರ್ವೋತ್ತಮತ್ವದ ಉಪಪಾದನೆಯನ್ನು ಉಪಸಂಹಾರ ಮಾಡಿ ಇನ್ನು ಮುಂದಿನ ಗ್ರಂಥಭಾಗದಿಂದ ಐದು ಸೌರಭಗಳಲ್ಲಿ ಹೇಳಿದ ವಿಷಯಗಳನ್ನು ಶಿಷ್ಯಬುದ್ಧಿಯಲ್ಲಿ ಆರೋಹವನ್ನು ಮಾಡಲು ಸಂಗ್ರಹಿಸುತ್ತಾರೆ. ಮತ್ತು ಕೆಲವು ಹೊಸ ಪ್ರಮೇಯಗಳನ್ನೂ ಸಹ ನಿರೂಪಿಸುತ್ತಾರೆ. ಅದರಲ್ಲಿ ಮೊದಲು ಪ್ರಮಾಕರಣಕ್ಕೇ ಪ್ರಾಮಾಣ್ಯವನ್ನು ಹೇಳಿ ಪ್ರಮೆಗೆ ಪ್ರಾಮಾಣ್ಯವನ್ನು ಒಪ್ಪದಿರುವ ಮತ್ತು ಸ್ಮೃತಿಗೂ ಅಯಥಾರ್ಥತ್ವವನ್ನು ಹೇಳುವ ತಾರ್ಕಿಕ ಮತವನ್ನು ದೂಷಿಸುತ್ತಾರೆ.

**ಜ್ಞಾನಂ ಮಾನಂ ನೇತಿ ವಾಕ್ಯಂ ವ್ಯಾಹತಂ ಸ್ಯಾದ್ ವಿಚಾರಣೇ ।**
**ಧಾತ್ವರ್ಥಃ ಪ್ರತ್ಯಯಾರ್ಥಶ್ಚ ಯತಃ ಸ್ಥಾನದ್ವಯೇ ಸಮಃ ॥ ೭೭೦ ॥**

**ಅರ್ಥ–** ಜ್ಞಾನಂ= ಜ್ಞಾನವು, ಮಾನಂ ನ= ಪ್ರಮಾಣವಲ್ಲ, ಇತಿ ವಾಕ್ಯಂ= ಎಂಬ ವಾಕ್ಯವು, ವಿಚಾರಣೇ= ವಿಚಾರಣ ಮಾಡಿದರೆ, ವ್ಯಾಹತಂ ಸ್ಯಾತ್= ವ್ಯಾಹತವಾಗುತ್ತದೆ, ಯತಃ= ಏಕೆಂದರೆ, ಧಾತ್ವರ್ಥಃ= ಧಾತ್ವರ್ಥವು, ಪ್ರತ್ಯಯಾರ್ಥಶ್ಚ= ಮತ್ತು ಪ್ರತ್ಯಯಾರ್ಥವು, ಸ್ಥಾನದ್ವಯೇ= ಎರಡು ಕಡೆಗಳಲ್ಲಿಯೂ, ಸಮಃ= ಸಮಾನವಾಗಿದೆ.

**ಅನುವಾದ–** ಜ್ಞಾನವು ಪ್ರಮಾಣವಲ್ಲ ಎಂಬ ವಾಕ್ಯವು ವಿಚಾರ ಮಾಡಿದರೆ ವ್ಯಾಹತವಾಗುತ್ತದೆ. ಏಕೆಂದರೆ ಎರಡು ಕಡೆಗಳಲ್ಲಿಯೂ ಧಾತ್ವರ್ಥವೂ ಮತ್ತು ಪ್ರತ್ಯಯಾರ್ಥವೂ ಸಮಾನವಾಗಿದೆ.

**ಭಾವವಿಲಾಸಿನೀ–** ಪಂಚಸೌರಭೇಷು ವಿಸ್ತೃತಪ್ರಮೇಯಧಾರಣಾಯಾಸಮರ್ಥಸ್ಯ ಮಂದಮತೇರಪಿ ಸಾಧೋರ್ಬೋಧಾಯ ತತ್ರೋಕ್ತಂ ಪ್ರಮೇಯಂ ಅಭಿನವಂ ಚ ಪ್ರಮೇಯಂ ಮಾಲಾರೂಪೇಣ ಸಂಗ್ರಹೀತುಮುತ್ತರೋ ಗ್ರಂಥಸಂದರ್ಭಃ । ತತ್ರಾದೌ ಪ್ರಮಾಣಕರಣಸ್ಯೈವ ಪ್ರಾಮಾಣ್ಯಂ ಪ್ರಮಾಯಾ ಅಪ್ರಮಾಣ್ಯಂ ಸ್ಮೃತೇಃ ಅಯಾಥಾರ್ಥ್ಯಂ ಚ ವದಂತಂ ತಾರ್ಕಿಕಂ ದೂಷಯತಿ ॥ **ಜ್ಞಾನಮಿತ್ಯಾದಿನಾ** ॥ ಕುತೋ ವ್ಯಾಹತಿರಿತ್ಯಾತ ಆಹ–**ಧಾತ್ವರ್ಥ ಇತಿ** ॥ **ಧಾತ್ವರ್ಥಃ** ಜ್ಞಾ ಅವಬೋಧನೇ ಮಾಙ್ಮಾನ ಇತಿ ಧಾತ್ವರ್ಥಃ । ಉಭಯೋರಪಿ ಜ್ಞಾನವಾಚಕತ್ವಾದಿತಿ ಭಾವಃ । ಪ್ರತ್ಯಯಾರ್ಥಃ ಲ್ಯುಟ್‌ಪ್ರತ್ಯಯಾರ್ಥಃ । ಲ್ಯುಟ್ ಪ್ರತ್ಯಯೇ ಕೃತೇ ಸತಿ ಲಕಾರೋಕಾರ ಟಕಾರಾಣಾಂ ಲಶಕ್ವತದ್ಧಿತೇ ಉಪದೇಶಜನುನಾಸಿಕ ಇತ್, ಹಲಂತ್ಯಮಿತಿ ಚ ಲೋಪೇ ಕೃತೇ ಸತಿ ಉರ್ವರಿತಯಕಾರಸ್ಯ ಯುವೋರನಾಕಾವಿತ್ಯನಾದೇಶೇಕೃತೇ ಸತಿ ಉಭಯತ್ರಾಪಿ ಶಬ್ದನಿಷ್ಪತ್ತೇರಿತಿ ಭಾವಃ ॥ ೭೭೦ ॥

**ವಿವರಣೆ–** ಜ್ಞಾನ ಎಂಬಲ್ಲಿ ಜ್ಞಾ ಅವಬೋಧನೇ ಎಂದು ಧಾತು. ಅವಬೋಧನೆ ಎಂದರೆ ಜ್ಞಾನವೇ. ಮತ್ತು ಭಾವಾರ್ಥಕ ಲ್ಯುಟ್ ಪ್ರತ್ಯಯವಿದೆ. ಮಾನ ಎಂಬಲ್ಲಿಯೂ ಮಾಙ್ಮಾನೇ ಎಂದು ಧಾತು. ಮಾನ ಎಂದರೆ ಜ್ಞಾನವೆಂದೇ ಅರ್ಥ. ಭಾವಾರ್ಥಕ ಲ್ಯುಟ್ ಪ್ರತ್ಯಯವೇ ಇದೆ. ಹೀಗೆ ಧಾತು ಮತ್ತು ಪ್ರತ್ಯಯಗಳು ಸಮಾನವಾಗಿರುವಾಗ ಜ್ಞಾನವು ಪ್ರಮಾಣವಲ್ಲ ಎಂದು ಹೇಳಿದರೆ ಜ್ಞಾನವು ಜ್ಞಾನವಲ್ಲ ಎಂದು ಹೇಳಿದಂತಾಗಿ ವ್ಯಾಹತಿಯು ಬರುತ್ತದೆ ಎಂದು ಅಭಿಪ್ರಾಯ.

**ಸ್ವತಸ್ತ್ವವಾದೇ ಪ್ರಾಮಾಣ್ಯಂ ಕಸ್ಯೇತಿ ಚ ವಿಚಾರಯ ॥ ೭೭೧ ॥**

**ಅರ್ಥ–** ಸ್ವತಸ್ತ್ವವಾದೇ= ಜ್ಞಾನಪ್ರಾಮಾಣ್ಯದ ಸ್ವತಸ್ತ್ವ ಪರತಸ್ತ್ವ ವಾದದಲ್ಲಿ, ಕಸ್ಯ= ಯಾವುದಕ್ಕೆ, ಪ್ರಾಮಾಣ್ಯಂ ಇತಿ= ಪ್ರಾಮಾಣ್ಯವೆಂದು, ವಿಚಾರಯ= ವಿಚಾರ ಮಾಡು.

**ಅನುವಾದ–** ಜ್ಞಾನಪ್ರಾಮಾಣ್ಯದ ಸ್ವತಸ್ತ್ವಪರತಸ್ತ್ವವಾದದಲ್ಲಿ ಯಾವುದಕ್ಕೆ ಪ್ರಾಮಾಣ್ಯ ಎಂದು ವಿಚಾರ ಮಾಡು.

**ಭಾವವಿಲಾಸಿನೀ–** ಸ್ವತಸ್ತ್ವವಾದೇ ಜ್ಞಾನಪ್ರಾಮಾಣ್ಯಸ್ಯ ಸ್ವತಸ್ತ್ವಪರತಸ್ತ್ವವಾದೇ । ತದಾ ಜ್ಞಾನಸ್ಯೈವ ಪ್ರಾಮಾಣ್ಯಮಂಗೀಕ್ರಿಯತೇ ಲಕ್ಷಣಕಥನಸಮಯೇ ಪುನರ್ಜ್ಞಾನಪ್ರಾಮಾಣ್ಯಂ ನಾಂಗೀಕ್ರಿಯತೇ । ತತೋಽಪಿ ವ್ಯಾಹತಿರಿತಿ ಭಾವಃ ॥ ೭೭೧ ॥

**ವಿವರಣೆ–** ವಿಚಾರ ಮಾಡುತ್ತಿರುವ ವಿಷಯ ಜ್ಞಾನಪ್ರಾಮಾಣ್ಯ ಎಂದು ಒಪ್ಪಿ ಜ್ಞಾನವು ಪ್ರಮಾಣವಲ್ಲ ಎಂದು ಹೇಳಿದರೆ ವ್ಯಾಹತಿಯು ಉಂಟಾಗುತ್ತದೆ ಎಂದು ಅಭಿಪ್ರಾಯ.

**ಪ್ರಜ್ಞಪ್ತಿಃ ಪ್ರಮಿತಿಃ ಪ್ರಜ್ಞಾ ಪ್ರಮಾ ಪ್ರಜ್ಞಾನಮೇವ ಹಿ ।**
**ಪ್ರಮಾಣಂ ಸ್ಯಾದ್ ಯತಃ ಶಬ್ದಾಃ ಪರ್ಯಾಯಾಃ ಶಕ್ತಿಶೋಧನೇ॥ ೭೭೨ ॥**

**ಅರ್ಥ–** ಪ್ರಜ್ಞಪ್ತಿಃ= ಪ್ರಜ್ಞಪ್ತಿಯು, ಪ್ರಮಿತಿಃ= ಪ್ರಮಿತಿಯು, ಪ್ರಜ್ಞಾ= ಪ್ರಜ್ಞೆಯು, ಪ್ರಮಾ= ಪ್ರಮೆಯು, ಪ್ರಜ್ಞಾನಮೇವ= ಮತ್ತು ಪ್ರಜ್ಞಾನವು, ಪ್ರಮಾಣಂ ಸ್ಯಾತ್‌ಹಿ= ಪ್ರಮಾಣ ಶಬ್ದಾರ್ಥವಾಗುತ್ತದೆಯಷ್ಟೆ, ಯತಃ= ಏಕೆಂದರೆ, ಶಕ್ತಿಶೋಧನೇ= ಈ ಪದಗಳ ಶಕ್ತಿಯನ್ನು ವಿಚಾರ ಮಾಡಿದರೆ, ಶಬ್ದಾಃ= ಈ ಶಬ್ದಗಳು, ಪರ್ಯಾಯಾಃ= ಪರ್ಯಾಯ ಪದಗಳಾಗಿವೆ.

**ಅನುವಾದ–** ಪ್ರಜ್ಞಪ್ತಿ, ಪ್ರಮಿತಿ, ಪ್ರಜ್ಞಾ, ಪ್ರಮಾ, ಪ್ರಜ್ಞಾನ ಈ ಎಲ್ಲವೂ ಪ್ರಮಾಣ ಶಬ್ದಗಳ ಅರ್ಥವಾಗುತ್ತವೆ. ಏಕೆಂದರೆ ಈ ಶಬ್ದಗಳ ಶಕ್ತಿಯನ್ನು ಪರೀಕ್ಷೆ ಮಾಡಿದರೆ ಈ ಎಲ್ಲವೂ ಪರ್ಯಾಯ ಪದಗಳೆಂದು ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ಪ್ರಾಥಮಿಕ ವ್ಯಾಹತಿಮುಪಪಾದಯತಿ ॥ ಪ್ರಜ್ಞಪ್ತಿರಿತಿ ॥ ಯತಃ ಶಬ್ದಾಃ ಪ್ರಜ್ಞಪ್ತಿಶಬ್ದಮಾರಭ್ಯ ಪ್ರಜ್ಞಾನಾಂತಶಬ್ದಾಃ ಪರ್ಯಾಯಾಃ ಉಕ್ತವಿಧಯಾ ಧಾತೋಃ ಪ್ರತ್ಯಯಸ್ಯ ಚ ಸಮತ್ವೇನೈಕಾರ್ಥವಾಚಕಾಃ । ತತ್ ತಸ್ಮಾತ್ ಪ್ರಜ್ಞಪ್ತ್ಯಾದಿಪ್ರಜ್ಞಾನಾಂತಪದವಾಚ್ಯಮೇವ ವಸ್ತು ಪ್ರಮಾಣಂ ಸ್ಯಾತ್ । ಅನ್ಯಥಾ ಘಟೋ ಭವತಿ ಕರೀರೋ ನೇತಿವತ್ ಕಥಂ ನ ವ್ಯಾಹತಿರಿತಿ ಭಾವಃ ॥ ೭೭೨ ॥

**ವಿವರಣೆ–** ಮೊದಲು ಹೇಳಿದ ವ್ಯಾಹತಿಯನ್ನು ಇಲ್ಲಿ ಉಪಪಾದನೆ ಮಾಡುತ್ತಾರೆ. ಪ್ರಮಾಣ ಶಬ್ದವಾಚ್ಯವಾದ ವಸ್ತುವು ಪ್ರಜ್ಞಪ್ತ್ಯಾದಿಶಬ್ದವಾಚ್ಯವೇ ಆಗಿರುತ್ತದೆ. ಪ್ರಜ್ಞಪ್ತ್ಯಾದಿ ಶಬ್ದವಾಚ್ಯವಾದ ವಸ್ತುವನ್ನು ಅಪ್ರಮಾಣವೆಂದು ಅಂಗೀಕರಿಸಿದರೆ ಇದು ಘಟ ಕಲಶವಲ್ಲ ಎಂದು ಹೇಳಿದಂತೆ ವ್ಯಾಹತಿ ಉಂಟಾಗುವುದು ಎಂದು ಅಭಿಪ್ರಾಯ.

**ಶ್ರವಣಂ ಮನನಂ ಧ್ಯಾನಂ ದರ್ಶನಂ ಸ್ಮರಣಂ ತಥಾ ।**
**ಗಮನಂ ಮೋಚನಂ ಬಂಧಾದ್ ರಮಣಂ ಚ ಕಿಮುಚ್ಯತಾಮ್॥ ೭೭೩ ॥**

ಗರ್ಭಾಧಾನಂ ಚ ಜನನಂ ತಥೋಪನಯನಂ ಚ ಕಿಂ ।
ಯಜನಾಧ್ಯಯನೇ ದಾನಭೋಜನೇ ಕೇ ವಿಚಾರಯ ॥ ೭೭೪ ॥

ಭಾವಾರ್ಥಕಲ್ಯುಡಂತೋಕ್ತಿಬಾಹುಲ್ಯಸ್ಯೈವ ದರ್ಶನಾತ್ ।
ಅರ್ಥೋಽಸೌ ಪ್ರಥಮಪ್ರೋಕ್ತೋ ಮುಖ್ಯಸ್ತಸ್ಯೇತಿ ಮೇ ಮತಿಃ ।
ತಲ್ಯುಟೋ ಭಾವವಾಚಿತ್ವಂ ಮರಣೇಪಿ ನ ಗಚ್ಛತಿ ॥ ೭೭೫ ॥

**ಅರ್ಥ–** ಶ್ರವಣಂ= ಶ್ರವಣ, ಮನನಂ= ಮನನ, ಧ್ಯಾನಂ= ಧ್ಯಾನ, ದರ್ಶನಂ= ದರ್ಶನ, ತಥಾ= ಅದರಂತೆ, ಸ್ಮರಣಂ= ಸ್ಮರಣ, ಗಮನಂ= ಗಮನ, ಬಂಧಾದ್‌ಮೋಚನಂ= ಬಂಧದಿಂದ ಮೋಚಂ, ಭ್ರಮಣಂ ಚ= ಮತ್ತು ಭ್ರಮಣವೂ ಕೂಡ, ಕಿಂ= ಏನೆಂದು, ಉಚ್ಯತಾಂ= ಹೇಳು, ಗರ್ಭಾಧಾನಂ= ಗರ್ಭಾಧಾನ, ಚ= ಮತ್ತು, ಜನನಂ= ಜನನ, ತಥಾ= ಅದರಂತೆ, ಉಪನಯನಂ ಚ= ಉಪನಯನವು, ಕಿಂ= ಏನು? ಯಜನಾಧ್ಯಯನೇ= ಯಜನ ಮತ್ತು ಅಧ್ಯಯನಗಳು, ದಾನಭೋಜನೇ= ದಾನ ಮತ್ತು ಭೋಜನಗಳು, ಕೇ= ಏನು ಎಂದು, ವಿಚಾರಯ= ವಿಚಾರ ಮಾಡು. ಭಾವಾರ್ಥಕಲ್ಯುಡಂತೋಕ್ತಿ-ಬಾಹುಲ್ಯಸ್ಯೈವ= ಭಾವಾರ್ಥಕವಾದ ಲ್ಯುಟ್ ಪ್ರತ್ಯಯಾಂತವಾದ ಶಬ್ದಗಳ ಬಹುಲ ಪ್ರಯೋಗವೇ, ದರ್ಶನಾತ್= ಕಂಡುಬರುವುದರಿಂದ, ಪ್ರಥಮಪ್ರೋಕ್ತಃ= ಮೊದಲು ಹೇಳಲ್ಪಟ್ಟ, ಅಸೌ ಅರ್ಥಃ= ಈ ಭಾವರೂಪವಾದ ಅರ್ಥವು, ತಸ್ಯ= ಆ ಲ್ಯುಟ್‌ಪ್ರತ್ಯಯಕ್ಕೆ, ಮುಖ್ಯಃ= ಮುಖ್ಯವಾದ ಅರ್ಥವೆಂದು, ಮೇ ಮತಿಃ= ನನ್ನ ಅಭಿಪ್ರಾಯ, ತತ್= ಆದ್ದರಿಂದ, ಲ್ಯುಟೋ ಭಾವವಾಚಿತ್ವಂ= ಲ್ಯುಟ್ ಪ್ರತ್ಯಯದ ಭಾವವಾಚಿತ್ವವು, ಮರಣೇಪಿ= ಸತ್ತರೂ ಕೂಡ (ಮರಣ ಎಂಬ ಶಬ್ದದಲ್ಲಿಯೂ ಕೂಡ), ನ ಗಚ್ಛತಿ= ಬಿಟ್ಟು ಹೋಗುವುದಿಲ್ಲ.

**ಅನುವಾದ–** ಶ್ರವಣ, ಮನನ, ಧ್ಯಾನ, ದರ್ಶನ, ಸ್ಮರಣ, ಗಮನ, ಬಂಧಾದ್ ಮೋಚನ ಮತ್ತು ರಮಣ ಇವೆಲ್ಲವೂ ಏನು ಎಂದು ಹೇಳು. ಗರ್ಭಾಧಾನ, ಜನನ ಮತ್ತು ಉಪನಯನಗಳು ಏನು ಎಂದು ಹೇಳು? ಯಜನಾಧ್ಯಯನಗಳು ಮತ್ತು ದಾನ ಭೋಜನಗಳು ಏನು ಎಂದು ವಿಚಾರ ಮಾಡು. ಭಾವಾರ್ಥಕವಾದ ಲ್ಯುಡಂತ ಶಬ್ದಗಳ ಬಹುಲ ಪ್ರಯೋಗವೇ ಕಂಡುಬರುವುದರಿಂದ ಲ್ಯುಟ್ ಪ್ರತ್ಯಯಕ್ಕೆ ಮೊದಲು ಹೇಳಲ್ಪಟ್ಟ ಭಾವರೂಪವಾದ ಅರ್ಥವು ಮುಖ್ಯಾರ್ಥವೆಂದು ನನ್ನ ಅಭಿಪ್ರಾಯ. ಲ್ಯುಟ್ ಪ್ರತ್ಯಯಕ್ಕೆ ಭಾವವಾಚಿತ್ವವು ಮರಣದಲ್ಲಿಯೂ ಹೋಗುವುದಿಲ್ಲ. (ಮರಣಶಬ್ದದಲ್ಲಿರುವ ಲ್ಯುಟ್ ಪ್ರತ್ಯಯವೂ ಸಹ ಭಾವಾರ್ಥಕವೇ ಆಗಿದೆ).

**ಭಾವವಿಲಾಸಿನೀ–** ನನು ಲ್ಯುಟಃ ಕರಣಾರ್ಥ ಏವ ಮುಖ್ಯಃ ಭಾವಾರ್ಥಸ್ತು ನ ಮುಖ್ಯಃ । ಅತಃ ಕಥಂ ಜ್ಞಾನಂ ಪ್ರಮಾಣಂ ಸ್ಯಾದಿತಿ ಮಂದಾಶಂಕಾಂ ಭಾವಾರ್ಥ ಏವ ಲ್ಯುಟಃ ಪ್ರಯೋಗ-

ಬಾಹುಲ್ಯಂ ಪ್ರದರ್ಶ್ಯ ತಸ್ಯೈವ ಮುಖ್ಯಾರ್ಥತ್ವಮುಪಪಾದಯನ್ಪರಿಹರತಿ-ಶ್ರವಣಮಿತ್ಯಾದಿನಾ । ಪ್ರಥಮಪ್ರೋಕ್ತಃ ಭಾವೇ ಕರಣಾಧಿಕರಣಯೋಶ್ಚೇತ್ಯತ್ರ ಪ್ರಥಮತಃ ಪಾಣಿನೀನಾ ಅನುಶಿಷ್ಟಃ । ಉಪಲಕ್ಷಣಂ ಚೈತತ್ । ಉಕ್ತವಿಧಾಯಾ ಭಾವ ಏವ ಬಹುಶಃ ಪ್ರಯೋಗಾಣಾಂ ಲೋಕೇ ಅನುವೃತ್ತತ್ವಾನ್ನಮಯಾ ಪೃಥಗ್ಗ್ರಹಣಮಿತ್ಯನುವೃತ್ತಿಸೂತ್ರೇಣೈವಾಹ । ಅಪ್ರಧಾನಾಭ್ಯಾಮಾಭ್ಯಾಂ ಕರಣಾಧಿಕರಣಾಭ್ಯಾಂ ಸಹ ನ ಪಪಾಠ ಚೇತ್ಯಪಿ ದ್ರಷ್ಟವ್ಯಮ್ ।. ತಸ್ಯ ಪ್ರತ್ಯಯಸ್ಯ । ತತ್ ತಸ್ಮಾತ್ ಮರಣೇಽಪಿ ಮರಣಶಬ್ದೇಽಪಿ ಮೃತಾವಿತಿಧ್ವನಿಃ ॥ ೭೭೩-೭೭೫ ॥

**ವಿವರಣೆ–** ಶ್ರವಣಾದಿ ಭೋಜನ ಮತ್ತು ಮರಣಾಂತವಾದ ಎಲ್ಲ ಶಬ್ದಗಳಲ್ಲಿಯೂ ಲ್ಯುಟ್ ಪ್ರತ್ಯಯವು ಭಾವಾರ್ಥದಲ್ಲಿಯೇ ಪ್ರಯೋಗಿಸಲ್ಪಟ್ಟಿದೆ. ಪಾಣಿನಿಯು ಲ್ಯುಟ್ ಪ್ರತ್ಯಯವನ್ನು ಭಾವೇ ಎಂದು ಭಾವಾರ್ಥದಲ್ಲಿ ಮೊದಲು ಅನುಶಾಸನವನ್ನು ಮಾಡಿ ಅನಂತರ ಕರಣಾಧಿಕರಣಯೋಶ್ಚ ಎಂದು ಕರಣ ಮತ್ತು ಅಧಿಕರಣಾರ್ಥದಲ್ಲಿ ಅನುಶಾಸನ ಮಾಡಿದ್ದಾನೆ. ಆದ್ದರಿಂದ ಮೊದಲನೆಯ ಅರ್ಥ ಭಾವಾರ್ಥ. ಎರಡನೆಯ ಅರ್ಥ ಕರಣ ಮತ್ತು ಅಧಿಕರಣಗಳು. ಮೊದಲನೆಯ ಭಾವಾರ್ಥದಲ್ಲಿ ಪ್ರಯೋಗವು ಅಧಿಕವಾಗಿರುವುದರಿಂದ ಭಾವಾರ್ಥವೇ ಲ್ಯುಟ್‌ಪ್ರತ್ಯಯದ ಮುಖ್ಯಾರ್ಥ ಎಂದು ಅಂಗೀಕರಿಸಬೇಕು. ಆದ್ದರಿಂದ ಜ್ಞಾನವು ಪ್ರಮಾಣವಲ್ಲ ಎಂದು ಹೇಳಿದರೆ ವ್ಯಾಹತಿ ದೋಷವು ಬಂದೇ ಬರುತ್ತದೆ ಎಂದು ಅಭಿಪ್ರಾಯ.

**ಪ್ರಮಾಣೀಭೂತಭಾವಾರ್ಥಮನುಸೃತ್ಯೈವ ತಲ್ಲ್ಯುಟಃ ।**
**ಕರಣೇಪಿ ಪ್ರವೃತ್ತಿಃ ಸ್ಯಾತ್ ಧಾತ್ವರ್ಥಸ್ಯ ಪ್ರವೇಶನಾತ್ ॥ ೭೭೬ ॥**

**ಅರ್ಥ–** ಪ್ರಮಾಣೀಭೂತಭಾವಾರ್ಥಂ= ಪ್ರಮಾಣರೂಪವಾದ ಭಾವಾರ್ಥವನ್ನು, ಅನುಸೃತ್ಯೈವ= ಅನುಸರಿಸಿಯೇ, ಲ್ಯುಟಃ= ಲ್ಯುಟ್‌ಪ್ರತ್ಯಯಕ್ಕೆ, ಕರಣೇಪಿ= ಕರಣ-ದಲ್ಲಿಯೂ, ಧಾತ್ವರ್ಥಸ್ಯ ಪ್ರವೇಶನಾತ್= ಧಾತ್ವರ್ಥದ ಪ್ರವೇಶವಿರುವುದರಿಂದ, ಪ್ರವೃತ್ತಿಃ ಸ್ಯಾತ್= ಪ್ರವೃತ್ತಿಯು ಉಂಟಾಗುತ್ತದೆ.

**ಅನುವಾದ–** ಕರಣದಲ್ಲಿಯೂ ಧಾತ್ವರ್ಥವಾದ ಜ್ಞಾನದ ಪ್ರವೇಶವಿರುವುದರಿಂದ ಪ್ರಮಾಣರೂಪವಾದ ಭಾವಾರ್ಥವನ್ನು ಅನುಸರಿಸಿಯೇ ಲ್ಯುಟ್‌ಪ್ರತ್ಯಯಕ್ಕೆ ಕರಣದಲ್ಲಿಯೂ ಪ್ರವೃತ್ತಿ ಇರುತ್ತದೆ.

**ಭಾವವಿಲಾಸಿನೀ–** ಜ್ಞಾನಸ್ಯ ಕರಣಾನುಸರಣಂ ವಿನಾ ಸ್ವಶಕ್ತ್ಯೈವ ಪ್ರಮಾಣಶಬ್ದವಾಚ್ಯತ್ವಾತ್ ಕೇವಲಪ್ರಮಾಣತ್ವಮ್ । ಕರಣಸ್ಯ ತು ಜ್ಞಾನಮನುಸೃತ್ಯೈವ ಪ್ರಮಾಣಶಬ್ದವಾಚ್ಯತ್ವಮಿತ್ಯಾಹ – **ಪ್ರಮಾಣೀಭೂತೇತಿ** ॥ ತಲ್ಲಯುಟಃ ತಸ್ಮಿನ್ ಪ್ರಮಾಣಾಪರಪರ್ಯಾಯ ಪ್ರಜ್ಞಾರೂಪಾರ್ಥೇ ಪ್ರಯುಕ್ತಲ್ಯುಟಃ । ಕಥಂ ಭಾವಾನುಸರಣಮಿತ್ಯತ ಆಹ – **ಧಾತ್ವರ್ಥಸ್ಯೇತಿ** ॥ ಪ್ರಮೀಯತೇ ಅನೇನೇತಿ ಕರಣವ್ಯುತ್ಪತ್ತೌ ಧಾತ್ವರ್ಥರೂಪಜ್ಞಾನಸ್ಯ ಪ್ರವೇಶತಃ ಪ್ರಮಾಣೀಭೂತಭಾವಾರ್ಥ-

**ಮನುಸೃತ್ಯೈವತಲ್ಲ್ಯುಟಃ ಕರಣೇಽಪಿ ಪ್ರವೃತ್ತಿಃ ಸ್ಯಾದಿತಿ ಯೋಜನಾ । ಉಪಲಕ್ಷಣಂ ಚೈತತ್ । ಪ್ರಮಿತಿಃ ಪ್ರಮಾಣಮಿತಿ ಭಾವವ್ಯುತ್ಪತ್ತೌ ಕರಣಸ್ಯಾಪ್ರವೇಶತಃ ಕರಣಮನನುಸೃತ್ಯೈವಾನ್ಯತ್ರಾಪ್ರಯುಕ್ತಲ್ಯುಟಃ ಪ್ರಥಮತ ಏವ ಭಾವೇ ಪ್ರವೃತ್ತಿರಿತ್ಯಪಿ ದ್ರಷ್ಟವ್ಯಮ್ ॥೭೭೬॥**

**ವಿವರಣೆ–** ಜ್ಞಾನಕ್ಕಾದರೆ ಕರಣದ ಅಪೇಕ್ಷೆ ಇಲ್ಲದೆ ಸ್ವಶಕ್ತಿಯಿಂದಲೇ ಪ್ರಮಾಣಶಬ್ದವಾಚ್ಯತ್ವವು ಇರುವುದರಿಂದ ಕೇವಲ ಪ್ರಮಾಣತ್ವವಿದೆ. ಕರಣಕ್ಕಾದರೆ ಜ್ಞಾನವನ್ನು ಅನುಸರಿಸಿಯೇ ಪ್ರಮಾಣಶಬ್ದವಾಚ್ಯತ್ವವಿದೆ ಎಂದು ಇಲ್ಲಿ ಹೇಳುತ್ತಾರೆ. ಏಕೆಂದರೆ ಕರಣವ್ಯುತ್ಪತ್ತಿಯನ್ನು ಮಾಡುವುದಾದರೆ 'ಪ್ರಮೀಯತೇ ಅನೇನೇತಿ ಪ್ರಮಾಣಂ' ಇದರಿಂದ ಪ್ರಮತಿ ಉಂಟಾಗುವುದರಿಂದ ಇದು ಪ್ರಮಾಣ ಎಂದು ವ್ಯುತ್ಪತ್ತಿಯನ್ನು ಹೇಳಬೇಕು. ಆಗ ಪ್ರಮೀಯತೇ ಎಂಬಲ್ಲಿ ಪ್ರಮಿತಿ ರೂಪವಾದ ಭಾವಾರ್ಥವು ಸೇರಿಕೊಂಡಿರುವುದರಿಂದ ಭಾವಾರ್ಥವನ್ನು ಅನುಸರಿಸಿಯೇ ಕರಣವು ಪ್ರಮಾಣ ಶಬ್ದವಾಚ್ಯವಾಗುವುದೆಂದು ಅಭಿಪ್ರಾಯ. ಇದನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. ಪ್ರಮಿತಿಃ ಪ್ರಮಾಣಂ ಎಂದು ಭಾವವ್ಯುತ್ಪತ್ತಿಯನ್ನು ಹೇಳಿದರೆ ಅಲ್ಲಿ ಕರಣದ ಪ್ರವೇಶವೇ ಇಲ್ಲದಿರುವುದರಿಂದ ಭಾವದಲ್ಲಿಯೇ ಲ್ಯುಟ್ ಪ್ರತ್ಯಯಕ್ಕೆ ಪ್ರಥಮ ಪ್ರವೃತ್ತಿ ಎಂದು ಸಿದ್ಧವಾಗುತ್ತದೆ ಎಂದೂ ಇಟ್ಟುಕೊಳ್ಳಬೇಕು.

**ತತ್ ಕೇವಲಂ ಪ್ರಮಾಣಂ ಸ ಕರಣೇಽನುಪ್ರಮಾಣತಾ ।**
**ಯತೋಽನುಶಾಸನಂ ಚಾನು ತತೋಪ್ಯೇತದ್ ಗುಣೋಚಿತಮ್ ॥ ೭೭೭ ॥**

**ಅರ್ಥ–** ತತ್= ಆದ್ದರಿಂದ, ಸಃ= ಆ ಭಾವಾರ್ಥವು, ಕೇವಲಂ ಪ್ರಮಾಣಂ= ಕೇವಲ ಪ್ರಮಾಣವೆನಿಸುತ್ತದೆ, ಕರಣೇ= ಕರಣದಲ್ಲಾದರೂ, ಅನುಪ್ರಮಾಣತಾ= ಭಾವವನ್ನು ಅನುಸರಿಸಿದ ಪ್ರಮಾಣತ್ವವು ಇದೆ, ಯತಃ= ಏಕೆಂದರೆ, ಅನುಶಾಸನಂ= ಕರಣದಲ್ಲಿ ಅನುಶಾಸನವೂ ಕೂಡ, ಅನು= ಭಾವದಲ್ಲಿ ಅನುಶಾಸನವನ್ನು ಮಾಡಿದ ನಂತರ ಇದೆ. ತತೋಪಿ= ಆ ಕಾರಣದಿಂದಲೂ ಕೂಡ, ಏತತ್= ಇದು, ಗುಣೋಚಿತಂ= ಸ್ವೀಕಾರ ಯೋಗ್ಯವಾದ ಗುಣದಿಂದ ಕೂಡಿದ್ದಾಗಿದೆ.

**ಅನುವಾದ–** ಆದ್ದರಿಂದ ಆ ಭಾವಾರ್ಥವು ಕೇವಲ ಪ್ರಮಾಣವಾಗುತ್ತದೆ. ಕರಣವಾದರೂ ಅನುಪ್ರಮಾಣವಾಗುತ್ತದೆ. ಏಕೆಂದರೆ ಲ್ಯುಟ್ ಪ್ರತ್ಯಯವನ್ನು ಮೊದಲು ಭಾವಾರ್ಥದಲ್ಲಿ ಅನುಶಾಸನ ಮಾಡಿ ಅನಂತರ ಕರಣಾರ್ಥದಲ್ಲಿ ಅನುಶಾಸನವನ್ನು ಮಾಡಿದ್ದಾರೆ. ಆದ್ದರಿಂದಲೂ ಹೀಗೆ ಸ್ವೀಕರಿಸುವುದು ಯೋಗ್ಯವಾಗಿದೆ.

**ಭಾವವಿಲಾಸಿನೀ–** ತತ್ತಸ್ಮಾದ್ಭಾವೇ ನೈರಪೇಕ್ಷ್ಯೇಣೈವ ಪ್ರಮಾಶಬ್ದಪ್ರವೃತ್ತೇಃ ಕರಣೇ ಅನ್ವಾನುಸರಣೇನೈವ ಪ್ರವೃತ್ತೇಶ್ಚ । ಸಃ ಭಾವಾರ್ಥಃ । ಪ್ರಾಗುಕ್ತನಿಮಿತ್ತಂ ಚ ಸ್ಮಾರಯತಿ- **ಯತ ಇತಿ ॥**

ಅನು ಅನಂತರಮ್ । ಏತತ್ ಕರಣೇ ಅನುಪ್ರಮಾಣಶಬ್ದಪ್ರವರ್ತನಮ್ । ಅನ್ಯಮನುಸೃತ್ಯ ಪ್ರವರ್ತನಾತ್ ಅನಂತರಮನುಶಾಸನಾಚ್ಚಾನುಪ್ರಮಾಣಮಿತಿ ಭಾವಃ ॥ ೭೭೭ ॥

**ವಿವರಣೆ–** ಲ್ಯುಟ್ ಪ್ರತ್ಯಯವನ್ನು ಮೊದಲು ಭಾವದಲ್ಲಿ ಭಾವೇ ಎಂದು ಅನುಶಾಸನ ಮಾಡಿ ಅನಂತರ ಕರಣಾಧಿಕರಣಯೋಶ್ಚ ಎಂದು ಕರಣ ಮತ್ತು ಅಧಿಕರಣದಲ್ಲಿ ಅನುಶಾಸನ ಮಾಡಿದ್ದಾರೆ. ಆದ್ದರಿಂದ ಭಾವವು ಕೇವಲ ಪ್ರಮಾಣವೆಂದು ಕರಣವು ಅನುಪ್ರಮಾಣವೆಂದು ಸ್ವೀಕರಿಸುವುದು ಯೋಗ್ಯವಾಗುತ್ತದೆ.

**ಆಧಾರಾಖ್ಯಾಧಿಕರಣಂ ಭೂಮ್ಯಾದಿರ್ನ ಪ್ರಯೋಗವಾನ್ ॥ ೭೭೮ ॥**

**ಅರ್ಥ–** ಭೂಮ್ಯಾದಿಃ= ಭೂಮಿಮೊದಲಾದವುಗಳು, ಆಧಾರಾಖ್ಯಾಧಿಕರಣಂ= ಆಧಾರ ರೂಪವಾದ ಅಧಿಕರಣ. ಪ್ರಯೋಗವಾನ್ ನ= ಅಲ್ಲಿ ಲ್ಯುಟ್ ಪ್ರತ್ಯಯಕ್ಕೆ ಪ್ರಯೋಗವಿಲ್ಲ.

**ಅನುವಾದ–** ಭೂಮ್ಯಾದಿಗಳು ಘಟಾದಿಗಳಿಗೆ ಆಧಾರರೂಪವಾದ ಅಧಿಕರಣ. ಪ್ರಮೆಗೆ ಆಧಾರವಾದ ಚೇತನರೂಪವಾದ ಅಧಿಕರಣದಲ್ಲಿ ಪ್ರಮಾಣಶಬ್ದವು ಎಂದೂ ಪ್ರಯೋಗಿಸಲ್ಪಡುವುದಿಲ್ಲ.

**ಭಾವವಿಲಾಸಿನೀ–** ನನು ಭಾವೇ ಕರಣೇ ಚ ಪ್ರಮಾಣಶಬ್ದಸ್ಯ ಪ್ರವೃತ್ತಿವದನುಶಾಸನ ಸಾಮ್ಯಾದಧಿ ಕರಣೇ ಕುತೋ ನ ಪ್ರವೃತ್ತಿರಿತ್ಯತ ಆಹ – **ಆಧಾರೇತಿ** ॥ ಆಧಾರೋಽಧಿಕರಣಮಿತಿ ವಚನಾತ್ ಜ್ಞಾನರೂಪಕ್ರಿಯಾವಿಷಯಸ್ಯ ಘಟಾದೇಃ ಆಧಾರೋ ಭೂತಲಾದಿರೇವಾಧಿಕರಣಮ್ । ತತ್ರ ಚ ಪ್ರಮಾಣಶಬ್ದಸ್ಯ ಲೋಕೇ ಕ್ವಾಪ್ಯಪ್ರಯೋಗಾತ್ । ಪ್ರಯೋಗಮೂಲತ್ವಾಚ್ಚ ವ್ಯಾಕರಣಸ್ಯ ನ ತತ್ರ ಪ್ರಮಾಣಶಬ್ದಪ್ರವೃತ್ತಿರಿತಿಭಾವಃ ॥ ೭೭೮ ॥

**ವಿವರಣೆ–** ವ್ಯಾಕರಣಶಾಸ್ತ್ರವು ಪ್ರಯೋಗಮೂಲವಾದುದರಿಂದ ಅಧಿಕರಣದಲ್ಲಿ ಪ್ರಮಾಣಶಬ್ದವು ಪ್ರವೃತ್ತವಾಗುವುದಿಲ್ಲ ಎಂದು ಅಭಿಪ್ರಾಯ.

**ನಾರಾಯಣಾದಿಶಬ್ದೇಷು ಲ್ಯುಟೋಽಧಿಕರಣೇ ಗತಿಮ್ ।**
**ಸೂಚಯನ್ನೇವ ತಂ ಪ್ರಾಹ ಕರ್ತ್ರರ್ಥೇ ನಾನುಶಾಸ್ತಿ ತಮ್ ॥ ೭೭೯ ॥**

**ಅರ್ಥ–** ನಾರಾಯಣಾದಿಶಬ್ದೇಷು= ನಾರಾಯಣ ಮೊದಲಾದ ಶಬ್ದಗಳಲ್ಲಿ, ಲ್ಯುಟಃ= ಲುಟ್ ಪ್ರತ್ಯಯಕ್ಕೆ, ಅಧಿಕರಣೇ= ಅಧಿಕರಣದಲ್ಲಿಯೂ, ಗತಿಂ= ಪ್ರವೃತ್ತಿಯನ್ನು, ಸೂಚಯನ್ನೇವ= ಸೂಚಿಸುತ್ತಲೇ, ತಂ= ಆ ಪ್ರತ್ಯಯವನ್ನು, ಪ್ರಾಹ= ಅಧಿಕರಣಾರ್ಥದಲ್ಲಿ ಹೇಳಿದ್ದಾನೆ, ಕರ್ತ್ರರ್ಥೇ= ಕರ್ತೃ ಎಂಬ ಅರ್ಥದಲ್ಲಿ ಮಾತ್ರ, ತಂ= ಆ ಲ್ಯುಟ್ ಪ್ರತ್ಯಯವನ್ನು, ನ ಅನುಶಾಸ್ತಿ= ಅನುಶಾಸನವನ್ನು ಮಾಡಿಲ್ಲ.

**ಅನುವಾದ–** ನಾರಾಯಣಾದಿ ಶಬ್ದಗಳಲ್ಲಿ ಲ್ಯುಟ್‌ಪ್ರತ್ಯಯಕ್ಕೆ ಅಧಿಕರಣದಲ್ಲಿ ಪ್ರವೃತ್ತಿಯನ್ನು ಸೂಚಿಸುವುದಕ್ಕಾಗಿಯೇ ಕರಣಾಧಿಕರಣಯೋಶ್ಚ ಎಂದು

**ಅಧಿಕರಣದಲ್ಲಿಯೂ ಲ್ಯುಟ್ ಪ್ರತ್ಯಯವನ್ನು ಅನುಶಾಸನ ಮಾಡಿದ್ದಾರೆ. ಕರ್ತ್ರರ್ಥದಲ್ಲಿ ಮಾತ್ರ ಲ್ಯುಟ್ ಪ್ರತ್ಯಯಕ್ಕೆ ಅನುಶಾಸನವಿಲ್ಲ.**

**ಭಾವವಿಲಾಸಿನೀ**— ತರ್ಹ್ಯಧಿಕರಣೇ ಅನುಶಾಸನಂ ವ್ಯರ್ಥಮಿತ್ಯತ ಆಹ – **ನಾರಾಯಣಾದಿತಿ** ॥ ಆದಿಪದೇನ ಶಯನಾಸನಸ್ಥಾನಾದಿಶಬ್ದಾಗ್ರಹ್ಯಂತೇ ಅಯತೇ, ಶೇತೇ, ಆಸ್ತೇ, ತಿಷ್ಠತಿ ಚ ಯಸ್ಮಿನ್ ತದಧಿಕರಣಂ ಅಯನಾದಿ ಶಬ್ದವಾಚ್ಯಮ್ । ತಂ ಪ್ರತ್ಯಯಮ್ । ಪ್ರಾಹ ಅಧಿಕರಣೇ ಅನ್ವಶಾಸನಾತ್ । ಲ್ಯುಡಂತಸಕಲಶಬ್ದೇಷ್ವಪ್ಯೇತದೇವ ಸೂತ್ರಮನುಶಾಸನಮ್ । ತಚ್ಚ ಏಕತ್ರಾಪ್ರಯೋಗೋಽಪಿ ಸ್ಥಾನಾಂತರೇ ವಿದ್ಯಮಾನ ಪ್ರಯೋಗಾನುಶಾಸನಾಯ ಕಥಂ ನಾಪೇಕ್ಷ್ಯತ ಇತಿ ಭಾವಃ । ನನು ಕರ್ತ್ರರಪಿ ಈಶ್ವರಸ್ಯ ಜ್ಞಾನಂ ಪ್ರತ್ಯಾಧ್ಯಾರತಯಾ ಅಧಿ ಕರಣತ್ವಸ್ಯಾಪಿ ವಿದ್ಯಮಾನತ್ವಾತ್ ತತ್ರ ತಾರ್ಕಿಕೈಃ ಪ್ರಮಾಣಶಬ್ದಸ್ಯ ಪ್ರಯುಜ್ಯಮಾನತ್ವಾಚ್ಚ ಸ ಏವಾನುಶಾಸನವಿಷಯೋಽಸ್ತ್ವಿತ್ಯತ ಆಹ – **ಕರ್ತ್ರರ್ಥ ಇತಿ** ॥ ತಂ ಪ್ರತ್ಯಯಮ್ ॥ ೭೭೯ ॥

**ವಿವರಣೆ**— ಹಾಗಾದರೆ ಲ್ಯುಟ್‌ಪ್ರತ್ಯಯವನ್ನು ಅಧಿಕರಣಾರ್ಥದಲ್ಲಿ ಅನುಶಾಸನ ಮಾಡುವುದು ವ್ಯರ್ಥವಾಗುತ್ತದೆ ಎಂಬ ಶಂಕೆಗೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯಕ್ಕೆ ಅನುಶಾಸನ ವ್ಯರ್ಥವಲ್ಲ. ಏಕೆಂದರೆ ನಾರಾಯಣ ಶಯನ, ಆಸನ, ಸ್ಥಾನ ಮೊದಲಾದ ಶಬ್ದಗಳಲ್ಲಿ ಅಧಿಕರಣಾರ್ಥದಲ್ಲಿಯೇ ಲ್ಯುಟ್ ಪ್ರತ್ಯಯವು ಪ್ರವೃತ್ತವಾಗಿದೆ. ಲ್ಯುಟ್ ಪ್ರತ್ಯಯಾಂತವಾದ ಸಕಲ ಶಬ್ದಗಳಿಗೂ ಇದೇ ಅನುಶಾಸನವಾಗಿದೆ. ಇದೇ ಎಂದರೆ ಕರಣಾಧಿಕರಣಯೋಶ್ಚ ಎಂಬ ರೂಪವೇ ಅನುಶಾಸನವಾಗಿದೆ. ಆದ್ದರಿಂದ ಪ್ರಮಾಣಶಬ್ದಕ್ಕೆ ಅಧಿಕರಣಾರ್ಥದಲ್ಲಿ ಪ್ರಯೋಗವಿಲ್ಲದಿದ್ದರೂ ಬೇರೆ ಶಬ್ದಗಳಲ್ಲಿ ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರಯೋಗವು ಇರುವುದರಿಂದ ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯದ ಅನುಶಾಸನವು ವ್ಯರ್ಥವಾಗುವುದಿಲ್ಲ ಎಂದು ಅಭಿಪ್ರಾಯ. ಕರ್ತೃವಾದ ಈಶ್ವರನು ಜ್ಞಾನಕ್ಕೆ ಆಧಾರವಾಗಿರುವುದರಿಂದ ಅಧಿಕರಣತ್ವವು ಇದೆ ಮತ್ತು ತಾರ್ಕಿಕರು ಈಶ್ವರನಿಗೆ ಪ್ರಮಾಣ ಶಬ್ದವಾಚ್ಯತ್ವವನ್ನು ಹೇಳುತ್ತಾರೆ. ಆದ್ದರಿಂದ ಪ್ರಮಾಣಶಬ್ದಕ್ಕೆ ಅಧಿ ಕರಣಾರ್ಥದಲ್ಲಿಯೂ ಪ್ರಯೋಗವು ಉಂಟಾಗಲಿ ಎಂದು ಶಂಕೆಯನ್ನು ಮಾಡಿದರೆ ಕರ್ತ್ರರ್ಥದಲ್ಲಿ ಲ್ಯುಟ್ ಪ್ರತ್ಯಯಕ್ಕೆ ಅನುಶಾಸನವಿಲ್ಲ ಎಂದು ಉತ್ತರವನ್ನು ಹೇಳುತ್ತಾರೆ. ಈ ವಿಷಯವನ್ನು ಮುಂದಿನ ಶ್ಲೋಕದಲ್ಲಿ ಇನ್ನೂ ಸ್ಪಷ್ಟಪಡಿಸುತ್ತಾರೆ.

**ಷಟ್ಕಾರಕಮತೇ ಕರ್ತಾ ನೈವಾಧಿಕರಣಂ ಕಿಲ ।**
**ಕರ್ತೃಪ್ರಾಮಾಣ್ಯವಾದಂ ತದ್ಧಂತಿ ಪಾಣಿನಿರೇವ ಸಃ ॥ ೭೮೦ ॥**

**ಅರ್ಥ**— ಷಟ್ಕಾರಕಮತೇ= ಆರು ಕಾರಕಗಳು ಎಂಬ ಮತದಲ್ಲಿ, ಕರ್ತಾ= ಕರ್ತೃವು, ನೈವ ಅಧಿಕರಣಂ ಕಿಲ= ಅಧಿಕರಣವಲ್ಲವಷ್ಟೆ, ತತ್= ಆದ್ದರಿಂದ, ಸಃ ಪಾಣಿನಿರೇವ= ಆ

ಪಾಣಿನಿಯೇ, ಕರ್ತೃಪ್ರಾಮಾಣ್ಯವಾದಂ= ಕರ್ತೃವಿನಲ್ಲಿ ಪ್ರಮಾಣಶಬ್ದದ ಪ್ರಯೋಗವು ಬರಲಿ ಎಂಬ ವಾದವನ್ನು, ಹಂತಿ= ನಿರಾಕರಿಸುತ್ತಾನೆ.

**ಅನುವಾದ–** ಆರು ಕಾರಕಗಳು ಎಂಬ ಮತದಲ್ಲಿ ಕರ್ತೃವು ಅಧಿಕರಣವಲ್ಲವಷ್ಟೆ? ಆದ್ದರಿಂದ ಕರ್ತೃವಿನಲ್ಲಿ ಪ್ರಮಾಣ ಶಬ್ದಪ್ರಯೋಗವು ಉಂಟಾಗಲಿ ಎಂಬ ವಾದವನ್ನು ಪಾಣಿನಿಯೇ ನಿರಾಕರಿಸುತ್ತಾನೆ.

**ಭಾವವಿಲಾಸಿನೀ–** ನನೂಕ್ತಪ್ರಕಾರೇಣ ಕರ್ತಾಪ್ಯಧಿಕರಣಂ ಕುತೋ ನೇತ್ಯತ ಆಹ – **ಷಡಿತಿ** ॥ ಕರ್ತೃಕಾರಕಂ, ಕರ್ಮಕಾರಕಂ, ಕರಣಕಾರಕಂ, ಸಂಪ್ರದಾನಕಾರಕಮಪಾದಾನಕಾರಕಮಧಿಕರಣಕಾರಕಂ ಚೇತಿ ಷಟ್ಕಾರಕಮತೇ ಭೂತಲೇ ಘಟಂ ಪಶ್ಯತಿ, ಭೂತಲೇ ದಾರು ಚ್ಛಿನತ್ತೀತ್ಯಾದೌ ಜ್ಞಾಯಮಾನಚ್ಛಿದ್ಯಮಾನ ಘಟದಾರ್ವಾದಿಕರ್ಮಕಾರಕಾಧಾರಸ್ಯ ಭೂತಲಾದೇರೇವಾಧಿಕರಣಕಾರಕ ತಯಾ ವೈಯಾಕರಣೈರ್ವಿವಕ್ಷಿತತ್ವಾತ್ ದೇವದತ್ತಸಮಾನ-ಯೋಗಕ್ಷೇಮ ಈಶ್ವರಾಖ್ಯಃ ಕರ್ತಾಽಪಿ ನಾಧಿಕರಣಂ ಶಾಬ್ದೇ ಶಾಬ್ದಿಕಾಭಿಪ್ರೇತಾರ್ಥಮುಲ್ಲಂಘ್ಯ ತದನಭಿಪ್ರೇತಾರ್ಥಕಲ್ಪನಾಯಾಂ ಛಲತ್ವಪ್ರಸಾಂಗಾತ್ । ಅತೋ ಅಧಿಕರಣೇ ಅನುಶಾಸನೇಽಪಿ ಜ್ಞಾನಕರ್ತರೀಶ್ವರೇಽನನುಶಾಸನಮ್ । ಕಿಂತು ಭೂತಲಮೇವಾಧಿಕರಣತಯಾ ಅನುಶಾಸನ-ವಿಷಯ ಇತಿ ವಕ್ತವ್ಯಮ್ । ತತ್ ಪ್ರಮಾಣಶಬ್ದಪ್ರಯೋಗಾಭಾವತ್ । ಪ್ರಮಾಣಶಬ್ದೇ ಪ್ರಯುಕ್ತಲ್ಯುಟೋ ನಾನುಶಾಸನ ವಿಷಯಃ ಕಿಂತು ಚಕ್ಷುರಾದಿಕಮೇವ ಸ್ಥಾನಾಧಿಕರಣಾದಿಶಬ್ದೇ ಪ್ರಯುಕ್ತಲ್ಯುಟ್ ಸ್ತುತತ್ತದಧಿಕರಣಮಪ್ಯನುಶಾಸನವಿಷಯ ಇತಿ ಭಾವಃ । ತತ್ತಸ್ಮಾತ್ ॥೭೮೦॥

**ವಿವರಣೆ–** ಒಂದು ಕ್ರಿಯೆಯನ್ನು ಕುರಿತು ಜನಕವಾದವುಗಳು ಆರು. ಇದನ್ನು ಕಾರಕಗಳೆನ್ನುತ್ತಾರೆ. ಅವು ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ ಮತ್ತು ಅಧಿಕರಣ ರೂಪವಾದವುಗಳು. ಇಲ್ಲಿ ಕರ್ತೃವನ್ನು ಮತ್ತು ಅಧಿಕರಣವನ್ನು ಬೇರೆಯಾಗಿ ಎಣಿಸುವುದರಿಂದ ಕರ್ತೃವು ಅಧಿಕರಣನಲ್ಲ. ಆದ್ದರಿಂದ ಅಧಿಕರಣದಲ್ಲಿ ಲ್ಯುಟ್ ಪ್ರತ್ಯಯಕ್ಕೆ ಅನುಶಾಸನವಿದ್ದರೂ ಕರ್ತೃವು ಅಧಿಕರಣವಲ್ಲವಾದ್ದರಿಂದ ಪ್ರಮಾಣಾಧಾರನಾದ ಕರ್ತೃವಿನಲ್ಲಿ ಪ್ರಮಾಣಶಬ್ದಪ್ರಯೋಗವು ಬರಲಿ ಎಂಬ ಆಪಾದನೆಯೇ ಕೂಡುವುದಿಲ್ಲ. ಆದರೆ ಸ್ಥಾನ ಅಧಿಕರಣ ಮೊದಲಾದ ಶಬ್ದಗಳಲ್ಲಿ ಅಧಿಕರಣಾರ್ಥದಲ್ಲಿ ಲ್ಯುಟ್‌ಪ್ರತ್ಯಯದ ಪ್ರಯೋಗವು ಇದ್ದೇ ಇದೆ ಎಂದು ಅಭಿಪ್ರಾಯ.

**ಯಾಥಾರ್ಥ್ಯಮೇವ ಪ್ರಾಮಾಣ್ಯಂ ಯತಃ ಸ್ವವಚನೇ ಜನಃ ।**
**ಪ್ರಮಾಣತಾಯೈ ಮೇ ವಾಕ್ಯಂ ಯಥಾರ್ಥಮಿತಿ ಶಂಸತಿ ।**
**ವ್ಯವಹಾರಾನುಕೂಲತ್ವಾಲ್ಲಕ್ಷಣಂ ಚ ತದೇವ ತತ್ ॥ ೭೮೧ ॥**

**ಅರ್ಥ–** ಯಾಥಾರ್ಥ್ಯಮೇವ= ಯಾಥಾರ್ಥ್ಯವೇ, ಪ್ರಾಮಾಣ್ಯಂ= ಪ್ರಾಮಾಣ್ಯವು, ಯತಃ= ಯಾವ ಕಾರಣದಿಂದ, ಜನಃ= ಜನರು, ಸ್ವವಚನೇ= ತಮ್ಮ ವಾಕ್ಯದಲ್ಲಿ,

ಪ್ರಮಾಣತಾಯೈ= ಪ್ರಾಮಾಣ್ಯವನ್ನು ಹೇಳಲು, ಮೇ ವಾಕ್ಯಂ ಯಥಾರ್ಥಮಿತಿ= ನನ್ನ ವಾಕ್ಯವು ಯಥಾರ್ಥ ಎಂದು ಹೇಳುತ್ತಾರೆಯೋ, ತತ್= ಆ ಕಾರಣದಿಂದ, ವ್ಯವಹಾರಾನುಕೂಲತ್ವಾತ್= ವ್ಯವಹಾರಾನುಕೂಲವಾದ್ದರಿಂದ, ತದೇವ= ಯಾಥಾರ್ಥ್ಯವೇ, ಲಕ್ಷಣಂ= ಪ್ರಮಾಣದ ಲಕ್ಷಣವಾಗುತ್ತದೆ.

**ಅನುವಾದ–** ಪ್ರಾಮಾಣ್ಯವು ಯಾಥಾರ್ಥ್ಯರೂಪವಾದುದು. ಏಕೆಂದರೆ ತಮ್ಮ ಮಾತಿನ ಪ್ರಾಮಾಣ್ಯವನ್ನು ಹೇಳಲು ಜನರು ನನ್ನ ಮಾತು ಯಥಾರ್ಥ ಎಂದು ಹೇಳುತ್ತಾರೆ. ಆದ್ದರಿಂದ ವ್ಯವಹಾರಕ್ಕೆ ಅನುಕೂಲವಾದ್ದರಿಂದ ಯಾಥಾರ್ಥ್ಯವೇ ಪ್ರಾಮಾಣ್ಯ-ವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅಧುನಾ ಸರ್ವವ್ಯವಹಾರೋಪಯೋಗಿತ್ವಾದಸ್ಮಾದಚಾರ್ಯೋಕ್ತಮೇವ ಪ್ರಮಾಣಲಕ್ಷಣಮನುಸರಣೀಯಂ ನಾನ್ಯದಿತ್ಯಾಹ – **ಯಥಾರ್ಥ್ಯಮಿತಿ** ॥ ಪ್ರಮಾಣತಾಯೈ ಪ್ರಮಾಣತ್ವಪ್ರತಿಪಾದನಾಯ । ಇದಂ ಚೋಪಲಕ್ಷಣಮ್ । ಜ್ಞಾನೇ ಪ್ರಮಾಣತ್ವಪ್ರತಿ-ಪಾದನಾಯ ಜ್ಞಾನಂ ಯಥಾರ್ಥ್ಯಮಿತಿ ಜನಃ ಶಂಸತೀತ್ಯಪಿ ದ್ರಷ್ಟವ್ಯಮ್ । ತತ್ತಸ್ಮಾತ್ ॥೭೮೧॥

**ಯದಾ ಯತ್ರ ಯಥಾ ಯೋಽರ್ಥಸ್ತಥಾ ತದ್ವಿಷಯೀಕೃತೌ ।**
**ಪಾರಂಪರ್ಯೇಣ ಸಾಕ್ಷಾದ್ವಾ ಯಥಾರ್ಥಂ ವಕ್ತಿ ತಜ್ಜನಃ ॥ ೭೮೨ ॥**

**ಅರ್ಥ–** ಯದಾ= ಯಾವ ಕಾಲದಲ್ಲಿ, ಯತ್ರ= ಯಾವ ದೇಶದಲ್ಲಿ, ಯಥಾ= ಯಾವ ಪ್ರಕಾರದಲ್ಲಿ, ಯೋ ಅರ್ಥಃ= ಯಾವ ಅರ್ಥವು ಇರುತ್ತದೆಯೋ, ತಥಾ= ಹಾಗೆಯೇ, ಪಾರಂಪರ್ಯೇಣ= ಪರಂಪರೆಯಿಂದಾಗಲೀ, ಸಾಕ್ಷಾದ್ವಾ= ಅಥವಾ ಸಾಕ್ಷತ್ತಾಗಲೀ, ತದ್ವಿಷಯೀಕೃತೌ= ಅದನ್ನು ವಿಷಯೀಕರಿಸಿದರೆ, ತತ್= ಅದನ್ನು, ಜನಃ= ಜನರು, ಯಥಾರ್ಥಂ= ಯಥಾರ್ಥವೆಂದು, ವಕ್ತಿ= ಹೇಳುತ್ತಾರೆ.

**ಅನುವಾದ–** ಯಾವ ಕಾಲದಲ್ಲಿ, ಯಾವ ದೇಶದಲ್ಲಿ ಯಾವ ವಸ್ತುವು ಯಾವ ರೀತಿಯಲ್ಲಿ ಇದೆಯೋ ಅದನ್ನು ಸಾಕ್ಷಾತ್ತಾಗಲೀ, ಪರಂಪರೆಯಿಂದಾಗಲೀ ಹಾಗೆಯೇ ವಿಷಯೀಕರಿಸಿದರೆ ಲೋಕವು ಅದನ್ನು ಯಥಾರ್ಥವೆಂದು ಹೇಳುತ್ತದೆ.

**ಭಾವವಿಲಾಸಿನೀ–** ನನು ಯಥಾವಸ್ಥಿತಾರ್ಥವಿಷಯೀಕಾರಿತ್ವರೂಪಯಥಾರ್ಥತ್ವಸ್ಯ ಪ್ರಮಾಣಲಕ್ಷಣತ್ವೇ ಸ ವಿಷಯಕಸ್ಯ ಕೇವಲ ಪ್ರಮಾಣಸ್ಯೈವ ತಲ್ಲಕ್ಷಣಂ ಸ್ಯಾತ್ । ನಿರ್ವಿಷಯಕಸ್ಯಾನು ಪ್ರಮಾಣಸ್ಯ ಕಥಂ ತಲ್ಲಕ್ಷಣಂ ಸ್ಯಾದಿತ್ಯತ ಆಹ – **ಯದೇತಿ** ॥ ಪಾರಂಪರ್ಯೇಣ ಯಥಾರ್ಥಜ್ಞಾನಸಾಧನತ್ವ- ರೂಪಪರಂಪರಯಾ ಸಾಕ್ಷಾದ್ವಾ । ತದ್ವಿಷಯೀಕೃತೌ ತಸ್ಯಾರ್ಥಸ್ಯ ವಿಷಯೀಕರಣೇ । ತತ್ ಜ್ಞಾನಂ ವಾಕ್ಯಂ ವಾ । ಯಥಾರ್ಥ-ಜ್ಞಾನಜನಕವಾಕ್ಯೇ ತತ್ಜನ್ಯಜ್ಞಾನೇ ಚ ಯಥಾರ್ಥಮೇವ ವಾಕ್ಯಂ ಯಥಾರ್ಥಂ ಜ್ಞಾನ-

ಮಿತ್ಯುಭಯತ್ರಾಪಿ ಯಥಾರ್ಥಪದಪ್ರಯೋಗಬಲಾದೇಕತ್ರ ನಿರ್ಣೀತಃ ಶಾಸ್ತ್ರಾರ್ಥೋಽಪರತ್ರಾಪೀತಿ ನ್ಯಾಯೇನ ಕರಣೇಷ್ವಪಿ ಜ್ಞಾನವತ್ ಸಾಕ್ಷಾದ್ಯಥಾವಸ್ಥಿತಾರ್ಥವಿಷಯೀಕಾರಿತ್ವರೂಪ ಯಥಾರ್ಥತ್ವಾಭಾವೇಽಪಿ ಜ್ಞಾನದ್ವಾರಾ ಯಥಾರ್ಥಜ್ಞಾನಸಾಧನತಯಾ ಯಥಾವಸ್ಥಿತಾರ್ಥವಿಷಯಿತ್ವರೂಪಯಥಾರ್ಥತ್ವಂ ವಕ್ತವ್ಯಮ್ । ಅನ್ಯಥಾ ಸತ್ಯಂ ಮೇ ವಾಕ್ಯಮಿತಿ ಲೌಕಿಕವಾಕ್ಯೇ ಸತ್ಯಂ ವೇತ್ಯಾದಿಶ್ರುತೌ ಸತ್ಯಂ ಮೇ ವ್ಯಾಹೃತಂ ಸತೀತ್ಯಾದಿ ಸ್ಮೃತೌ ಚ ಯಥಾರ್ಥವಚನತ್ವಾರ್ಥಕ ಸತ್ಯಪದಪ್ರಯೋಗೇ ನಿರ್ಮೂಲಃ ಸ್ಯಾತ್ । ಶಬ್ದಾದಿವಿಷಯಾಣಾಂ ಚ ಸ್ವಜ್ಞಾನಂ ಪ್ರತಿ ವಿಷಯತ್ವವತ್ ಸ್ವಜ್ಞಾನಜನಕಶ್ರೋತ್ರಾದೀಂದ್ರಿಯಾಣಿ ಚ ಪ್ರತಿ ಉಕ್ತವಿಧಾಯಾ ವಿಷಯತ್ವಾಭಾವೇ ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ । ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ । ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತೀತ್ಯಾದಿಗೀತಾಯಾಂ, ಪ್ರವೃದ್ಧಲೋಭಂ ವಿಷಯೇಷು ಲಾಲಸಮಿತ್ಯಾದಿ ಪುರಾಣೇ, ಷಡಿಂದ್ರಿಯಾಣಿ ಷಟ್‌ವಿಷಯಾಶ್ಚೇತಿ ಪರಕೀಯಗ್ರಂಥೇ ಚ ರೂಪರಸಾದೌ ಚಕ್ಷುರಾದೀಂದ್ರಿಯವಿಷಯತ್ವೋಕ್ತಿಃ ಬ್ರಹ್ಮಣೋ ಯುಕ್ತಿರೂಪವಿಚಾರವಿಷಯತೋಕ್ತಿಃ ಶಬ್ದರೂಪಶಾಸ್ತ್ರವಿಷಯತ್ವೋಕ್ತಿಶ್ಚ ವ್ಯರ್ಥಾಸ್ಯಾತ್ । ಸರ್ವತ್ರ ಷಡಿಂದ್ರಿಯಾದಿ ಕರಣಾನಿ ಪ್ರಸ್ತೂಯ ವಿಷಯತ್ವೋಕ್ತೌ ಪ್ರಸ್ತುತದ್ವಿಷಯತ್ವಸ್ಯೈವ ಲಾಭೇನಾಪ್ರಸ್ತುತಜ್ಞಾನ ಪರ್ಯಂತ ಧಾವನೇ ಕಾರಣಾಭಾವಾತ್ । ಸಾಕ್ಷಾತ್‌ಸಂಬಂಧರೂಪ ಹಸ್ತತರುಸಂಯೋಗದ್ವಾರಾ ಕಾಯತರುಸಂಯೋಗಸ್ಯಾಪಿ ಸಂಯೋಗತ್ವವತ್ ಜ್ಞಾನದ್ವಾರಾ ಇಂದ್ರಿಯವಿಷಯೋ ರೂಪಾದಿರಪಿ ಇಂದ್ರಿಯವಿಷಯ ಏವ । ಏವಂ ಚ ಸಾಕ್ಷಾತ್ ಪರಂಪರಯಾವಾ ಯಥಾವಸ್ಥಿತಾರ್ಥವಿಷಯತ್ವರೂಪ ಯಥಾರ್ಥತ್ವಸ್ಯ ಯಥಾರ್ಥಜ್ಞಾನೇ ತತ್ಕರಣೇ ಚ ವಿದ್ಯಮಾನತ್ವೇನ ನ ಲಕ್ಷಣಸ್ಯಾವ್ಯಾಪ್ತಿಃ । ಅತಃ ಸರ್ವೈರಪಿ ಗುರುಶಿರೋಮಣೇರ್ಮಧ್ವದ್ಯುಮಣೇಃ ಸರಣಿರನುಸರಣೀಯೈವ ॥ ೭೮೨ ॥

**ವಿವರಣೆ–** ಯಥಾವಸ್ತುವಿಷಯೀಕಾರತ್ವವು ಪ್ರಮಾಣಲಕ್ಷಣವೆಂದು ಹೇಳಿದರೆ ಅದು ಕೇವಲ ಪ್ರಮಾಣದಲ್ಲಿ ಬರಬಹುದು. ಚಕ್ಷುರಾದಿಗಳು ನಿರ್ವಿಷಯಕವಾದ್ದರಿಂದ ಅವುಗಳಲ್ಲಿ ಹೇಗೆ ಪ್ರಮಾಣಲಕ್ಷಣವು ಬರುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಜ್ಞಾನವು ವಿಷಯವನ್ನು ನೇರವಾಗಿ ವಿಷಯೀಕರಿಸುತ್ತದೆ. ಇಂದ್ರಿಯಾದಿಗಳು ಯಥಾರ್ಥಜ್ಞಾನಸಾಧನವಾದ್ದರಿಂದ ಸ್ವಜನ್ಯಜ್ಞಾನದ್ವಾರಾ ವಿಷಯೀಕರಿಸುತ್ತವೆ. ಜ್ಞಾನವು ಯಥಾರ್ಥ ಎಂದು ಹೇಳುವಂತೆ ವಾಕ್ಯವೂ ಯಥಾರ್ಥ ಎಂದು ಹೇಳುವುದರಿಂದ ಉಭಯತ್ರ ಯಥಾರ್ಥಪದಪ್ರಯೋಗವಿರುವುದರಿಂದ ಉಭಯಸಂಗ್ರಾಹಕವಾಗಿಯೇ ಹೇಳಬೇಕು. ಆದ್ದರಿಂದ ಕರಣಗಳಲ್ಲಿ ಜ್ಞಾನದಲ್ಲಿರುವಂತೆ ಅರ್ಥವಿಷಯೀಕಾರಿತ್ವವು ಇಲ್ಲದಿದ್ದರೂ ಜ್ಞಾನದ್ವಾರಾ ವಿಷಯೀಕಾರಿತ್ವವನ್ನು ಹೇಳಬೇಕು. ಇಲ್ಲದಿದ್ದರೆ ನನ್ನ ವಾಕ್ಯವು ಸತ್ಯ ಎಂಬ ಲೌಕಿಕ ವಾಕ್ಯದಲ್ಲಿಯೂ ಸತ್ಯಂ ವಾ ಇತ್ಯಾದಿ ಶ್ರುತಿಯಲ್ಲಿಯೂ ಸತ್ಯಂ ಮೇ ವ್ಯಾಹೃತಂ ಸತಿ ಇತ್ಯಾದಿ ಸ್ಮೃತಿಯಲ್ಲಿಯೂ ಯಥಾರ್ಥ ವಚನತ್ವಾರ್ಥಕವಾದ

ಸತ್ಯಶಬ್ದದ ಪ್ರಯೋಗವು ನಿರ್ಮೂಲವಾದೀತು. ಶಬ್ದಜ್ಞಾನವನ್ನು ಕುರಿತು ಶಬ್ದಕ್ಕೆ ವಿಷಯತ್ವವಿದ್ದಂತೆ ಶಬ್ದಜ್ಞಾನಜನಕವಾದ ಶ್ರೋತ್ರಾದಿ ಇಂದ್ರಿಯಗಳನ್ನು ಕುರಿತು ಮೇಲೆ ಹೇಳಿದಂತೆ ವಿಷಯತ್ವವು ಇಲ್ಲದಿದ್ದರೆ 'ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಗ್ರಹಣಮೇವ ಚ ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ', 'ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ' ಇತ್ಯಾದಿ ಗೀತಾ ವಾಕ್ಯದಲ್ಲಿ, 'ಪ್ರವೃದ್ಧಲೋಭಂ ವಿಷಯೇಷು ಲಾಲಸಂ' ಮುಂತಾದ ಪುರಾಣ ವಾಕ್ಯದಲ್ಲಿ 'ಷಡಿಂದ್ರಿಯಾಣಿ ............' ಇತ್ಯಾದಿ ಪರಕೀಯಗ್ರಂಥದಲ್ಲಿಯೂ ಕೂಡ ರೂಪರಸಾದಿಗಳಿಗೆ ಚಕ್ಷುರಾದಿ ಇಂದ್ರಿಯ ವಿಷಯತ್ವೋಕ್ತಿಯು ಕೂಡುವುದಿಲ್ಲ. ಹಾಗೆಯೇ ಬ್ರಹ್ಮನಿಗೆ ಯುಕ್ತಿರೂಪವಾದ ವಿಚಾರ ವಿಷಯತ್ವೋಕ್ತಿಯೂ ಶಬ್ದರೂಪವಾದ ಶಾಸ್ತ್ರವಿಷಯತ್ವೋಕ್ತಿಯೂ ಸಹ ವ್ಯರ್ಥವೇ ಆಗುತ್ತದೆ. ಆದ್ದರಿಂದ ಹಸ್ತತರುಗಳಿಗೆ ಸಾಕ್ಷಾತ್‌ಸಂಬಂಧ ಉಂಟಾದಾಗ ಹಸ್ತತರುಸಂಯೋಗದ್ವಾರಾ ಉಂಟಾಗುವ ಕಾಯತರುಸಂಯೋಗಕ್ಕೆ ಸಂಯೋಗತ್ವವು ಇರುವಂತೆ ಜ್ಞಾನದ್ವಾರಾ ಇಂದ್ರಿಯ ವಿಷಯವಾದ ರೂಪಾದಿಗಳೂ ಸಹ ಇಂದ್ರಿಯವಿಷಯಗಳೇ ಆಗುತ್ತವೆ. ಆದ್ದರಿಂದ ಸಾಕ್ಷಾತ್ ಅಥವಾ ಪರಂಪರಯಾ ಯಥಾರ್ಥವಿಷಯಕತ್ವಂ ಎಂಬ ಲಕ್ಷಣವು ಯಥಾರ್ಥಜ್ಞಾನದಲ್ಲಿಯೂ ಮತ್ತು ಯಥಾರ್ಥಜ್ಞಾನಕರಣದಲ್ಲಿಯೂ ಇರುವುದರಿಂದ ಲಕ್ಷಣಕ್ಕೆ ಅವ್ಯಾಪ್ತಿ ಇಲ್ಲ. ಆದ್ದರಿಂದ ಗುರೋಶಿರೋಮಣಿಗಳಾದ ಮಧ್ವಸೂರ್ಯರು ತೋರಿಸಿದ ಮಾರ್ಗದಲ್ಲೇ ಎಲ್ಲರೂ ನಡೆಯಬೇಕು ಎಂದು ಅಭಿಪ್ರಾಯ.

ಇಲ್ಲಿ ನ್ಯಾಯಸುಧಾ ಗ್ರಂಥದಲ್ಲಿ ಟೀಕಾಕೃತ್ಪಾದರು ಹೇಳಿರುವ ವಿಷಯವನ್ನು ಗಮನಿಸಬಹುದು. ಟೀಕಾಕೃತ್ಪಾದರು ಚಕ್ಷುರಾದಿ ಇಂದ್ರಿಯಗಳಿಗೂ ನೇರವಾಗಿ ಅರ್ಥ ವಿಷಯೀಕಾರಿತ್ವವನ್ನು ಹೇಳಬಹುದು ಎಂದು ಹೇಳಿದ್ದಾರೆ. ನಹ್ಯೇತಾನಿ ಕಿಮಪಿ ಅವಿಷಯೀಕೃತ್ಯ ಜ್ಞಾನಂ ಜನಯಿತುಮೀಶತೇ ಎಂಬುದು ಸುಧಾವಾಕ್ಯ. ಸುಧಾ ಟಿಪ್ಪಣಿಗಳಲ್ಲಿಯೂ ಮತ್ತು ಪ್ರಮಾಣಪದ್ಧತಿಯ ಟಿಪ್ಪಣಿಯಲ್ಲಿಯೂ ಈ ವಿಷಯವು ಸಾಕಷ್ಟು ಚರ್ಚಿತವಾಗಿದೆ.

**ಪ್ರಾಮಾಣ್ಯವಾದೇ ಜ್ಞಾನಸ್ಯ ಪ್ರಾಮಾಣ್ಯಂ ವರ್ತತೇ ಕಿಲ ।**
**ಸ್ಮರ್ತಾಽನ್ಯಸ್ಯಾಸ್ಯ ವಿಸ್ಮರ್ತಾ ಲಕ್ಷಣೋಕ್ತೌ ಸ ಕಿಂ ಬುಧಃ ॥ ೭೮೩ ॥**

**ಅರ್ಥ–** ಪ್ರಾಮಾಣ್ಯವಾದೇ= ಪ್ರಾಮಾಣ್ಯವಾದವನ್ನು ವಿಮರ್ಶೆ ಮಾಡುವ ಸಂದರ್ಭದಲ್ಲಿ, ಜ್ಞಾನಸ್ಯ ಪ್ರಾಮಾಣ್ಯಂ= ಜ್ಞಾನಕ್ಕೆ ಪ್ರಾಮಾಣ್ಯವು, ವರ್ತತೇ ಕಿಲ= ಇದೆಯಷ್ಟೆ, ಲಕ್ಷಣೋಕ್ತೌ= ಲಕ್ಷಣವನ್ನು ಹೇಳುವ ಸಂದರ್ಭದಲ್ಲಿ, ಅಸ್ಯ= ಈ ಜ್ಞಾನಪ್ರಾಮಾಣ್ಯವನ್ನು, ವಿಸ್ಮರ್ತಾ= ಮರೆಯುವವನೂ, ಅನ್ಯಸ್ಯ= ಕರಣಪ್ರಾಮಾಣ್ಯವನ್ನು ಸ್ಮರಿಸುವವನೂ ಆದ, ಸಃ= ಆ ತಾರ್ಕಿಕನು, ಬುಧಃ ಕಿಂ= ವಿವೇಕಿಯಾದವನೇ?

**ಅನುವಾದ–** ಪ್ರಾಮಾಣ್ಯವಾದವನ್ನು ವಿಚಾರ ಮಾಡುವಾಗ ಜ್ಞಾನಪ್ರಾಮಾಣ್ಯವು ಇದೆಯಷ್ಟೆ, ಕರಣಗಳಿಗೆ ಲಕ್ಷಣವನ್ನು ಹೇಳುವ ಸಂದರ್ಭದಲ್ಲಿ ಆ ಜ್ಞಾನ-ಪ್ರಾಮಾಣ್ಯವನ್ನು ಮರೆತು ಕರಣಗಳಿಗೆ ಮಾತ್ರ ಪ್ರಾಮಾಣ್ಯವನ್ನು ಹೇಳುವ ಆ ತಾರ್ಕಿಕನು ವಿವೇಕಿಯಾಗುತ್ತಾನೆಯೇ?

**ಭಾವವಿಲಾಸಿನೀ–** ಸ್ವತಸ್ತ್ವಾದ ಇತ್ಯತ್ರ ಸೂಚಿತಂ ಪ್ರಮೇಯಂ ಸೂಚಯತಿ ॥ **ಪ್ರಾಮಾಣ್ಯವಾದ ಇತಿ** ॥ ಪ್ರಾಮಾಣ್ಯವಾದೇ ಪ್ರಾಮಾಣ್ಯಸ್ಯ ಸ್ವತಸ್ತ್ವವಾದೇ । **ಲಕ್ಷಣೋಕ್ತೌ** ಪ್ರಮಾಣಕರಣಮಿತ್ಯಾದಿ ಲಕ್ಷಣೋಕ್ತೌ । ಅಸ್ಯ ಜ್ಞಾನಪ್ರಾಮಾಣ್ಯಸ್ಯ ವಿಸ್ಮರ್ತಾ । ಅನ್ಯಸ್ಯ ಕರಣಪ್ರಮಾಣ್ಯಸ್ಯ ಸ್ಮರ್ತಾ । ಸಃ ತಾರ್ಕಿಕಃ ಬುಧಃ ಕಿಮಿತಿ ಸಂಬಂಧಃ ॥ ೭೮೩ ॥

**ವಿವರಣೆ–** ಸ್ವತಸ್ತ್ವವಾದೇ ಎಂಬ 771ನೆಯ ಶ್ಲೋಕದಲ್ಲಿ ಹೇಳಿದ ಪ್ರಮೇಯವನ್ನೇ ಇಲ್ಲಿ ಇನ್ನೊಮ್ಮೆ ಸ್ಪಷ್ಟಪಡಿಸುತ್ತಾರೆ.

**ಅದುಷ್ಟಕರಣಂ ಚಕ್ಷುಃ ಪ್ರಮಾವ್ಯಾಪ್ತಂ ಯಥಾ ಭವೇತ್ ।**
**ತಥಾ ಪ್ರಮಾತಾ ಜೀವೋऽಪಿ ಪ್ರಮಾವ್ಯಾಪ್ತಃ ಕುತೋ ನ ತೇ ॥ ೭೮೪ ॥**

**ಅರ್ಥ–** ಅದುಷ್ಟಕರಣಂ= ಅದುಷ್ಟಕರಣವಾದ, ಚಕ್ಷುಃ= ಚಕ್ಷುಸ್ಸು, ಯಥಾ= ಹೇಗೆ, ಪ್ರಮಾವ್ಯಾಪ್ತಂ= ಪ್ರಮಾವ್ಯಾಪ್ತವಾಗಿ, ಭವೇತ್= ಆಗುತ್ತದೆಯೋ, ತಥಾ= ಅದರಂತೆ, ಪ್ರಮಾತಾ= ಪ್ರಮಾತೃವಾದ, ಜೀವೋಽಪಿ= ಜೀವನೂ ಸಹ, ತೇ= ನಿನಗೆ, ಕುತಃ= ಏಕೆ, ಪ್ರಮಾವ್ಯಾಪ್ತಃ ನ= ಪ್ರಮಾವ್ಯಾಪ್ತನಲ್ಲ?

**ಅನುವಾದ–** ಅದುಷ್ಟಕರಣವಾದ ಚಕ್ಷುಸ್ಸು ಹೇಗೆ ಪ್ರಮಾವ್ಯಾಪ್ತವಾಗುತ್ತದೆಯೋ ಅದರಂತೆ ಪ್ರಮಾತೃವಾದ ಜೀವನೂ ಕೂಡ ನಿನಗೆ ಏಕೆ ಪ್ರಮಾವ್ಯಾಪ್ತನಲ್ಲ?

**ಭಾವವಿಲಾಸಿನೀ–** ಕಿಂಚ ನನು ಪ್ರಮಾವ್ಯಾಪ್ತತ್ವೇನ ಈಶ್ವರಸ್ಯ ಪ್ರಮಾಣತ್ವೇ ಜೀವಸ್ಯಾಪಿ ತೇನೈವ ಕುತೋ ನ ಪ್ರಾಮಾಣ್ಯಮ್ । ನ ಚ ವಾಚ್ಯಮಪ್ರಮಾಯಾ ಅಪ್ಯಾಶ್ರಯೇ ಜೀವ ಕಥಂ ಪ್ರಮಾಖ್ಯಾಪ್ತತ್ವಮಿತಿ । ತಥಾ ಸತ್ಯಪ್ರಮಾಯಾ ಅಪಿ ಕರಣೇ ಇಂದ್ರಿಯೇ ಪ್ರಮಾವ್ಯಾಪ್ತತ್ವಾಭಾವ ಪ್ರಸಂಗಾತ್ । ಇಂದ್ರಿಯಸ್ಯಾದುಷ್ಟತಾವಸ್ಥಾಯಾಂ ಪ್ರಮಾವ್ಯಾಪ್ತಿಶ್ಚೇತ್ ತದೈವ ಜೀವಸ್ಯಾಪಿ ಕಥಂ ನ ಪ್ರಮಾವ್ಯಾಪ್ತಿಃ । ತರ್ಹ್ಯೇಕಸ್ಯೈವ ಜೀವಸ್ಯ ಪ್ರಾಮಾಣ್ಯಾಪ್ರಾಮಾಣ್ಯೇ ದ್ವೇ ಅಪಿ ಸ್ಯಾತಾಮಿತಿ ಚೇತ್ ನ । ಏಕಸ್ಯೈವೇಂದ್ರಿಯಸ್ಯ ಪ್ರಾಮಾಣ್ಯಾಪ್ರಮಾಣ್ಯವದುಪಪತ್ತೇಃ । ಅವಸ್ಥಾಭೇದೇನ ತತ್ರ ವಿರೋಧಪರಿಹಾರಶ್ಚೇತ್ತೇನೈವಾತ್ರಾಪಿ ವಿರೋಧಂ ಪರಿಹರೇತ್ಯಾಹ – **ಅದುಷ್ಟೇತಿ** ॥ ೭೮೪ ॥

**ವಿವರಣೆ–** ಪ್ರಮಾವ್ಯಾಪ್ತವಾದ ಚಕ್ಷುರಾದಿಗಳಲ್ಲಿ ಪ್ರಮಾಣಶಬ್ದವಿರುವುದಾದರೆ ಪ್ರಮಾವ್ಯಾಪ್ತನಾದ ಜೀವನಲ್ಲಿಯೂ ಪ್ರಮಾಣ ಶಬ್ದವ್ಯವಹಾರವು ಉಂಟಾಗಲಿ ಎಂದು

ನಮ್ಮ ಆಪಾದನೆ. ಪ್ರಮಾವ್ಯಾಪ್ತನಾದ್ದರಿಂದ ಈಶ್ವರನಿಗೆ ನೀನು ಪ್ರಾಮಾಣ್ಯವನ್ನು ಒಪ್ಪುತ್ತೀಯೆ. ಹಾಗಾದರೆ ಜೀವನಿಗೆ ಏಕೆ ಒಪ್ಪಬಾರದು ಎಂದು ನಮ್ಮ ಪ್ರಶ್ನೆಯ ಅಭಿಪ್ರಾಯ. ಈಶ್ವರನಲ್ಲಿ ಪ್ರಮಾ ಮಾತ್ರವು ಇದೆ, ಜೀವನಲ್ಲಿ ಪ್ರಮೆಯೂ ಇದೆ ಅಪ್ರಮೆಯೂ ಇದೆ. ಆದ್ದರಿಂದ ಪ್ರಮಾವ್ಯಾಪ್ತತ್ವವು ಇಲ್ಲ ಎಂದು ಹೇಳುವುದಾದರೆ ಚಕ್ಷುರಾದಿ ಇಂದ್ರಿಯಗಳು ಭ್ರಾಂತಿಯನ್ನು ಕುರಿತು ಕರಣವಾಗುವುದರಿಂದ ಅಲ್ಲಿಯೂ ಪ್ರಮಾವ್ಯಾಪ್ತತ್ವವು ಇಲ್ಲ ಎಂಬ ಆಪತ್ತಿಯು ಉಂಟಾಗುತ್ತದೆ. ಇಂದ್ರಿಯದಲ್ಲಿ ದೋಷವಿಲ್ಲದಿದ್ದಾಗ ಪ್ರಮಾವ್ಯಾಪ್ತಿಯು ಇದೆ ಎಂದು ಹೇಳುವುದಾದರೆ ಜೀವನಲ್ಲಿಯೂ ದೋಷವಿಲ್ಲದಿದ್ದಾಗ ಪ್ರಮಾವ್ಯಾಪ್ತಿಯನ್ನು ಅಂಗೀಕರಿಸು. ಹಾಗೆ ಮಾಡಿದರೆ ಒಬ್ಬ ಜೀವನಿಗೆ ಪ್ರಾಮಾಣ್ಯ ಮತ್ತು ಪ್ರಮಾಣ್ಯಾಭಾವರೂಪವಾದ ವಿರುದ್ಧವಾದ ಎರಡು ಧರ್ಮಗಳು ಬರುತ್ತವೆ ಎಂಬ ಆಕ್ಷೇಪವು ಸರಿಯಲ್ಲ. ಒಂದೇ ಇಂದ್ರಿಯವು ಪ್ರಮೆಯನ್ನು ಕುರಿತು ಮತ್ತು ಭ್ರಾಂತಿಯನ್ನು ಕುರಿತು ಕಾರಣವಾದುದರಿಂದ ಹೇಗೆ ಅಲ್ಲಿ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯವು ಬರುತ್ತದೆಯೋ, ಅದರಂತೆ ಜೀವನಲ್ಲಿಯೂ ಬರಲಿ ಎಂದೇ ನಮ್ಮ ಆಪಾದನೆ. ಅವಸ್ಥಾಭೇದದಿಂದ ಇಂದ್ರಿಯದಲ್ಲಿ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯಗಳನ್ನು ಒಪ್ಪಿ ವಿರೋಧವನ್ನು ಪರಿಹಾರ ಮಾಡುವುದಾದರೆ ಜೀವನಲ್ಲಿಯೂ ಹಾಗೆ ಮಾಡು ಎಂದೇ ನಮ್ಮ ಆಪಾದನೆ. ಆದ್ದರಿಂದ ಪ್ರಮಾವ್ಯಾಪ್ತತ್ವವು ಪ್ರಮಾಣ ಲಕ್ಷಣ ಎಂದು ಹೇಳಿದರೆ ಜೀವನಲ್ಲಿ ಅತಿವ್ಯಾಪ್ತಿಯು ಬಂದೇ ಬರುತ್ತದೆ ಎಂದು ಅಭಿಪ್ರಾಯ.

**ಅಶಿಷ್ಟಕರ್ತೃಪ್ರಾಮಾಣ್ಯೇ ಕರ್ತೃಮಾತ್ರೇ ತದುಚ್ಯತಾಮ್ ।**
**ನ ಚೇತ್ ಸಭಾಸ್ವಶಿಷ್ಟಸ್ತ್ವಂ ಶಿಷ್ಟಮಧ್ಯೇ ಭವಿಷ್ಯಸಿ ॥ ೭೮೫ ॥**

**ಅರ್ಥ–** ಅಶಿಷ್ಟಕರ್ತೃಪ್ರಾಮಾಣ್ಯೇ= ಪಾಣಿನಿಯು ಹೇಳದಿದ್ದರೂ ಈಶ್ವರರೂಪ ಕರ್ತೃವಿನಲ್ಲಿ ಪ್ರಾಮಾಣ್ಯವನ್ನು ಅಂಗೀಕರಿಸುವುದಾದರೆ, ಕರ್ತೃಮಾತ್ರೇ= ಎಲ್ಲ ಚೇತನರಲ್ಲೂ, ತತ್= ಆ ಪ್ರಾಮಾಣ್ಯವು, ಉಚ್ಯತಾಂ= ಹೇಳಲ್ಪಡಲಿ, ನ ಚೇತ್= ಹಾಗೆ ಮಾಡದಿದ್ದರೆ, ಅಶಿಷ್ಟಃ ತ್ವಂ= ಅಶಿಷ್ಟನಾದ ನೀನು, ಸಭಾಸು= ಸಭೆಗಳಲ್ಲಿ, ಶಿಷ್ಟಮಧ್ಯೇ= ಶಿಷ್ಟರ ಮಧ್ಯದಲ್ಲಿ, ಭವಿಷ್ಯಸಿ= ಇರುತ್ತೀಯೆ.

**ಅನುವಾದ–** ಪಾಣಿನಿಯು ಹೇಳದಿದ್ದರೂ ಕರ್ತೃವಾದ ಈಶ್ವರನಿಗೆ ನೀನು ಪ್ರಾಮಾಣ್ಯವನ್ನು ಒಪ್ಪಿದರೆ ಅದರಂತೆ ಪ್ರಮಾಕರ್ತೃಗಳಾದ ಎಲ್ಲ ಜೀವರಿಗೂ ಪ್ರಾಮಾಣ್ಯವನ್ನು ಒಪ್ಪು. ಹಾಗೆ ಮಾಡದಿದ್ದರೆ ಅಶಿಷ್ಟನಾದ ನೀನು ಶಿಷ್ಟರ ಸಭೆಯ ಮಧ್ಯದಲ್ಲಿ ಇದ್ದಂತಾಗುತ್ತದೆ.

**ಭಾವವಿಲಾಸಿನೀ–** ಅಶಿಷ್ಟಕರ್ತೃಪ್ರಾಮಾಣ್ಯೇ ಅಶಿಷ್ಟಸ್ಯ ಪಾಣಿನಿನಾ ಪ್ರಮಾಣತಯಾ ಅನನುಶಿಷ್ಟಸ್ಯ ಕರ್ತುರೀಶ್ವರಸ್ಯ ಪ್ರಮಾಣ್ಯೇ ಅಂಗೀಕೃತೇ ಸತಿ ಕರ್ತೃಮಾತ್ರೇ ಜ್ಞಾನ-ಕರ್ತೃಚೇತನಮಾತ್ರೇ । ತತ್ ಪ್ರಾಮಾಣ್ಯಮ್ । ಅಶಿಷ್ಟತ್ವಸ್ಯ ಉಕ್ತವಿಧಯಾ ಪ್ರಮಾವ್ಯಾಪ್ತತ್ವಸ್ಯ

**ಅನುವಾದ–** ಪ್ರಾಮಾಣ್ಯವಾದವನ್ನು ವಿಚಾರ ಮಾಡುವಾಗ ಜ್ಞಾನಪ್ರಾಮಾಣ್ಯವು ಇದೆಯಷ್ಟೆ, ಕರಣಗಳಿಗೆ ಲಕ್ಷಣವನ್ನು ಹೇಳುವ ಸಂದರ್ಭದಲ್ಲಿ ಆ ಜ್ಞಾನ-ಪ್ರಾಮಾಣ್ಯವನ್ನು ಮರೆತು ಕರಣಗಳಿಗೆ ಮಾತ್ರ ಪ್ರಾಮಾಣ್ಯವನ್ನು ಹೇಳುವ ಆ ತಾರ್ಕಿಕನು ವಿವೇಕಿಯಾಗುತ್ತಾನೆಯೇ?

**ಭಾವವಿಲಾಸಿನೀ–** ಸ್ವತಸ್ತ್ವಾದ ಇತ್ಯತ್ರ ಸೂಚಿತಂ ಪ್ರಮೇಯಂ ಸೂಚಯತಿ ॥ ಪ್ರಾಮಾಣ್ಯವಾದ ಇತಿ ॥ ಪ್ರಾಮಾಣ್ಯವಾದೇ ಪ್ರಾಮಾಣ್ಯಸ್ಯ ಸ್ವತಸ್ತ್ವವಾದೇ। ಲಕ್ಷಣೋಕ್ತೌ ಪ್ರಮಾಣಕರಣಮಿತ್ಯಾದಿ ಲಕ್ಷಣೋಕ್ತೌ । ಅಸ್ಯ ಜ್ಞಾನಪ್ರಾಮಾಣ್ಯಸ್ಯ ವಿಸ್ಮರ್ತಾ । ಅನ್ಯಸ್ಯ ಕರಣಪ್ರಮಾಣ್ಯಸ್ಯ ಸ್ಮರ್ತಾ । ಸಃ ತಾರ್ಕಿಕಃ ಬುಧಃ ಕಿಮಿತಿ ಸಂಬಂಧಃ ॥ ೭೭೩ ॥

**ವಿವರಣೆ–** ಸ್ವತಸ್ತ್ವವಾದೇ ಎಂಬ 771ನೆಯ ಶ್ಲೋಕದಲ್ಲಿ ಹೇಳಿದ ಪ್ರಮೇಯವನ್ನೇ ಇಲ್ಲಿ ಇನ್ನೊಮ್ಮೆ ಸ್ಪಷ್ಟಪಡಿಸುತ್ತಾರೆ.

**ಅದುಷ್ಟಕರಣಂ ಚಕ್ಷುಃ ಪ್ರಮಾವ್ಯಾಪ್ತಂ ಯಥಾ ಭವೇತ್ ।**
**ತಥಾ ಪ್ರಮಾತಾ ಜೀವೋಽಪಿ ಪ್ರಮಾವ್ಯಾಪ್ತಃ ಕುತೋ ನ ತೇ ॥ ೭೭೪ ॥**

**ಅರ್ಥ–** ಅದುಷ್ಟಕರಣಂ= ಅದುಷ್ಟಕರಣವಾದ, ಚಕ್ಷುಃ= ಚಕ್ಷುಸ್ಸು, ಯಥಾ= ಹೇಗೆ, ಪ್ರಮಾವ್ಯಾಪ್ತಂ= ಪ್ರಮಾವ್ಯಾಪ್ತವಾಗಿ, ಭವೇತ್= ಆಗುತ್ತದೆಯೋ, ತಥಾ= ಅದರಂತೆ, ಪ್ರಮಾತಾ= ಪ್ರಮಾತೃವಾದ, ಜೀವೋಽಪಿ= ಜೀವನೂ ಸಹ, ತೇ= ನಿನಗೆ, ಕುತಃ= ಏಕೆ, ಪ್ರಮಾವ್ಯಾಪ್ತಃ ನ= ಪ್ರಮಾವ್ಯಾಪ್ತನಲ್ಲ?

**ಅನುವಾದ–** ಅದುಷ್ಟಕರಣವಾದ ಚಕ್ಷುಸ್ಸು ಹೇಗೆ ಪ್ರಮಾವ್ಯಾಪ್ತವಾಗುತ್ತದೆಯೋ ಅದರಂತೆ ಪ್ರಮಾತೃವಾದ ಜೀವನೂ ಕೂಡ ನಿನಗೆ ಏಕೆ ಪ್ರಮಾವ್ಯಾಪ್ತನಲ್ಲ?

**ಭಾವವಿಲಾಸಿನೀ–** ಕಿಂಚ ನನು ಪ್ರಮಾವ್ಯಾಪ್ತತ್ವೇನ ಈಶ್ವರಸ್ಯ ಪ್ರಮಾಣತ್ವೇ ಜೀವಸ್ಯಾಪಿ ತೇನೈವ ಕುತೋ ನ ಪ್ರಾಮಾಣ್ಯಮ್ । ನ ಚ ವಾಚ್ಯಮಪ್ರಮಾಯಾ ಅಪ್ಯಾಶ್ರಯೇ ಜೀವ ಕಥಂ ಪ್ರಮಾಖ್ಯಾಪ್ತತ್ವಮಿತಿ। ತಥಾ ಸತ್ಯಪ್ರಮಾಯಾ ಅಪಿ ಕರಣೇ ಇಂದ್ರಿಯೇ ಪ್ರಮಾವ್ಯಾಪ್ತತ್ವಾಭಾವ ಪ್ರಸಂಗಾತ್ । ಇಂದ್ರಿಯಸ್ಯಾದುಷ್ಟತಾವಸ್ಥಾಯಾಂ ಪ್ರಮಾವ್ಯಾಪ್ತಿಶ್ಚೇತ್ ತದೈವ ಜೀವಸ್ಯಾಪಿ ಕಥಂ ನ ಪ್ರಮಾವ್ಯಾಪ್ತಿಃ । ತರ್ಹ್ಯೇಕಸ್ಯೈವ ಜೀವಸ್ಯ ಪ್ರಾಮಾಣ್ಯಾಪ್ರಾಮಾಣ್ಯೇ ದ್ವೇ ಅಪಿ ಸ್ಯಾತಾಮಿತಿ ಚೇತ್ ನ । ಏಕಸ್ಯೈವೇಂದ್ರಿಯಸ್ಯ ಪ್ರಾಮಾಣ್ಯಾಪ್ರಮಾಣ್ಯವದುಪಪತ್ತೇಃ । ಅವಸ್ಥಾಭೇದೇನ ತತ್ರ ವಿರೋಧಪರಿಹಾರಶ್ಚೇತ್ತೇನೈವಾತ್ರಾಪಿ ವಿರೋಧಂ ಪರಿಹರೇತ್ಯಾಹ – ಅದುಷ್ಟೇತಿ ॥ ೭೭೪ ॥

**ವಿವರಣೆ–** ಪ್ರಮಾವ್ಯಾಪ್ತವಾದ ಚಕ್ಷುರಾದಿಗಳಲ್ಲಿ ಪ್ರಮಾಣಶಬ್ದವಿರುವುದಾದರೆ ಪ್ರಮಾವ್ಯಾಪ್ತನಾದ ಜೀವನಲ್ಲಿಯೂ ಪ್ರಮಾಣ ಶಬ್ದವ್ಯವಹಾರವು ಉಂಟಾಗಲಿ ಎಂದು

ನಮ್ಮ ಆಪಾದನೆ. ಪ್ರಮಾವ್ಯಾಪ್ತನಾದ್ದರಿಂದ ಈಶ್ವರನಿಗೆ ನೀನು ಪ್ರಾಮಾಣ್ಯವನ್ನು ಒಪ್ಪುತ್ತೀಯೆ. ಹಾಗಾದರೆ ಜೀವನಿಗೆ ಏಕೆ ಒಪ್ಪಬಾರದು ಎಂದು ನಮ್ಮ ಪ್ರಶ್ನೆಯ ಅಭಿಪ್ರಾಯ. ಈಶ್ವರನಲ್ಲಿ ಪ್ರಮಾ ಮಾತ್ರವು ಇದೆ, ಜೀವನಲ್ಲಿ ಪ್ರಮೆಯೂ ಇದೆ ಅಪ್ರಮೆಯೂ ಇದೆ. ಆದ್ದರಿಂದ ಪ್ರಮಾವ್ಯಾಪ್ತತ್ವವು ಇಲ್ಲ ಎಂದು ಹೇಳುವುದಾದರೆ ಚಕ್ಷುರಾದಿ ಇಂದ್ರಿಯಗಳು ಭ್ರಾಂತಿಯನ್ನು ಕುರಿತು ಕರಣವಾಗುವುದರಿಂದ ಅಲ್ಲಿಯೂ ಪ್ರಮಾವ್ಯಾಪ್ತತ್ವವು ಇಲ್ಲ ಎಂಬ ಆಪತ್ತಿಯು ಉಂಟಾಗುತ್ತದೆ. ಇಂದ್ರಿಯದಲ್ಲಿ ದೋಷವಿಲ್ಲದಿದ್ದಾಗ ಪ್ರಮಾವ್ಯಾಪ್ತಿಯು ಇದೆ ಎಂದು ಹೇಳುವುದಾದರೆ ಜೀವನಲ್ಲಿಯೂ ದೋಷವಿಲ್ಲದಿದ್ದಾಗ ಪ್ರಮಾವ್ಯಾಪ್ತಿಯನ್ನು ಅಂಗೀಕರಿಸು. ಹಾಗೆ ಮಾಡಿದರೆ ಒಬ್ಬ ಜೀವನಿಗೆ ಪ್ರಾಮಾಣ್ಯ ಮತ್ತು ಪ್ರಮಾಣ್ಯಾಭಾವರೂಪವಾದ ವಿರುದ್ಧವಾದ ಎರಡು ಧರ್ಮಗಳು ಬರುತ್ತವೆ ಎಂಬ ಆಕ್ಷೇಪವು ಸರಿಯಲ್ಲ. ಒಂದೇ ಇಂದ್ರಿಯವು ಪ್ರಮೆಯನ್ನು ಕುರಿತು ಮತ್ತು ಭ್ರಾಂತಿಯನ್ನು ಕುರಿತು ಕಾರಣವಾದುದರಿಂದ ಹೇಗೆ ಅಲ್ಲಿ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯವು ಬರುತ್ತದೆಯೋ, ಆದರಂತೆ ಜೀವನಲ್ಲಿಯೂ ಬರಲಿ ಎಂದೇ ನಮ್ಮ ಆಪಾದನೆ. ಅವಸ್ಥಾಭೇದದಿಂದ ಇಂದ್ರಿಯದಲ್ಲಿ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯಗಳನ್ನು ಒಪ್ಪಿ ವಿರೋಧವನ್ನು ಪರಿಹಾರ ಮಾಡುವುದಾದರೆ ಜೀವನಲ್ಲಿಯೂ ಹಾಗೆ ಮಾಡು ಎಂದೇ ನಮ್ಮ ಆಪಾದನೆ. ಆದ್ದರಿಂದ ಪ್ರಮಾವ್ಯಾಪ್ತತ್ವವು ಪ್ರಮಾಣ ಲಕ್ಷಣ ಎಂದು ಹೇಳಿದರೆ ಜೀವನಲ್ಲಿ ಅತಿವ್ಯಾಪ್ತಿಯು ಬಂದೇ ಬರುತ್ತದೆ ಎಂದು ಅಭಿಪ್ರಾಯ.

**ಅಶಿಷ್ಟಕರ್ತೃಪ್ರಾಮಾಣ್ಯೇ ಕರ್ತೃಮಾತ್ರೇ ತದುಚ್ಯತಾಮ್ ।**
**ನ ಚೇತ್ ಸಭಾಸ್ವಶಿಷ್ಟಸ್ತ್ವಂ ಶಿಷ್ಟಮಧ್ಯೇ ಭವಿಷ್ಯಸಿ ॥ ೭೮೫ ॥**

**ಅರ್ಥ–** ಅಶಿಷ್ಟಕರ್ತೃಪ್ರಾಮಾಣ್ಯೇ= ಪಾಣಿನಿಯು ಹೇಳದಿದ್ದರೂ ಈಶ್ವರರೂಪ ಕರ್ತೃವಿನಲ್ಲಿ ಪ್ರಾಮಾಣ್ಯವನ್ನು ಅಂಗೀಕರಿಸುವುದಾದರೆ, ಕರ್ತೃಮಾತ್ರೇ= ಎಲ್ಲ ಚೇತನರಲ್ಲೂ, ತತ್= ಆ ಪ್ರಾಮಾಣ್ಯವು, ಉಚ್ಯತಾಂ= ಹೇಳಲ್ಪಡಲಿ, ನ ಚೇತ್= ಹಾಗೆ ಮಾಡದಿದ್ದರೆ, ಅಶಿಷ್ಟಃ ತ್ವಂ= ಅಶಿಷ್ಟನಾದ ನೀನು, ಸಭಾಸು= ಸಭೆಗಳಲ್ಲಿ, ಶಿಷ್ಟಮಧ್ಯೇ= ಶಿಷ್ಟರ ಮಧ್ಯದಲ್ಲಿ, ಭವಿಷ್ಯಸಿ= ಇರುತ್ತೀಯೆ.

**ಅನುವಾದ–** ಪಾಣಿನಿಯು ಹೇಳದಿದ್ದರೂ ಕರ್ತೃವಾದ ಈಶ್ವರನಿಗೆ ನೀನು ಪ್ರಾಮಾಣ್ಯವನ್ನು ಒಪ್ಪಿದರೆ ಅದರಂತೆ ಪ್ರಮಾಕರ್ತೃಗಳಾದ ಎಲ್ಲ ಜೀವರಿಗೂ ಪ್ರಾಮಾಣ್ಯವನ್ನು ಒಪ್ಪು. ಹಾಗೆ ಮಾಡದಿದ್ದರೆ ಅಶಿಷ್ಟನಾದ ನೀನು ಶಿಷ್ಟರ ಸಭೆಯ ಮಧ್ಯದಲ್ಲಿ ಇದ್ದಂತಾಗುತ್ತದೆ.

**ಭಾವವಿಲಾಸಿನೀ–** ಅಶಿಷ್ಟಕರ್ತೃಪ್ರಾಮಾಣ್ಯೇ ಅಶಿಷ್ಟಸ್ಯ ಪಾಣಿನಿನಾ ಪ್ರಮಾಣತಯಾ ಅನನುಶಿಷ್ಟಸ್ಯ ಕರ್ತುರೀಶ್ವರಸ್ಯ ಪ್ರಮಾಣ್ಯೇ ಅಂಗೀಕೃತೇ ಸತಿ ಕರ್ತೃಮಾತ್ರೇ ಜ್ಞಾನ-ಕರ್ತೃಚೇತನಮಾತ್ರೇ । ತತ್ ಪ್ರಾಮಾಣ್ಯಮ್ । ಅಶಿಷ್ಟತ್ವಸ್ಯ ಉಕ್ತವಿಧಯಾ ಪ್ರಮಾವ್ಯಾಪ್ತತ್ವಸ್ಯ

**ಚೋಭಯತ್ರ ಸಾಮ್ಯಾತ್ । ನ ಚೇತ್ ನ್ಯಾಯಸಾಮ್ಯೇಽಪ್ಯೇಕತ್ರ ಪ್ರಾಮಾಣ್ಯಂ ನಾಂಗೀರೋಷಿ ಚೇತ್ । ಅಶಿಷ್ಟಃ ಪಂಡಿತೈರಶಿಕ್ಷತಃ । ಅರ್ಧಜರತೀಯಾಂಗೀಕಾರಾ ಪಂಡಿತಮಧ್ಯೇ ಅಪಂಡಿತೋ ಭವಿಷ್ಯಸೀತ್ಯರ್ಥಃ । ಮೂರ್ಖ ಸದಸೀದಂ ವಕ್ತುಂ ಶಕ್ಯತೇ ನ ಶಿಷ್ಟಮಧ್ಯ ಇತಿಭಾವಃ ॥ ೭೮೫ ॥**

**ವಿವರಣೆ–** ಹೀಗೆ ಅರ್ಧಜರತೀಯನ್ಯಾಯವನ್ನು ಅನುಸರಿಸುವ ನೀನು ಶಿಷ್ಟರ ಸಭೆಯಲ್ಲಿ ಕುಳಿತುಕೊಳ್ಳಲು ಅರ್ಹನಲ್ಲ. ಮೂರ್ಖರ ಸಭೆಯಲ್ಲಿ ಕುಳಿತುಕೊಳ್ಳಲು ಅರ್ಹನಾದವನು ಎಂದು ಅಭಿಪ್ರಾಯ.

**ಯದಿಸ್ಮೃತೇರ್ನ ಮಾನತ್ವಂ ನ ಸ್ಯಾತ್ ತರ್ಹ್ಯನುಭೂತಿಷು ।**
**ಸಮಾನವಿಷಯಜ್ಞಾನದ್ವಯೇ ಯನ್ನ ದ್ವಯೀ ಗತಿಃ ॥ ೭೮೬ ॥**

**ಅರ್ಥ–** ಯದಿ= ಒಂದು ಪಕ್ಷ, ಸ್ಮೃತೇಃ= ಸ್ಮೃತಿಗೆ, ಮಾನತ್ವಂ= ಪ್ರಾಮಾಣ್ಯವು, ನ= ಇಲ್ಲದಿದ್ದರೆ, ತರ್ಹಿ= ಆಗ, ಅನುಭೂತಿಷು= ಅನುಭವಗಳಿಗೂ, ನ ಸ್ಯಾತ್= ಪ್ರಾಮಾಣ್ಯವು ಇಲ್ಲದೇ ಹೋಗಲಿ, ಯತ್= ಏಕೆಂದರೆ, ಸಮಾನವಿಷಯಜ್ಞಾನದ್ವಯೇ= ಸಮಾನವಿಷಯಕ ಎರಡು ಜ್ಞಾನಗಳಲ್ಲಿ, ದ್ವಯೀ ಗತಿಃ= ಒಂದು ಪ್ರಮಾಣ ಮತ್ತು ಇನ್ನೊಂದು ಅಪ್ರಮಾಣ ಎಂಬ ಎರಡು ಪ್ರಕಾರಗಳು, ನ= ಇಲ್ಲವಷ್ಟೆ.

**ಅನುವಾದ–** ಒಂದು ಪಕ್ಷ ಸ್ಮೃತಿಗೆ ಪ್ರಾಮಾಣ್ಯವಿಲ್ಲದಿದ್ದರೆ ಅನುಭವಕ್ಕೂ ಪ್ರಾಮಾಣ್ಯವಿಲ್ಲದೇ ಹೋಗಲಿ. ಏಕೆಂದರೆ ಸಮಾನ ವಿಷಯಕವಾದ ಎರಡು ಜ್ಞಾನಗಳಲ್ಲಿ ಒಂದು ಪ್ರಮಾಣ ಮತ್ತು ಇನ್ನೊಂದು ಅಪ್ರಮಾಣವೆಂಬ ಎರಡು ಪ್ರಕಾರಗಳು ಕೂಡುವುದಿಲ್ಲ.

**ಭಾವವಿಲಾಸಿನೀ– ಇದಾನೀಂ ಸ್ಮೃತೇರ್ಯಾಥಾರ್ಥ್ಯಂ ಸಮರ್ಥಯತೇ ॥ ಯದೀತಿ ॥ ಮಾನತ್ವಂ ಯಥಾರ್ಥತ್ವಮ್ । ಅನುಭೂತಿಷು ಪ್ರಮಾರೂಪಾನುಭೂತಿಷು । ಪ್ರಮಾಜನ್ಯಸಂಸ್ಕಾರ-ಜಸ್ಮೃತಾವಪಿ ಪ್ರಮಾಸಮಾನವಿಷಯತ್ವಾವಶ್ಯಂ ಭಾವತ್ಸಮಾನವಿಷಯೇತ್ಯುಕ್ತಮ್ । ದ್ವಯೀ ಯಥಾರ್ಥತ್ವಾ ಯಥಾರ್ಥತ್ವ ರೂಪಾ ॥ ೭೮೬ ॥**

**ವಿವರಣೆ–** ಅನುಭವದಿಂದ ಸಂಸ್ಕಾರವು ಉಂಟಾಗಿ ಆ ಸಂಸ್ಕಾರದಿಂದ ಸ್ಮೃತಿಯು ಉಂಟಾಗುತ್ತದೆ. ಅನುಭವಕ್ಕೆ ಯಾವುದು ವಿಷಯವೋ, ಸಂಸ್ಕಾರ ಮತ್ತು ಸ್ಮೃತಿಗಳಿಗೂ ಅದೇ ವಿಷಯ. ಹೀಗಿರುವಾಗ ಆ ವಿಷಯದ ಅನುಭವವು ಪ್ರಮಾಣ, ಸ್ಮೃತಿಯು ಅಪ್ರಮಾಣ ಎಂದು ಹೇಳುವುದು ಯುಕ್ತವಲ್ಲ ಎಂದು ಅಭಿಪ್ರಾಯ.

**ಯಸ್ಮಿನ್ ಕಾಲೇ ಯತ್ರ ದೇಶೇ ತದ್ಘಟಂ ಸಂಸ್ಮರೇತ್ ಕಿಲ ।**
**ತದಾನೀಂ ತತ್ರ ಸೋಽರ್ಥೋಭೂದಿದಾನೀಮಸ್ತಿ ವಾ ನ ವಾ ।**
**ಸ್ಮರ್ತಾರೋಪೀತ್ಥಮೇವಾಹುಸ್ತತ್ ಕೇನಾಸ್ಯಾಮಮಾನತಾ ॥ ೭೮೭ ॥**

**ಅರ್ಥ–** ಯಸ್ಮಿನ್ ಕಾಲೇ= ಯಾವ ಕಾಲದಲ್ಲಿ, ಯತ್ರ ದೇಶೇ= ಯಾವ ದೇಶದಲ್ಲಿ, ತದ್ಘಟಂ= ಆ ಘಟವನ್ನು, ಸಂಸ್ಮರೇತ್= ಸ್ಮರಣೆ ಮಾಡುತ್ತಾನೆಯೋ, ತದಾನೀಂ= ಆ ಕಾಲದಲ್ಲಿ, ತತ್ರ= ಆ ದೇಶದಲ್ಲಿ, ಸೋ ಅರ್ಥಃ= ಆ ಘಟರೂಪವಾದ ಅರ್ಥವು, ಅಭೂತ್ ಕಿಲ= ಇದ್ದಿತಷ್ಟೆ, ಇದಾನೀಂ= ಈಗ, ಅಸ್ತಿವಾ= ಇರಲಿ ಅಥವಾ, ನ ವಾ= ಇಲ್ಲದೇ ಇರಲಿ, ಸ್ಮರ್ತಾರೋಪಿ= ಸ್ಮರಣೆ ಮಾಡುವವರು ಕೂಡ, ಇತ್ಥಮೇವ= ಈ ರೀತಿಯಲ್ಲಿಯೇ, ಆಹುಃ= ಹೇಳುತ್ತಾರೆ, ತತ್= ಆದ್ದರಿಂದ, ಅಸ್ಯಾಂ= ಈ ಸ್ಮೃತಿಯಲ್ಲಿ, ಕೇನ= ಯಾವ ನಿಮಿತ್ತದಿಂದ, ಅಮಾನತಾ= ಅಪ್ರಾಮಾಣ್ಯವು ಉಂಟಾಗುತ್ತದೆ.

**ಅನುವಾದ–** ಯಾವ ದೇಶದಲ್ಲಿ ಯಾವ ಕಾಲದಲ್ಲಿ ಯಾವ ಘಟವಿದ್ದಿತ್ತೋ ಅದನ್ನು ಸ್ಮರಣೆ ಮಾಡುವವರು ಆ ದೇಶದಲ್ಲಿ ಆ ಕಾಲದಲ್ಲಿ ಆ ಘಟವಿದ್ದಿತು ಎಂದೇ ಸ್ಮರಣೆ ಮಾಡುತ್ತಾರಷ್ಟೆ. ಈಗ ಘಟವು ಅಲ್ಲಿ ಇರಲಿ ಅಥವಾ ಇಲ್ಲದೇ ಹೋಗಲಿ, ಸ್ಮರಣೆ ಮಾಡುವವರೂ ಕೂಡ ಆ ದೇಶದಲ್ಲಿ ಆ ಕಾಲದಲ್ಲಿ ಆ ಘಟವಿದ್ದಿತು ಎಂದೇ ಸ್ಮರಣೆ ಮಾಡುತ್ತಾರಷ್ಟೆ. ಹೀಗಿರುವಾಗ ಸ್ಮರಣೆಗೆ ಅಪ್ರಾಮಾಣ್ಯವು ಏತಕ್ಕೆ?

**ಭಾವವಿಲಾಸಿನೀ–** ನನು ಯದಾ ಯತ್ರ ಘಟಂ ಸ್ಮರತಿ ತದಾ ತತ್ರ ತಸ್ಯ ಸತ್ವನಿಯಮಾಭಾವಾತ್ ಕಥಂ ಯಾಥಾರ್ಥ್ಯಮಿತಿ ಚೇತ್ ಸತ್ಯಮ್ । ಇದಾನೀಂ ತತ್ರ ಘಟೋಽಸ್ತೀತಿ ಸ್ಮರಣೇ ಸ್ಮೃತೇರಯಾಥಾರ್ಥ್ಯಂ ಸ್ಯಾದೇವ । ನ ಚೈವಂ ಸ್ಮೃತೇರಾಕಾರಃ । ಕಿಂತು ತದಾ ತತ್ರ ಘಟ ಆಸೀದಿತ್ಯೇವ ಸ್ಮೃತೇರಾಕಾರಃ । ಅಸ್ಯಾಶ್ಚಾ ಯಾಥಾರ್ಥ್ಯಂ ತದಾ ಸ್ಯಾತ್ । ಯದ್ಯನುಭವ-ಕಾಲೇಽಪಿ ತತ್ರ ಘಟೋ ನಾಸೀತ್ ನ ಚೈತದಸ್ತಿ । ಸ್ಮೃತಿಕಾಲೇಪಿ ತತ್ರ ಘಟೋ ನಾಸ್ತಿ ಚೇತ್ಕಾ ಹಾನಿರಿತ್ಯಾಹ – **ಯಸ್ಮಿನ್ಕಾಲ ಇತಿ** ॥ ಇತ್ಥಮೇವ ಪೂರ್ವಶ್ಲೋಕೋಕ್ತಪ್ರಕಾರೇಣೈವ ಸ್ಮರ್ತಾರೋಪ್ಯಾಹುರಿತಿ ಸಂಬಂಧಃ । ತತ್ ತಸ್ಮಾತ್ । ಅಸ್ಯಾಂ ಸ್ಮೃತೌ । ಅಮಾನತಾ ಅಯಥಾರ್ಥತಾ ॥ ೭೮೭ ॥

**ವಿವರಣೆ–** ಯಾವಾಗ ಎಲ್ಲಿ ಘಟವನ್ನು ಸ್ಮರಿಸುತ್ತಾನೆಯೋ, ಆಗ ಅಲ್ಲಿ ಘಟವು ಇರಬೇಕೆಂಬ ನಿಯಮ ಇಲ್ಲದಿರುವುದರಿಂದ ಸ್ಮೃತಿಗೆ ಹೇಗೆ ಯಾಥಾರ್ಥ್ಯವು ಉಂಟಾಗುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಈಗ ಅಲ್ಲಿ ಘಟವು ಇದೆ ಎಂದು ಸ್ಮರಣೆ ಬಂದರೆ ಆ ಸ್ಮರಣೆಯು ಅಯಥಾರ್ಥವಾದುದೇ. ಆದರೆ ಸ್ಮರಣೆಯ ಆಕಾರವು ಹಾಗಿಲ್ಲ. ಮತ್ತೇನೆಂದರೆ ಆಗ ಅಲ್ಲಿ ಘಟವು ಇದ್ದಿತು ಎಂಬುದಾಗಿ ಸ್ಮರಣೆ ಮಾಡುವವರೂ ಕೂಡ ಹಿಂದಿನ ಶ್ಲೋಕದಲ್ಲಿ ಹೇಳಿದ ರೀತಿಯಲ್ಲೇ ಸ್ಮರಣೆ ಮಾಡುತ್ತಾರೆ. ಆದ್ದರಿಂದ ಸ್ಮೃತಿಗೆ ಅಪ್ರಾಮಾಣ್ಯವನ್ನು ಹೇಳಲು ಯಾವ ಕಾರಣವೂ ಇಲ್ಲ ಎಂದು ಅಭಿಪ್ರಾಯ.

**ಕಾಲಾತ್ಯಯಸ್ಯ ಸಂಸ್ಕಾರಾಭಾವಾನ್ನ ಸ್ಮರಣಂ ಯದಿ ।**
**ತರ್ಹಿ ತತ್ಕಾಲಮದ್ಯಾಪಿ ವರ್ತಮಾನಂ ಚ ನ ಸ್ಮರೇತ್ ।**
**ಘಟಮಾತ್ರಗ್ರಾಹಿಣೀಯಂ ಕುತೋ ವಾ ಮಾನತಾಂ ತ್ಯಜೇತ್ ॥ ೭೮೮ ॥**

**ಅರ್ಥ–** ಕಾಲಾತ್ಯಯಸ್ಯ= ಕಾಲಧ್ವಂಸದ, ಸಂಸ್ಕಾರಾಭಾವಾತ್= ಸಂಸ್ಕಾರವು ಇಲ್ಲದಿರುವುದರಿಂದ, ಯದಿ= ಒಂದು ಪಕ್ಷ, ನ ಸ್ಮರಣಂ= ಕಾಲಧ್ವಂಸದ ಸ್ಮರಣವು ಇಲ್ಲವೆಂದಾದರೆ, ತರ್ಹಿ= ಆಗ, ತತ್ಕಾಲಂ= ಆ ಕಾಲವನ್ನು, ಅದ್ಯಾಪಿ= ಈಗಲೂ ಕೂಡ, ವರ್ತಮಾನಂ ಚ= ವರ್ತಮಾನವೆಂದೂ, ನ ಸ್ಮರೇತ್= ಸ್ಮರಿಸಲಾರನು, ಘಟಮಾತ್ರಗ್ರಾಹಿಣೀ= ಆಗ ಕೇವಲ ಘಟವಿಷಯಕವಾದ, ಇಯಂ= ಈ ಸ್ಮೃತಿಯು, ಮಾನತಾಂ= ಪ್ರಾಮಾಣ್ಯವನ್ನು, ಕುತಃ= ಏಕೆ, ತ್ಯಜೇತ್= ತ್ಯಜಿಸುತ್ತದೆ.

**ಅನುವಾದ–** ಕಾಲಧ್ವಂಸದ ಸಂಸ್ಕಾರವಿಲ್ಲದಿರುವುದರಿಂದ ಕಾಲಧ್ವಂಸದ (ಅತೀತ ಕಾಲದ) ಸ್ಮರಣೆಯು ಬರುವುದಿಲ್ಲವೆಂದಾದರೆ ಆಗ ಅತೀತ ಕಾಲವನ್ನು ವರ್ತಮಾನ ಕಾಲವೆಂದು ಗ್ರಹಿಸುವ ಸ್ಮರಣೆಯೂ ಬರಲಾರದು. ಆಗ ಸ್ಮೃತಿಯು ಕಾಲವನ್ನು ಬಿಟ್ಟು ಕೇವಲ ಘಟಮಾತ್ರ ವಿಷಯಕವಾಗುತ್ತದೆ. ಇಂತಹ ಸ್ಮೃತಿಗೆ ಅಪ್ರಾಮಾಣ್ಯವು ಯಾವ ಕಾರಣದಿಂದ ಉಂಟಾಗುತ್ತದೆ?

**ಭಾವವಿಲಾಸಿನೀ–** ಕಾಲಾತ್ಯಯಸ್ಯ ಸ್ಮೃತಿಕಾಲೇ ಅತೀತೋಽಯೋ ಯಮನುಭವಕಾಲಃ ತದ್ಧ್ವಂಸಸ್ಯ ಸಂಸ್ಕಾರಾಭಾವಾತ್ । ಅನುಭವೋತ್ತರಕಾಲೀನಾನು ಭವಕಾಲಧ್ವಂಸಸ್ಯಾನು-ಭವಕಾಲೇನು ಭವಾಭಾವೇನ ಸಂಸ್ಕಾರಾಭಾವಾತ್ ತರ್ಹಿ ಕಾಲಧ್ವಂಸಸ್ಯಾನುಭಾವಾಭಾವೇನ ಸ್ಮರಣಾಭಾವೇ ಅಚಾಕ್ಷುಷಸ್ಯ ತಸ್ಯ ಕಾಲಸ್ಯಾಪಿ ಘಟಾನುಭವಕಾಲೇಽನುಭವಾಯೋಗೇನ ತಸ್ಯ ಕಾಲಸ್ಯ ಕಾಲವಿಶಿಷ್ಟಘಟಸ್ಯ ಚ ಸ್ಮೃತಿಕಾಲೇ ವರ್ತಮಾನತ್ವೇ ನ ಸ್ಮರಣಮಪಿ ನ ಸ್ಯಾತ್ । ಯೇನಾತೀತಕಾಲಸ್ಯತೀತಕಾಲೇಽನುಭೂತ ಘಟಸ್ಯ ಚ ವರ್ತಮಾನತ್ವೇನ ಗ್ರಹಣಾದಯಾಥಾರ್ಥ್ಯಮುಚ್ಯೇತ । ಕಾಲಗೋಷ್ಠೀಂ ವಿಹಾಯ ಘಟಸ್ವರೂಪ-ಮಾತ್ರಸ್ಯಾನುಭವೇ ಸ್ಮೃತೌ ಚೋಲ್ಲೇಖೇ ಕಥಮೇಕಸ್ಯಾಯಾಥಾರ್ಥ್ಯಮ್ । ಉಪನೀತಸ್ಯ ಕಾಲಸ್ಯ ತದಾನೀಂ ಗ್ರಹಣೇ ಇದಾನೀಂತನಕಾಲಧ್ವಂಸೋಽಪಿ ವಿದ್ಯಮಾನಃ ಸರ್ವಾನುಭವಸಿದ್ಧಶ್ಚ ತೇನೈವೋಪನಾಯಕೇನೋಪನೀತಃ ಕುತೋ ನ ಸ್ಮರ್ಯತೇ । ತದಾನೀಂತನಕಾಲಸ್ಯ ತತ್ಕಾಲೀನಘಟಸ್ಯ ವಾ ಇದಾನೀಂ ವರ್ತಮಾನತ್ವಮ್ ಅವಿದ್ಯಮಾನತ್ವಾತ್ ಸರ್ವಾನುಭವ-ವಿರುದ್ಧತ್ವಾಚ್ಚ ನೋಪನೀತಂ ಸ್ಮೃತಾವುಲ್ಲಿಖ್ಯತೇ । ನ ಹ್ಯುಪನೀತಮಪಿ ಸೌರಭಂ ಚಕ್ಷುಷಾ ಚಂದನ ಇವ ಪಾಷಾಣೇ ಪ್ರತೀಯತೇ । ಅನುಭವಾಭಾವಾದಸಂಸ್ಕಾರಸ್ಥಲೇ ನೋಲ್ಲಿಖ್ಯತೇ ಅರ್ಥಸ್ಯೈವಾಭಾವಾತ್ ನೋಪನಾಯಕಬಲಾದಪ್ಯುಲ್ಲಿಖ್ಯತೇ । ಅತೋಽಸ್ಮಿನ್ಪಕ್ಷೇಽಪಿ ನ ಸ್ಮೃತೇರಯಾಥಾರ್ಥ್ಯಸ್ಯಾವಸರಃ ॥ ೭೮೮ ॥

**ವಿವರಣೆ–** ಸ್ಮೃತಿಯು ಬರುವಾಗ ಅನುಭವ ಕಾಲವು ಧ್ವಂಸವಾಗಿದೆ. ಅನುಭವ ಬರುವಾಗ ಅನುಭವ ಕಾಲದ ಧ್ವಂಸವಿಲ್ಲ. ಆದ್ದರಿಂದ ಅಂತಹ ಅನುಭವಜನ್ಯವಾದ ಸ್ಮೃತಿಯಲ್ಲಿ ಅನುಭವ ಕಾಲಧ್ವಂಸವು ಹೇಗೆ ವಿಷಯೀಕೃತವಾಗುತ್ತದೆ ಎಂದು ಪ್ರಶ್ನೆ. ಹಾಗಾದರೆ ಇದಕ್ಕೆ ಸಮಾಧಾನವು ಈ ರೀತಿ ಇದೆ. ಕಾಲಧ್ವಂಸದ ಅನುಭವವು ಇಲ್ಲವಾದ್ದರಿಂದ ಅದರ ಸ್ಮರಣೆಯೂ ಇಲ್ಲವೆಂದು ಹೇಳುವುದಾದರೆ ಕಾಲವು ಅಚಾಕ್ಷುಷವಾದ್ದರಿಂದ ಚಕ್ಷುಸ್ಸಿನಿಂದ ಘಟಾನುಭವವು ಉಂಟಾಗುವಾಗ ಕಾಲದ ಅನುಭವವೇ ಉಂಟಾಗುವುದಿಲ್ಲ. ಆಗ ಆ ಕಾಲವಿಶಿಷ್ಟ ಘಟದ ಸ್ಮೃತಿಕಾಲದಲ್ಲಿ ಆ ಕಾಲವು ವರ್ತಮಾನತ್ವೇನ ತೋರುವುದಿಲ್ಲ. ಸ್ಮೃತಿಕಾಲದಲ್ಲಿ ಅತೀತಕಾಲವು ವರ್ತಮಾನತ್ವೇನ ತೋರಿದ್ದರೆ, ಅತೀತ ಕಾಲವನ್ನು ವರ್ತಮಾನತ್ವೇನ ಗ್ರಹಿಸುವುದರಿಂದ ಸ್ಮೃತಿಯು ಅಪ್ರಮಾಣವೆಂದು ಹೇಳಬಹುದಾಗಿದ್ದಿತು. ಆದ್ದರಿಂದ ಕಾಲದ ವಾರ್ತೆಯನ್ನು ಬಿಟ್ಟು ಸ್ಮೃತಿಯು ಕೇವಲ ಘಟವನ್ನು ವಿಷಯೀಕರಿಸುತ್ತದೆ ಎಂದಾಯಿತು. ಅನುಭವವು ಕೂಡ ಹಾಗೆಯೇ. ಹೀಗಿರುವಾಗ ಅನುಭವವು ಯಥಾರ್ಥ, ಸ್ಮೃತಿಯು ಅಯಥಾರ್ಥ ಎಂಬ ವಿಭಾಗವು ಕೂಡುವುದಿಲ್ಲ. ಅನುಭವ ಕಾಲದಲ್ಲಿ ಚಕ್ಷುಸ್ಸಿನಿಂದ ಘಟದ ಜ್ಞಾನವು ಬರುವಾಗ ಸಾಕ್ಷಿಯಿಂದ ಉಪನೀತವಾದ ಕಾಲವು ತೋರುತ್ತದೆ ಎಂದು ಹೇಳಿದರೆ ಸ್ಮರಣೆಯು ಬರುವಾಗ ಈಗ ವಿದ್ಯಮಾನವಾದ ತತ್ಕಾಲಧ್ವಂಸವು ಸಾಕ್ಷಿಯಿಂದ ಉಪನೀತವಾಗಿ ಏಕೆ ಸ್ಮರಿಸಲ್ಪಡಬಾರದು? ಆ ಕಾಲವಾಗಲಿ, ಆ ಕಾಲವಿಶಿಷ್ಟ ಘಟವಾಗಲಿ ಅದು ಈಗ ಇಲ್ಲದಿರುವುದರಿಂದ ಅವಿದ್ಯಮಾನವಾದ್ದರಿಂದ ಮತ್ತು ಸರ್ವಾನುಭವವಿರುದ್ಧವಾದ್ದರಿಂದಲೂ ಅವು ಸ್ಮೃತಿಯಲ್ಲಿ ಉಪನೀತವಾಗಿ ತೋರುವುದಿಲ್ಲ. ಉಪನಯ ಮರ್ಯಾದೆಯಿಂದ ತೋರುವುದಾದರೂ ಅನುಭವ ವಿರುದ್ಧವಾದುದು ಯಾವುದೂ ತೋರುವುದಿಲ್ಲ. ಉಪನಯ ಮರ್ಯಾದೆಯಿಂದ ಚಕ್ಷುಸ್ಸಿನಿಂದ ಚಂದನದಲ್ಲಿಯೇ ಸೌರಭವು ಗೃಹೀತವಾಗುತ್ತದೆಯೇ ಹೊರತು ಪಾಷಾಣದಲ್ಲಿ ಸೌರಭವು ಗೃಹೀತವಾಗುವುದಿಲ್ಲ. ಆದ್ದರಿಂದ ಕಾಲದ ಅನುಭವವೇ ಇಲ್ಲವೆಂದರೆ ಸ್ಮೃತಿಯಲ್ಲೂ ಕಾಲದ ಅನುಭವವಿರುವುದು ಬೇಡ. ಆದ್ದರಿಂದ ಸ್ಮೃತಿ ಯಥಾರ್ಥವಾಗಲಿ. ಅನುಭವಸಮಯದಲ್ಲಿ ಉಪನೀತಕಾಲದ ಭಾನವು ಇರುವುದಾದರೆ ಸ್ಮೃತಿ ಸಮಯದಲ್ಲಿಯೂ ಸಹ ವಿದ್ಯಮಾನವಾದ, ಸರ್ವಾನುಭವ ಸಿದ್ಧವಾದ, ಪ್ರಾಮಾಣಿಕವಾದ ಕಾಲಧ್ವಂಸವು ಸಾಕ್ಷಿಯಿಂದಲೇ ಉಪನೀತವಾಗಿ ಸ್ಮೃತಿಯಲ್ಲಿ ತೋರುವುದರಿಂದ ಅನುಭವದಂತೆ ಸ್ಮೃತಿಯೂ ಪ್ರಮಾಣವಾಗಲಿ ಎಂದು ಅಭಿಪ್ರಾಯ.

ಸುಹೃದ್ಭಾವೇನ ಪೃಚ್ಛಂತಂ ಪ್ರತಿ ತೂತ್ತರಮುಚ್ಯತೇ ।
ಯಥಾऽನುಭವಕಾಲೋಪಿ ಸಾಕ್ಷಿಣೈವೋಪನೀಯತೇ ।
ತಥಾ ತದಪ್ಯಯೋऽಪ್ಯತ್ರ ಸಾಕ್ಷಿಣೈವೋಪನೀಯತಾಮ್ ॥ ೭೮ ॥

**ಅರ್ಥ**– ಸುಹೃದ್ಭಾವೇನ= ಸ್ನೇಹದಿಂದ, ಪೃಚ್ಛಂತಂ ಪ್ರತಿ= ಸ್ನೇಹಮಾಡುವವನನ್ನು ಕುರಿತು, ಉತ್ತರಂ ಉಚ್ಯತೇ= ಉತ್ತರವು ಹೀಗೆ ಹೇಳಲ್ಪಡುತ್ತದೆ, ಯಥಾ= ಹೇಗೆ, ಅನುಭವಕಾಲೋಽಪಿ= ಅನುಭವ ಕಾಲವೂ ಕೂಡ, ಸಾಕ್ಷಿಣೈವ= ಸಾಕ್ಷಿಯಿಂದಲೇ, ಉಪನೀಯತೇ= ಉಪನೀತವಾಗಿ ತೋರುತ್ತದೆಯೋ, ತಥಾ= ಅದರಂತೆ, ತದಪ್ಯಯೋಽಪಿ= ಅನುಭವ ಕಾಲಧ್ವಂಸವು ಸಹ, ಅತ್ರ= ಈ ಸ್ಮೃತಿಯಲ್ಲಿ, ಸಾಕ್ಷಿಣೈವ= ಸಾಕ್ಷಿಯಿಂದಲೇ, ಉಪನೀಯತಾಂ= ಉಪನೀತವಾಗಲಿ.

**ಅನುವಾದ**– ಸ್ನೇಹಭಾವದಿಂದ ಪ್ರಶ್ನೆಮಾಡುವವನನ್ನು ಕುರಿತು ಹೀಗೆ ಉತ್ತರವನ್ನು ಹೇಳುತ್ತೇವೆ. ಹೇಗೆ ಅನುಭವದಲ್ಲಿ ಅನುಭವಕಾಲವು ಸಾಕ್ಷಿಯಿಂದಲೇ ಉಪನೀತವಾಗಿ ತೋರುತ್ತದೆಯೋ, ಅದರಂತೆ ಸ್ಮೃತಿಯಲ್ಲಿ ಅನುಭವ ಕಾಲಧ್ವಂಸವೂ ಸಹ ಸಾಕ್ಷಿಯಿಂದಲೇ ಉಪನೀತವಾಗಿ ತೋರುತ್ತದೆ.

**ಭಾವವಿಲಾಸಿನೀ**– ನನ್ವತೀತಕಾಲೇ ತತ್ರ ಘಟೋಽಭೂದಿತಿ ಸ್ಮೃತೇರಾಕಾರಂ ವದತಾಂ ಭವತಾಮಪ್ಯತೀತಕಾಲಸ್ಯೇದಾನೀಂತನಕಾಲಧ್ವಂಸಸ್ಯ ವಾ ಉಲ್ಲೇಖೋ ವಕ್ತವ್ಯಃ ಸ ಕಥಮಿತಿ ಚೇತ್ ತತ್ರಾಹ – **ಸುಹೃದ್ಭಾವೇನೇತಿ** ॥ ೭೮೯ ॥

**ಮನೋಽಂತಃಕರಣಂ ತಸ್ಯ ಸಾಚಿವ್ಯಂ ಕುರುತೇ ಹಿ ಸಃ ।**
**ಜ್ಞಾತಜ್ಞಾಪನದೋಷಂ ಚ ದೂರೀಚಕ್ರೇ ತತಃ ಸ್ಮೃತಿಃ ॥ ೭೯೦ ॥**

**ಅರ್ಥ**– ಮನಃ= ಮನಸ್ಸು, ಅಂತಃಕರಣಂ= ಒಳಗಿರುವ ಕರಣವಾದುದು, ತಸ್ಯ= ಆ ಮನಸ್ಸಿಗೆ, ಸಃ= ಆ ಸಾಕ್ಷಿಯು, ಸಾಚಿವ್ಯಂ ಕುರುತೇ ಹಿ= ಸಹಕಾರವನ್ನು ಮಾಡುವುದಷ್ಟೆ, ತಥಾ= ಆ ಕಾರಣದಿಂದ, ಸ್ಮೃತಿಃ= ಸ್ಮೃತಿಯು, ಜ್ಞಾತಜ್ಞಾಪನದೋಷಂ= ಜ್ಞಾತಜ್ಞಾಪನ ರೂಪವಾದ ದೋಷವನ್ನು, ದೂರೀಚಕ್ರೇ= ನಿರಾಕರಿಸಿತು.

**ಅನುವಾದ**– ಮನಸ್ಸು ದೇಹದ ಒಳಗಿರುವ ಒಂದು ಕರಣ, ಸಾಕ್ಷಿಯು ಅದಕ್ಕೆ ಸಹಾಯವನ್ನು ಮಾಡುತ್ತದೆ. ಆದ್ದರಿಂದ ಸ್ಮೃತಿಯು ಜ್ಞಾತಜ್ಞಾಪಕತ್ವ ದೋಷವನ್ನು ನಿರಾಕರಿಸಿತು.

**ಭಾವವಿಲಾಸಿನೀ**– ಬಹಿರಿಂದ್ರಿಯಸ್ಯ ಚಕ್ಷುರಾದೇರನುಪನಾಯಕೇ ಸಾಕ್ಷಿಣಿ ಸ್ಮೃತಿಕರಣ ಮನೋ-ರೂಪಾಂತರಿಂದ್ರಿಯೋಪನಾಯಕತ್ವಂ ಸುಖೇನ ಸ್ಯಾದಿತ್ಯಾಹ – **ಮನ ಇತಿ** ॥ ಸಃ ಸಾಕ್ಷೀ । ತತಃ ಪ್ರಾಗಜ್ಞಾತಸ್ಯೈವ ಕಾಲಧ್ವಂಸಸ್ಯ ಸ್ಮೃತಾವುಲ್ಲೇಖಾತ್ ॥ ೭೯೦ ॥

**ವಿವರಣೆ**– ಸ್ಮೃತಿಯು ಮನೋಜನ್ಯವಾದುದು. ಮನಸ್ಸು ಒಂದು ಒಳಗಿನ ಇಂದ್ರಿಯ. ಮನಸ್ಸಿನಿಂದ ಸ್ಮೃತಿಯು ಉಂಟಾಗಬೇಕಾದರೆ ಮನಸ್ಸಿಗೆ ಸಾಕ್ಷಿಯ ಸಹಾಯವು ಬೇಕು. ಆದ್ದರಿಂದ ಸಾಕ್ಷಿಯು ಅನುಭವಕಾಲಧ್ವಂಸವನ್ನು ಮನಸ್ಸಿಗೆ

ಉಪನಯ ಮರ್ಯಾದೆಯಿಂದ ಒದಗಿಸಿಕೊಟ್ಟು ಮನಸ್ಸು ತಾದೃಶ ಅನುಭವಕಾಲಧ್ವಂಸವಿಶಿಷ್ಟ ಘಟದ ಸ್ಮೃತಿಯನ್ನು ಉಂಟುಮಾಡುವಂತೆ ಮಾಡುತ್ತದೆ. ಆದ್ದರಿಂದಲೇ ಸ್ಮೃತಿಗೆ ಜ್ಞಾತಜ್ಞಾಪಕತ್ವ ದೋಷವು ಇಲ್ಲ. ಏಕೆಂದರೆ ಅನುಭವದಲ್ಲಿ ತೋರದಿದ್ದ ಅನುಭವ ಕಾಲಧ್ವಂಸವು ಸ್ಮೃತಿಯಲ್ಲಿ ತೋರುತ್ತದೆ. ಆದ್ದರಿಂದ ತುಷ್ಯತು ದುರ್ಜನಃ ಎಂಬ ನ್ಯಾಯದಿಂದ ಅನಧಿಗತಾರ್ಥಗಂತೃ ಪ್ರಮಾಣಂ ಎಂದು ಸ್ವೀಕರಿಸಿದರೂ, ಅನುಭವದಲ್ಲಿ ಅನಧಿಗತವಾದ ಅನುಭವಕಾಲಧ್ವಂಸವನ್ನು ವಿಷಯೀಕರಿಸುವುದರಿಂದ ಸ್ಮೃತಿಯ ಪ್ರಾಮಾಣ್ಯಕ್ಕೆ ಭಂಗವಿಲ್ಲ ಎಂದು ಅಭಿಪ್ರಾಯ.

**ಅತೋ ಜ್ಞಾನಸ್ಯ ಮಾನತ್ವಮಪವಾದೇನ ಹೀಯತೇ ।**
**ನ ಚೇದ್ ಜ್ಞಾನಗ್ರಾಹಿಣ್ಯೈವ ಗೃಹ್ಯತೇ ನಾತ್ರ ಸಂಶಯಃ ।**
**ಅಪೌರುಷೇಯವೇದೋಕ್ತೇಃ ಪ್ರಾಮಾಣ್ಯಂ ಸ್ಥಿರಮೇವ ತತ್ ॥ ೭೯೧ ॥**

**ಅರ್ಥ–** ಅತಃ= ಆದ್ದರಿಂದ, ಜ್ಞಾನಸ್ಯ= ಜ್ಞಾನದ, ಮಾನತ್ವಂ= ಪ್ರಾಮಾಣ್ಯವು, ಅಪವಾದೇನ= ಅಪವಾದದಿಂದ, ಹೀಯತೇ= ನಾಶವನ್ನು ಹೊಂದುತ್ತದೆ, ನ ಚೇತ್= ಅಪವಾದವು ಇಲ್ಲದಿದ್ದರೆ, ಜ್ಞಾನಗ್ರಾಹಿಣ್ಯೈವ= ಜ್ಞಾನಗ್ರಾಹಕವಾದ ಪ್ರಮಾಣದಿಂದಲೇ, ಗೃಹ್ಯತೇ= ವಿಷಯೀಕರಿಸಲ್ಪಡುತ್ತದೆ, ಅತ್ರ= ಈ ವಿಷಯದಲ್ಲಿ, ನ ಸಂಶಯಃ= ಸಂಶಯವಿಲ್ಲ, ತತ್= ಆದ್ದರಿಂದ, ಅಪೌರುಷೇಯವೇದೋಕ್ತೇಃ= ಅಪೌರುಷೇಯವಾದ ವೇದ ವಚನಗಳಿಗೆ, ಪ್ರಾಮಾಣ್ಯಂ= ಪ್ರಾಮಾಣ್ಯವು, ಸ್ಥಿರಮೇವ= ಸ್ಥಿರವಾದುದೇ ಆಗಿದೆ.

**ಅನುವಾದ–** ಆದ್ದರಿಂದ ಜ್ಞಾನದ ಪ್ರಾಮಾಣ್ಯವು ಅಪವಾದದಿಂದ ಮಾತ್ರ ನಾಶವನ್ನು ಹೊಂದುತ್ತದೆ. ಅಪವಾದವಿಲ್ಲದಿದ್ದರೆ ಜ್ಞಾನಗ್ರಾಹಕವಾದ ಪ್ರಮಾಣವೇ ಆ ಜ್ಞಾನದ ಪ್ರಾಮಾಣ್ಯವನ್ನೂ ವಿಷಯೀಕರಿಸುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ. ಆದ್ದರಿಂದ ಅಪೌರುಷೇಯವಾದ ವೇದದಲ್ಲಿ ಯಾವ ದೋಷವೂ ಇಲ್ಲದಿರುವುದರಿಂದ ಅಪವಾದ ಪ್ರಸಕ್ತಿಯೇ ಇಲ್ಲದಿರುವುದರಿಂದ ಪ್ರಾಮಾಣ್ಯವು ಸುಸ್ಥಿರವಾಗಿ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಉಪಸಂಹರನ್ ತರ್ಹಿ ಕಸ್ಯಾಪ್ರಮಾಣ್ಯಮಿತ್ಯತ ಆಹ – **ಅತ ಇತಿ ॥** ಅಪವಾದೇನ ಬಾಧಾದಿನಾ । ನ ಚೇತ್ ಅಪವಾದೋ ನ ಚೇತ್ । ತತ್ತಸ್ಮಾತ್ ಪ್ರಾಮಾಣ್ಯಸ್ಯ ಬಾಧಕೈಕಾಪೋದ್ಯತ್ವಾದಪೌರುಷೇಯೇ ಬಾಧಕಾಭಾವಾಚ್ಚ ॥ ೭೯೧ ॥

ಆನಂದಶ್ರುತಿತೋ ಬ್ರಹ್ಮಾನಂದರೂಪಂ ಯದೀಷ್ಯತೇ ।
ತರ್ಹಿ ಪ್ರಿಯಶಿರಸ್ತ್ವಾದಿ ಶ್ರುತೇರಾನಂದಮೂರ್ತಿತಾ ॥ ೭೯೨ ॥

ಅಪ್ಯಂಗೀಕ್ರಿಯತಾಂ ನೋ ಚೇನ್ನೋಭಯಂ ಚ ಪ್ರಸಿದ್ಧ್ಯತಿ ।
ಜಯೀ ತಾರ್ಕಿಕಬಾಲಃ ಸ್ಯಾತ್ತ್ವಂ ತು ಭೂಯಾಃ ಪರಾಜಯೀ ॥ ೭೯೩ ॥

**ಅರ್ಥ–** ಆನಂದಶ್ರುತಿತಃ= ಆನಂದೋ ಬ್ರಹ್ಮ ಎಂಬ ಶ್ರುತಿಯಿಂದ, ಬ್ರಹ್ಮ= ಬ್ರಹ್ಮನು, ಆನಂದರೂಪಂ= ಆನಂದರೂಪನೆಂದು, ಯದಿ ಇಷ್ಯತೇ= ಅಂಗೀಕರಿಸುವುದಾದರೆ, ತರ್ಹಿ= ಆಗ, ಪ್ರಿಯಶಿರಸ್ತ್ವಾದಿ ಶ್ರುತೇಃ= ಪ್ರಿಯಶಿರಸ್ತ್ವಾದಿ ಶ್ರುತಿಯಿಂದ, ಆನಂದ ಮೂರ್ತಿತಾ= ಆನಂದಮಯವಾದ ಶಿರಪಾಣ್ಯಾದಿ ವಿಗ್ರಹವೂ ಕೂಡ, ಅಂಗೀಕ್ರಿಯತಾಂ= ಅಂಗೀಕರಿಸಲ್ಪಡಲಿ, ನೋ ಚೇತ್= ಇಲ್ಲದಿದ್ದರೆ, ಉಭಯಂ ಚ= ಆನಂದರೂಪತ್ವವು ಮತ್ತು ಆನಂದಮಯವಾದ ವಿಗ್ರಹವು, ನ ಪ್ರಸಿದ್ಧ್ಯತಿ= ಸಿದ್ಧವಾಗುವುದಿಲ್ಲ, ತಾರ್ಕಿಕಬಾಲಃ= ತಾರ್ಕಿಕ ಕುಮಾರನು, ಜಯೀಸ್ಯಾತ್= ಜಯಶೀಲನಾಗುತ್ತಾನೆ, ತ್ವಂ ತು= ನೀನಾದರೂ, ಪರಾಜಯೀ ಭೂಯಾಃ= ಪರಾಜಯವನ್ನು ಅನುಭವಿಸುತ್ತೀಯೆ.

**ಅನುವಾದ–** ಆನಂದಶ್ರುತಿ ಇರುವುದರಿಂದ ಬ್ರಹ್ಮನು ಆನಂದರೂಪ ಎಂದು ಅಂಗೀಕರಿಸುವುದಾದರೆ ಪ್ರಿಯಶಿರಸ್ತ್ವಾದಿ ಶ್ರುತಿ ಇರುವುದರಿಂದ ಬ್ರಹ್ಮನಿಗೆ ಆನಂದಮಯಾದಿ ಶಿರ ಆದಿ ವಿಗ್ರಹವನ್ನೂ ಅಂಗೀಕರಿಸು. ಇಲ್ಲದಿದ್ದರೆ ಆನಂದ-ರೂಪತ್ವವೂ ಸಿದ್ಧವಾಗುವುದಿಲ್ಲ, ಶಿರಃಪಾಣ್ಯಾದಿ ವಿಗ್ರಹವೂ ಸಿದ್ಧವಾಗುವುದಿಲ್ಲ. ತಾರ್ಕಿಕ ಬಾಲಕನೇ ಜಯಿಸುತ್ತಾನೆ, ನೀನು ಪರಾಭವವನ್ನು ಹೊಂದುತ್ತೀಯೆ.

**ಭಾವವಿಲಾಸಿನೀ–** ಆನಂದಮೂರ್ತಿತಾ ಬ್ರಹ್ಮಣಃ ಆನಂದಮಯಶಿರಃಪಾಣ್ಯಾದ್ಯಾಕಾರ-ವಿಗ್ರಹವತ್ತ್ವಮ್ । ನೋ ಚೇತ್ ಅಸ್ಯ ಪ್ರಿಯಮೇವ ಶಿರ ಇತ್ಯಾದಿಶ್ರುತೇರೌಪಚಾರಿಕತ್ವಮಂಗೀ-ಕೃತ್ಯ ವಿಗ್ರಹೋ ನಾಂಗೀಕ್ರಿಯತೇ ಚೇತ್ । ತರ್ಹ್ಯಾನಂದಶ್ರುತೇರಪಿ ಉಪಚಾರಣ- ದುಃಖ-ನಿವೃತ್ತಿಪರತ್ವಸ್ಯ ವಕ್ತುಂ ಶಕ್ಯತ್ವಾತ್ ಉಭಯಂ ಮದಾಭಿಲಷಿತಾನಂದವಿಗ್ರಹವತ್ತ್ವಂ ತ್ವದ- ಭಿಲಷಿ-ತಾನಂದಸ್ವರೂಪತ್ವಂ ಚೇತ್ಯುಭಯಂ ನ ಪ್ರಸಿಧ್ಯತೀತಿ ಸಂಬಂಧಃ । ತಾರ್ಕಿಕಬಾಲಃ ಅಷ್ಟ- ಗುಣ-ತಯಾಂಗೀಕೃತ ಈಶ್ವರೇ ಸ್ವಾನಭಿಮತ ಸುಖಸ್ಯಾಸಿದ್ಧೇರ್ಜಯವಾನ್ ಸ್ಯಾತ್ ॥೭೯೨-೭೯೩॥

**ವಿವರಣೆ–** ಎರಡು ವಿಷಯಗಳಲ್ಲಿಯೂ ಶ್ರುತಿ ಇರುವುದರಿಂದ ಎರಡು ವಿಷಯಗಳನ್ನೂ ಅಂಗೀಕರಿಸಬೇಕು. ಶ್ರುತಿ ಇದ್ದರೂ ವಿಗ್ರಹವನ್ನು ಅಂಗೀಕರಿಸುವುದಿಲ್ಲ ಎಂದು ಹೇಳುವುದಾದರೆ ಆಗ ಬ್ರಹ್ಮನಿಗೆ ಆನಂದರೂಪತ್ವವನ್ನೂ ಅಂಗೀಕರಿಸುವುದು ಬೇಡ. ಈಶ್ವರನಿಗೆ ಆನಂದವನ್ನು ಒಪ್ಪದೆ, ದುಃಖಾಭಾವವನ್ನು ಒಪ್ಪುವ ತಾರ್ಕಿಕ ಬಾಲಕನೇ ಜಯಶೀಲನಾಗುತ್ತಾನೆ ಎಂದು ಅಭಿಪ್ರಾಯ.

**ಯದ್ಯೈಕ್ಯಂ ನಿರ್ಗುಣತ್ವಂ ಚ ವಾಕ್ಯಸ್ಯ ಬಲತಸ್ತವ ।**
**ತರ್ಹಿ ಭೇದಶ್ಚ ಸುಗುಣಾಸ್ತತ್ತದ್ವಾಕ್ಯಬಲಾನ್ಮಮ ॥ ೭೯೪ ॥**

**ಅರ್ಥ–** ಯದಿ= ಒಂದು ಪಕ್ಷ, ವಾಕ್ಯಸ್ಯ ಬಲತಃ= ಶ್ರುತಿಯ ಬಲದಿಂದ, ತವ= ನಿನಗೆ, ಐಕ್ಯಂ= ಐಕ್ಯವು, ನಿರ್ಗುಣತ್ವಂ ಚ= ಮತ್ತು ನಿರ್ಗುಣತ್ವವು ಸಿದ್ಧವಾಗುವುದಾದರೆ, ತರ್ಹಿ=

ಆಗ, ತತ್ತದ್ ವಾಕ್ಯಬಲಾತ್= ಆಯಾ ವಾಕ್ಯಬಲದಿಂದಲೇ, ಮಮ= ನನಗೆ, ಭೇದಶ್ಚ= ಭೇದವು, ಸುಗುಣಾಃ= ಕಲ್ಯಾಣಗುಣಗಳು ಸಿದ್ಧವಾಗುತ್ತವೆ.

**ಅನುವಾದ–** ವಾಕ್ಯದ ಬಲದಿಂದ ನಿನಗೆ ಐಕ್ಯವು ಮತ್ತು ನಿರ್ಗುಣತ್ವವು ಸಿದ್ಧವಾಗುವುದಾದರೆ ಆಯಾ ವಾಕ್ಯಗಳ ಬಲದಿಂದ ನನಗೂ ಭೇದವು ಮತ್ತು ಕಲ್ಯಾಣಗುಣಗಳು ಸಿದ್ಧವಾಗುತ್ತವೆ.

**ಭಾವವಿಲಾಸಿನೀ–** ತತ್ತದ್ವಾಕ್ಯಬಲಾತ್ ಭೇದಗುಣಪ್ರತಿಪಾದಕವಾಕ್ಯಬಲಾತ್ ॥ ೭೯೪ ॥

**ಯದಿ ಸಿದ್ಧಾನುವಾದೇನ ಮದ್ವಾಕ್ಯಂ ದುರ್ಬಲಂ ತವ ।**
**ಸಿದ್ಧತ್ವದ್ಬ್ರಹ್ಮವಾಕ್ ತರ್ಹಿ ಗರ್ಹ್ಯಾ ಮಹ್ಯಂ ನ ರೋಚತೇ ॥ ೭೯೫ ॥**

**ಅರ್ಥ–** ಯದಿ= ಒಂದು ಪಕ್ಷ, ಸಿದ್ಧಾನುವಾದೇನ= ಸಿದ್ಧವಾದುದನ್ನು ಅನುವಾದ ಮಾಡುವುದರಿಂದ, ಮದ್ವಾಕ್ಯಂ= ಭೇದ ಮತ್ತು ಗುಣಗಳನ್ನು ಹೇಳುವ ನನ್ನ ವಾಕ್ಯವು, ತವ= ನಿನಗೆ, ದುರ್ಬಲಂ= ದುರ್ಬಲವಾಗುವುದಾದರೆ, ತರ್ಹಿ= ಆಗ, ಸಿದ್ಧತ್ವದ್ಬ್ರಹ್ಮವಾಕ್= ಸ್ವಪ್ರಕಾಶತಯಾ ಸಿದ್ಧನಾದ ಬ್ರಹ್ಮನನ್ನು ಹೇಳುವ ಅಸ್ತಿಬ್ರಹ್ಮ ಎಂಬ ನಿನ್ನ ವಾಕ್ಯವು, ಗರ್ಹ್ಯಾ= ಅನುವಾದವಾದ್ದರಿಂದ ಗರ್ಹಿತವಾಗುತ್ತದೆ ಆ ವಾಕ್ಯವು, ಮಹ್ಯಂ= ನನಗೆ, ನ ರೋಚತೇ= ಇಷ್ಟವಾಗುವುದಿಲ್ಲ.

**ಅನುವಾದ–** ಭೇದ ಮತ್ತು ಗುಣಗಳನ್ನು ಹೇಳುವ ನನ್ನ ವಾಕ್ಯವು ಮೊದಲೇ ಸಿದ್ಧವಾದ ವಸ್ತುವಿನ ಅನುವಾದ ರೂಪವಾದ್ದರಿಂದ ನಿನಗೆ ದುರ್ಬಲವಾಗುವುದಾದರೆ ಅಸ್ತಿಬ್ರಹ್ಮ ಎಂದು ಬ್ರಹ್ಮಸತ್ತ್ವವನ್ನು ಹೇಳುವ ನಿನ್ನ ವಾಕ್ಯವೂ ಸಹ ಸ್ವಪ್ರಕಾಶವಾದ್ದರಿಂದಲೇ ಸಿದ್ಧನಾದ ಬ್ರಹ್ಮನನ್ನು ಅನುವಾದ ಮಾಡುವುದರಿಂದ ನನಗೆ ಗರ್ಹಿತವಾಗುತ್ತದೆ. ನನಗೆ ಆ ವಾಕ್ಯವು ಇಷ್ಟವಾಗುವುದಿಲ್ಲ.

**ಭಾವವಿಲಾಸಿನೀ–** ಸಿದ್ಧತ್ವದ್ಬ್ರಹ್ಮವಾಕ್ ಸ್ವಪ್ರಕಾಶತಯಾ ಸಿದ್ಧಸ್ಯ ತ್ವದ್ಬ್ರಹ್ಮಣಃ ಪ್ರತಿಪಾದಿಕಾ ಅಸ್ತಿ ಬ್ರಹ್ಮೇತಿ ಚೇದ್ವೇದೇತ್ಯಾದಿವಾಕ್ ॥ ೭೯೫ ॥

**ಅಪೂರ್ವಶಶಶೃಂಗೋಕ್ತ್ಯಾ ಬಲವತ್ಯಾ ತದಾಪತೇತ್ ।**
**ಪರೇಣ ಪೂರ್ವಬಾಧಶ್ಚೇದ್ಬ್ರಹ್ಮ ವೃತ್ತ್ಯಾ ನಿವರ್ತ್ಯತಾಮ್ ॥ ೭೯೬ ॥**

**ಅರ್ಥ–** ಅಪೂರ್ವಶಶಶೃಂಗೋಕ್ತ್ಯಾ= ಅಪೂರ್ವವಾದ ಎಂದರೆ ಅಸಿದ್ಧವಾದ, ಶಶಶೃಂಗವನ್ನು ಹೇಳುವುದರಿಂದ, ಬಲವತ್ಯಾ= ಪ್ರಬಲವಾದ ಶಶಶೃಂಗಮಸ್ತಿ ಎಂಬ ವಾಕ್ಯದಿಂದ, ತತ್= ಆ ಶಶಶೃಂಗವು, ಆಪತೇತ್= ಸಿದ್ಧವಾದೀತು, ಪರೇಣ= ಅನಂತರ ಭಾವಿಯಿಂದ, ಪೂರ್ವಬಾಧಶ್ಚೇತ್= ಪೂರ್ವಭಾವಿಯು ಬಾಧಿತವಾದರೆ, ವೃತ್ತ್ಯಾ= ಚರಮ ಸಾಕ್ಷಾತ್ಕಾರದಿಂದ, ಬ್ರಹ್ಮ= ಪ್ರಾಕ್ ಸಿದ್ಧನಾದ ಬ್ರಹ್ಮನು, ನಿವರ್ತ್ಯತಾಂ= ಬಾಧಿತನಾಗಲಿ.

**ಅನುವಾದ–** ಅಪೂರ್ವವಾದ ಶಶಶೃಂಗವನ್ನು ಹೇಳುವ ವಾಕ್ಯವು ಅನುವಾದವಲ್ಲವಾದ್ದರಿಂದ ಪ್ರಬಲವಾದ ಕಾರಣ ಆ ವಾಕ್ಯದಿಂದ ಶಶಶೃಂಗದ ಸಿದ್ಧಿಯಾಗಲಿ. ಅನಂತರ ಭಾವಿಯಿಂದ ಪೂರ್ವಭಾವಿಗೆ ಬಾಧವನ್ನು ಹೇಳುವುದಾದರೆ ಸರ್ವಾನಂತರಭಾವಿಯಾದ ಚರಮಸಾಕ್ಷಾತ್ಕಾರದಿಂದ ಪೂರ್ವನಾದ ಬ್ರಹ್ಮನಿಗೆ ಬಾಧವು ಉಂಟಾಗಲಿ.

**ಭಾವವಿಲಾಸಿನೀ–** ಬಲವತ್ತ್ವಾ ಸಿದ್ಧವಿಷಯತ್ವಾಭಾವೇನ ಬಲವತ್ತ್ವಾ । ತತ್ ಶಶಶೃಂಗಮ್ । ವೃತ್ತ್ಯಾ ಶ್ರವಣಜನಿತಾಂತಃಕರಣಸಾಕ್ಷಾದ್ವೃತ್ತ್ಯಾ ॥ ೭೯೬ ॥

**ಪೂರ್ವೇಣ ಪರಬಾಧಶ್ಚೇದ್ ಬಂಧಾನ್ಮುಕ್ತಿರ್ನಿವರ್ತ್ಯತಾಮ್ ।**
**ಸ್ತುತ್ಯಂ ಮಿಥ್ಯಾ ಯದಿ ಭವೇದ್ ದೃಶ್ಯಂ ಮಿಥ್ಯಾ ನ ಕಿಂ ತವ ॥ ೭೯೭ ॥**

**ಅರ್ಥ–** ಪೂರ್ವೇಣ= ಮೊದಲು ಇರುವುದರಿಂದ, ಪರಬಾಧಶ್ಚೇತ್= ಅನಂತರ ಭಾವಿಯಾದುದಕ್ಕೆ ಬಾಧವು ಬರುವುದಾದರೆ, ಬಂಧಾತ್= ಬಂಧದಿಂದ, ಮುಕ್ತಿಃ= ಮೋಕ್ಷವು, ನಿವರ್ತ್ಯತಾಂ= ನಿವೃತ್ತಿಯಾಗಲಿ. ಯದಿ= ಒಂದು ಪಕ್ಷ, ಸ್ತುತ್ಯಂ= ಸ್ತುತಿಗೆ ವಿಷಯವಾದುದು, ಮಿಥ್ಯಾ ಭವೇತ್= ಮಿಥ್ಯೆಯಾಗುವುದಾದರೆ, ದೃಶ್ಯಂ= ಚರಮ ಸಾಕ್ಷಾತ್ಕಾರಕ್ಕೆ ವಿಷಯನಾದ ಬ್ರಹ್ಮನು, ತವ= ನಿನಗೆ, ಮಿಥ್ಯಾ ಕಿಂ ನ= ಏಕೆ ಮಿಥ್ಯೆಯಾಗುವುದಿಲ್ಲ?

**ಅನುವಾದ–** ಪೂರ್ವಭಾವಿಯಿಂದ ಅನಂತರಭಾವಿಯಾದುದೇ ಬಾಧಿತವಾಗುವುದಾದರೆ ಪೂರ್ವಭಾವಿಯಾದ ಬಂಧದಿಂದ ಅನಂತರ ಭಾವಿಯಾದ ಮೋಕ್ಷವು ನಿವೃತ್ತವಾಗಲಿ. ಸ್ತುತಿಗೆ ವಿಷಯವಾದುದು ಮಿಥ್ಯಾ ಎಂದಾದರೆ ಚರಮ ಸಾಕ್ಷಾತ್ಕಾರರೂಪಕ್ಕೆ ಜ್ಞಾನಕ್ಕೆ ವಿಷಯನಾದ ಬ್ರಹ್ಮನೂ ವಿಷಯನಾಗಲಿ.

**ಭಾವವಿಲಾಸಿನೀ–**ತರ್ವೇತ್ಯನೇನ ಯದ್ದೃಶ್ಯಂ ತನ್ಮಿಥ್ಯೇತಿ ಪರಾಭಿಮತವ್ಯಾಪ್ತಿಂ ಸೂಚಯತಿ ॥ ೭೯೭ ॥

**ವಿವರಣೆ–** ಅದ್ವೈತಿಗಳು ಬಾಧ ಎಂದರೆ ನಿವೃತ್ತಿ ಎಂದು ಹೇಳುತ್ತಾರೆ. ಆದ್ದರಿಂದ ಬಂಧದಿಂದ ಮೋಕ್ಷವು ಬಾಧಿತವಾಗಲಿ ಎಂದರೆ ಮೋಕ್ಷವು ನಿವೃತ್ತಿಯಾಗಲಿ ಎಂದು ಅರ್ಥ. ಮೋಕ್ಷವು ನಿವೃತ್ತವಾದರೆ ಪುನಃ ಸಂಸಾರಬಂಧವೇ ಉಂಟಾಗುತ್ತದೆ ಎಂಬ ಅನಿಷ್ಟವಿದೆ. ಅದರಂತೆ ಉಪಾಸನೆಗೆ ವಿಷಯವಾದುದೆಲ್ಲವೂ ಮಿಥ್ಯೆ ಎಂದು ಅದ್ವೈತಿಗಳು ಹೇಳುತ್ತಾರೆ. ಸ್ತೋತ್ರರೂಪವಾದ ಉಪಾಸನೆಯನ್ನು ವೇದವೇ ಹೇಳುತ್ತದೆ. ಸ್ತೋತ್ರ ರೂಪವಾದ ಉಪಾಸನೆಗೆ ವಿಷಯವಾದ ವಸ್ತುವು ಮಿಥ್ಯೆಯಾಗುವುದಾದರೆ ಜ್ಞಾನಕ್ಕೆ ವಿಷಯನಾದ ಬ್ರಹ್ಮನು ಏಕೆ ಮಿಥ್ಯೆಯಾಗುವುದಿಲ್ಲ? ಸ್ತೋತ್ರವು ವೇದದಲ್ಲಿಯೇ

ಲಭ್ಯವಾಗುವುದು, ಬ್ರಹ್ಮಜ್ಞಾನವೂ ಸಹ ವೇದದಿಂದಲೇ ಲಭ್ಯವಾಗುವುದಷ್ಟೆ. ಇನ್ನು ಬ್ರಹ್ಮನು ಜ್ಞಾನಕ್ಕೆ ವಿಷಯನಲ್ಲವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಚರಮ ಸಾಕ್ಷಾತ್ಕಾರಕ್ಕೆ ಕೇವಲ ಚೈತನ್ಯವಿಷಯಕತ್ವವನ್ನು ನೀನು ಒಪ್ಪುತ್ತೀಯೇ. ಯದ್ ದೃಶ್ಯಂ ತನ್‌ಮಿಥ್ಯಾ ಎಂಬ ವ್ಯಾಪ್ತಿಯನ್ನು ನೀನು ಒಪ್ಪುವುದರಿಂದ ಬ್ರಹ್ಮನಿಗೂ ಮಿಥ್ಯಾತ್ವವನ್ನು ಅಂಗೀಕರಿಸು ಎಂದು ಅಭಿಪ್ರಾಯ.

**ಶ್ರುತ್ಯುತ್ಪನ್ನದೃಶೇಃ ಸಚ್ಚೇಚ್ಛ್ರುತ್ಯುತ್ಪನ್ನಸ್ತುತೇಶ್ಚ ಸನ್ ।**
**ಏಕಪಂಕ್ತಿಸ್ಥಗೇಹಾನಾಂ ದಾಹಾದಾಹೌ ಕಥಂ ವದ ।**
**ಪ್ರತಿಬಂದೀ ತತೋ ಬಂದೀಕರೋತಿ ಭವತಃ ಶ್ರುತಿಮ್ ॥ ೭೯೮ ॥**

**ಅರ್ಥ–** ಶ್ರುತ್ಯುತ್ಪನ್ನದೃಶೇಃ= ಶ್ರುತಿಯಿಂದ ಉತ್ಪನ್ನವಾದ ಜ್ಞಾನಕ್ಕೆ ವಿಷಯವಾದ್ದರಿಂದ, ಸಚ್ಚೇತ್= ಬ್ರಹ್ಮನು ಸತ್ಯವಾಗುವುದಾದರೆ, ಶ್ರುತ್ಯುತ್ಪನ್ನಸ್ತುತೇಃ= ಶ್ರುತಿಲಭ್ಯವಾದ ಸ್ತುತಿಗೆ ವಿಷಯವಾಗುವುದರಿಂದ ಭೇದ ಮತ್ತು ಗುಣಗಳು, ಸನ್= ಸತ್ಯವಾಗುತ್ತವೆ, ಏಕಪಂಕ್ತಿಸ್ಥಗೇಹಾನಾಂ= ಒಂದೇ ಸಾಲಿನಲ್ಲಿರುವ ಮನೆಗಳಲ್ಲಿ, ದಾಹಾದಾಹೌ= ಒಂದಕ್ಕೆ ದಾಹ ಮತ್ತು ಇನ್ನೊಂದಕ್ಕೆ ದಾಹವಿಲ್ಲವೆಂಬುದು, ಕಥಂ= ಹೇಗೆ ಎಂದು, ವದ= ಹೇಳು, ತತಃ= ಆ ಕಾರಣದಿಂದ, ಪ್ರತಿಬಂದೀ= ನಾವು ಕೊಡುತ್ತಿರುವ ಪ್ರತಿಬಂದಿಯು, ಭವತಃ ಶ್ರುತಿಂ= ನಿನ್ನ ಶ್ರುತಿಯನ್ನು, ಬಂದೀ ಕರೋತಿ= ಸೆರೆಮನೆಯಲ್ಲಿಡುತ್ತದೆ.

**ಅನುವಾದ–** ಶ್ರುತಿಜನ್ಯವಾದ ಜ್ಞಾನಕ್ಕೆ ವಿಷಯನಾದ್ದರಿಂದ ಬ್ರಹ್ಮನು ಸತ್ಯನಾಗುವುದಾದರೆ ಶ್ರುತಿಪ್ರಾಪ್ತವಾದ ಸ್ತೋತ್ರಕ್ಕೆ ವಿಷಯವಾಗುವುದರಿಂದ ಭೇದ ಮತ್ತು ಗುಣಗಳು ಸತ್ಯವಾಗುತ್ತವೆ. ಒಂದೇ ಸಾಲಿನಲ್ಲಿರುವ ಮನೆಗಳಲ್ಲಿ ಒಂದಕ್ಕೆ ದಾಹ, ಒಂದಕ್ಕೆ ದಾಹವಿಲ್ಲ ಎನ್ನುವುದು ಹೇಗೆ ಎಂದು ಹೇಳು. ಆದ್ದರಿಂದ ನಾವು ಕೊಡುತ್ತಿರುವ ಪ್ರತಿಬಂದಿಯು ನಿನ್ನ ಶ್ರುತಿಯನ್ನು ಕಾರಾಗೃಹದಲ್ಲಿ ಬಂದಿಯನ್ನಾಗಿ ಮಾಡುತ್ತದೆ.

**ಭಾವವಿಲಾಸಿನೀ–** ಶ್ರುತ್ಯುತ್ಪನ್ನದೃಶೇಃ ಶ್ರುತ್ಯುತ್ಪನ್ನದರ್ಶನವಿಷಯತ್ವಾದಿತಿ ಯಾವತ್ । ಶ್ರುತ್ಯುತ್ಪನ್ನಸ್ತುತೇಃ ಶ್ರುತ್ಯುತ್ಪನ್ನಸ್ತುತಿವಿಷಯತ್ವಾದಿತಿ ಯಾವತ್ । ಸನ್ ಭೇದಭಗವದ್ಗುಣಾದಿರಪಿ ಸನ್ನಿತ್ಯರ್ಥಃ । ವೇದಮೂಲತ್ವಸ್ಯೋಭಯತ್ರ ಸಾಮ್ಯಾದೇಕಂ ಸತ್ ಅಪರಂ ಮಿಥ್ಯೇತಿ ವಕ್ತುಂ ನ ಶಕ್ಯತ ಇತಿ ಭಾವಃ । ತತ್ರ ದೃಷ್ಟಾಂತಮಾಹ – ಏಕೇತಿ ॥ ೭೯೮ ॥

**ಕಿಂ ಚಾಖಂಡಾರ್ಥವಾದಾಖ್ಯಮಯಶ್ಚಣಕಮಶ್ನತಃ ।**
**ದಂತಾಃ ಪೇತುರ್ಭವದ್ವಾಕ್ಯಭುಜಂಗಸ್ಯ ಫಣೇನ ಕಿಮ್ ॥ ೭೯೯ ॥**

**ಅರ್ಥ–** ಕಿಂಚ= ಮತ್ತು, ಅಖಂಡಾರ್ಥವಾದಾಖ್ಯಂ= ಅಖಂಡಾರ್ಥವಾದವೆಂಬ, ಅಯಶ್ಚಣಕಂ= ಕಬ್ಬಿಣದ ಕಡಲೆಯನ್ನು, ಅಶ್ನತಃ= ತಿನ್ನತಕ್ಕಂತಹ, ಭವದ್ವಾಕ್ಯಭುಜಂಗಸ್ಯ=

ನಿನ್ನ ವಾಕ್ಯಗಳೆಂಬ ಸರ್ಪಕ್ಕೆ, ದಂತಾಃ= ಹಲ್ಲುಗಳು, ಪೇತುಃ= ಬಿದ್ದುಹೋದವು, ಫಣೇನ= ಕೇವಲ ಹೆಡೆಯಿಂದ, ಕಿಂ= ಯಾವ ಹಾನಿಯಾಗುತ್ತದೆ?

**ಅನುವಾದ–** ಮತ್ತು ಅಖಂಡಾರ್ಥವಾದವೆಂಬ ಕಬ್ಬಿಣದ ಕಡಲೆಯನ್ನು ತಿನ್ನುವ ನಿನ್ನ ವಾಕ್ಯಗಳೆಂಬ ಸರ್ಪಕ್ಕೆ ದಂತಗಳು ಬಿದ್ದುಹೋದವು. ಇನ್ನು ಹೆಡೆಯಿಂದ ಏನಾಗುತ್ತದೆ?

**ಭಾವವಿಲಾಸಿನೀ–** ಐಕ್ಯಗುಣಮಿಥ್ಯಾತ್ವವಾಕ್ಯಾನಾಂ ಪ್ರಾಗುಕ್ತದೂಷಣಂ ಚ ಸ್ಮಾರಯತಿ- **ಕಿಂಚೇತಿ ।** ದಂತಾಃ ಪ್ರತಿಪಾದ್ಯತಯಾ ಶ್ರುತಿಮುಖಸ್ಥಿತತ್ವೇನ ದಂತಸಮಾನಾಃ ಬ್ರಹ್ಮಧರ್ಮತಯಾ ಬ್ರಹ್ಮಖಂಡಭೂತೈಕ್ಯಾದ್ಯರ್ಥಾಃ ॥ ೭೯೯ ॥

**ವಿವರಣೆ–** ಅದ್ವೈತವಾಕ್ಯಗಳು ಭೇದ ಮತ್ತು ಗುಣಗಳಿಗೆ ವಿರೋಧಿಯಾದ ಏನನ್ನಾದರೂ ಹೇಳಿ ಭೇದ ಮತ್ತು ಗುಣಗಳನ್ನು ಬಾಧಿಸಬೇಕು. ಆದರೆ ಅಖಂಡಾರ್ಥ ವಾದವನ್ನು ಒಪ್ಪುವುದರಿಂದ ಅದ್ವೈತವಾಕ್ಯಗಳು ಬ್ರಹ್ಮಸ್ವರೂಪವನ್ನು ಬಿಟ್ಟು ಬೇರೆ ಏನನ್ನೂ ಹೇಳುವುದಿಲ್ಲವೆಂದು ನೀನೇ ಒಪ್ಪಿದ್ದೀಯೆ. ಆದ್ದರಿಂದ ಬಾಧಕವಾಗಬೇಕಾಗಿದ್ದ ದಂತಸ್ಥಾನದಲ್ಲಿರುವ ಭೇದವಿರೋಧಿಯಾದ ಯಾವ ವಸ್ತುವೂ ಪ್ರತಿಪಾದಿತವಲ್ಲ-ವಾದ್ದರಿಂದ ನಿನ್ನ ಅದ್ವೈತ ವಾಕ್ಯವೆಂಬ ಸರ್ಪಕ್ಕೆ ದಂತಗಳೇ ಇಲ್ಲ. ಇನ್ನು ಕೇವಲ ಹೆಡೆಯಿಂದ ಯಾವ ಹಾನಿಯಾದೀತು ಎಂದು ಅಭಿಪ್ರಾಯ.

**ಅಪೌರುಷೇಯನಿರ್ದೋಷವಾಕ್ಯೇಷ್ವೇಷು ಯದೀಷ್ಯತೇ ।**
**ಸರ್ವಥಾಽಮಾನತಾ ತರ್ಹಿ ಗತಾ ಪ್ರಚ್ಛನ್ನಬೌದ್ಧತಾ ॥ ೮೦೦ ॥**

**ಅರ್ಥ–** ಯದಿ= ಒಂದು ಪಕ್ಷ, ಏಷು= ಈ, ಅಪೌರುಷೇಯ ನಿರ್ದೋಷವಾಕ್ಯೇಷು= ಅಪೌರುಷೇಯವಾದ್ದರಿಂದ ನಿರ್ದೋಷವಾದ ವಾಕ್ಯಗಳಲ್ಲಿ, ಸರ್ವಥಾ= ಸರ್ವಥಾ, ಅಮಾನತಾ= ಅಪ್ರಾಮಾಣ್ಯವು, ಇಷ್ಯತೇ= ಅಂಗೀಕರಿಸಲ್ಪಡುವಾದರೆ, ತರ್ಹಿ= ಆಗ, ಪ್ರಚ್ಛನ್ನಬೌದ್ಧತಾ= ಪ್ರಚ್ಛನ್ನಬೌದ್ಧತ್ವವು, ಗತಾ= ಹೊರಟು ಹೋಗುತ್ತದೆ.

**ಅನುವಾದ–** ಅಪೌರುಷೇಯವಾದ ಮತ್ತು ನಿರ್ದುಷ್ಟವಾದ ಈ ಭೇದವಾಕ್ಯಗಳಿಗೆ ಸರ್ವಥಾ ಅಪ್ರಾಮಾಣ್ಯವನ್ನು ಅಂಗೀಕರಿಸುವುದಾದರೆ ನಿನ್ನ ಪ್ರಚ್ಛನ್ನಬೌದ್ಧತೆಯು ಹೊರಟು ಹೋಗುತ್ತದೆ.

**ಭಾವವಿಲಾಸಿನೀ–** ಭೇದವಾಕ್ಯಾದೇರತತ್ತ್ವಾವೇದಕತ್ವಂ ವದತಃ ಪರಸ್ಯ ದೂಷಣಮಾಹ – **ಅಪೌರುಷೇಯೇತಿ ॥** ಸರ್ವಥಾ ಅಮಾನತಾ ಅರ್ಥಾಂತರಕಥನಂ ವಿನಾಅತತ್ತ್ವಾವೇದಕತ್ವರೂಪಂ ಕೇವಲಾಪ್ರಾಮಾಣ್ಯಮ್ । ಪ್ರಚ್ಛನ್ನಬೌದ್ಧತಾ ಗತಾ ಸ್ಪಷ್ಟಂ ವೇದಾಪ್ರಾಮಾಣ್ಯವಾದಿತ್ವೇನ ಪ್ರಚ್ಛನ್ನ ಬೌದ್ಧತಾಗತಾ । ಕಿಂತು ಪ್ರಸಿದ್ಧಬೌದ್ಧತ್ವೈವಾಗತೇತಿಯೋಜನಾ ॥ ೮೦೦ ॥

**ವಿವರಣೆ–** ಅದ್ವೈತಮತವನ್ನು ನಮ್ಮ ಗ್ರಂಥಗಳಲ್ಲಿ ಪ್ರಚ್ಛನ್ನಬೌದ್ಧಮತವೆಂದು ಹೇಳುವುದು ವಾಡಿಕೆಯಾಗಿದೆ. ಈಗ ಭೇದವಾಕ್ಯಗಳು ಅಪೌರುಷೇಯವಾಗಿ ನಿರ್ದುಷ್ಟವಾದರೂ ಅಂತಹ ಭೇದವಾಕ್ಯಗಳಿಗೆ ಸರ್ವಥಾ ಅಪ್ರಾಮಾಣ್ಯವನ್ನು ಹೇಳಿದರೆ ಇದು ಬೌದ್ಧರ ಕೆಲಸವಾದ್ದರಿಂದ ನಿನಗೆ ಪ್ರತ್ಯಕ್ಷಬೌದ್ಧತ್ವವೇ ಉಂಟಾಗುತ್ತದೆ. ಆದ್ದರಿಂದ ಪ್ರಚ್ಛನ್ನಬೌದ್ಧತ್ವವು ಹೊರಟು ಹೋಗುತ್ತದೆ ಎಂದು ಅಭಿಪ್ರಾಯ.

**ಅಮಾನತ್ವಸ್ವತಸ್ತ್ವಾಖ್ಯತತ್ತ್ವಸ್ಯ ವ್ಯಕ್ತವಕ್ತರಿ ।**
**ಅಮಾನತಾಕಾಲಕೂಟಂ ಯದಿ ವಕ್ತ್ರೇ ವಸೇತ್ ತವ ।**
**ಸ್ವಮಾನೋಚ್ಚಾರಣೇ ಶಕ್ತಿರ್ಗಮಿಷ್ಯತಿ ಮರಿಷ್ಯಸಿ ॥ ೮೦೧ ॥**

**ಅರ್ಥ–** ಅಮಾನತ್ವಸ್ವತಸ್ತ್ವಾಖ್ಯತತ್ತ್ವಸ್ಯ= ಅಪ್ರಾಮಾಣ್ಯ ಸ್ವತಸ್ತ್ವರೂಪವಾದ ತತ್ತ್ವವನ್ನು, ವ್ಯಕ್ತವಕ್ತರಿ= ಸ್ಪಷ್ಟವಾಗಿ ಹೇಳುವ, ತವ ವಕ್ತ್ರೇ= ನಿನ್ನ ಬಾಯಿಯಲ್ಲಿ, ಅಮಾನತಾಕಾಲಕೂಟಂ= ಅಪ್ರಾಮಾಣ್ಯರೂಪವಾದ ಕಾಲಕೂಟ ವಿಷವು, ಯದಿ ವಸೇತ್= ಇರುವುದಾದರೆ, ಸ್ವಮಾನೋಚ್ಚಾರಣೇ= ನಿನಗೆ ಅನುಕೂಲವಾದ ಪ್ರಮಾಣವನ್ನು ಹೇಳುವುದಕ್ಕೂ, ಶಕ್ತಿರ್ಗಮಿಷ್ಯತಿ= ಶಕ್ತಿಯು ಹೊರಟು ಹೋಗುತ್ತದೆ, ಮರಿಷ್ಯಸಿ= ನೀನು ಸಾಯುತ್ತೀಯೆ.

**ಅನುವಾದ– ಅಪ್ರಾಮಾಣ್ಯಸ್ವತಸ್ತ್ವರೂಪವಾದ ತತ್ತ್ವವನ್ನು ಸ್ಪಷ್ಟವಾಗಿ ಹೇಳುವ ನಿನ್ನ ಬಾಯಿಯಲ್ಲಿ ಅಪ್ರಾಮಾಣ್ಯರೂಪವಾದ ಕಾಲಕೂಟ ವಿಷವು ಇರುವುದಾದರೆ ನಿನಗೆ ಅನುಕೂಲವಾದ ಪ್ರಮಾಣವನ್ನು ಹೇಳುವುದಕ್ಕೂ ನಿನಗೆ ಶಕ್ತಿ ಇಲ್ಲದೆ ನೀನು ಸಾಯುತ್ತೀಯೆ.**

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪರಸ್ಯ ಪ್ರಚ್ಛನ್ನಬೌದ್ಧತ್ವಮುಪಪಾದಯತಿ ॥ **ಅಮಾನತ್ವೇತಿ** ॥ ಸಾಹಿತ್ಯಮುದ್ರಯಾ ದೂಷಣಾಂತರಂ ಚಾಹ - **ಅಮಾನತೇತಿ** ॥ ಮರಿಷ್ಯಸಿ ಸ್ವೇಷ್ಟಸಾಧನಶಕ್ತ್ಯಭಾವೇ ಮೃತಪ್ರಾಯೋ ಭವಿಷ್ಯಸೀತ್ಯರ್ಥಃ ॥ ೮೦೧ ॥

**ವಿವರಣೆ–** ಅಪ್ರಾಮಾಣ್ಯ ಸ್ವತಸ್ತ್ವವನ್ನು ಅಂಗೀಕಾರ ಮಾಡುವುದರಿಂದಲೂ ಪ್ರಚ್ಛನ್ನಬೌದ್ಧತ್ವವು ಉಂಟಾಗುತ್ತದೆ ಎಂದು ಇಲ್ಲಿ ಪ್ರಕಾರಾಂತರದಿಂದ ಪ್ರತಿಪಾದನೆ ಮಾಡುತ್ತಾರೆ.

ತಸ್ಮಾದಬಾಧಿತಾರ್ಥಾನಿ ವಾಕ್ಯಾನಿ ಸ್ಯುರ್ಯಥಾಶ್ರುತಂ ।
ಬಾಧಿತಾರ್ಥಾನಿ ವಾಕ್ಯಾನಿ ಯೋಗ್ಯಾರ್ಥೇಷು ನಯೇದ್ ಬುಧಃ॥ ೮೦೨ ॥

**ಅರ್ಥ–** ತಸ್ಮಾತ್= ಆದ್ದರಿಂದ, ಅಬಾಧಿತಾರ್ಥಾನಿ ವಾಕ್ಯಾನಿ= ಅಬಾಧಿತಾರ್ಥವಾದ ವಾಕ್ಯಗಳು, ಯಥಾಶ್ರುತಂ= ಶ್ರುತಿಯಲ್ಲಿ ಹೇಳಿದಂತೆಯೇ ತಾತ್ಪರ್ಯವುಳ್ಳವುಗಳಾಗಿ,

ಸ್ಯುಃ= ಇರುತ್ತವೆ, ಬಾಧಿತಾರ್ಥಾನಿ ವಾಕ್ಯಾನಿ= ಬಾಧಿತಾರ್ಥವಾದ ವಾಕ್ಯಗಳನ್ನು, ಬುಧಃ= ವಿವೇಕಿಯಾದವನು, ಯೋಗ್ಯಾರ್ಥೇಷು= ಯೋಗ್ಯವಾದ ಅರ್ಥಗಳಲ್ಲಿ, ನ ಯೇತ್= ತೆಗೆದುಕೊಂಡು ಹೋಗಬೇಕು.

**ಅನುವಾದ–** ಆದ್ದರಿಂದ ಅಬಾಧಿತಾರ್ಥವಾದ ವಾಕ್ಯಗಳು ಯಥಾಶ್ರುತಾರ್ಥ ಪ್ರತಿಪಾದಕಗಳಾಗಿಯೇ ಇರಲಿ. ಬಾಧಿತಾರ್ಥವಾದ ವಾಕ್ಯಗಳನ್ನು ಮಾತ್ರ ವಿವೇಕಿಯಾದವನು ಯೋಗ್ಯವಾದ ಅರ್ಥಾಂತರದಲ್ಲಿ ತೆಗೆದುಕೊಂಡು ಹೋಗಬೇಕು.

**ಭಾವವಿಲಾಸಿನೀ–** ಅವಾಂತರ ಪ್ರಮೇಯಮುಪಸಂಹರತಿ ॥ **ತಸ್ಮಾದಿತಿ** ॥ ೮೦೨ ॥

**ನಿರ್ದುಃಖಸುಖಭೋಗಾಖ್ಯೋ ಮೋಕ್ಷೋ ವಾಚ್ಯಸ್ತ್ವಯಾ ಮಯಾ ।**
**ಯತ್ರ ತ್ವಸ್ಯೇತಿ ವಾಕ್ಯಂ ತು ಜ್ಞಾನಮಾತ್ರಂ ನಿಷೇಧತಿ ॥ ೮೦೩ ॥**

**ತಚ್ಛ್ರುತ್ವಾ ತಾರ್ಕಿಕೋ ಹೃಷ್ಯೇತ್ ತತ್ ಸಾ ತರ್ಕೇಣ ತಾರ್ಕಿಕಮ್ ।**
**ಹಂತುಂ ಸಂತ್ವಖಿಲಾ ಭೋಗಾ ಮುಕ್ತೌ ಸರ್ವಜನಪ್ರಿಯಾ ॥ ೮೦೪ ॥**

**ಅರ್ಥ–** ನಿರ್ದುಃಖಸುಖಭೋಗಾಖ್ಯಃ= ನಿರ್ದುಃಖಸುಖಭೋಗರೂಪವಾದ, ಮೋಕ್ಷಃ= ಮೋಕ್ಷವು, ತ್ವಯಾ ಮಯಾ= ನಿನ್ನಿಂದ ಮತ್ತು ನನ್ನಿಂದ, ವಾಚ್ಯಃ= ಹೇಳಲ್ಪಡಬೇಕು, ಯತ್ರತ್ವಸ್ಯೇತಿ ವಾಕ್ಯಂ ತು= ಯತ್ರತ್ವಸ್ಯ ಎಂಬ ವಾಕ್ಯವಾದರೂ, ಜ್ಞಾನಮಾತ್ರಂ= ಕೇವಲ ಜ್ಞಾನವನ್ನು, ನಿಷೇಧತಿ= ನಿಷೇಧ ಮಾಡುತ್ತದೆ. ತಚ್ಛ್ರುತ್ವಾ= ಅದನ್ನು ಕೇಳಿ, ತಾರ್ಕಿಕಃ= ತಾರ್ಕಿಕನು, ಹೃಷ್ಯೇತ್= ಸಂತೋಷಪಡಬಹುದು, ತತ್= ಆದ್ದರಿಂದ, ಸಾ= ಆ ಶ್ರುತಿಯು, ತರ್ಕೇಣ= ತರ್ಕದಿಂದ, ತಾರ್ಕಿಕಂ= ತಾರ್ಕಿಕನನ್ನು, ಹಂತುಂ= ಕೊಲ್ಲಲು, ಮುಕ್ತೌ= ಮುಕ್ತಿಯಲ್ಲಿ, ಸರ್ವಜನಪ್ರಿಯಾಃ= ಎಲ್ಲ ಜನರಿಗೂ ಪ್ರಿಯವಾದ, ಭೋಗಾಃ= ಪರಸ್ಪರ ದರ್ಶನ–ಸ್ಪರ್ಶನಾಲಾಪಾದಿ ಭೋಗಗಳು, ಸಂತು= ಇರಲಿ.

**ಅನುವಾದ–** ನಿರ್ದುಃಖಸುಖಭೋಗರೂಪವಾದ ಮೋಕ್ಷವು ನನ್ನಿಂದಲೂ ಮತ್ತು ನಿನ್ನಿಂದಲೂ ಹೇಳಲ್ಪಡಬೇಕು. ಯತ್ರತ್ವಸ್ಯ ಎಂಬ ವಾಕ್ಯವಂತೂ ಜ್ಞಾನ-ಸಾಮಾನ್ಯವನ್ನು ನಿಷೇಧ ಮಾಡುತ್ತದೆ. ಅದನ್ನು ಕೇಳಿ ತಾರ್ಕಿಕನು ಸಂತೋಷ-ಪಡಬಹುದು. ಆದ್ದರಿಂದ ಶ್ರುತಿಯು ತರ್ಕದಿಂದ ತಾರ್ಕಿಕನನ್ನು ಕೊಲ್ಲಲು ಪ್ರವೃತ್ತ-ವಾಗುತ್ತದೆ. ಆದ್ದರಿಂದ ಸರ್ವಜನಪ್ರಿಯವಾದ ಸ್ರಕ್ಚಂದನ ವನಿತಾದಿ ಭೋಗಗಳು ಮೋಕ್ಷದಲ್ಲಿ ಇರಲಿ. (ಇದಕ್ಕೆ ಮುಂದಿನ ಶ್ಲೋಕಗಳಿಂದ ಅನ್ವಯವಿದೆ).

**ಭಾವವಿಲಾಸಿನೀ–** ಪುನರಪಿ ಲೇಶತಸ್ತದೇವ ದರ್ಶಯತಿ ॥ **ನಿರ್ದುಃಖೇತಿ** ॥ ಭೋಗೋಽ-ನುಭವಃ । ತತ್ ಆಪಾತಪ್ರತೀತ ಜ್ಞಾನಮಾತ್ರನಿಷೇಧನಮ್ । ತತ್ತಸ್ಮಾತ್ । ಅಪಾಪತೋ

ಜ್ಞಾನಮಾತ್ರ ನಿಷೇಧಪರತ್ವೇನಾವಯೋರಯುಕ್ತಾರ್ಥತ್ವಾತ್ । ತರ್ಕೇಣ ತರ್ಕಮುದ್ರಯಾ । ಅಖಿಲಾ ಭೋಗಾಃ ಮುಕ್ತಸ್ತ್ರೀಪುರುಷಾಣಾಮನ್ಯೋನ್ಯಂದರ್ಶನಸ್ಪರ್ಶನಮುಖಕಮಲಾ-ಘ್ರಾಣಾನಾದಿಭೋಗಾಃ ॥ ೮೦೩-೮೦೪ ॥

**ಸುಖಾನುಭವಸಿದ್ಧ್ಯರ್ಥಂ ಸ್ವಾವೇದ್ಯತ್ವಂ ಪರಿತ್ಯಜ ।**
**ಸುಖಾವಿಷಯಕಜ್ಞಾನರೂಪಂ ಸುಖಮಯಂ ಮನಃ ।**
**ಕಿಂ ತೇನ ಫಲವತ್ ಕಿಂತು ತದ್ ದ್ರಷ್ಟುಃ ಸಾಕ್ಷಿಣಃ ಫಲಮ್॥ ೮೦೫ ॥**

**ಅರ್ಥ–** ಸುಖಾನುಭವಸಿದ್ಧ್ಯರ್ಥಂ= ಸುಖಾನುಭವದ ಸಿದ್ಧಿಗಾಗಿ, ಸ್ವಾವೇದ್ಯತ್ವಂ= ಸ್ವಾವೇದ್ಯತ್ವವನ್ನು, ಪರಿತ್ಯಜ= ಪರಿತ್ಯಜಿಸು, ಮನಃ= ಮನಸ್ಸು, ಸುಖಾವಿಷಯಕ-ಜ್ಞಾನರೂಪಂ= ಸುಖ ಅವಿಷಯಕ ಜ್ಞಾನರೂಪವಾದ, ಸುಖಮಯಂ= ಸುಖರೂಪವಾದ ವಸ್ತು ಅಂತಹ ಮನಸ್ಸು, ತೇನ= ಆ ಸುಖದಿಂದ, ಫಲವತ್ಕಿಂ= ಫಲವಾನುಭವಿ ಯಾಗುತ್ತದೆಯೇ? (ಆಗುವುದಿಲ್ಲ), ಕಿಂತು= ಆದರೆ, ತತ್= ಆ ಸುಖವು, ದ್ರಷ್ಟುಃ= ತನ್ನದೆಂದು ಅನುಸಂಧಾನ ಮಾಡುವ, ಸಾಕ್ಷಿಣಃ= ಸಾಕ್ಷಿಗೆ, ಫಲಂ= ಫಲರೂಪವಾಗಿದೆ.

**ಅನುವಾದ–** ಮೋಕ್ಷದಲ್ಲಿ ಸುಖಾನುಭವ ಸಿದ್ಧಿಗೋಸ್ಕರವಾಗಿ ಸ್ವಾವೇದ್ಯತ್ವವನ್ನು ಪರಿತ್ಯಜಿಸು. ಮನಸ್ಸಿನ ವಿಕಾರವೇ ಸುಖ ಮತ್ತು ಜ್ಞಾನಗಳು. ಆದ್ದರಿಂದ ಮನಸ್ಸು ಸುಖ ಅವಿಷಯಕವಾದ ಸುಖಜ್ಞಾನರೂಪವಾಗಿದೆ, ಸುಖರೂಪವೂ ಆಗಿದೆ. ಆದರೆ ಆ ಮನಸ್ಸಿಗೆ ಸುಖದ ಅನುಸಂಧಾನವು ಬರುವುದಿಲ್ಲ. ಈ ಸುಖವು ತನ್ನದೆಂದು ಅನುಸಂಧಾನ ಮಾಡುವ ಸಾಕ್ಷಿಗೆ ಸುಖದ ಅನುಭವವು ಬರುತ್ತದೆ.

**ಭಾವವಿಲಾಸಿನೀ–** ಪರಾಭಿಮತಂ ಸ್ವಾವೇದ್ಯತ್ವರೂಪಸ್ವಪ್ರಕಾಶತ್ವಮಪಿ ಸ್ವರೂಪಭೂತ-ಸುಖಾನುಭವಾಯೋಗೇನ ದೂಷಯತಿ ॥ **ಸುಖಾನುಭವೇತಿ** ॥ ಸುಖಾನುಭವಾಭಾವೇಽಪಿ ಸುಖರೂಪತ್ವಜ್ಞಾನರೂಪತ್ವಮಾತ್ರೇಣೈವ ಮುಕ್ತೇಃ ಸಾಫಲ್ಯಂ ಸ್ಯಾದಿತ್ಯತ ಆಹ – **ಸುಖಾ-ವಿಷಯಕೇತಿ** ॥ ಸುಖಮಯಂ ಸುಖರೂಪಮ್ । ತೇನ ಸುಖರೂಪತ್ವಜ್ಞಾನರೂಪತ್ವಮಾತ್ರೇಣ ಫಲವತ್ ಸುಖಾದಿಫಲವತ್ । ತದ್ದ್ರಷ್ಟುಃ ತಸ್ಯ ಮಾನಸಸುಖಸ್ಯ ದ್ರಷ್ಟುಃ ॥ ೮೦೫ ॥

**ವಿವರಣೆ–** ಸುಖರೂಪತ್ವವು ಪುರುಷಾರ್ಥವಲ್ಲ. ಸುಖದ ಅನುಭವವೇ ಪುರುಷಾರ್ಥ. ಸುಖವು ಮನೋವಿಕಾರವಾದ್ದರಿಂದ ಮನಸ್ಸು ಸುಖರೂಪವಾಗಿದೆ. ಜ್ಞಾನವೂ ಮನೋವಿಕಾರವೇ. ಆದರೆ ಮನಸ್ಸು ಜಡವಾದ್ದರಿಂದ ಅಸ್ವಪ್ರಕಾಶವಾದ್ದರಿಂದ ಮನೋರೂಪಜ್ಞಾನಕ್ಕೆ ಸುಖವಿಷಯಕತ್ವವು ಇಲ್ಲ. ಆದ್ದರಿಂದ ಮನಸ್ಸು ಸುಖವನ್ನು ಅನುಭವಿಸುವುದಿಲ್ಲ. ಸ್ವಪ್ರಕಾಶನಾದ ಸಾಕ್ಷಿಯು ಈ ಸುಖವು ತನ್ನದೆಂದು ಅನುಸಂಧಾನ ಮಾಡುತ್ತಾನೆ. ಆದ್ದರಿಂದ ಸಾಕ್ಷಿಗೆ ಸುಖಾನುಭವ ಉಂಟಾಗುತ್ತದೆ. ಆದ್ದರಿಂದ ಮೋಕ್ಷದಲ್ಲಿ ಬ್ರಹ್ಮನಿಗೆ ಸುಖಾನುಭವ ಉಂಟಾಗಬೇಕಾದರೆ ಬ್ರಹ್ಮಜ್ಞಾನಕ್ಕೆ ಸುಖವು

ವಿಷಯವಾಗಬೇಕು. ಸುಖವೂ ಬ್ರಹ್ಮರೂಪವೇ ಹೌದು ಮತ್ತು ಜ್ಞಾನವೂ ಬ್ರಹ್ಮರೂಪವೇ ಹೌದು. ಆದ್ದರಿಂದ ಆ ಜ್ಞಾನಕ್ಕೆ ಸವಿಷಯಕತ್ವವನ್ನು ಅಂಗೀಕರಿಸಬೇಕು. ಇಲ್ಲದಿದ್ದರೆ ಮೋಕ್ಷವು ಪುರುಷಾರ್ಥವೇ ಆಗುವುದಿಲ್ಲ. ಆದ್ದರಿಂದ ಸ್ವಾವೇದ್ಯತ್ವವನ್ನು ಪರಿತ್ಯಜಿಸು ಎಂದು ಅಭಿಪ್ರಾಯ.

ಕಿಂಚಾಭಿಮಾನಿವ್ಯಪದೇಶಸ್ತ್ವಿತ್ಯತ್ರ ಸ ಸೂತ್ರಕೃತ್ ।
ಯತೋ ಮೃದಬ್ರವೀದಿತ್ಯಾದ್ಯಾಪಾತಾನುಪಪನ್ನವಾಕ್ ।
ತದ್ಗದೇವಪರೇತ್ಯಾಹ ತನ್ನೇತ್ಯಾಹ ಮತಂ ತವ ॥ ೮೦೬ ॥

**ಅರ್ಥ–** ಕಿಂಚ= ಮತ್ತು, ಸೂತ್ರಕೃತ್= ಸೂತ್ರವನ್ನು ರಚಿಸಿದ ವೇದವ್ಯಾಸರು, ಅಭಿಮಾನಿವ್ಯಪದೇಶಸ್ತು ಇತ್ಯತ್ರ= ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಎಂಬ ಸೂತ್ರದಲ್ಲಿ, ಯತಃ= ಯಾವ ಕಾರಣದಿಂದ, ಮೃದಬ್ರವೀದಿತ್ಯಾದಿ= ಮೃದಬ್ರವೀತ್ ಎಂಬ ಮೊದಲಾದ, ಆಪಾತ ಅನುಪಪನ್ನವಾಕ್= ಆಪಾತತಃ ಅನುಪಪನ್ನಾರ್ಥವನ್ನು ಹೇಳುವ ವಾಕ್ಯವು, ತದ್ಗದೇವಪರಾಂ= ಆ ಮಣ್ಣಿನಲ್ಲಿರುವ ದೇವತೆಯ ಪರವಾದುದು ಎಂದು ಹೇಳಿದ್ದಾರೆಯೋ, ತವ ಮತಂ= ನಿನ್ನ ಮತವನ್ನು, ತತ್= ಅದು, ನೇತ್ಯಾಹ= ಅಲ್ಲ ಎಂದು ಹೇಳುತ್ತದೆ.

**ಅನುವಾದ–** ಮತ್ತು ಸೂತ್ರಕಾರರಾದ ವೇದವ್ಯಾಸರೂ ಸಹ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಎಂಬ ಸೂತ್ರದಲ್ಲಿ ಆಪಾತತಃ ಅನುಪಪನ್ನಾರ್ಥವನ್ನು ಹೇಳುವ ಮೃದಬ್ರವೀತ್ ಇತ್ಯಾದಿ ವಾಕ್ಯಗಳು ಮೃತ್ತಿನಲ್ಲಿರುವ ದೇವತೆಯನ್ನು ಹೇಳುತ್ತವೆ ಎಂದು ಹೇಳಿದ್ದಾರೆ. ನಿನ್ನ ಮತವಾದರೋ ಹಾಗಲ್ಲ ಎಂದು ಹೇಳುತ್ತದೆ.

**ಭಾವವಿಲಾಸಿನೀ–** ಅಪಿ ಚ ''ತತ್ತ್ವಮಸಿ'' ''ಸರ್ವಂ ಖಲ್ವಿದಂ'' ಬ್ರಹ್ಮೇತ್ಯಾದ್ಯೈಕ್ಯವಾಕ್ಯೇಷು ತ್ವಂ ಸರ್ವಪದಾಹಮಾದಿಪದಾನಾಂ ಅಂತರ್ಯಾಮಿಪರದೇವತಾವಿಷಯತ್ವಮೇವ ವಕ್ತುಮುಚಿತಮ್ । ನತು ಬಾಧಿತಜೀವೈಕ್ಯಕಥನಮಿತ್ಯೇತತ್ ಸೌತ್ರಪ್ರಕ್ರಿಯಯಾ ಪ್ರತಿಪಾದಯತಿ ॥ ಕಿಂ ಚೇತಿ ॥ ಅನುಪಪನ್ನವಾಕ್ । ಅನುಪಪನ್ನಾರ್ಥವಾಕ್ ತದ್ಗದೇವಪರಾ । ತತ್ತಸ್ಮಾತ್ ॥ ೮೦೬ ॥

**ವಿವರಣೆ–** ತತ್ತ್ವಮಸಿ, ಸರ್ವಂ ಖಲ್ವಿದಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ ಮೊದಲಾದ ವಾಕ್ಯಗಳಲ್ಲಿ ತ್ವಂ, ಸರ್ವಂ, ಅಹಂ ಮೊದಲಾದ ಪದಗಳಿಗೆ ಅಂತರ್ಯಾಮಿ ಪರತ್ವವನ್ನು ಹೇಳುವುದೇ ಉಚಿತವಾದುದು ಹೊರತು ಬಾಧಿತವಾದ ಜೀವೈಕ್ಯವನ್ನು ಹೇಳುವುದು ಎಂದೂ ಉಚಿತವಲ್ಲ ಎಂದು ಬ್ರಹ್ಮಸೂತ್ರ ನ್ಯಾಯವನ್ನು ಅನುಸರಿಸಿ ಇಲ್ಲಿ ಉಪಪಾದನೆ ಮಾಡುತ್ತಾರೆ. ಅಭಿಮಾನಿ ಸೂತ್ರದಲ್ಲಿ ಆಪಾತತಃ ವಿರುದ್ಧವಾದ ಅರ್ಥವನ್ನು ಹೇಳುವಂತೆ ತೋರುವ ವಾಕ್ಯಗಳಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಿ ವಿರೋಧವನ್ನು ಪರಿಹಾರ ಮಾಡಬೇಕೆಂದು ಸೂತ್ರಕಾರರು ಹೇಳಿದ್ದಾರೆ. ನೀನು ಮಾತ್ರ ತತ್ತ್ವಮಸಿ ಮುಂತಾದ

ವಾಕ್ಯಗಳಿಗೆ ಅರ್ಥದಲ್ಲಿ ಆಪಾತತಃ ವಿರೋಧವೇ ಕಂಡುಬಂದರೂ ಅಂತರ್ಯಾಮಿ ಪರತ್ವವನ್ನು ಹೇಳದೆ ಬಾಧಿತವಾದ ಜೀವೈಕ್ಯ ಪರತ್ವವನ್ನೇ ಹೇಳುತ್ತೀಯೇ. ಇದು ಅಯುಕ್ತವಾದುದು ಎಂದು ಅಭಿಪ್ರಾಯ.

**ಪ್ರತ್ಯುದ್ಗಮಂ ಪ್ರಶ್ರಯಣಮಭಿವಾದನಮೇವ ಚ ।**
**ಗುಹಾಶಯಾಯ ಕುರ್ವಂತಿ ನ ತು ತದ್ದೇಹಮಾನಿನೇ ॥ ೮೦೭ ॥**

**ಇತಿ ಯಃ ಪ್ರಾಹ ಗಿರಿಶಃ ಸೋಽಪಿ ನೇತ್ಯಾಹ ತೇ ಮತಂ ।**
**ಗುಹಾಶಯೋ ದೇಹಮಾನೀತ್ಯುಕ್ತೌ ಯದ್ ದೇಹಗೌ ಜಗೌ ॥ ೮೦೮ ॥**

**ಅರ್ಥ–** ಪ್ರತ್ಯುದ್ಗಮಂ= ಎದುರಿಗೆ ಹೋಗಿ ಸ್ವೀಕರಿಸುವುದು, ಪ್ರಶ್ರಯಣಂ= ಭಾಗಿ ನಿಲ್ಲುವುದು, ಅಭಿವಾದನಮೇವ ಚ= ಮತ್ತು ನಮಸ್ಕಾರ ಮಾಡುವುದು ಇವುಗಳನ್ನು, ಗುಹಾಶಯಾಯ= ಗುಹಾಶಯನಾದ ಪರಮಾತ್ಮನಿಗೇ, ಕುರ್ವಂತಿ= ಮಾಡುತ್ತಾರೆ, ತದ್ದೇಹಮಾನಿನೇ= ಆ ದೇಹಾಭಿಮಾನಿಯಾದ ಜೀವನಿಗೆ, ನ ತು= ಮಾಡುವುದಿಲ್ಲ, ಇತಿ= ಎಂದು, ಯಃ ಗಿರಿಶಃ= ಯಾವ ರುದ್ರದೇವರು, ಪ್ರಾಹ= ಹೇಳಿದರೋ, ಸೋಽಪಿ= ಅವರೂ ಸಹ, ತೇ ಮತಂ= ನಿನ್ನ ಮತವನ್ನು, ನೇತ್ಯಾಹ= ಅಸಾಧುವೆಂದು ಹೇಳಿದ್ದಾರೆ, ಯತ್= ಏಕೆಂದರೆ, ಗುಹಾಶಯಃ ದೇಹಮಾನೀತ್ಯುಕ್ತೌ= ಗುಹಾಶಯ ಮತ್ತು ದೇಹಮಾನಿ ಎಂದು ಹೇಳುವುದರಿಂದ, ದೇಹಗೌ= ದೇಹದಲ್ಲಿರುವ ಇಬ್ಬರು ಚೇತನರನ್ನೇ, ಜಗೌ= ಹೇಳಿದ್ದಾರೆ.

**ಅನುವಾದ–** ಎದುರಿಗೆ ಹೋಗಿ ಸ್ವೀಕರಿಸುವುದು, ಬಾಗಿ ನಿಲ್ಲುವುದು, ನಮಸ್ಕಾರ ಮಾಡುವುದು ಇವುಗಳೆಲ್ಲವನ್ನೂ ಹೃದುಗ್ಹಾಸ್ಥನಾದ ಪರಮಾತ್ಮನಿಗೇ ಮಾಡುತ್ತಾರೆ. ಆ ದೇಹಾಭಿಮಾನಿಯಾದ ಜೀವನಿಗೆ ಅಲ್ಲ ಎಂದು ಯಾವ ರುದ್ರದೇವರು ಹೇಳಿದ್ದಾರೆಯೋ, ಅವರೂ ಸಹ ನಿನ್ನ ಮತವನ್ನು ನಿರಾಕರಿಸುತ್ತಾರೆ. ಏಕೆಂದರೆ ಗುಹಾಶಯ ಮತ್ತು ದೇಹಮಾನಿ ಎಂದು ಅವರು ದೇಹದಲ್ಲಿರುವ ಎರಡು ಚೇತನಗಳನ್ನೇ ಹೇಳಿದ್ದಾರೆ.

**ಭಾವವಿಲಾಸಿನೀ–** ''ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ ವಿಧೀಯತೇ ಸಾಧುಮಿಥಸ್ಸು-ಮಧ್ಯಮೇ । ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ ಗುಹಾಶಯಾಯೈವ ನ ದೇಹಮಾನಿನೆ'' ಇತಿ ಭಾಗವತಸ್ಥರುದ್ರವಾಕ್ಯೇನಾಪಿ ಜೀವೇಶ್ವರಯೋರ್ಭೇದಕಥನಮೇವೋಚಿತಂ, ಬ್ರಹ್ಮ-ರುದ್ರಾದಿಷು ಕ್ರಿಯಮಾಣನಮಸ್ಕಾರಪೂಜಾದೀನಾಂ ಚ ತತ್ತದಂತರ್ಯಾಮ್ಯಧೋಕ್ಷಜಾಖ್ಯ-ಭಗವದ್ವಿಷಯತ್ವಕಥನಂ ಚೋಚಿತಮಿತ್ಯಾಹ – **ಪ್ರತ್ಯುದ್ಗಮಮಿತಿ** ॥ ಅನೇನ ತದ್ವಾಕ್ಯಮರ್ಥತಃ ಸಂಗೃಹೀತಮಿತಿ ದ್ರಷ್ಟವ್ಯಮ್ । ತೇ ಮತಂ ಜೀವೇಶ್ವರಯೋರೇಕತ್ವರೂಪಮತಮ್ । ಜೀವೇಷು ಬಾಧಿತಾರ್ಥಕವಾಕ್ಯಾನಾಮಪಿ ಜೀವಪರತ್ವಕಥನರೂಪಮತಂ ಚ। ಕಥಮಿತ್ಯತ ಆಹ –**ಗುಹೇತಿ**

ಇತ್ಯುಕ್ತೌ ಜೀವಪರಮಾತ್ಮಾಖ್ಯೌ ದ್ವೌ ಪದಾರ್ಥೌ । ಯದ್ಯಸ್ಮಾತ್ ತಸ್ಮಾತ್ತವ ಮತಂ ನೇತ್ಯಾಹೇತಿ ಪೂರ್ವೇಣಾನ್ವಯಃ ॥ ೮೦೭-೮೦೮ ॥

**ವಿವರಣೆ–** ಇಲ್ಲಿ ಗ್ರಂಥಕಾರರು 'ಪ್ರತ್ಯುದ್ಗಮಪ್ರಶ್ರಯಣಾದಿವಾದನಂ ವಿಧೀಯತೇ ಸಾಧು ಮಿಥಃ ಸುಮಧ್ಯಮೇ । ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ ಗುಹಾಶಯಾಯೈವ ನ ದೇಹಮಾನಿನೇ' ಎಂಬ ಭಾಗವತದ ದಕ್ಷಾಧ್ವರಪ್ರಸಂಗದ ರುದ್ರದೇವರ ವಾಕ್ಯವನ್ನು ಸಂಗ್ರಹಿಸಿ ವಿಮರ್ಶೆ ಮಾಡುತ್ತಾರೆ. ಈ ವಾಕ್ಯದ ಬಲದಿಂದಲೂ ಜೀವೇಶ್ವರರಿಗೆ ಭೇದವನ್ನು ಅಂಗೀಕರಿಸುವುದೇ ಯೋಗ್ಯವಾದುದು. ಬ್ರಹ್ಮ-ರುದ್ರಾದಿಗಳಿಗೆ ಮಾಡುವ ನಮಸ್ಕಾರವು ಅವರ ಅಂತರ್ಯಾಮಿಯಾದ ಅಧೋಕ್ಷಜನಿಗೆ ಸಲ್ಲುತ್ತದೆ ಎಂದು ಹೇಳಿದ್ದರಿಂದ ಜೀವೇಶ್ವರರ ಭೇದವೇ ಸಿದ್ಧವಾಗುತ್ತದೆ. ಜೀವೇಶ್ವರರಿಗೆ ಐಕ್ಯವನ್ನು ಹೇಳುವ ಮತವು ಅವರಿಗೆ ಭೇದವನ್ನು ಹೇಳುವ ರುದ್ರದೇವರ ಮತಕ್ಕೆ ವಿರುದ್ಧವಾಗಿದೆ ಎಂದು ಅಭಿಪ್ರಾಯ.

**ಯದ್ ದೇಹಮಾನಿನಂ ಪ್ರಾಹ ಜೀವಮೇವ ಮಹೇಶ್ವರಃ ।**
**ಸೋಽತ್ಯಲ್ಪಗುಣವಾಕ್ಯಾನಿ ಜೀವೇಷ್ವೇವಾನುಶಾಸ್ತಿ ತತ್ ॥ ೮೦೯ ॥**

**ಉಪಾಚಾರಾರ್ಹಸುಗುಣಸ್ತೋಮೋಕ್ತೀಃ ಪರಮಾತ್ಮನಿ ।**
**ಸೋಽನ್ವಶಿಕ್ಷದ್ ಯತಃ ಪ್ರತ್ಯುದ್ಗಮಾದ್ಯಮದಿಶತ್ ಪ್ರಭೋಃ ॥ ೮೧೦ ॥**

**ಅತಃ ಶ್ರುತಿಪುರಾಣಾದೌ ರುದ್ರಾದ್ಯುತ್ಕರ್ಷವಾಕ್ ತು ಯಾ ।**
**ಸಾಽಂತರ್ಯಾಮ್ಯಧಿದೈವಾದಿಷ್ವಿತ್ಯುಕ್ತಾರ್ಥಾಂತರಗೋಚರಾ ॥ ೮೧೧ ॥**

**ಅರ್ಥ–** ಯತ್= ಯಾವ ಕಾರಣದಿಂದ, ಮಹೇಶ್ವರಃ= ರುದ್ರದೇವರು, ಜೀವಮೇವ= ಜೀವನನ್ನೇ, ದೇಹಾಭಿಮಾನಿನಂ= ದೇಹಾಭಿಮಾನಿ ಎಂದು, ಪ್ರಾಹ= ಹೇಳಿದ್ದಾರೆಯೋ, ತತ್= ಆ ಕಾರಣದಿಂದ, ಸಃ= ಅವರು, ಅತ್ಯಲ್ಪಗುಣವಾಕ್ಯಾನಿ= ಬಹಳ ಅಲ್ಪವಾದ ಗುಣಗಳನ್ನು ಹೇಳುವ ವಾಕ್ಯಗಳನ್ನು, ಜೀವೇಷ್ವೇವ= ಜೀವರಲ್ಲಿಯೇ, ಅನುಶಾಸ್ತಿ= ಅನುಶಾಸನ ಮಾಡುತ್ತಾರೆ, ಉಪಾಚಾರಾರ್ಹಸುಗುಣಸ್ತೋಮೋಕ್ತೀಃ= ಶ್ರೇಷ್ಠವಾದ ಸುಗುಣಸ್ತೋಮಗಳನ್ನು ಹೇಳುವ ವಚನಗಳನ್ನು, ಸಃ= ಅವರು, ಪರಮಾತ್ಮನಿ= ಅಂತರ್ಯಾಮಿಯಾದ ಪರಮಾತ್ಮನಲ್ಲಿಯೇ, ಅನ್ವಶಿಕ್ಷತ್= ಅನುಶಾಸನ ಮಾಡಿದರು, ಯತಃ= ಏಕೆಂದರೆ, ಪ್ರಭೋಃ= ಪ್ರಭುವಾದ ಪರಮಾತ್ಮನನ್ನು ಕುರಿತೇ, ಪ್ರತ್ಯುದ್ಗಮಾದ್ಯಂ= ಪ್ರತ್ಯುದ್ಗಮ, ಪ್ರಶ್ರಯಣ ಮತ್ತು ಅಭಿವಾದನಗಳನ್ನು, ಅದಿಶತ್= ಉಪದೇಶ ಮಾಡಿದ್ದಾರೆ. ಅತಃ= ಆದ್ದರಿಂದ, ಶ್ರುತಿಪುರಾಣಾದೌ= ಶ್ರುತಿಪುರಾಣಗಳಲ್ಲಿ, ಯಾ= ಯಾವ, ರುದ್ರಾದ್ಯುತ್ಕರ್ಷವಾಕ್= ರುದ್ರನಿಗೆ ಸರ್ವೋತ್ತಮತ್ವಾದಿಗಳನ್ನು ಹೇಳುವ ವಾಕ್ಯವಿದೆಯೋ,

ಸಾ ತು= ಆ ವಾಕ್ಯವಾದರೂ, ಅಂತರ್ಯಾಮ್ಯಧಿದೈವಾದಿಷ್ವಿತ್ಯುಕ್ತ ಅರ್ಥಾಂತರಗೋಚರಾ= ಅಂತರ್ಯಾಮಿಧಿದೈವಾದಿಷು ತದ್ಧರ್ಮವ್ಯಪದೇಶಾತ್ ಎಂಬ ಸೂತ್ರದಲ್ಲಿ ಹೇಳಿದಂತೆ ರುದ್ರಾಂತರ್ಯಾಮಿ ಪರವಾಗಿವೆ.

**ಅನುವಾದ–** ಯಾವ ಕಾರಣದಿಂದ ರುದ್ರದೇವರು ಜೀವನನ್ನೇ ದೇಹಾಭಿಮಾನಿ ಎಂದು ಹೇಳಿದರೋ ಆ ಕಾರಣದಿಂದ ಅವರು ಅಲ್ಪಗುಣ ಪ್ರತಿಪಾದಕವಾಕ್ಯಗಳನ್ನು ಜೀವರಲ್ಲಿಯೇ ನಯನ ಮಾಡಬೇಕೆಂದು ಅನುಶಾಸನ ಮಾಡಿದರು. ಯಾವ ಕಾರಣದಿಂದ ಅಂತರ್ಯಾಮಿಯಾದ ಪ್ರಭುವನ್ನು ಕುರಿತೇ ಪ್ರತ್ಯುದ್ಗಮಾದಿಗಳನ್ನು ಹೇಳಿದರೋ ಆ ಕಾರಣದಿಂದ ಪೂಜಾರ್ಹವಾದ ಸುಗುಣಸ್ತೋಮ ಪ್ರತಿಪಾದಕ ವಚನಗಳನ್ನು ಪರಮಾತ್ಮನಲ್ಲಿಯೇ ನಯನ ಮಾಡಬೇಕೆಂದು ಅವರು ಉಪದೇಶಿಸಿದರು. ಆದ್ದರಿಂದ ಶ್ರುತಿಪುರಾಣಾದಿಗಳಲ್ಲಿ ಎಲ್ಲಿಯಾದರೂ ರುದ್ರದೇವರಿಗೆ ಸರ್ವೋತ್ತಮತ್ವಾದಿಗಳನ್ನು ಹೇಳುವ ವಾಕ್ಯಗಳಿದ್ದರೆ ಅವುಗಳನ್ನು ಅಂತರ್ಯಾಮ್ಯಧಿದೇವಾದಿಷು ತದ್ಧರ್ಮವ್ಯಪದೇಶಾತ್ ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದ ನ್ಯಾಯದಿಂದ ಅಂತರ್ಯಾಮಿಯೂ ಅಧಿದೇವನೂ ಆದ ಪರಮಾತ್ಮನಲ್ಲಿಯೇ ಅನ್ವಯಿಸಬೇಕು.

**ಭಾವವಿಲಾಸಿನೀ–** ಏತದ್ವಾಕ್ಯಬಲೇನೈವ ಪ್ರಮೇಯಾಂತರಂ ಚ ಸಿದ್ಧಮಿತ್ಯಾಹ – **ಯದಿತಿ** ॥ ಯದ್ಯಸ್ಮಾತ್ ಮಹೇಶ್ವರಃ। ದೇಹಮಾನಿನಂ ದೇಹಾಭಿಮಾನವತ್ತ್ವೇನ- ದೇಹಮಾನಿಪದವಾಚ್ಯಂ ಜೀವಮೇವ ಪ್ರಾಹ । ತತ್‌ತಸ್ಮಾತ್ । ಸಃ ಮಹೇಶ್ವರಃ ಅತ್ಯಲ್ಪಗುಣವಾಕ್ಯಾನಿ ಭಗವತ್ಯನುಪಪನ್ನಾಲ್ಪಗುಣಪ್ರತಿಪಾದಕವಾಕ್ಯಾನಿ ಜೀವೇಷ್ವೇವಾನುಶಾಸ್ತಿ । ನ ತು ಭಗವತೀತಿ ಯೋಜನಾ । ದೇಹಾಭಿಮಾನಾಖ್ಯ ನೀಚಗುಣಪ್ರತಿಪಾದಕದೇಹಮಾನಿಪದೇನ ಜೀವಮೇವ ನಿರ್ದಿಶನ್ ರುದ್ರಮಹಿಮಪ್ರತಿಪಾದಕವಾಕ್ಯಾನಾಮಂತರ್ಯಾಮಿ ಪರತ್ವವತ್ ಜನನಮರಣಾದಿದೋಷಪ್ರತಿಪಾದಕವಾಕ್ಯಾನಾಮಪಿನಾಂತರ್ಯಾಮಿ ಪರತ್ವಮ್ । ಕಿಂತು ಜೀವಪರತ್ವಮೇವೇತಿ ಸೂಚಿತವಾನಿತಿ ಭಾವಃ ॥ ೮೧೯-೮೧೧ ॥

**ವಿವರಣೆ–** ರುದ್ರದೇವರು ಅಲ್ಪಗುಣಗಳನ್ನು ಮತ್ತು ಜನನ ಮರಣಾದಿ ದೋಷಗಳನ್ನು ಹೇಳುವ ವಾಕ್ಯಗಳನ್ನು ದೇಹಾಭಿಮಾನಿಯಾದ ಜೀವನಲ್ಲೇ ಅನ್ವಯಿಸಬೇಕು ಎಂದು ಹೇಳಿ ಉಚ್ಚಗುಣವುಳ್ಳ ಪರಮಾತ್ಮನು ಮತ್ತು ಜೀವರು ಭಿನ್ನರೆಂದೇ ಹೇಳಿದ್ದಾರೆ. ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಿದರೆ ಅವರ ಮತಕ್ಕೆ ವಿರುದ್ಧವಾಗುತ್ತದೆ ಎಂದು ಅಭಿಪ್ರಾಯ.

ಅಧೋಕ್ಷಜೋ ಮೇ ಮನಸಾ ವಿಧೀಯತ ಇತೀಶ್ವರಃ ।
ಸ ಏವ ತಂ ಯದ್ ವ್ಯನಕ್ತಿ ಗುಹಾಶಯಪದೋದಿತಮ್ ॥ ೮೧೨ ॥

**ಏವಂ ಚ ವಿಷ್ಣೋರುತ್ಕರ್ಷೇ ಸರ್ವಾಗಮಗಿರಾಂ ಭರಮ್ ।**
**ಯೋ ಹರೋ ವಕ್ತಿ ಸರ್ವಸ್ಯ ಸ ಗುರುರ್ನಾತ್ರ ಸಂಶಯಃ ।**
**ತ್ರಿಲೋಚನಮತಾಯಾಸ್ಮೈ ಕೋ ವಾ ದ್ರುಹ್ಯೇದ್ ದ್ವಿಲೋಚನಃ ॥ ೮೧೩ ॥**

**ಅರ್ಥ–** ಯತ್= ಏಕೆಂದರೆ, ಸ ಏವ ಈಶ್ವರಃ= ಆ ಮಹೇಶ್ವರನೇ, ಅಧೋಕ್ಷಜಃ= ಅಧೋಕ್ಷಜನು= ವಿಷ್ಣುವು, ಮೇ ಮನಸಾ= ನನ್ನ ಮನಸ್ಸಿನಿಂದ, ವಿಧೀಯತೇ= ವಿಶೇಷವಾಗಿ ಧರಿಸಲ್ಪಟ್ಟಿದ್ದಾನೆ, ಇತಿ= ಎಂದು, ಗುಹಾಶಯಪದೋದಿತಂ= ಗುಹಾಶಯ ಪದದಿಂದ ಪ್ರತಿಪಾದ್ಯವಾದ ವಸ್ತುವನ್ನು, ವ್ಯನಕ್ತಿ= ಸ್ಪಷ್ಟಪಡಿಸಿದ್ದಾನೆ, ಏವಂ ಚ= ಆದ್ದರಿಂದ, ಯೋ ಹರಃ= ಯಾವ ರುದ್ರದೇವರು, ಸರ್ವಾಗಮಗಿರಾಂ= ಎಲ್ಲ ಆಗಮಗಳ ವಾಕ್ಯಗಳಿಗೂ, ವಿಷ್ಣೋರುತ್ಕರ್ಷೇ= ವಿಷ್ಣುವಿನ ಸರ್ವೋತ್ತಮತ್ವದಲ್ಲಿಯೇ, ಭರಂ= ತಾತ್ಪರ್ಯವನ್ನು, ವಕ್ತಿ= ಹೇಳುತ್ತಾರೆಯೋ, ಸಃ= ಆ ರುದ್ರದೇವರು, ಸರ್ವಸ್ಯ= ಎಲ್ಲರಿಗೂ, ಗುರುಃ= ಗುರುಗಳು, ಅತ್ರ= ಈ ವಿಷಯದಲ್ಲಿ, ಸಂಶಯೋ ನ= ಸಂಶಯವು ಇಲ್ಲ, ಅಸ್ಮೈ ತ್ರಿಲೋಚನಮತಾಯ= ಈ ರುದ್ರದೇವರ ಮತಕ್ಕೆ, ಕೋ ವಾ ದ್ವಿಲೋಚನಃ= ಯಾವ ಎರಡು ಕಣ್ಣುಳ್ಳ ಮನುಷ್ಯನು ತಾನೇ, ದ್ರುಹ್ಯೇತ್= ದ್ರೋಹವನ್ನು ಬಗೆಯಲು ಸಾಧ್ಯ.

**ಅನುವಾದ–** ಏಕೆಂದರೆ ಆ ರುದ್ರದೇವರೇ ವಿಷ್ಣುವೇ ನನ್ನ ಮನಸ್ಸಿನಲ್ಲಿ ವಿಶೇಷವಾಗಿ ಧರಿಸಲ್ಪಟ್ಟಿದ್ದಾನೆ ಎಂದು ಹೇಳಿ ಗುಹಾಶಯ ಪದದ ಅರ್ಥವನ್ನು ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ ಯಾವ ರುದ್ರದೇವರು ಎಲ್ಲಾ ಆಗಮಗಳಿಗೂ ವಿಷ್ಣುವಿನ ಉತ್ಕರ್ಷದಲ್ಲಿಯೇ ತಾತ್ಪರ್ಯವನ್ನು ಹೇಳುತ್ತಾರೆಯೋ ಅವರು ಸರ್ವಲೋಕದ ಗುರುಗಳು ಎಂಬುದರಲ್ಲಿ ಸಂಶಯವಿಲ್ಲ. ತ್ರಿಲೋಚನರಾದ ಅವರ ಮತಕ್ಕೆ ದ್ವಿಲೋಚನನಾದ ಯಾವ ಮನುಷ್ಯನು ದ್ರೋಹವನ್ನು ಬಗೆಯಲು ಸಾಧ್ಯ?

**ಭಾವವಿಲಾಸಿನೀ–** ಗುಹಾಶಯೋಽಪಿ ಹರಿರೇವ ನತ್ವನ್ಯ ಇತ್ಯೌತ್ತರರುದ್ರವಾಕ್ಯೇನೈವ ಸಿದ್ಧಮಿತ್ಯಾಹ – **ಅಧೋಕ್ಷಜ ಇತಿ ॥** ಅನೇನ ಸತ್ವಂ ವಿಶುದ್ಧಂ ವಸುದೇವಶಬ್ದಿತಂ ಯದೀಯತೇ ತತ್ರ ಪುಮಾನಪಾವೃತಃ । ಸತ್ವಂ ಚ ಯಸ್ಮಿನ್ ಭಗವಾನ್ ವಾಸುದೇವೋ ಹ್ಯಧೋಕ್ಷಜೋ ಮೇ ಮನಸಾ-ವಿಧೀಯತೇ ಇತಿ ಶ್ಲೋಕಂ ಗೃಹ್ಣಾತಿ । ಅಸ್ಯಾರ್ಥಃ । ಯದ್ಯಸ್ಮಾತ್ತತ್ರ ಸತ್ವಗುಣೇ ಮನಸಿ ಪ್ರಚುರೇ ಸತಿ ಅಪಾವೃತಃ ಅಪಗತಮಾವೃತಮಾವರಣಂ ಪ್ರಕೃತ್ಯಾಖ್ಯಂ ಯಸ್ಮಾತ್ಸೋಽಪಾವೃತಃ ಪುಮಾನ್ ಪರಮಪುರುಷಃ ಈಯತೇ ಜ್ಞಾಯತೇ । ತಸ್ಮಾದ್ವಿಶುದ್ಧಂ ರಜಸ್ತಮೋಭ್ಯಾಮ-ವಿಮಿಶ್ರಿತಂ ಸತ್ವಂ ಸತ್ವಗುಣಃ। ವಸುದೇವ ಶಬ್ದಿತಂ ಸರ್ವತ್ರ ನಿವಸನಶೀಲತ್ವಾದ್ವಸುದೇವಶಬ್ದವಾಚ್ಯಃ ಪರಮಾತ್ಮಾ ದೀವ್ಯತೇ ಪ್ರಕಾಶ್ಯತೇ ಅನೇನೇತಿ ವ್ಯುತ್ಪತ್ಯಾ ವಸುದೇವಶಬ್ದಪ್ರತಿಪಾದಿತಮ್ । ಅಸ್ತು ಸತ್ವಗುಣಸ್ಯ ವಸುದೇವನಾಮ । ಪ್ರಕೃತೇ ಕಿಮಾಯಾತಮಿತ್ಯತ ಉಕ್ತಮ್ ॥ **ಸತ್ವಂ ಚೇತಿ ॥** ತತ್ಸತ್ವಂ ಚ ಸತ್ವಗುಣಃ ॥ ಯಸ್ಮಿನ್ಪರಮಾತ್ಮನಿ ಮತ್ಸ್ಯಕೂರ್ಮಾದ್ಯವತಾರೈಃ ಸ್ವರಕ್ಷಕಸ್ಯ ಪರಮಾತ್ಮನಃ

ವಶೇ ತಿಷ್ಠತೀತ್ಯರ್ಥಃ । ರಜಸ್ತಮೋಗುಣಪ್ರಚುರದೈತ್ಯಸಂಹಾರೇಣ ಸತ್ವಗುಣಪ್ರಚುರ-ದೇವತಾರಕ್ಷಣೇ ಸತ್ವಗುಣಸ್ಯೈವ ರಕ್ಷಣಂ ಕೃತಂ ಭವತಿ । ಏವಂ ಚ ವಸುದೇವಶಬ್ದ ವಾಚ್ಯಃ ಸತ್ವಗುಣೋ ಯಸ್ಯ ವಶೇಽಸ್ತಿ ಸ ಭಗವಾನ್ ವಸುದೇವೋ ಯಸ್ಯ ರಕ್ಷ್ಯಃ ಸ ವಾಸುದೇವ ಇತಿ ವ್ಯುತ್ಪತ್ಯಾ ವಾಸುದೇವಃ ವಾಸುದೇವಶಬ್ದವಾಚ್ಯಃ । ನ ತು ವಸುದೇವಪುತ್ರತ್ವಾದ್ವಾಸುದೇವಃ ।

**ಭಾವವಿಲಾಸಿನೀ–** ನಾಪಿ ಸಾಕ್ಷಾತ್ಸತ್ವಗುಣಸ್ಯೈವಾಧಾರತಯಾ ವಾಸುದೇವಃ । ತಥಾ ಸತಿ ತ್ರಿಗುಣವರ್ಜಿತತ್ವಾರ್ಥಕತ್ವೇನ ಮದಭಿಮತಯಾ ಗುಣಮಾತ್ರನಿಷೇಧಕತ್ವೇನ ತ್ವದಭಿಮತಯಾ ನಿರ್ಗುಣಶ್ರುತ್ಯೈವ ವಿರೋಧಾತ್ । ಸಾತ್ವಿಕಸನಕಾದಿವದಸ್ಯಾಪ್ಯುತ್ಪತ್ತಿಸಂಭವೇನ ವಸುದೇವಪುತ್ರ-ತ್ವಾರ್ಥಕಶಬ್ದಸ್ಯಾನ್ಯಾರ್ಥಕಥನಾಯೋಗಾತ್ ಪ್ರಾಕೃತತಯಾ ದರ್ಶನಯೋಗ್ಯತ್ವ- ಸಂಭವೇನ ವಕ್ಷ್ಯಮಾಣಾಧೋಕ್ಷಜಪದಾಯೋಗಾತ್ । ಸತ್ವಗುಣಪ್ರಚುರಬ್ರಹ್ಮಣ ಇವ ಮನಸಾ ಧಾರ್ಯತ್ವಮಾತ್ರಸಂಭವೇಽಪಿ ವಿಧೀಯತ ಇತಿ ವಕ್ಷ್ಯಮಾಣಸ್ಯ ಸರ್ವೇಭ್ಯೋಽಪ್ಯತಿಶಯೇನ ಧಾರ್ಯತ್ವಸ್ಯಾಯೋಗಾತ್ । ಸತ್ವಾತ್ಸಂಜಾಯತೇ ಜ್ಞಾನಮಿತಿ ವಚನಾನ್ಮನೋವೃತ್ತಿರೂಪ-ಭಗವತ್ಸಾಕ್ಷಾತ್ಕಾರಕಾರಣಸ್ಯ ಸತ್ವಗುಣಸ್ಯ ಸಾಕ್ಷಾತ್ಕರ್ತೃಜೀವೇಷ್ವೇವ ವೃತ್ತೇರುಚಿತತ್ವೇನ ಈಯತ ಇತ್ಯುಕ್ತಜ್ಞೇಯ ಭಗವನ್ನಿಷ್ಠತಾಯಾಃ ಪ್ರಯೋಜನಾಭಾವಾತ್ । ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ । ಸಾತ್ವಿಕೀ ರಾಜಸೀ ಚೈವ ತಾಮಸೀ ಚೈವ ತಾಂ ಶೃಣು ॥

ಗೀತಾವಚನೇ ಸಾತ್ವಿಕಾದಿತ್ರಿತಯಕಾರಣೀಭೂತಸ್ವಭಾವಪದೋದಿತ ಜೀವಸ್ವರೂಪಭೂತ-ಸಾತ್ವಿಕತ್ವರಾಜಸತ್ವತಾಮಸತ್ವಾಖ್ಯಸ್ವಭಾವತ್ರಯಸ್ಯ ತ್ರಿಧಾಪದಮಹಿಮ್ನಾ ಸೂಚಿತಸ್ಯ ಸಾತ್ವಿಕಸಾತ್ವಿಕತ್ವ ಸಾತ್ವಿಕರಾಜಸತ್ವ ಸಾತ್ವಿಕತಾಮಸತ್ವಾಖ್ಯ ಸಜ್ಜೀವನಿಷ್ಠಪ್ರಾಕೃತಗುಣ-ನಿಮಿತ್ತತ್ರೈವಿಧ್ಯಸ್ಯ ರಾಜಸಸಾತ್ವಿಕತ್ವ ರಾಜಸರಾಜಸತ್ವರಾಜಸತಾಮಸತ್ವಾಖ್ಯ ಮಧ್ಯಮಜೀವನಿಷ್ಠ-ಪ್ರಾಕೃತಗುಣನಿಮಿತ್ತತ್ರೈವಿಧ್ಯಸ್ಯ ತಾಮಸಸಾತ್ವಿಕತ್ವ ತಾಮಸರಾಜಸತ್ವ ತಾಮಸತಾಮಸತ್ವಾಖ್ಯಾ-ಧಮಜೀವನಿಷ್ಠಪ್ರಾಕೃತಗುಣನಿಮಿತ್ತತ್ರೈವಿಧ್ಯಸ್ಯಚೇತ್ಯೇವಂ ನವವಿಧಬಾಹ್ಯವಿಭಾಗಸ್ಯ ಕಾರಣೀಭೂತಸ್ವಭಾವಪದೋದಿತ- ಜೀವಸ್ವರೂಪಸಾತ್ವಿಕಸಾತ್ವಿಕತ್ವಾದಿವಿಭಾಗನವಕಸ್ಯ ಚ ದೇಹೀತಿಪದೋದಿತಜೀವೇಷ್ವೇವ ಕಥನಾತ್ । ಸ್ವಯೋಗ್ಯಸ್ವರೂಪಜ್ಞಾನಾನಂದಾದೇಃ ಸದಾವಭಾಸನಸ್ವಭಾವಾಃ ಸಾತ್ವಿಕಸಾತ್ವಿಕಾಃ ಸ್ವಯೋಗ್ಯಮೌಕ್ತಾನ್ನಪಾನಾದಿವಿಷಯೇಷು ಚ ಮಧ್ಯೇ ಮಧ್ಯೇ ಅಭಿಲಾಷಸ್ವಭಾವಾಃ ಸಾತ್ವಿಕರಾಜಸಾಃ ಮುಕ್ತ್ಯನಂತರಮಪಿ ಸ್ವಯೋಗ್ಯಸ್ವರೂಪ-ಜ್ಞಾನೇಷ್ವೇವ ಸರ್ವದಾ ಶಕ್ತಿಮಂತಃ ಕದಾಚಿದ್ವ್ಯಕ್ತಿಮಂತಃ ಕದಾಚಿದವ್ಯಕ್ತಿಮಂತಶ್ಚ ಸಾತ್ವಿಕತಾಮಸಾ ಇತಿ ಉತ್ತಮಾನಾಂ ಸ್ವರೂಪೇ ವಿಭಾಗಃ ।

ಮಧ್ಯಮಾಧಮೇಷು ತತ್ಸ್ವರೂಪದೋಷಾಣಾಮಪಿ ಸಂಭವಾನ್ನ ಕಶ್ಚಿತ್ತುದ್ರೋಪದ್ರವಃ । ಬಾಹ್ಯತತ್ವಜ್ಞಾನಕರಣಸ್ಯಾಪಿ ಸತ್ವಗುಣಸ್ಯ ಹೇಯತ್ವ ಘಟನಾಯ ಸ್ವರೂಪಜ್ಞಾನಂ ಪ್ರತ್ಯಾವರಣ-ತ್ವಾವಶ್ಯಂಭಾವೇನ ಭಗವತೋಽಪಾವೃತಪದೋಕ್ತಾವರಣಶೂನ್ಯತ್ವಾಯೋಗಾತ್ । ಅತ ಏವ ಸಮಗ್ರವಿಜ್ಞಾನವತ್ವಾರ್ಥಕ ಭಗವತ್ಪದಾಯೋಗಾತ್ । ಪ್ರಾಗುಕ್ತಗುಣತ್ರಯ ಶೂನ್ಯತ್ವ ಪ್ರಕೃತಿ

ವಿದೂರತ್ವ ನಿತ್ಯಮುಕ್ತತ್ವಾದಿ ವಚನ ವಿರೋಧಾಚ್ಚ । ಸತ್ವ ಗುಣಸ್ವಾಮಿತ್ವೇನೈವಸತ್ವಂ ಚ ಯಸ್ಮಿನ್ನಿತ್ಯುಕ್ತಮ್ । ನ ಚ ವಾಚ್ಯಮ್ । ಸ್ವರೂಪವಿಭಾಗೇನ ವಾ ಬಾಹ್ಯವಿಭಾಗೇನ ವಾ ಏಕೇನೈವಾಲಂ ಕಿಂ ವಿಭಾಗದ್ವಿತಯೇನೇತಿ । ತ್ರಿವಿಧಾನಾಮಪಿ ಜೀವಾನಾಂ ಲಿಂಗದೇಹಭಂಗಾನಂತರಂ ಸ್ವರೂಪಜ್ಞಾನ ವೈಚಿತ್ರ್ಯಾಯಸ್ವರೂಪವಿಭಾಗಸ್ಯಾಪ್ಯಪೇಕ್ಷಿತತ್ವಾತ್ । ಸಂಸಾರದಶಾಯಾಂ ಮಾನಸಜ್ಞಾನವೈಚಿತ್ರ್ಯಾಯ ಪ್ರಾಕೃತ ಗುಣತ್ರಯನಿಮಿತ್ತಭಾಗತ್ರಯಸ್ಯಾಪ್ಯಪೇಕ್ಷಿತತ್ವಾತ್ ।

ನನು ಸಜ್ಜೀವೇಷು ಚ ಬಹಿಃ ರಾಜಸತ್ವತಾಮಸತ್ವಯೋಃ ಕಿಮರ್ಥಂ ಪ್ರವೇಶಃ । ದುರ್ಜೀವೇಷು ಚ ಸಾತ್ವಿಕತ್ವರಾಜಸತ್ವಯೋಃ ಕುತೋ ನಿವೇಶಃ ಮಧ್ಯಮಜೀವೇಷು ಚ ಸಾತ್ವಿಕತ್ವತಾಮಸತ್ವಯೋಃ ಕಿಂ ಪ್ರಯೋಜನಮಿತಿ ಚೇತ್ ಸತ್ಯಮ್ । ಬಹಿಃ ಸಜ್ಜೀವಾನಾಮಪಿ ಕಾದಾಚಿತ್ಕಸಾಂಸಾರಿಕ ಭ್ರಮಪ್ರಮಾದಾದೇಃ ಕ್ರಮೇಣ ಸಂಪಾದನಾರ್ಥಂ ತಯೋರಪೇಕ್ಷಿತತ್ವಾತ್ । ಸಾತ್ವಿಕಸಾತ್ವಿಕೇಷು ತಾತ್ವಿಕಯೋಗಿಷು ರುದ್ರಾದಿಷು ಪ್ರಮಾದಾದೇರಲ್ಪತ್ವಾದವಿವಕ್ಷಾ । ಸ್ವರೂಪೇ ಚ ಭಗವತಃ ಸ್ವಮಹಿಮ್ನೈವ ಜೀವಾನಾಂ ಯೋಗ್ಯತಾತಿರೇಕೇಣಾದೃಶ್ಯತ್ವಂ ಸಂಭವೇಽಪಿ ದೃಶ್ಯಜಗತಿ ಕ್ರಮಾತ್ ಸ್ವಯೋಗ್ಯತಾತಿರೇಕೇಣ ಜ್ಞಾನಪ್ರತಿರೋಧಾರ್ಥಮ್ । ಅತ ಏವ ಮಿಥ್ಯಾಜ್ಞಾನಿಷು ಕಲ್ಯಾದೇರ್ಬಹುಮಿಥ್ಯಾಜ್ಞಾನಿತ್ವಾದುತ್ತಮತ್ವಮ್ । ತಾದೃಶ ಸ್ವಭಾವಸ್ಯಾಪಿ ವಕ್ತುಮುಚಿತತ್ವಾತ್ । ದುರ್ಜೀವೇಷು ಸ್ವರೂಪೇ ಬಹಿಶ್ಚ ತಾಮಸತಾಮಸಾನಾಂ ರಾಕ್ಷಸಾನಾಮಿವ ಅನ್ಯತ್ರಾಪಿ ತಮೋನಿಮಿತ್ತಕಬಹುತರಮಿಥ್ಯಾಜ್ಞಾನಪ್ರಸಕ್ತೌ ಸತ್ಯಾಂ ಕ್ರಮೇಣ ತನ್ನಿರೋಧಾರ್ಥಮ್ । ಮಧ್ಯಮಜೀವೇಷು ಚ ಸರ್ವತ್ರಾಪಿ ರಜೋಗುಣಸ್ವಭಾವೇನೈವ ಮಿಶ್ರಜ್ಞಾನಸಂಭವೇಽಪಿ ತೇಷಾಂ ಚೈಕಪ್ರಕಾರತ್ವಾಭಾವೇನ ತನ್ನಿಷ್ಠಮಿಶ್ರಜ್ಞಾನಸ್ಯಾಪಿ- ತಾರತಮ್ಯಬೋಧನಾಯ ತಸ್ಯೈವ ಜ್ಞಾನಸ್ಯೋಚ್ಚತ್ವನೀಚತ್ವ ಸಂಪಾದನಾರ್ಥಮ್ । ಪ್ರಾಥಮಿಕಸತ್ವಪ್ರವೇಶೇ ತಜ್ಜನ್ಯತತ್ವಜ್ಞಾನಸ್ಯಾಪಿ ಸತ್ವಪ್ರವೇಶರಹಿತಮಧ್ಯಮಾಧಮಕೋಟಿಭ್ಯಾಮಾಧಿಕ್ಯಸಿದ್ಧೇರ್ಮಿಶ್ರಜೀವತ್ವಮಹಿಮ್ನಾ ಮಿಶ್ರತ್ವಸಂಪಾದಕರಜೋಮಹಿಮ್ನಾ ಚ ಮಿಥ್ಯಾಜ್ಞಾನಸ್ಯಾಪಿ ಆಧಿಕ್ಯಸಿದ್ಧೇಃ ಮಧ್ಯಮರಾಜಸರಾಜಸತ್ವತಮಸೋರುಭಯೋರಪ್ಯಪ್ರವೇಶೇನ ಉಚ್ಚಾದಧಮಸ್ಯ ನೀಚಾದುತ್ತಮಸ್ಯ ಮಿಶ್ರಜ್ಞಾನಸ್ಯ ದ್ವಿರ್ಬದ್ಧರಜಃ ಪದಮಹಿಮ್ನಾಸಿದ್ಧೇಃ ಈಶತತ್ವತಮಃ ಪ್ರವೇಶಸ್ಯಚಾವಿವಕ್ಷಿತತ್ವಾತ್ । ಅಧಮಪಕ್ಷೇ ಸತ್ವಾಪ್ರವೇಶೇನ ರಜಃ ಪದದ್ವಯಾಭಾವೇನ ತಮಃಪದಪ್ರವೇಶೇನ ಚ ಪ್ರಾಚೀನಪಕ್ಷದ್ವಯಾದಪಿ ಸತ್ವಗುಣಜನ್ಯತತ್ವಜ್ಞಾನಸ್ಯಾಲ್ಪತ್ವಸಿದ್ಧೌ ಪೂರ್ವೋಕ್ತನ್ಯಾಯೇನ ತಾಮಸಪಕ್ಷೋದಿತ ಮಿಥ್ಯಾಜ್ಞಾನಸ್ಯಾಪ್ಯಲ್ಪತ್ವಸಿದ್ಧೇಃ ಸತ್ವತಮೋಗುಣಜನ್ಯಸತ್ಕರ್ಮದುಷ್ಕರ್ಮಪ್ರಾಬಲ್ಯೇನ ತಯೋರುಭಯೋರುತ್ತಮಾಧಮತ್ವಸಿದ್ಧ್ಯರ್ಥಂ ವಾ ಸಾತ್ವಿಕತಾಮಸತ್ವೋಕ್ತೇಃ ಸಾರ್ಥಕ್ಯಾತ್ । ರಾಜಸರಾಜಸಪದೋಕ್ತಮಧ್ಯಮೇ ತು ಸತ್ಕರ್ಮದುಷ್ಕರ್ಮಣೋರನ್ಯತರಸ್ಯಾಪ್ಯಾಧಿಕ್ಯಾ- ಲಾಭೇನೋಭಯೋರಪಿ ಸಮತ್ವಸ್ಯೈವ ಲಾಭೇ ಮಧ್ಯಮತ್ವಸ್ಯೈವ ಸಿದ್ಧೇಃ ।

ನ ಚ ವಾಚ್ಯಂ ತಾಮಸಪದಪ್ರಯೋಗೇನ ಮಿಥ್ಯಾಜ್ಞಾನಬಾಹುಲ್ಯೇ ಪೂರ್ವವತ್ತತ್ವಜ್ಞಾನಸ್ಯ ಚ ಬಾಹುಲ್ಯಮತ್ರಾಪಿ ಸ್ಯಾದಿತಿ । ತಥಾ ಸತಿ ಪ್ರಾಚೀನಪಕ್ಷಸ್ಯಾಂತಿಮಪಕ್ಷಸ್ಯ ಚ ಸಾಂಕರ್ಯ-

ಪ್ರಸಂಗಾತ್ । ಅಥವಮೇಷ್ವೇಷು ಜ್ಞಾನೋತ್ಕರ್ಷಾಯೋಗಾಚ್ಚ । ಅಥವಾ ತಮಸಾಽಜ್ಞಾನಮೇವ ಚೇತಿ ವಚನೇನ ತಮೋಗುಣಾದಜ್ಞಾನಸ್ಯಾಪಿ ಸಂಭವಾತ್ ಪೂರ್ವೋಕ್ತ ಕೋಟಿದ್ವಯಾದಪಿ ಅಂತಿಮೇಷ್ವೇಷು ಅಜ್ಞಾನಾತಿಶಯದ್ಯೋತನಾಯ ತಾಮಸತ್ವೋಕ್ತಿರಿತಿ ದ್ರಷ್ಟವ್ಯಮ್ । ಅಥವಾ ಸತ್ವಪದೇನ ಮಾಯಾನಿಬರ್ಹಣ ಸಾಮರ್ಥ್ಯಂ ಬ್ರಹ್ಮಾದೀನಾಂ ಸ್ವರೂಪತಃ ಸಾತ್ವಿಕಸಾತ್ವಿಕತ್ವೇ ಭಗವತಸ್ತತೋಽಪ್ಯತಿಶಯಿತಸಾತ್ವಿಕತ್ವಸ್ಯ ನ್ಯಾಯಪ್ರಾಪ್ತತ್ವಾತ್ ಸತ್ವಪದೇನ ತಸ್ಯ ಸ್ವಭಾವತ ಏವ ಸತ್ವಂ ಗ್ರಾಹ್ಯಮ್ । ಅತ್ರ ವಿಶೇಷಶಕ್ಯಾ ಆಧಾರಾಧೇಯ ಭಾವಸ್ಯೈವ ಸಂಭವಾನ್ನ ಕಶ್ಚಿತ್ಸುದ್ರೋಪದ್ರವಃ । ಏತೇನೈವಾಪಾತತೋ ದೋಷಾಪಾದಕಶಬ್ದಾನಾಮಪಿ ಭಾಷ್ಯಾದೌ ಉಕ್ತವಿಧಯಾ ಭಗವತಿ ಗುಣಪರತಯೈವ ಯೋಜಯಿತುಂ ಶಕ್ತಿಸದ್ಭಾವೇ ತೇಽಪಿ ಶಬ್ದಾ ವಿಷ್ಣುಪರತಯೈವ ಯೋಜ್ಯಾ ಇತಿ ಸೂಚಿತಮ್ । ನನು ವಸುದೇವ ಪುತ್ರತ್ವಾಖ್ಯ ಪ್ರಸಿದ್ಧಾರ್ಥ ಏವ ಕುತೋ ನೇತ್ಯತ ಉಕ್ತಮ್ । **ಅಧೋಕ್ಷಜೋ ಹೀತಿ** ॥ ಯಸ್ಮಾದಧಸ್ತಾಃ ದೇವಾಕ್ಷಜಮಕ್ಷಜನಿತಂ ಜ್ಞಾನಂ ಸೋಧೋಕ್ಷಜೋಽಹಿ ಮನುಷ್ಯದೃಶಾಮಗೋಚರೋ ನಾರಾಯಣಃ ಕಥಂ ಕಸ್ಯಚಿತ್ ಪುತ್ರೋ ಭವೇತ್ । ಅತಃ ದ್ವೇಧಾ ಸತ್ವಗುಣಾಖ್ಯವಸುದೇವಸಂಬಂಧಿತ್ವಾದೇವ ಭಗವಾನ್ ವಾಸುದೇವ ಇತಿ ಪೂರ್ವೇಣಾನ್ವಯಃ । ಸಃ ವಾಸುದೇವಃ ಮೇ ಮನಸಾ ವಿಧೀಯತೇ ವಿಶೇಷೇಣ ವಿ ವಿಶಿಷ್ಟತಯಾ ವಿಃಪರಮಾತ್ಮೇತಿ ವಾ ಧೀಯತೇ ಧಾರ್ಯತೇ ಅಥವಾ ಸಃ ವಾಸುದೇವಃ ಮೇ ಮನಸಾ ಮಾಂ ವಿಧತ್ತ ಇತ್ಯಾದಿ ವಾಕ್ಯಾನಾಂ ಶುಕರೂಪೇಣ ವ್ಯಾಖ್ಯಾನಸಮಯೇ ಮದುಪದಿಷ್ಟಜ್ಞಾನೇನ ವಿಧೀಯತೇ ಸರ್ವೈರ್ನಮಸ್ಕರ್ತವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯ ಇತ್ಯಾದಿವಿಧೇರಭಿಧೇಯಃ ವಿಕಲ್ಪಾಪೋಹ್ಯ ಇತ್ಯಾದಿ ವಿಧೇಶ್ಚ ವಿಷಯೀಕ್ರಿಯತೇ । ಸಕಲವಿಧೀನಾಂ ವಿಷಯತಯಾ ಪ್ರತಿಪಾದ್ಯತ ಇತ್ಯರ್ಥಃ। ಏವಂ ಚ ಮಚ್ಛಿಷ್ಯೋ ಯಸ್ತ್ವಂ ಅಹಂ ತ್ವಾಂ ನ ನಮಸ್ಕರೋತಿ ಕಥಂ ಕೋಪಂ ಕರೋಷಿ । ಗುರೂಪದಿಷ್ಟಜ್ಞಾನಗ್ರಹಣೇ ದಕ್ಷತ್ವಾದ್ದಕ್ಷಶಬ್ದವಾಚ್ಯೋ ಯಸ್ತ್ವಂ ಕಥಮಧುನಾ ಅದಕ್ಷೋಽಭೂರಿತಿ ಫಲಿತೋಽರ್ಥಃ। ಸ ಏವ ಪೂರ್ವಶ್ಲೋಕೋಕ್ತ ಏವ ಈಶ್ವರಃ ರುದ್ರಃ । ಯದ್ಯಸ್ಮಾತ್ ॥ ೮೧೨, ೮೧೩ ॥

**ವಿವರಣೆ–** ವಿಧೀಯತೇ ಎಂದರೆ ವಿಶೇಷವಾಗಿ ಧರಿಸಲ್ಪಡುತ್ತಾನೆ ಎಂದರೆ ವಿಶೇಷವಾಗಿ ಧ್ಯಾನಿಸಲ್ಪಡುತ್ತಾನೆ ಎಂದು ಅರ್ಥ. ಬ್ರಹ್ಮದೇವರು ರುದ್ರದೇವರಿಗಿಂತ ಉತ್ತಮರಾದರೂ ಅವರು ರುದ್ರದೇವರಿಂದ ಧ್ಯೇಯರು. ವಿಶೇಷವಾಗಿ ಧ್ಯೇಯನಾದವನು ಮಾತ್ರ ವಿಷ್ಣುವೇ. ಆದ್ದರಿಂದ ವಿಷ್ಣುವೇ ಸರ್ವೋತ್ತಮನೆಂದು ರುದ್ರದೇವರ ಮತವೆಂದು ಸಿದ್ಧವಾಗುತ್ತದೆ. ರುದ್ರದೇವರು ಎಲ್ಲ ಲೋಕಕ್ಕೆ ಗುರುಗಳು. ಯಾವನಾದರೂ ಮನುಷ್ಯನು ರುದ್ರದೇವರ ಮತಕ್ಕೆ ವಿರುದ್ಧವಾಗಿ ಮಾತನಾಡಿದರೆ ಅದು ರುದ್ರದೇವರಿಗೆ ದ್ರೋಹವನ್ನು ಮಾಡಿದಂತಾಗುತ್ತದೆ. ಆದ್ದರಿಂದ ವಿಷ್ಣುವಿನ ಉತ್ಕರ್ಷವನ್ನು ಯಾರೂ ಅಲ್ಲಗಳೆಯಬಾರದು ಎಂದು ಅಭಿಪ್ರಾಯ.

ಗುಹಾಶಯನಾದವನು ಹರಿಯೇ ಇನ್ನೊಬ್ಬನಲ್ಲ ಎಂದು ರುದ್ರವಾಕ್ಯದಿಂದಲೇ ಸಿದ್ಧವಾಗುತ್ತದೆ ಎಂದು ಇಲ್ಲಿ ತಿಳಿಸುತ್ತಾರೆ. ಇಲ್ಲಿ 'ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ ಯದೀಯತೇ ತತ್ರ ಪುಮಾನ್ ಅಪಾವೃತಃ । ಸತ್ತ್ವಂ ಚ ಯಸ್ಮಿನ್ ಭಗವಾನ್ ವಾಸುದೇವೋ ಹ್ಯಧೋಕ್ಷಜೋಮೇ ಮನಸಾವಿಧೀಯತೇ' ಎಂಬ ಭಾಗವತ ಶ್ಲೋಕವನ್ನು ಸೂಚಿಸುತ್ತಾರೆ. ಅದರ ಅರ್ಥ ಹೀಗೆ :- ಯತ್= ಯಾವ ಕಾರಣದಿಂದ, ತತ್ರ= ಮನಸ್ಸಿನಲ್ಲಿ ಸತ್ತ್ವಗುಣವು ಪ್ರಚುರವಾದರೆ, ಅಪಾವೃತಃ= ಪ್ರಕೃತಿರೂಪವಾದ ಆವರಣವನ್ನು ಕಳೆದುಕೊಂಡ, ಪುಮಾನ್= ಪರಮಪುರುಷನು, ಈಯತೇ= ತಿಳಿಯಲ್ಪಡುತ್ತಾನೆಯೋ, ತಸ್ಮಾತ್= ಆದ್ದರಿಂದ, ವಿಶುದ್ಧಂ= ರಜೋಗುಣ ಮತ್ತು ತಮೋಗುಣಗಳಿಂದ ಅಮಿಶ್ರಿತವಾದ, ಸತ್ತ್ವಂ= ಸತ್ತ್ವಗುಣವು, ವಸುದೇವಶಬ್ದಿತಂ= ವಸುದೇವ ಎಂದು ಕರೆಯಲ್ಪಡುತ್ತದೆ. ಸರ್ವತ್ರ ವಾಸಮಾಡುವ ಸ್ವಭಾವವಿರುವುದರಿಂದ ವಸು ಎಂದು ಕರೆಯಲ್ಪಡುವ ಪರಮಾತ್ಮನು ಇದರಿಂದ ಗೀಯತೇ= ಎಂದರೆ ಪ್ರಕಾಶಿಸಲ್ಪಡುತ್ತಾನೆ ಎಂಬ ವ್ಯುತ್ಪತ್ತಿಯಿಂದ ವಸುದೇವ ಶಬ್ದವು ಸತ್ತ್ವಗುಣವನ್ನು ಪ್ರತಿಪಾದಿಸುತ್ತದೆ. ಸತ್ತ್ವಂ ಚ= ಆ ಸತ್ತ್ವಗುಣವಾದರೂ, ಯಸ್ಮಿನ್= ಯಾವ ಪರಮಾತ್ಮನ ವಶದಲ್ಲಿ ಇದೆಯೋ ಎಂದರೆ ರಜೋಗುಣ ತಮೋಗುಣ ಪ್ರಚುರರಾದ ದೈತ್ಯರನ್ನು ಸಂಹರಿಸಿ ಸತ್ತ್ವಪ್ರಚುರರಾದ ದೇವತೆಗಳನ್ನು ರಕ್ಷಣೆ ಮಾಡುವುದರಿಂದ ಸತ್ತ್ವಗುಣವನ್ನೇ ರಕ್ಷಣೆ ಮಾಡಿದಂತಾಗುತ್ತದೆ. ಆದ್ದರಿಂದ ವಸುದೇವ ಶಬ್ದಿತವಾದ ಸತ್ತ್ವಗುಣವು ಯಾರಿಂದ ರಕ್ಷಿತವಾಗಿದೆಯೋ ಅವನು ವಾಸುದೇವಶಬ್ದವಾಚ್ಯನಾದವನು. ರಕ್ಷಣೀಯತಯಾ ವಸುದೇವವನ್ನು ಉಳ್ಳವನು ಎಂದು ಅರ್ಥ. ವಸುದೇವಪುತ್ರನಾದ್ದರಿಂದ ವಾಸುದೇವ ಎಂದು ಅಭಿಪ್ರಾಯವಲ್ಲ. ಅಥವಾ ಸತ್ತ್ವಗುಣಕ್ಕೆ ಸಾಕ್ಷಾತ್ ಆಧಾರನಾಗಿದ್ದಾನೆ ಎಂದೂ ಅಲ್ಲ. ಏಕೆಂದರೆ ಹಾಗೆ ಒಪ್ಪಿದರೆ ನಿರ್ಗುಣಶ್ರುತಿಯ ವಿರೋಧವು ಉಭಯವಾದಿಗಳ ರೀತಿಯಿಂದಲೂ ಬರುವುದರಿಂದ ಹಾಗೆ ಅರ್ಥಮಾಡುವುದು ಯೋಗ್ಯವಲ್ಲ. ಸತ್ತ್ವಗುಣಕ್ಕೆ ಆಶ್ರಯನಾಗಿದ್ದರೆ ಸಾತ್ವಿಕರಾದ ಸನಕಾದಿಗಳಿಗೆ ಉತ್ಪತ್ತಿ ಇರುವಂತೆ ವಸುದೇವನಿಂದ ಉತ್ಪನ್ನನಾದವನು ಎಂಬ ಅರ್ಥವನ್ನೇ ಹೇಳಬಹುದಾದ್ದರಿಂದ ಆ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳಬೇಕಾದ ಪ್ರಸಂಗವು ಇರುತ್ತಿರಲಿಲ್ಲ. ಸತ್ತ್ವಗುಣಾಧಾರನಾಗಿದ್ದರೆ ಪ್ರಾಕೃತನಾದುದರಿಂದ ಅವನ ದರ್ಶನಯೋಗ್ಯತ್ವವೇ ಉಂಟಾಗುವುದರಿಂದ ಮುಂದೆ ಹೇಳುವ ಅಧೋಕ್ಷಜ ಎಂಬ ಪದದ ವಿರೋಧವೂ ಉಂಟಾಗುತ್ತದೆ. ಅದರಂತೆ ಸತ್ತ್ವಗುಣಾಶ್ರಯರಾದ ಬ್ರಹ್ಮದೇವರು ಹೇಗೆ ಮನಸ್ಸಿನಿಂದ ಧಾರ್ಯರಾಗುತ್ತಾರೆಯೋ ಹಾಗೆಯೇ ಪರಮಾತ್ಮನು ಧಾರ್ಯನಾಗಬಹುದಾದ್ದರಿಂದ ವಿಧೀಯತೇ ಎಂದು ಹೇಳಿದ ವಿಶೇಷಣ ಧಾರ್ಯತ್ವವು ಉಪಪನ್ನವಾಗುವುದಿಲ್ಲ. ಮತ್ತು ಸತ್ತ್ವಾತ್‌ಸಂಜಾಯತೇ ಜ್ಞಾನಂ ಮುಂತಾದ ವಚನಗಳಿಂದ ಮನೋವೃತ್ತಿರೂಪವಾದ ಭಗವತ್‌ಸಾಕ್ಷಾತ್ಕಾರಕ್ಕೆ ಕಾರಣವಾದ ಸತ್ತ್ವಗುಣವು ಸಾಕ್ಷಾತ್ಕಾರವನ್ನು ಹೊಂದುವ ಜೀವರಲ್ಲಿಯೇ ಇರುವುದು

ಉಚಿತವಾದುದರಿಂದ ಈಯತೇ ಎಂದು ಹೇಳಲ್ಪಟ್ಟ ಜ್ಞಾನವಿಷಯನಾದ ಭಗವಂತನಲ್ಲಿ ಸತ್ತ್ವಗುಣದ ಆಧಾರತ್ವವು ಪ್ರಕೃತ ಅಸಂಗತವಾಗುತ್ತದೆ.

'ತ್ರಿವಿಧಾಭವತಿಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ । ಸಾತ್ವಿಕೀ ರಾಜಸೀಚೈವ ತಾಮಸೀಚೈವ ತಾಂಶೃಣು' ಎಂಬ ಗೀತಾವಚನದಂತೆ ಸಾತ್ವಿಕಾದಿ ತ್ರಿತಯ ವಿಭಾಗಕ್ಕೆ ಕಾರಣವಾದ ಜೀವಸ್ವರೂಪಭೂತವಾದ ಸಾತ್ವಿಕತ್ವ, ರಾಜಸತ್ವ ಮತ್ತು ತಾಮಸತ್ವ ರೂಪವಾದ ಸ್ವಭಾವತ್ರಯದ ಮತ್ತು ತ್ರಿಧಾ ಪದದಿಂದ ಹೇಳಲ್ಪಟ್ಟ ಸಾತ್ವಿಕ ಸಾತ್ವಿಕತ್ವ, ಸಾತ್ವಿಕರಾಜಸತ್ವ ಮತ್ತು ಸಾತ್ವಿಕತಾಮಸತ್ವ ರೂಪವಾದ ಜೀವರಲ್ಲಿರುವ ಪ್ರಾಕೃತ ಗುಣನಿಮಿತ್ತವಾದ ತ್ರೈವಿಧ್ಯಕ್ಕೆ ಅದರಂತೆ ರಾಜಸ ಸಾತ್ವಿಕತ್ವ, ರಾಜಸ ರಾಜಸತ್ವ, ರಾಜಸ ತಾಮಸತ್ವ ರೂಪವಾದ ಮಧ್ಯಮ ಜೀವಗತವಾದ ಪ್ರಾಕೃತಗುಣ ನಿಮಿತ್ತ ತ್ರೈವಿಧ್ಯಕ್ಕೆ, ಅದರಂತೆ ತಾಮಸಸಾತ್ವಿಕತ್ವ, ತಾಮಸರಾಜಸತ್ವ ಮತ್ತು ತಾಮಸತಾಮಸತ್ವ ರೂಪವಾದ ಅಧಮ ಜೀವನಿಷ್ಠ ಪ್ರಾಕೃತಗುಣನಿಮಿತ್ತ ತ್ರೈವಿಧ್ಯಕ್ಕೆ ಎಂದರೆ ಈ ರೀತಿಯ ಒಂಭತ್ತು ವಿಭಾಗಕ್ಕೆ ಕಾರಣವಾದ ಜೀವಸ್ವರೂಪಭೂತವಾದ ಸಾತ್ವಿಕಸಾತ್ವಿಕತ್ವಾದಿ ವಿಭಾಗವನ್ನು ದೇಹಿ ಎಂಬ ಪದದಿಂದ ಜೀವರಲ್ಲೇ ಹೇಳಿದ್ದಾರೆ. ಪ್ರಾಕೃತ ಗುಣಗಳ ನವವಿಧ ವಿಭಾಗಕ್ಕೆ ಕಾರಣವಾದ ಸ್ವರೂಪಭೂತವಾದ 'ಸ್ವಭಾವಶಬ್ದವಾಚ್ಯವಾದ ನವವಿಧವಿಭಾಗಗಳು ಗೀತೆಯಲ್ಲಿ ಹೇಳಲ್ಪಟ್ಟಿವೆ ಎಂದು ಅಭಿಪ್ರಾಯ. ಅದರಲ್ಲಿ ತಮಗೆ ಯೋಗ್ಯವಾದ ಜ್ಞಾನಾನಂದಾದಿಗಳು ಯಾರಿಗೆ ಯಾವಾಗಲೂ ಗೋಚರವಾಗುತ್ತವೆಯೋ ಅವರು ಸಾತ್ವಿಕಸಾತ್ವಿಕರು. ತಮಗೆ ಯೋಗ್ಯವಾದ ಮುಕ್ತಿಕಾಲೀನಅನ್ನಪಾನಾದಿ ವಿಷಯಗಳಲ್ಲಿ ಯಾರಿಗೆ ಮಧ್ಯೆ ಮಧ್ಯೆ ಅಭಿಲಾಷೆ ಉಂಟಾಗುತ್ತದೆಯೋ ಅವರು ಸಾತ್ವಿಕರಾಜಸರು. ಮುಕ್ತಿಯಲ್ಲಿಯೂ ಕೂಡ ಸ್ವಯೋಗ್ಯಸ್ವರೂಪಾಜ್ಞಾನಾನಂದಾದಿಗಳಲ್ಲಿ ಶಕ್ತಿಯನ್ನು ಯಾವಾಗಲೂ ಹೊಂದಿ ಒಮ್ಮೊಮ್ಮೆ ವ್ಯಕ್ತಿ ಮತ್ತು ಒಮ್ಮೊಮ್ಮೆ ಅನಭಿವ್ಯಕ್ತಿ ಇರುವ ಜೀವರು ಸಾತ್ವಿಕ ತಾಮಸರು ಎಂದು ಉತ್ತಮ ಜೀವರ ಸ್ವರೂಪದಲ್ಲಿ ವಿಭಾಗವಿದೆ. ಮಧ್ಯಮರು ಮತ್ತು ಅಧಮರಲ್ಲಿ ಸ್ವರೂಪಭೂತವಾದ ದೋಷಗಳೂ ಇವೆ. ಉತ್ತಮ ಜೀವರಲ್ಲಿ ಮಾತ್ರ ಸ್ವರೂಪಭೂತವಾದ ದೋಷಗಳಿಲ್ಲ ಎಂದು ತಿಳಿಯಬೇಕು. ಸತ್ತ್ವಗುಣವು ಬಾಹ್ಯತತ್ವಜ್ಞಾನಕ್ಕೆ ಕಾರಣವಾದರೂ ಅದಕ್ಕೆ ಹೇಯತ್ವವನ್ನು ಉಪಪಾದನೆ ಮಾಡಲು ಅದು ಸ್ವರೂಪಜ್ಞಾನಕ್ಕೆ ಆವರಣವೆಂದು ಒಪ್ಪಬೇಕು. ಭಗವಂತನು ಅಪಾವೃತನೆಂದು ಹೇಳಲ್ಪಟ್ಟಿರುವುದರಿಂದ ಅದು ಹರಿಗೆ ಆವರಣವಾಗುವುದಿಲ್ಲ. ಜೀವರ ಸ್ವರೂಪಜ್ಞಾನಕ್ಕೆ ಆವರಣವೆಂದು ಒಪ್ಪಬೇಕು. ಆದ್ದರಿಂದ ಮೋಕ್ಷದಲ್ಲಿರುವ ಜ್ಞಾನಾನಂದ ವೈಚಿತ್ರ್ಯಗಳಿಗಾಗಿ ಸ್ವರೂಪವಿಭಾಗವನ್ನೂ ಒಪ್ಪಬೇಕು. ಸಂಸಾರದೆಶೆಯಲ್ಲಿರುವ ಮಾನಸಜ್ಞಾನಾದಿಗಳ ವೈಚಿತ್ರ್ಯವನ್ನು ಕೂಡಿಸುವುದಕ್ಕಾಗಿ ಪ್ರಾಕೃತಗುಣತ್ರಯನಿಮಿತ್ತವಾದ ಮೂರು ವಿಭಾಗಗಳನ್ನೂ ಒಪ್ಪಬೇಕು.

ಸಜ್ಜೀವರಲ್ಲಿ ಸಾತ್ವಿಕಸಾತ್ವಿಕ ಎಂದು ವಿಭಾಗ ಮಾಡುವುದುದರೂ ಸರಿ, ಆದರೆ ಸಾತ್ವಿಕರಾಜಸ ಮತ್ತು ಸಾತ್ವಿಕತಾಮಸ ಎಂದು ರಾಜಸತ್ವ ಮತ್ತು ತಾಮಸತ್ವಗಳನ್ನು ಏಕೆ ಸೇರಿಸಬೇಕು. ಅದರಂತೆಯೇ ದುರ್ಜೀವರಲ್ಲಿ ಸಾತ್ವಿಕತ್ವ ರಾಜಸತ್ವಗಳನ್ನು ಏಕೆ ಸೇರಿಸಬೇಕು. ಅದರಂತೆ ಮಧ್ಯಮಜೀವರಲ್ಲಿ ಸಾತ್ವಿಕತ್ವ, ತಾಮಸತ್ವಗಳನ್ನು ಏಕೆ ಸೇರಿಸಬೇಕು ಎಂಬ ಶಂಕೆಯು ಬಂದರೆ ಅದಕ್ಕೆ ಹೀಗೆ ಸಮಾಧಾನ. ಸಜ್ಜೀವರಿಗೆ ಸ್ವರೂಪದಲ್ಲಲ್ಲದೇ (ಸ್ವರೂಪವನ್ನು ಬಿಟ್ಟು) ಬಾಹ್ಯಜ್ಞಾನದಲ್ಲಿ ಸಂಸಾರದಶೆಯಲ್ಲಿ ಭ್ರಮಪ್ರಮಾದಗಳು ಉಂಟಾಗುವುದರಿಂದಲೂ ಆ ಬ್ರಹಪ್ರಮಾದಗಳಲ್ಲಿ ಉಚ್ಚತ್ವ, ನೀಚತ್ವಾದಿತಾರತಮ್ಯವಿರುವುದರಿಂದಲೂ ಅವುಗಳನ್ನು ಉಪಪಾದನೆ ಮಾಡಲು ರಾಜಸತ್ವ ಮತ್ತು ತಾಮಸತ್ವಗಳನ್ನು ಅಲ್ಲಿ ಸೇರಿಸಬೇಕು. ಹಾಗಾದರೆ ಸಾತ್ವಿಕಸಾತ್ವಿಕರಾದ ಸಾತ್ವಿಕಯೋಗಿಗಳಾದ ರುದ್ರಾದಿಗಳಲ್ಲಿ ಭ್ರಮಪ್ರಮಾದಗಳೇ ಇರುವುದಿಲ್ಲವೆಂದು ಅಭಿಪ್ರಾಯವಲ್ಲ. ಸಾತ್ವಿಕ ರಾಜಸ ಮತ್ತು ಸಾತ್ವಿಕ ತಾಮಸರಿಗೆ ಹೋಲಿಸಿದರೆ ಸಾತ್ವಿಕ ಸಾತ್ವಿಕರಿಗೆ ಉಂಟಾಗುವ ಭ್ರಮಪ್ರಮಾದಗಳು ಅತ್ಯಲ್ಪವಾದುದರಿಂದ ಅದನ್ನು ವಿವಕ್ಷೆ ಮಾಡದೆ ಇರುವ ಕಾರಣದಿಂದ ಸಾತ್ವಿಕಸಾತ್ವಿಕತ್ವ ವಿಭಾಗದಲ್ಲಿ ರಾಜಸತ್ವ ಮತ್ತು ತಾಮಸತ್ವವನ್ನು ಸೇರಿಸಿಲ್ಲ. ಮತ್ತು ಸಜ್ಜೀವರಿಗೆ ದೇವರ ಮಹಿಮೆಯಿಂದಲೇ ಜೀವರ ಸ್ವರೂಪದಲ್ಲಿ ಭಗವಂತನ ವಿಷಯದಲ್ಲಿ ತಮ್ಮ ತಮ್ಮ ಯೋಗ್ಯತೆಗಿಂತ ಅಧಿಕವಾಗಿ ಅದೃಶ್ಯತ್ವವಿರಬಹುದಾದರೂ ದೃಶ್ಯವಾದ ಜಗತ್ತಿನಲ್ಲಿ ಉಂಟಾಗುವ ಜ್ಞಾನ ಪ್ರತಿರೋಧದಲ್ಲಿ ತಾರತಮ್ಯವಿರುವುದರಿಂದ ಅದನ್ನು ಉಪಪಾದನೆ ಮಾಡಲು ರಾಜಸತ್ವ ಮತ್ತು ತಾಮಸತ್ವಗಳನ್ನು ಅಲ್ಲಿ ಸೇರಿಸಬೇಕು. ಆದ್ದರಿಂದಲೇ ಮಿಥ್ಯಾಜ್ಞಾನಿಗಳಲ್ಲಿ ಕಲ್ಯಾದಿಗಳು ಬಹುಮಿಥ್ಯಾಜ್ಞಾನಿಗಳಾದ್ದರಿಂದ ಅವರಿಗೆ ಆ ಗುಂಪಿನಲ್ಲಿ ಶ್ರೇಷ್ಠತ್ವವಿದೆ. ಬಾಹ್ಯವಾದ ಅಂತಹ ಜ್ಞಾನಕ್ಕೆ ಕಾರಣವಾದ ಸ್ವಭಾವವೈಚಿತ್ರ್ಯವನ್ನೂ ಒಪ್ಪುವುದು ಉಚಿತವಾಗುತ್ತದೆ.

ದುರ್ಜೀವರಲ್ಲಿ ಸ್ವರೂಪದಲ್ಲಿಯೂ ಮತ್ತು ಬಾಹ್ಯದಲ್ಲಿಯೂ ತಾಮಸ ತಾಮಸರಾದ ರಾಕ್ಷಸರಿಗಿಂತಲೂ ಅಲ್ಪಮಿಥ್ಯಾಜ್ಞಾನವುಳ್ಳವರನ್ನು ಸಂಗ್ರಹಿಸಲು ಮತ್ತು ಆ ಮಿಥ್ಯಾಜ್ಞಾನದಲ್ಲಿರುವ ತಾರತಮ್ಯವನ್ನು ಸಂಗ್ರಹಿಸಲು ಅಲ್ಲಿಯೂ ತಾಮಸರಾಜಸ ಮತ್ತು ತಾಮಸಸಾತ್ವಿಕ ಎಂದು ವಿಭಾಗವನ್ನು ಮಾಡಬೇಕು. ತಾಮಸ ತಾಮಸರಿಗಿಂತ ಅಧಿಕವಾಗಿರುವ ಸತ್ತ್ವರಜೋಂಶಗಳು ಅವರ ಅಂತಹ ಬಹುತರಮಿಥ್ಯಾಜ್ಞಾನವನ್ನು ಪ್ರತಿಬಂಧಿಸಿ ಅಲ್ಪವಾದ ಮಿಥ್ಯಾಜ್ಞಾನವನ್ನು ಉಂಟುಮಾಡುತ್ತವೆ. ಮಧ್ಯಮ ಜೀವರಲ್ಲಿ ರಾಜಸರಾಜಸರಿಗಿರುವ ಮಿಥ್ಯಾಜ್ಞಾನಕ್ಕಿಂತಲೂ ಅಲ್ಪತರವಾದ ಮಿಥ್ಯಾಜ್ಞಾನವನ್ನು ಮತ್ತು ಅಧಿಕತರವಾದ ಮಿಥ್ಯಾಜ್ಞಾನವನ್ನು ಸಂಗ್ರಹಿಸಲು ಅಲ್ಲಿಯೂ ರಾಜಸಸಾತ್ವಿಕ ಮತ್ತು ರಾಜಸತಾಮಸ ಎಂಬ ವಿಭಾಗವನ್ನು ಅಂಗೀಕರಿಸಬೇಕು.

ಆದ್ದರಿಂದ ವಸುದೇವ ಪುತ್ರನಾದುದರಿಂದ ವಾಸುದೇವ ಎಂದು ಕರೆಯಲ್ಪಡುವುದಿಲ್ಲ. ಏಕೆಂದರೆ ಆ ನಾರಾಯಣನು ಅಧೋಕ್ಷಜ, ಪ್ರತ್ಯಕ್ಷಕ್ಕೆ ವಿಷಯನಾಗದಿದ್ದವನು. ಆದ್ದರಿಂದ ಸತ್ತ್ವಗುಣಜನ್ಯಜ್ಞಾನವಿಷಯತಯಾ ಮತ್ತು ರಕ್ಷಕತಯಾ ವಸುದೇವಶಬ್ದವಾಚ್ಯವಾದ ಸತ್ತ್ವಗುಣ ಸಂಬಂಧವಿರುವುದರಿಂದಲೇ ವಾಸುದೇವನೆಂದು ಕರೆಯಲ್ಪಡುತ್ತಾನೆ. ಅಂತಹ ವಾಸುದೇವನನ್ನು ನಾನು ವಿ ಎಂದರೆ ವಿಶಿಷ್ಟವಾಗಿ ಅಥವಾ ಪರಮಾತ್ಮನೆಂದು, ಏಕೆಂದರೆ 'ವಿ' ಎಂದರೆ ಪರಮಾತ್ಮನೆಂದು ಕೋಶವಿದೆ, ಧ್ಯಾನಿಸುತ್ತಿದ್ದೇನೆ ಎಂದು ರುದ್ರದೇವರ ಅಭಿಪ್ರಾಯ. ಅಥವಾ ಅಂತಹ ವಾಸುದೇವನು ಮೇ ಮನಸಾ= ನನ್ನ ಮನಸ್ಸಿನಿಂದ, ವಿಧೀಯತೇ= ಎಂದರೆ ಮಾಂ ವಿಧತ್ತೇ ಅಭಿದತ್ತೇ ಮಾಂ ಇತ್ಯಾದಿಯಾದ ನಾನೇ ಶುಕರೂಪದಿಂದ ಮಾಡಿದ ಉಪದೇಶಗಳಲ್ಲಿ ಎಲ್ಲರಿಂದಲೂ ನಮಸ್ಕಾರ್ಯನೆಂದೂ, ಶ್ರೋತವ್ಯನೆಂದೂ, ಮಂತವ್ಯನೆಂದೂ, ಧ್ಯಾತವ್ಯನೆಂದೂ ವಿಧಿಸಲ್ಪಡುತ್ತದೆ. ಆ ರೂಪದಿಂದ ಉಪದೇಶವನ್ನು ದಕ್ಷನಾದ ನೀನೂ ಸಹ ಕೇಳಿದ್ದೀಯೆ. ಈಗ ನನ್ನ ಶಿಷ್ಯನಾದ ನೀನು ಈಗ ಮಾತ್ರ ನಮಸ್ಕಾರ ಮಾಡುವುದಿಲ್ಲ ಎಂದು ಏಕೆ ಕೋಪವನ್ನು ಮಾಡುತ್ತಿದ್ದೀಯೆ? ಗುರುಗಳ ಉಪದೇಶವನ್ನು ಸ್ವೀಕರಿಸುವುದರಲ್ಲಿ ದಕ್ಷನಾದ ನೀನು ಈಗ ಮಾತ್ರ ಅನುಷ್ಠಾನಸಮಯದಲ್ಲಿ ಅದಕ್ಷನಾಗಿದ್ದೀಯೆ ಎಂದೂ ರುದ್ರದೇವರ ಅಭಿಪ್ರಾಯವೆಂದು ವ್ಯಾಖ್ಯಾನ ಮಾಡಬಹುದು ಎಂದು ಸುರೋತ್ತಮತೀರ್ಥರು ತಿಳಿಸುತ್ತಾರೆ.

ಭೇದಸ್ಯ ವ್ಯಾವಹಾರ್ಯತ್ವೇ ಸ್ಯಾದೈಕ್ಯಂ ಪ್ರಾತಿಭಾಸಿಕಮ್ ।
ಭೇದೋ ಹ್ಯೈಕ್ಯನಿಷೇಧಾತ್ಮಾ ತಸ್ಯಾದ್ಯೈವ ನಿಷಿದ್ಧತಾ ।
ಕಿಂ ನ ದದ್ಯಾತ್ತ್ವದದ್ವೈತೇ ಬ್ರಹ್ಮಜ್ಞಾನಾನ್ಯಬಾಧ್ಯತಾಮ್ ॥ ೮೧೪ ॥

**ಅರ್ಥ–** ಭೇದಸ್ಯ ವ್ಯಾವಹಾರ್ಯತ್ವೇ= ಭೇದವು ವ್ಯಾವಹಾರಿಕವಾದರೆ, ಐಕ್ಯಂ= ಐಕ್ಯವು, ಪ್ರಾತಿಭಾಸಿಕಂ ಸ್ಯಾತ್= ಪ್ರಾತಿಭಾಸಿಕವಾಗಬೇಕಾಗುತ್ತದೆ, ಹಿ= ಏಕೆಂದರೆ, ಭೇದಃ= ಭೇದವು, ಐಕ್ಯನಿಷೇಧಾತ್ಮಾ= ಐಕ್ಯನಿಷೇಧರೂಪವಾದುದು, ತಸ್ಯ= ಆ ಐಕ್ಯಕ್ಕಾದರೂ, ಅದ್ಯೈವ= ಈಗಲೇ, ನಿಷಿದ್ಧತಾ= ನಿಷೇಧ್ಯತ್ವವು ಇದೆ, ಇದಾನೀಂ ನಿಷೇಧ್ಯತ್ವವು, ಅದ್ವೈತೇ= ಅದ್ವೈತಕ್ಕೆ, ಬ್ರಹ್ಮಜ್ಞಾನಾನ್ಯಬಾಧ್ಯತಾಂ= ಬ್ರಹ್ಮಜ್ಞಾನಾನ್ಯಬಾಧ್ಯತ್ವವನ್ನು ದದ್ಯಾತ್ ನ ಕಿಂ= ಕೊಡುವುದಿಲ್ಲವೇನು?

**ಅನುವಾದ–** ಭೇದವು ವ್ಯಾವಹಾರಿಕವಾದರೆ ಐಕ್ಯವು ಪ್ರಾತಿಭಾಸಿಕವಾಗಬೇಕಾಗುತ್ತದೆ. ಏಕೆಂದರೆ ಭೇದವು ಐಕ್ಯನಿಷೇಧರೂಪವಾದುದು. ಆ ಐಕ್ಯವಾದರೂ ಈಗಲೇ ಭೇದಜ್ಞಾನದಿಂದ ಬಾಧಿತವಾಗುತ್ತದೆ. ಆದ್ದರಿಂದ ಐಕ್ಯದಲ್ಲಿ ಬ್ರಹ್ಮಜ್ಞಾನಾನ್ಯಬಾಧ್ಯತ್ವವು ಬಂದಿದ್ದರಿಂದ ಐಕ್ಯವು ಪ್ರಾತಿಭಾಸಿಕವೇ ಆಗಬೇಕಾಗುತ್ತದೆ.

**ಭಾವವಿಲಾಸಿನೀ–** ಪ್ರಮೇಯಾಂತರೇಽಪಿ ಪ್ರತಿಬಂದೀಂ ಗ್ರಹೀತುಮುಕ್ತಮ್ ॥ **ಭೇದಸ್ಯೇತಿ** ॥ ಐಕ್ಯೇ ಪ್ರಾತಿಭಾಸಿಕತ್ವೋಪಪಾದನಾಯೋಕ್ತಮ್ ॥ **ಭೇದೋ ಹೀತಿ** ॥ ತಸ್ಯ ಐಕ್ಯಸ್ಯ ಅದ್ವೈವ ನಿಷಿದ್ಧಾ ಬ್ರಹ್ಮಜ್ಞಾನಾನ್ಯಬಾಧ್ಯತಾಂ ಕಿಂ ನ ದದ್ಯಾದಿತಿ ಸಂಬಂಧಃ ॥ ೮೧೪ ॥

> ಇದಾನೀಮೇವ ಬಾಧ್ಯತ್ವಾಚ್ಛುಕ್ತಿರೂಪ್ಯೇಽಪಿ ಸಾ ದಶಾ ।
> ಅತೋ ವೃದ್ಧ್ಯರ್ಥಿನಶ್ಚಿತ್ರಂ ಮೂಲನಾಶೋ ಭವೇತ್ ತವ ॥ ೮೧೫ ॥

**ಅರ್ಥ–** ಶುಕ್ತಿರೂಪ್ಯೇಽಪಿ= ಶುಕ್ತಿರೂಪ್ಯದಲ್ಲಿಯೂ ಸಹ, ಇದಾನೀಮೇವ ಬಾಧ್ಯತ್ವಾತ್= ಈಗಲೇ ಬಾಧ್ಯತ್ವವು ಇರುವುದರಿಂದಲೇ, ಸಾ ದಶಾ= ಆ ಪ್ರಾತಿಭಾಸಿಕತ್ವ ರೂಪವಾದ ಅವಸ್ಥೆಯು ಇದೆ, ಅತಃ= ಆದ್ದರಿಂದ, ವೃದ್ಧ್ಯರ್ಥಿನಃ= ವೃದ್ಧಿಯನ್ನು ಅಪೇಕ್ಷಿಸಿದ, ತವ= ನಿನಗೆ, ಮೂಲನಾಶಃ= ಮೂಲನಾಶವೇ, ಭವೇತ್= ಆಗುತ್ತದೆ, ಚಿತ್ರಂ= ಇದು ಆಶ್ಚರ್ಯಕರವಾದುದು.

**ಅನುವಾದ–** ಶುಕ್ತಿರಜತಕ್ಕಾದರೂ ಈಗಲೇ ಬಾಧ್ಯತ್ವವಿರುವುದರಿಂದಲೇ ಪ್ರಾತಿಭಾಸಿಕತ್ವವು ಇದೆಯಷ್ಟೆ, ಆದ್ದರಿಂದ ವೃದ್ಧಿಯನ್ನು ಬಯಸುವ ನಿನಗೆ ಮೂಲಕ್ಷಯವೇ ಉಂಟಾಯಿತು ಎಂಬುದು ಆಶ್ಚರ್ಯದ ಸಂಗತಿ.

**ಭಾವವಿಲಾಸಿನೀ–** ಸಾ ಪ್ರಾತಿಭಾಸಿಕತಾಖ್ಯಾ । ಏವಂ ಚ ವೃದ್ಧಿಮಿಚ್ಛತೋ ಮೂಲಮಪಿ ನಷ್ಟಮಿತ್ಯಾಭಾಣಕಂ ತ್ವಮೇವಾನುಕರೋಷೀತ್ಯಾಹ – **ಅತ ಇತಿ** ॥ ೮೧೫ ॥

**ವಿವರಣೆ–** ಅದ್ವೈತಿಗಳು ಐಕ್ಯಕ್ಕೆ ಪಾರಮಾರ್ಥಿಕತ್ವವನ್ನು ಮತ್ತು ಭೇದಕ್ಕೆ ವ್ಯಾವಹಾರಿಕತ್ವವನ್ನು ಬಯಸುತ್ತಾರೆ. ಆದರೆ ಐಕ್ಯವು ಈಗಲೇ ಬಾಧಿತವಾಗುವುದರಿಂದ ಶುಕ್ತಿರೂಪ್ಯದಂತೆ ಅದಕ್ಕೆ ಪ್ರಾತಿಭಾಸಿಕತ್ವವೇ ಉಂಟಾಗುತ್ತದೆ. ಆದ್ದರಿಂದ ಪಾರಮಾರ್ಥಿಕತ್ವವನ್ನು ಬಯಸಿದ ನಿನಗೆ ಪ್ರಾತಿಭಾಸಿಕತ್ವವೇ ಪ್ರಾಪ್ತವಾಗುವುದರಿಂದ ವೃದ್ಧಿಮಿಚ್ಛತಃ ಮೂಲಕ್ಷಯಃ ಎಂಬ ಗಾದೆಯು ನಿನಗೇ ಅನ್ವಯವಾಗುತ್ತದೆ ಎಂದು ಅಭಿಪ್ರಾಯ.

> ಏವಮೇವ ತ್ರಿಕಾಲೇಷು ನಿಷೇಧಾಭಾವರೂಪಿಣೀ ।
> ಸತ್ಯತಾ ವ್ಯಾವಹಾರ್ಯಾ ಚೇನ್ಮಿಥ್ಯಾತ್ವಂ ಪ್ರಾತಿಭಾಸಿಕಮ್ ॥ ೮೧೬ ॥

> ಭವೇತ್ ಪೂರ್ವೋಕ್ತಮಾರ್ಗೇಣ ಗುಣಾಭಾವನಿಷೇಧಕಾಃ ।
> ಅಭಾವಾಭಾವರೂಪತ್ವಾದ್ ಭಾವರೂಪಾ ಗುಣಾಃ ಪ್ರಭೋಃ ॥ ೮೧೭ ॥

> ವ್ಯಾವಹಾರ್ಯಾ ಯದಿ ತದಾ ನೈರ್ಗುಣ್ಯಂ ಪ್ರಾತಿಭಾಸಿಕಮ್ ।
> ಭವೇದಘಟಭೂಮೇಃ ಕಿಂ ಸಘಟಾಭೂರ್ನ ಬಾಧಿಕಾ ॥ ೮೧೮ ॥

**ಅರ್ಥ–** ಏವಮೇವ= ಇದರಂತೆಯೇ, ತ್ರಿಕಾಲೇಷು ನಿಷೇಧಾಭಾವರೂಪಿಣೀ= ಕಾಲತ್ರಯವೃತ್ತಿ ನಿಷೇಧಭಾವರೂಪವಾದ, ಸತ್ಯತಾ= ಸತ್ಯತ್ವವು, ವ್ಯಾವಹಾರ್ಯಾ ಚೇತ್= ವ್ಯಾವಹಾರಿಕವಾದರೆ, ಮಿಥ್ಯಾತ್ವಂ= ಮಿಥ್ಯಾತ್ವವು, ಪ್ರಾತಿಭಾಸಿಕಂ ಭವೇತ್= ಪ್ರಾತಿಭಾಸಿಕವಾಗುತ್ತದೆ. ಪೂರ್ವೋಕ್ತಮಾರ್ಗೇಣ= ಹಿಂದೆ ಹೇಳಿದ ಮಾರ್ಗದಿಂದಲೇ, ಅಭಾವಾಭಾವರೂಪತ್ವಾತ್= ಭಾವವು ಅಭಾವಾಭಾವರೂಪವಾದುದರಿಂದ, ಗುಣಾಭಾವನಿಷೇಧಕಾಃ= ಗುಣಾಭಾವವನ್ನು ನಿಷೇಧಿಸುವ, ಪ್ರಭೋಃ= ಪ್ರಭುವಾದ ಹರಿಯ, ಭಾವರೂಪಾಃ ಗುಣಾಃ= ಭಾವರೂಪವಾದ ಗುಣಗಳು, ಯದಿ= ಒಂದು ಪಕ್ಷ, ವ್ಯಾವಹಾರ್ಯಾಃ= ವ್ಯಾವಹಾರಿಕವಾದರೆ, ತದಾ= ಆಗ, ನೈರ್ಗುಣ್ಯಂ= ನೈರ್ಗುಣ್ಯವು, ಪ್ರಾತಿಭಾಸಿಕಂ ಭವೇತ್= ಪ್ರಾತಿಭಾಸಿಕವಾಗುತ್ತದೆ, ಸಘಟಾಭೂಃ= ಘಟಸಹಿತವಾದ ಭೂಮಿಯು, ಅಘಟಭೂಮೇಃ= ಘಟರಹಿತವಾದ ಭೂಮಿಗೆ, ಬಾಧಿಕಾ ಕಿಂ ನ= ಬಾಧಕವಾಗುವುದಿಲ್ಲವೇನು?

**ಅನುವಾದ–** ಇದರಂತೆಯೇ ಕಾಲತ್ರಯವೃತ್ತಿನಿಷೇಧಾಭಾವರೂಪವಾದ ಸತ್ಯತ್ವವು ವ್ಯಾವಹಾರಿಕವಾದರೆ ಮಿಥ್ಯಾತ್ವವು ಪ್ರಾತಿಭಾಸಿಕವಾಗಬೇಕಾಗುತ್ತದೆ. ಹಿಂದೆ ಹೇಳಿದ ರೀತಿಯಿಂದಲೇ ಭಾವಪದಾರ್ಥವು ಅಭಾವಾಭಾವರೂಪವಾದ್ದರಿಂದ ಗುಣಾಭಾವ ನಿಷೇಧರೂಪವಾದ ಪ್ರಭುವಿನ ಭಾವರೂಪವಾದ ಗುಣಗಳು ವ್ಯಾವಹಾರಿಕವಾದರೆ ನೈರ್ಗುಣ್ಯವು ಪ್ರಾತಿಭಾಸಿಕವಾಗುತ್ತದೆ. ಘಟವದ್ಭೂತಲವು ಘಟಾಭಾವವದ್ ಭೂತಲಕ್ಕೆ ಬಾಧಕವಾಗುವುದಿಲ್ಲವೇ?

**ಭಾವವಿಲಾಸಿನೀ–** ಇಮಮೇವ ದೋಷಂ ಪ್ರಮೇಯದ್ವಯೇಽಪ್ಯತಿದೇಷ್ಟುಮುಕ್ತಮ್ ॥ **ಏವಮಿತಿ** ॥ ಅಭಾವಾಭಾವರೂಪತ್ವಾದ್ಗುಣಾಭಾವನಿಷೇಧಕಾಃ ಪ್ರಭೋಃ ಭಾವರೂಪಾ ಗುಣಾ ಯದಿ ವ್ಯಾವಹಾರ್ಯಾ ಇತಿ ಸಂಬಂಧಃ । ಭಾವಸ್ಯಾಪ್ಯಭಾವನಿಷೇಧಕತ್ವೇ ದೃಷ್ಟಾಂತ-ಕಥನಾಯೋಕ್ತಂ ಅಘಟಭೂಮೇರಿತಿ ॥ ೮೧೬-೮೧೮ ॥

**ವಿವರಣೆ–** ಸತ್ಯತ್ವವು ಕಾಲತ್ರಯವೃತ್ತಿ ನಿಷೇಧಾಭಾವರೂಪವಾದುದು. ಮಿಥ್ಯಾತ್ವವು ಕಾಲತ್ರಯವೃತ್ತಿ ನಿಷೇಧರೂಪವಾದುದು. ಕಾಲತ್ರಯವೃತ್ತಿ ನಿಷೇಧಕ್ಕೆ ಕಾಲತ್ರಯವೃತ್ತಿ ನಿಷೇಧಾಭಾವದಿಂದ ಈಗಲೇ ಬಾಧವು ಬರುವುದರಿಂದ ಸತ್ಯತ್ವವು ವ್ಯಾವಹಾರಿಕವಾದರೆ ಅದರಿಂದ ಬಾಧಿತವಾಗುವ ಮಿಥ್ಯಾತ್ವವು ಪ್ರಾತಿಭಾಸಿಕವೇ ಆಗಬೇಕಾಗುತ್ತದೆ. ಅದರಂತೆ ಗುಣಗಳು ಗುಣಾಭಾವಾಭಾವರೂಪವಾದ್ದರಿಂದ ಗುಣಾಭಾವ ಪ್ರತಿಷೇಧಾತ್ಮಕವಾಗಿವೆ. ಪ್ರಭುವಿನಲ್ಲಿ ವೇದಗಳು ಹೇಳುವ ಗುಣಗಳು ವ್ಯಾವಹಾರಿಕವೆಂದಾದರೆ ಗುಣಾಭಾವವು ಈಗಲೇ ಬಾಧಿತವಾಗುವುದರಿಂದ ನೈರ್ಗುಣ್ಯವು ಪ್ರಾತಿಭಾಸಿಕವಾಗಬೇಕಾಗುತ್ತದೆ. ಘಟವದ್ಭೂತಲವು ಹೇಗೆ ಘಟಾಭಾವವದ್ ಭೂತಲಕ್ಕೆ ಈಗಲೇ ಬಾಧಕವಾಗುತ್ತದೆಯೋ ಅದರಂತೆ ಇಲ್ಲಿಯೂ ಕೂಡ. ಆದ್ದರಿಂದ ನಿನಗೆ ಅಭಿಮತವಾದ ಮಿಥ್ಯಾತ್ವ ಮತ್ತು ನಿರ್ಗುಣತ್ವಗಳೆಲ್ಲವೂ ಪ್ರಾತಿಭಾಸಿಕವೇ ಆಗುತ್ತವೆ ಎಂದು ಅಭಿಪ್ರಾಯ.

**ಪ್ರಾತಿಭಾಸಿಕಮಾನಾನಿ ಮಾನಾನ್ಯಾಸನ್ ಯತಸ್ತವ ।**
**ತಸ್ಮಾನ್ಮನ್ಮಾನಮಾರ್ತಾಂಡಃ ಪ್ರಲಯಾರ್ಕೋ ಭವೇದ್ ದ್ವಿಷಾಮ್॥ ೮೧೯ ॥**

**ಅರ್ಥ–** ಯತಃ= ಯಾವ ಕಾರಣದಿಂದ, ತವಮಾನಾನಿ= ನಿನ್ನ ಎಲ್ಲ ಪ್ರಮಾಣಗಳು, ಪ್ರಾತಿಭಾಸಿಕ ಮಾನಾನಿ= ಐಕ್ಯ, ನೈರ್ಗುಣ್ಯ, ಮಿಥ್ಯಾತ್ವ ಮೊದಲಾದ ಪ್ರಾತಿಭಾಸಿಕವನ್ನು ಪ್ರತಿಪಾದನೆ ಮಾಡುವುದರಿಂದ ಪ್ರಾತಿಭಾಸಿಕಗಳೇ ಆದವೋ, ತಸ್ಮಾತ್= ಆದ್ದರಿಂದ, ಮನ್ಮಾನ ಮಾರ್ತಾಂಡಃ= ನನ್ನ ಪ್ರಮಾಣವೆಂಬ ಸೂರ್ಯನು, ದ್ವಿಷಾಂ= ಪರವಾದಿಗಳಿಗೆ, ಪ್ರಲಯಾರ್ಕೋ ಭವೇತ್= ಪ್ರಲಯಕಾಲದ ಸೂರ್ಯನಾಗುತ್ತಾನೆ.

**ಅನುವಾದ– ಐಕ್ಯ, ಮಿಥ್ಯಾತ್ವ ಮತ್ತು ನಿರ್ಗುಣತ್ವಗಳೆಲ್ಲವೂ ಪ್ರಾತಿಭಾಸಿಕವಾದ್ದರಿಂದ ಅವುಗಳನ್ನು ಪ್ರತಿಪಾದನೆ ಮಾಡುವ ಪ್ರಮಾಣವು ಪ್ರಾತಿಭಾಸಿಕವೇ ಆಗುತ್ತದೆ. ಭೇದ ಮತ್ತು ಸದ್ಗುಣಗಳನ್ನು ಪ್ರತಿಪಾದನೆ ಮಾಡುವ ನನ್ನ ಪ್ರಮಾಣ ಸೂರ್ಯನಾದರೂ ಶತ್ರುಗಳಿಗೆ ಪ್ರಲಯಕಾಲದ ಸೂರ್ಯನೇ ಆಗುತ್ತಾನೆ.**

**ಭಾವವಿಲಾಸಿನೀ–** ತವ ಮಾನಾನಿ ಐಕ್ಯಮಿಥ್ಯಾತ್ವನಿರ್ಗುಣತ್ವಪ್ರತಿಪಾದಕಮಾನಾನಿ ಯತಃ ಪ್ರಾತಿಭಾಸಿಕಮಾನಾನಿ ಉಕ್ತವಿಧಯಾ ಪ್ರಾತಿಭಾಸಿಕೈಕ್ಯಾದೇಃ ಪ್ರತಿಪಾದಕಮಾನಾನ್ಯಾಸನ್ । ಮನ್ಮಾನಮಾರ್ತಾಂಡಃ ಮದಭಿಮತಭೇದಸತ್ಯತ್ವ ಸಗುಣತ್ವಪ್ರತಿಪಾದಕಪ್ರಮಾಣಾಖ್ಯ-ಮಾರ್ತಾಂಡಃ ॥ ೮೧೯ ॥

**ವಿವರಣೆ–** ಪರಪ್ರಮಾಣಗಳು ಪ್ರಾತಿಭಾಸಿಕ ವಿಷಯಕಗಳಾದ್ದರಿಂದ ದುರ್ಬಲ ಗಳಾಗಿವೆ. ನಮ್ಮ ಪ್ರಮಾಣಗಳ ದೌರ್ಬಲ್ಯಕ್ಕೆ ಯಾವ ಕಾರಣಗಳೂ ಇಲ್ಲ. ಆದ್ದರಿಂದ ನಮ್ಮ ಪ್ರಮಾಣಗಳು ಪರಪ್ರಮಾಣಗಳನ್ನು ಬಾಧಿಸುತ್ತವೆ ಎಂದು ಅಭಿಪ್ರಾಯ.

**ಐಕ್ಯನೈರ್ಗುಣ್ಯಮಿಥ್ಯಾತ್ವಾನ್ಯಧಃ ಕೃತ್ವೈವ ಯದ್ ಭವಾನ್ ।**
**ಭೇದಸದ್ಗುಣಸತ್ಯತ್ವಾನ್ಯಾಲಂಬ್ಯೇಶ್ವರಪೂಜನಮ್ ॥ ೮೨೦ ॥**

**ಗುಣಾನುಸ್ಮರಣಂ ಶ್ರೌತಸ್ಮಾರ್ತಕರ್ಮಾಣಿ ಚಾನಿಶಮ್ ।**
**ಕರೋಷಿ ಕೇನ ಕಸ್ಮಾತೋ ಬಾಧೋಽನಾದೌ ಭವೇದ್ ವದ ॥ ೮೨೧ ॥**

**ಅರ್ಥ–** ಯತ್= ಯಾವ ಕಾರಣದಿಂದ, ಭವಾನ್= ನೀನು, ಐಕ್ಯನೈರ್ಗುಣ್ಯಮಿಥ್ಯಾತ್ವಾನಿ= ಐಕ್ಯ, ನೈರ್ಗುಣ್ಯ ಮತ್ತು ಮಿಥ್ಯಾತ್ವಗಳನ್ನು, ಅಧಃಕೃತ್ವೈವ= ತಿರಸ್ಕರಿಸಿಯೇ, ಭೇದಸದ್ಗುಣಸತ್ಯತ್ವಾನಿ= ಜೀವೇಶ್ವರ ಭೇದ, ಈಶ್ವರ ಸದ್ಗುಣಗಳು ಮತ್ತು ಜಗತ್ಸತ್ಯತ್ವವನ್ನು ಅವಲಂಬಿಸಿಯೇ, ಈಶ್ವರಪೂಜನಂ= ಈಶ್ವರನ ಪೂಜೆಯನ್ನು, ಗುಣಾನುಸ್ಮರಣಂ= ಭಗವಂತನ ಗುಣಗಳ ಸ್ಮರಣೆಯನ್ನು, ಶ್ರೌತಸ್ಮಾರ್ತಕರ್ಮಾಣಿ ಚ=

ಶ್ರೌತಸ್ಮಾರ್ತಕರ್ಮಗಳನ್ನು, ಅನಿಶಂ= ಯಾವಾಗಲೂ, ಕರೋಷಿ= ಮಾಡುತ್ತೀಯೋ, ಅತಃ= ಆದ್ದರಿಂದ, ಕೇನ= ಯಾವ ಪ್ರಮಾಣದಿಂದ, ಕಸ್ಯ= ಯಾವ ಪ್ರಮಾಣಕ್ಕೆ, ಅನಾದೌ= ಅನಾದಿಯಾದ ಸಂಸಾರದಲ್ಲಿ (ಅನಾದಿ ಕಾಲದಿಂದಲೂ), ಬಾಧಃ ಭವೇತ್= ಬಾಧವುಂಟಾಗುತ್ತದೆ ಎಂದು, ವದ= ಹೇಳು?

**ಅನುವಾದ–** ನೀನಾದರೂ ಸಹ ಐಕ್ಯ, ನೈರ್ಗುಣ್ಯ ಮತ್ತು ಮಿಥ್ಯಾತ್ವವನ್ನು ತಿರಸ್ಕರಿಸಿ ಭೇದ, ಸದ್ಗುಣ ಮತ್ತು ಸತ್ಯತ್ವಗಳನ್ನು ಅವಲಂಬಿಸಿ ಅನಾದಿಕಾಲದಿಂದಲೂ ಸತತವಾಗಿ ಈಶ್ವರ ಪೂಜನೆಯನ್ನು ಭಗವದ್ಗುಣ ಸ್ಮರಣೆಯನ್ನು ಮತ್ತು ಶ್ರೌತ ಸ್ಮಾರ್ತ ಕರ್ಮಾನುಷ್ಠಾನವನ್ನು ಮಾಡುತ್ತಿದ್ದೀಯೆ. ಆದ್ದರಿಂದ ಯಾವುದರಿಂದ ಯಾವುದಕ್ಕೆ ಬಾಧವೆಂದು ಹೇಳು?

**ಭಾವವಿಲಾಸಿನೀ–** ಐಕ್ಯಾದೀನಾಂ ಸ್ವೇನ ಪ್ರಾಗುಕ್ತಬಾಧಂ ಪರಸ್ಯಾಪ್ಯನುಭವಾರೂಢಂ ಕರ್ತುಮುಕ್ತಮ್ ॥ ಐಕ್ಯೇತಿ ॥ ಯದ್ಯಸ್ಮಾತ್ । ಅಂತಃ ಕಾರಣಾತ್ ಅನಾದೌ ಸಂಸಾರೇ ಕೇನ ಕಸ್ಯ ಬಾಧಃ ಭವೇತ್ । ವದೇತಿ ಸಂಬಂಧಃ । ತ್ವಮಪ್ಯಸ್ಮಿನ್ಸಂಸಾರೇಽನಾದಿಕಾಲಮಾರಭ್ಯೈಕ್ಯಾದಿಕಂ ಸಾಂಸಾರಿಕ ವ್ಯವಹಾರಾನನುಕೂಲತ್ವಾದನಾದೃತ್ಯ ಭೇದಾದಿಕಮೇವ ಪುರಸ್ಕೃತ್ಯ ಭೇದಸಾಪೇಕ್ಷಭಗವತ್ಪೂಜನಂ ಗುಣಸಾಪೇಕ್ಷಂ ಗುಣಾನುಸ್ಮರಣರೂಪಭಗವದ್ಧ್ಯಾನಂ ಸತ್ಯತ್ವಸಾಪೇಕ್ಷನಿತ್ಯನೈಮಿತ್ತಿಕ ಕರ್ಮಾಣಿ ಚ ಕರೋಷಿ, ಅನ್ಯಥೈತೇಷಾಂ ತ್ವದಭಿಮತವ್ಯಾವ-ಹಾರಿಕತ್ವಮೇವ ನ ಸ್ಯಾತ್ । ಅತ ಇದಾನೀಂ ಭೇದಾದಿನಾ ಐಕ್ಯಾದೇಃ ಕಥಂ ನ ಬಾಧ ಇತಿ ಭಾವಃ ॥ ೮೨೦-೮೨೧ ॥

**ವಿವರಣೆ–** ಐಕ್ಯ, ನೈರ್ಗುಣ್ಯ ಮೊದಲಾದವುಗಳು ಅದ್ವೈತಿಗಳ ಅನುಭವಕ್ಕೂ ವಿರುದ್ಧವಾದುದು ಎಂದು ಇಲ್ಲಿ ತಿಳಿಸುತ್ತಾರೆ. ಅವರ ಆಚರಣೆ ಎಲ್ಲವೂ ಭೇದ, ಸತ್ಯತ್ವ, ಭಗವದ್ಗುಣಗಳನ್ನು ಅವಲಂಬಿಸಿವೆ, ಬಾಯಲ್ಲಿ ಮಾತ್ರ ಮಿಥ್ಯಾತ್ವವಾದಗಳನ್ನು ಹೇಳುತ್ತಾರೆ. ಆದ್ದರಿಂದ ಅವರು ಹೇಳುವ ತತ್ತ್ವವು ಅವರ ಅನುಭವಕ್ಕೂ ವಿರುದ್ಧವಾದುದು ಎಂದು ಅಭಿಪ್ರಾಯ.

**ಚಿದೇಕತಾಂ ನ ಬಾಧೇತ ಯದ್ಯಯಂ ತರ್ಹಿ ಸಾಪ್ಯಮುಮ್ ।**
**ನ ಬಾಧೇತ ನ್ಯಾಯಸಾಮ್ಯಾತದ್ ಭೇದೋಭೂದಬಾಧಿತಃ ॥ ೮೨೨ ॥**

**ಅರ್ಥ–** ಯದಿ= ಒಂದು ಪಕ್ಷ, ಅಯಂ= ಈ ವಿಶಿಷ್ಟ ಚೇತನರ ಭೇದವು, ಚಿದೇಕತಾಂ= ಚಿದೈಕ್ಯವನ್ನು, ನ ಬಾಧೇತ= ಬಾಧಿಸುವುದಿಲ್ಲವೆಂದಾದರೆ, ಸಾಪಿ= ಚಿದೈಕ್ಯವೂ ಕೂಡ, ಅಮುಂ= ಈ ವಿಶಿಷ್ಟ ಭೇದವನ್ನು, ನ್ಯಾಯಸಾಮ್ಯಾತ್= ನ್ಯಾಯಸಾಮ್ಯದಿಂದ, ನ ಬಾಧೇತ= ಬಾಧಿಸುವುದಿಲ್ಲ, ತತ್= ಆದ್ದರಿಂದ, ಭೇದಃ= ಭೇದವು, ಅಬಾಧಿತಃ ಅಭೂತ್= ಅಬಾಧಿತವಾಯಿತು.

**ಅನುವಾದ–** ವಿಶಿಷ್ಟಭೇದವು ಚಿದೈಕ್ಯವನ್ನು ಬಾಧಿಸುವುದಿಲ್ಲವೆಂದಾದರೆ ಚಿದೈಕ್ಯವೂ ಸಹ ಅದೇ ನ್ಯಾಯದಿಂದ ವಿಶಿಷ್ಟ ಭೇದವನ್ನು ಬಾಧಿಸುವುದಿಲ್ಲ. ಆದ್ದರಿಂದ ಭೇದವು ಅಬಾಧಿತವೇ ಆಯಿತು.

**ಭಾವವಿಲಾಸಿನೀ–** ಅಥ ಯದಿ ವಿಶಿಷ್ಟಯೋರ್ಭೇದಃ ವಿಶಿಷ್ಟಯೋರೈಕ್ಯಮೇವ ಬಾಧತೇ ನ ತು ಚಿತೋರೈಕ್ಯಮಿತಿ ವದಸಿ ತರ್ಹಿ ಚಿತೋರೈಕ್ಯಮಪಿ ಚಿತೋರೇವ ಭೇದಂ ಬಾಧತೇ ನ ತು ವಿಶಿಷ್ಟಯೋರ್ಭೇದಮ್ । ಏವಂ ಚ ಬ್ರಹ್ಮಜ್ಞಾನೇಽಪ್ಯಬಾಧ್ಯತ್ವಾತ್ ಮದಭಿಮತೋ ಜೀವೇಶ್ವರಯೋರ್ಭೇದೋ ವಜ್ರಲೇಪಾಯಿತೋಽಭೂದಿತ್ಯಾಹ – **ಚಿದೇಕತಾಮಿತಿ** ॥ ಚಿತೋರೇಕತಾಮಿತ್ಯರ್ಥಃ । ಅಯಂ ವಿಶಿಷ್ಟಯೋರ್ಭೇದಃ । ಸಾ ಚಿತೋರೇಕತಾ । ಅಮುಂ ವಿಶಿಷ್ಟಯೋರ್ಭೇದಮ್ । ನ್ಯಾಯಸಾಮ್ಯಾತ್ ಭಿನ್ನವಿಷಯಾಖ್ಯನ್ಯಾಯಸಾಮ್ಯಾತ್ । ತತ್ತಸ್ಮಾತ್ । ಅಂಗೀಕೃತ್ಯೇದಂದೂಷಣಾಂತರಮುಕ್ತಮ್ । ವಸ್ತುಗತ್ಯಾ ಜೀವೇಶ್ವರಾಖ್ಯವಿಶಿಷ್ಟಯೋರ್ಭೇದಗ್ರಾಹಿಣಾ ಸಾಕ್ಷಿಣಾ ದುಃಖಸ್ಯಾನನುಭಾವಿತ್ರೀ ಚಿತ್ ನ ತದ್ವಿರುದ್ಧಸ್ವಭಾವಜೀವಚಿದಿತಿ ತಯೋಶ್ಚಿತೋರಪಿ ಭೇದಸ್ಯ ತೇನೈವೇದಾನೀಂ ಗೃಹೀತತ್ವೇನ ಚಿದೈಕ್ಯಸ್ಯಾಪಿ ಪ್ರಾತಿಭಾಸಿಕತ್ವಾಪರಿಹಾರಾದಿತ್ಯಪಿ ದ್ರಷ್ಟವ್ಯಮ್ । ಇದಂ ಚ ಪುನರಿತಿ ಗ್ರಂಥಕಾರ ಏವಸೂಚಯಿಷ್ಯತಿ ॥೮೨೨॥

**ವಿವರಣೆ–** ವಿಶಿಷ್ಟಭೇದವು ವಿಶಿಷ್ಟೈಕ್ಯವನ್ನು ಮಾತ್ರ ಬಾಧಿಸುತ್ತದೆಯೇ ಹೊರತು ಚಿತ್‌ಗಳ ಐಕ್ಯವನ್ನು ಬಾಧಿಸುವುದಿಲ್ಲ ಎಂದಾದರೆ ಚಿತ್‌ಗಳ ಐಕ್ಯವು ಚಿತ್‌ಗಳ ಭೇದವನ್ನೇ ಬಾಧಿಸುತ್ತದೆ, ವಿಶಿಷ್ಟಗಳ ಭೇದವನ್ನು ಬಾಧಿಸುವುದಿಲ್ಲ ಎಂದಾಗುವುದರಿಂದ ತತ್ತ್ವಮಸಿ ವಾಕ್ಯವು ಹೇಳುವ ವಿಶಿಷ್ಟ ಭೇದವು ಅಬಾಧಿತವೆಂದೇ ಆಗುತ್ತದೆ. ಈ ದೂಷಣವನ್ನು ಅಂಗೀಕಾರ ವಾದದಿಂದ ಹೇಳಿದ್ದಾಗಿದೆ. ವಸ್ತು ಸ್ಥಿತಿಯಲ್ಲಿ ಜೀವೇಶ್ವರ ರೂಪವಾದ ವಿಶಿಷ್ಟಗಳಿಗೆ ಸಾಕ್ಷಿಯೇ ದುಃಖವನ್ನು ಅನುಭವಿಸದ ಚೈತನ್ಯವು ಅದಕ್ಕೆ ವಿರುದ್ಧವಾದ ಸ್ವಭಾವವುಳ್ಳ ಜೀವಚೈತನ್ಯವಲ್ಲ ಎಂದು ಚಿತ್‌ಗಳಿಗೆ ಭೇದವನ್ನು ಈಗಲೇ ಗ್ರಹಿಸುವುದರಿಂದ ಚಿದೈಕ್ಯಕ್ಕೆ ಪ್ರಾತಿಭಾಸಿಕತ್ವವು ಅಪರಿಹಾರ್ಯವಾಗುತ್ತದೆ ಎಂದು ಇಟ್ಟುಕೊಳ್ಳಬೇಕು. ಇದನ್ನು ಗ್ರಂಥಕಾರರೇ ಮುಂದಿನ ಶ್ಲೋಕದಲ್ಲಿ ಸೂಚನೆ ಮಾಡುತ್ತಾರೆ.

ವಿಶಿಷ್ಟೈಕ್ಯಪರಂ ವಾಕ್ಯಂ ಪ್ರಾತಿಭಾಸಿಕಮಾನತಾಮ್ ।
ಗತಂ ಚಿತೋರೇಕತಾ ತನ್ಮಾನಾಭಾವಾದಸತ್ಯಭೂತ್ ॥ ೮೨೩ ॥

**ಅರ್ಥ–** ವಿಶಿಷ್ಟೈಕ್ಯಪರಂ ವಾಕ್ಯಂ= ವಿಶಿಷ್ಟಗಳಿಗೆ ಐಕ್ಯವನ್ನು ಹೇಳುವ ವಾಕ್ಯವು, ಪ್ರಾತಿಭಾಸಿಕ ಮಾನತಾಂ= ಪ್ರಾತಿಭಾಸಿಕ ಪ್ರಾಮಾಣ್ಯವನ್ನು, ಗತಂ= ಹೊಂದಿತು, ತತ್= ಆದ್ದರಿಂದ, ಮಾನಾಭಾವಾತ್= ಪ್ರಮಾಣವೇ ಇಲ್ಲದಿರುವುದರಿಂದ, ಚಿತೋರೇಕತಾ= ಚಿತ್‌ಗಳ ಏಕತ್ವವು, ಅಸತೀ ಅಭೂತ್= ಅಸತ್ಯವೇ ಆಯಿತು.

**ಅನುವಾದ–** ವಿಶಿಷ್ಟೈಕ್ಯವನ್ನು ಹೇಳುವ ವಾಕ್ಯವು ಪ್ರಾತಿಭಾಸಿಕ ಪ್ರಾಮಾಣ್ಯವನ್ನು ಹೊಂದಿದ್ದರಿಂದ ಚಿದೈಕ್ಯವನ್ನು ಹೇಳುವ ಪ್ರಮಾಣವೇ ಇಲ್ಲವೆಂದಾಯಿತು. ಆದ್ದರಿಂದ ಚಿದೈಕ್ಯವು ಅಸತ್ಯವೇ ಆಯಿತು.

**ಭಾವವಿಲಾಸಿನೀ–** ಕಿಂಚ ಚಿತೋರೈಕ್ಯಮಪಿ ವಿಶಿಷ್ಟಯೋರೈಕ್ಯಪ್ರತಿಪಾದಕವಾಕ್ಯಬಲಾದೇವ ಪರೇಣ ವಕ್ತವ್ಯಮ್ । ತಚ್ಚೋಕ್ತವಿಧಯಾ ಪ್ರಾತಿಭಾಸಿಕಪ್ರಮಾಣತಯಾ ಅಕಿಂಚಿತ್ಕರಮಭೂತ್ । ಅತಸ್ತ್ವದಭಿಮತಚಿದೈಕ್ಯಮೇವ ಪ್ರಮಾಣಾಭಾವಾತ್ ಶಶಶೃಂಗೋಪಮಮಭೂದಿತ್ಯಾಹ – **ವಿಶಿಷ್ಟೈಕ್ಯೇತಿ** ॥ ತತ್ತಸ್ಮಾತ್ ॥ ೮೨೩ ॥

**ವಿವರಣೆ–** ಮಾಯಾವಾದಿಗಳು ವಿಶಿಷ್ಟ ಚೈತನ್ಯಗಳಿಗೆ ಐಕ್ಯವನ್ನು ಹೇಳುವ ವಾಕ್ಯದಿಂದಲೇ ಶುದ್ಧ ಚೈತನ್ಯಗಳಿಗೂ ಐಕ್ಯವನ್ನು ಹೇಳಬೇಕು. ವಿಶಿಷ್ಟಚೈತನ್ಯಗಳಿಗೆ ಐಕ್ಯವನ್ನು ಹೇಳುವ ವಾಕ್ಯಗಳಾದರೂ ಪ್ರಾತಿಭಾಸಿಕ ಪ್ರಮಾಣವಾಗಿ ನಿಷ್ಪ್ರಯೋಜನವಾಯಿತು. ಆದ್ದರಿಂದ ಚಿದೈಕ್ಯವಿಷಯದಲ್ಲಿ ಪ್ರಮಾಣವೇ ಇಲ್ಲವಾದ್ದರಿಂದ ಚಿದೈಕ್ಯವು ಶಶಶೃಂಗದಂತೆ ಅಪ್ರಾಮಾಣಿಕವಾಯಿತು ಎಂದು ಅಭಿಪ್ರಾಯ.

**ಅತತ್ತ್ವಾವೇದಕಂ ವಾಕ್ಯಮುಪೇಕ್ಷ್ಯಂ ಭೇದವಾಕ್ಯವತ್ ।**
**ಕಃ ಶುಕ್ತಿರೂಪ್ಯತಾವಾಕ್ಯಮುದ್ದಿಧೀರ್ಷತಿ ಶುದ್ಧಧೀಃ ॥ ೮೨೪ ॥**

**ಅರ್ಥ–** ಅತತ್ತ್ವಾವೇದಕಂ ವಾಕ್ಯಂ= ಅತತ್ತ್ವಾವೇದಕವಾದ ವಾಕ್ಯವು, ಭೇದವಾಕ್ಯವತ್= ಭೇದವಾಕ್ಯದಂತೆ, ಉಪೇಕ್ಷ್ಯಂ= ಉಪೇಕ್ಷಿಸಲ್ಪಡಬೇಕು, ಶುಕ್ತಿರೂಪ್ಯತಾ ವಾಕ್ಯಂ= ಶುಕ್ತಿಗೆ ರೂಪ್ಯಾಭೇದವನ್ನು ಹೇಳುವ ವಾಕ್ಯವನ್ನು, ಶುದ್ಧಧೀಃ= ಶುದ್ಧಬುದ್ಧಿಯುಳ್ಳ, ಕಃ= ಯಾವನು, ಉದ್ದಿಧೀರ್ಷತಿ= ಉದ್ಧಾರ ಮಾಡುತ್ತಾನೆ? (ಅದಕ್ಕೆ ಪ್ರಾಮಾಣ್ಯ ರಕ್ಷಣೆಯನ್ನು ಮಾಡುತ್ತಾನೆ)

**ಅನುವಾದ–** ಅತತ್ತ್ವಾವೇದಕವಾಕ್ಯವಾದರೂ ಭೇದವಾಕ್ಯದಂತೆ ಉಪೇಕ್ಷಿಸಲ್ಪಡಬೇಕು. ಶುದ್ಧ ಬುದ್ಧಿಯುಳ್ಳ ಯಾವನು ತಾನೇ ಶುಕ್ತಿಗೆ ರೂಪ್ಯಾಭೇದವನ್ನು ಹೇಳುವ ವಾಕ್ಯವನ್ನು ಉದ್ಧಾರ ಮಾಡಿ ಅದಕ್ಕೆ ಪ್ರಾಮಾಣ್ಯವನ್ನು ಹೇಳಿ ರಕ್ಷಿಸುತ್ತಾನೆ?

**ಭಾವವಿಲಾಸಿನೀ–** ನ ಚ ವಾಚ್ಯಂ ವಾಕ್ಯಸ್ವಾರಸ್ಯಲಬ್ಧಾರ್ಥಮಾದಾಯ ಅತತ್ತ್ವಾವೇದಕಮಪಿ ತದೈಕ್ಯವಾಕ್ಯಂ ಕಥಂಚಿತ್ಪ್ರಾಮಾಣ್ಯಸ್ಯ ರಕ್ಷಣಾಯಾರ್ಥಾಂತರೇ ನೇತವ್ಯಮಿತಿ । ಅತತ್ತ್ವಾವೇದಕ ಭೇದವಾಕ್ಯಾ ಪ್ರಾಮಾಣ್ಯಾಂಗೀಕಾರವತ್ ಗತಿಸಾಮಾನ್ಯಾದಿತಿ ಸೂತ್ರನ್ಯಾಯೇನ ವೇದಮಾತ್ರೇಽಪ್ಯೇಕವಾಕ್ಯತ್ವರಕ್ಷಣಾಯಾತತ್ತ್ವಾವೇದಕೇ ತದೈಕ್ಯವಾಕ್ಯೇಽಪ್ಯಪ್ರಾಮಾಣ್ಯಸ್ಯೈವಾಂಗೀಕರ್ತುಮುಚಿತತ್ವಾದಿತ್ಯಾಹ – **ಅತತ್ತ್ವಾವೇದಕಮಿತಿ** ॥ ಅಭ್ಯುಪಗಮ್ಯ ಭೇದವಾಕ್ಯವದಿತ್ಯುಕ್ತಮ್ । ವಸ್ತುಗತ್ಯಾ ಮಾಯಿಮತೇಽಪಿ ವ್ಯಾವಹಾರಿಕಪ್ರಮಾಣತ-

ಯಾಽಂಗೀಕೃತಭೇದವಾಕ್ಯ ಸಾಮಾನ್ಯಮುಕ್ತವಿಧಯಾ ಪ್ರಾತಿಭಾಸಿಕಪ್ರಮಾಣತ್ವೇನಾಂಗೀಕೃತೈಕ್ಯವಾಕ್ಯಸ್ಯ ನ ವಕ್ತುಮುಚಿತಂ ಕಿಂತು ತಾದೃಶಮೇವ ವಾಕ್ಯಂ ವಾಚ್ಯಮ್ । ತಚ್ಚ ನಾಸ್ತೀತ್ಯಾಶಯೇನಾಹ – ಕ ಇತಿ ॥ ಅನೇನ ಪ್ರಾತಿಭಾಸಿಕಾರ್ಥಪ್ರತಿಪಾದಕೇ ಭವದ್ವಾಕ್ಯೇ ಪ್ರಾಮಾಣ್ಯಸ್ಯೈವಾಭಾವಾತ್ ಕಸ್ಯ ರಕ್ಷಣಾರ್ಥಮರ್ಥಾಂತರಾನುಸರಣಮಿತ್ಯಪಿ ಸೂಚಿತಮ್ ॥ ೮೨೪ ॥

**ವಿವರಣೆ–** ವಾಕ್ಯಸ್ವಾರಸ್ಯಲಭ್ಯವಾದ ಅರ್ಥದ ದೃಷ್ಟಿಯಿಂದ ವಾಕ್ಯವು ಅತತ್ತ್ವಾವೇದಕವಾದರೂ ಆ ವಿಶಿಷ್ಟೈಕ್ಯವನ್ನು ಹೇಳುವ ವಾಕ್ಯಕ್ಕೆ ಹೇಗಾದರೂ ಮಾಡಿ ಪ್ರಾಮಾಣ್ಯವನ್ನು ರಕ್ಷಣೆ ಮಾಡಬೇಕಾದ್ದರಿಂದ ಅದನ್ನು ಅರ್ಥಾಂತರದಲ್ಲಿ ತೆಗೆದುಕೊಂಡು ಹೋಗಬೇಕು ಎಂಬ ಶಂಕೆಗೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. ಅತತ್ತ್ವಾವೇದಕವಾದ ಭೇದವಾಕ್ಯಕ್ಕೆ ಅಪ್ರಾಮಾಣ್ಯವನ್ನು ಅಂಗೀಕರಿಸಿದಂತೆ ಗತಿಸಾಮಾನ್ಯ ಸೂತ್ರದ ನ್ಯಾಯದಂತೆ ಎಲ್ಲ ವೇದಗಳಿಗೂ ಏಕವಾಕ್ಯತ್ವವನ್ನು ರಕ್ಷಣೆ ಮಾಡಲು ಅತತ್ತ್ವಾವೇದಕವಾದ ಐಕ್ಯವಾಕ್ಯಕ್ಕೆ ಅಪ್ರಾಮಾಣ್ಯವನ್ನು ಅಂಗೀಕರಿಸುವುದು ಉಚಿತವಾಗಿದೆ ಎಂದು ಇಲ್ಲಿ ಹೇಳುತ್ತಾರೆ. ಭೇದವಾಕ್ಯಕ್ಕೆ ಅಪ್ರಾಮಾಣ್ಯವನ್ನು ಅಂಗೀಕರಿಸಿದಂತೆ ಎಂಬುದು ಅಭ್ಯುಪಗಮವಾದ. ಏಕೆಂದರೆ ಮಾಯಿ ಮತದಲ್ಲಿ ಭೇದವು ವ್ಯಾವಹಾರಿಕ. ಆದ್ದರಿಂದ ಭೇದವನ್ನು ಹೇಳುವ ಪ್ರಾಮಾಣವು ವ್ಯಾವಹಾರಿಕ ಪ್ರಮಾಣ. ಐಕ್ಯವಾದರೂ ಈಗಲೇ ಬಾಧಿತವಾಗುವುದರಿಂದ ಅದು ಪ್ರಾತಿಭಾಸಿಕ. ಆದ್ದರಿಂದ ಐಕ್ಯವನ್ನು ಹೇಳುವ ಪ್ರಮಾಣವು ಪ್ರಾತಿಭಾಸಿಕ ಪ್ರಮಾಣ. ಆದ್ದರಿಂದ ಭೇದವಾಕ್ಯದ ದೃಷ್ಟಾಂತವನ್ನು ಕೊಡಬೇಕಾದರೆ ವ್ಯಾವಹಾರಿಕ ಐಕ್ಯವನ್ನು ಹೇಳುವ ಇನ್ನೊಂದು ಐಕ್ಯವಾಕ್ಯಕ್ಕೆ ಕೊಡಬೇಕು. ಆದರೆ ಅಂತಹ ಐಕ್ಯವಾಕ್ಯವು ಇಲ್ಲ. ಆದ್ದರಿಂದ ಭೇದವಾಕ್ಯಕ್ಕೂ ಮತ್ತು ಐಕ್ಯವಾಕ್ಯಕ್ಕೂ ಸಮಾನತೆಯೇ ಇಲ್ಲ ಎಂದು ಸೂಚಿಸುತ್ತಾರೆ.

ನ ಚೇದ್ ಭೇದಪ್ರಮಾಣಂ ಚ ದೃಷ್ಟೇಽರ್ಥೇ ವ್ಯಾವಹಾರಿಕೇ ।
ಜೀವಬ್ರಹ್ಮಚಿತೋರೇವ ಭೇದಂ ಲಕ್ಷಣಯಾ ವದೇತ್ ॥ ೮೨೫ ॥

**ಅರ್ಥ–** ನ ಚೇತ್= ವಾಕ್ಯಕ್ಕೆ ಸರ್ವಥಾ ಅಪ್ರಾಮಾಣ್ಯವನ್ನು ಹೇಳಬಾರದು ಎಂದಾದರೆ, ಭೇದಪ್ರಮಾಣಂ= ವಿಶಿಷ್ಟಗಳಿಗೆ ಭೇದವನ್ನು ಹೇಳುವ ಪ್ರಮಾಣವು, ದೃಷ್ಟೇರ್ಥೇ= ಸ್ವಾರಸ್ಯಲಭ್ಯವಾದ ಅರ್ಥವಾದ ವಿಶಿಷ್ಟಭೇದವು, ವ್ಯಾವಹಾರಿಕೇ= ವ್ಯಾವಹಾರಿಕವಾಗುತ್ತಿರಲು, ಲಕ್ಷಣಯಾ= ಲಕ್ಷಣಾವೃತ್ತಿಯಿಂದ, ಜೀವಬ್ರಹ್ಮಚಿತೋಃ= ಜೀವಬ್ರಹ್ಮಚೈತನ್ಯಗಳಿಗೆ, ಭೇದಮೇವ= ಭೇದವನ್ನೇ, ವದೇತ್= ಹೇಳಬೇಕಾಗುತ್ತದೆ.

**ಅನುವಾದ–** ವೇದವಾಕ್ಯಕ್ಕೆ ಸರ್ವಥಾ ಪ್ರಾಮಾಣ್ಯವನ್ನು ರಕ್ಷಣೆ ಮಾಡಬೇಕೆಂದಾದರೆ ವಿಶಿಷ್ಟ ಚೈತನ್ಯಗಳಿಗೆ ಭೇದವನ್ನು ಹೇಳುವ ಪ್ರಮಾಣದ ಅರ್ಥವು ವ್ಯಾವಹಾರಿಕವಾದರೆ ಆ ವಾಕ್ಯವು ಲಕ್ಷಣಾವೃತ್ತಿಯಿಂದ ಜೀವಬ್ರಹ್ಮಚೈತನ್ಯಗಳಿಗೇ ಭೇದವನ್ನೇ ಹೇಳುತ್ತದೆ ಎಂದು ಅಂಗೀಕರಿಸಬೇಕು.

**ಭಾವವಿಲಾಸಿನೀ**– ಬಾಧಕಾಂತರಂ ಚಾಹ – ನ **ಚೇದಿತಿ** ॥ ನ ಚೇದ್ವೇದವಾಕ್ಯೇ ಸರ್ವಥಾ ಅಪ್ರಮಾಣ್ಯಂ ನ ವಕ್ತವ್ಯಂ ಚೇತ್ । ದೃಷ್ಟೇ ವಾಕ್ಯಸ್ವಾರಸ್ಯತೋ ಲಬ್ಧೇ ಅರ್ಥೇ ವಿಶಿಷ್ಟಯೋರ್ಭೇದೇ । ಅವಶ್ಯಂ ಚೈತದೇವ । ಪ್ರಾತಿಭಾಸಿಕಾರ್ಥವಾಕ್ಯಸ್ಯಾರ್ಥಾಂತರಂ ವದತಾ ವ್ಯಾವಹಾರಿಕಾರ್ಥಕವಾಕ್ಯೇ ಸುತರಾಮರ್ಥಾಂತರಸ್ಯೈವ ವಕ್ತವ್ಯತ್ವಾತ್ ವಿಶಿಷ್ಟೈಕ್ಯವಾಕ್ಯೇ ಚಿದೈಕ್ಯವದ್ವಿಶಿಷ್ಟಭೇದವಾಕ್ಯೇ ಚಿತ್ ಭೇದಸ್ಯೈವ ನ್ಯಾಯಪ್ರಾಪ್ತತ್ವಾಚ್ಚ ॥ ೮೨೫ ॥

**ವಿವರಣೆ**– ಪ್ರಾತಿಭಾಸಿಕಾರ್ಥವನ್ನು ಹೇಳುವ ವಾಕ್ಯಗಳಿಗೆ ಅರ್ಥಾಂತರವನ್ನು ಹೇಳುವಾಗ ವ್ಯಾವಹಾರಿಕ ಅರ್ಥವನ್ನು ಹೇಳುವ ವಾಕ್ಯಗಳಿಗೆ ಸುತರಾಂ ಅರ್ಥಾಂತರವನ್ನು ಹೇಳಬೇಕು. ಆದ್ದರಿಂದ ವಿಶಿಷ್ಟೈಕ್ಯವಾಕ್ಯವು ಲಕ್ಷಣಾವೃತ್ತಿಯಿಂದ ಚಿದೈಕ್ಯವನ್ನು ಹೇಳುತ್ತದೆ ಎಂದು ಹೇಳುವಂತೆ ವಿಶಿಷ್ಟ ಭೇದವಾಕ್ಯವು ಲಕ್ಷಣಾವೃತ್ತಿಯಿಂದ ಜೀವಚೈತನ್ಯ ಮತ್ತು ಬ್ರಹ್ಮಚೈತನ್ಯಗಳಿಗೆ ಭೇದವನ್ನೇ ಹೇಳುತ್ತದೆ ಎಂದು ಅಂಗೀಕರಿಸುವುದೇ ನ್ಯಾಯವಾದುದು.

**ಅತಃ ಪುನಶ್ಚಿದೇಕತ್ವಂ ಪ್ರಾತಿಭಾಸಿಕತಾಂ ಗತಮ್ ।**
**ಏವಂ ಚ ಘಟ್ಟಕುಟ್ಯಾಂ ತೇ ಪ್ರಭಾತೋಽಭೂನ್ನ ಸಂಶಯಃ ॥ ೮೨೬ ॥**

**ಅರ್ಥ**– ಅತಃ= ಆದ್ದರಿಂದ, ಚಿದೇಕತ್ವಂ= ಚಿದೇಕತ್ವವು, ಪುನಃ= ಮತ್ತೆ, ಪ್ರಾತಿಭಾಸಿಕತಾಂ= ಪ್ರಾತಿಭಾಸಿಕತ್ವವನ್ನೇ, ಗತಂ= ಹೊಂದಿತು, ಏವಂ ಚ= ಹೀಗೆ, ತೇ= ನಿನಗೆ, ಘಟ್ಟಕುಟ್ಯಾಂ= ಸುಂಕದಕಟ್ಟೆಯಲ್ಲಿಯೇ, ಪ್ರಭಾತಃ ಅಭೂತ್= ಪ್ರಾತಃಕಾಲವಾಯಿತು, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ.

**ಅನುವಾದ**– ಆದ್ದರಿಂದ ಪುನಃ ಚಿದೈಕ್ಯವು ಪ್ರಾತಿಭಾಸಿಕವೇ ಆಯಿತು. ಹೀಗಾಗಿ ನಿನಗೆ ಸುಂಕದ ಕಟ್ಟೆಯಲ್ಲಿಯೇ ಪ್ರಾತಃಕಾಲವಾಯಿತು. ಈ ವಿಷಯದಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ**– ಅತಃ ಅತೃತ್ವಾನತೃತ್ವಾಖ್ಯಯುಕ್ತಿಸಹಿತಚಿದ್ಭೇದಗ್ರಾಹಿಭೇದವಾಕ್ಯೇನಾಪಿ-ಚಿದೈಕ್ಯಸ್ಯ ಬಾಧಿತತ್ವಾತ್ । ಅತ ಏವ ಪುನಃ ಶಬ್ದಃ ॥ ೮೨೬ ॥

**ವಿವರಣೆ**– ಮೊದಲು 821ನೆಯ ಶ್ಲೋಕದಲ್ಲಿ ಸೂಚಿಸಿದ್ದ ದೋಷವನ್ನೇ ಇಲ್ಲಿ ಹೇಳುತ್ತಾರೆ. ಅತೃತ್ವ ಅನತೃತ್ವ ರೂಪವಾದ ಯುಕ್ತಿಸಹಿತವಾದ ಭೇದಗ್ರಾಹಕವಾಕ್ಯದಿಂದ ಚಿದೈಕ್ಯವು ಬಾಧಿತವಾಗುವುದರಿಂದ ಚಿದೈಕ್ಯವು ಪುನಃ ಪ್ರಾತಿಭಾಸಿಕವಾಯಿತು ಎಂದು ಅಭಿಪ್ರಾಯ.

ವಸ್ತುತಸ್ತು ಚಿತೋರೇವ ವಿಶೇಷಣಬಲಾತ್ ತಯೋಃ ।
ಭಿದಾ ಸಂಪಾದ್ಯತೇ ತೇನ ಚೋದ್ಯಸ್ಯಾವಸರೋಽಪಿ ನ ॥ ೮೨೭ ॥

**ಅರ್ಥ–** ವಸ್ತುತಸ್ತು= ವಸ್ತು ಸ್ಥಿತಿಯಲ್ಲಿ, ತಯೋಃ ಚಿತೋರೇವ= ಆ ಚೈತನ್ಯಗಳಿಗೆ, ವಿಶೇಷಣ ಬಲಾತ್= ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವರೂಪವಾದ ವಿಶೇಷಣಗಳ ಬಲದಿಂದ, ಭಿದಾ= ಭೇದವು, ಸಂಪಾದ್ಯತೇ= ಚೆನ್ನಾಗಿ ತಿಳಿಯಲ್ಪಡುತ್ತದೆ, ತೇನ= ಆ ಕಾರಣದಿಂದ, ಚೋದ್ಯಸ್ಯ= ವಿಶಿಷ್ಟ ಭೇದಪ್ರತಿಪಾದಕವಾದ ವಾಕ್ಯವು ಚಿದೈಕ್ಯಕ್ಕೆ ಬಾಧಕವಲ್ಲ ಎಂಬ ಆಕ್ಷೇಪಕ್ಕೆ, ಅಪಸರೋಽಪಿ= ಅವಕಾಶವೇ, ನ= ಇಲ್ಲ.

**ಅನುವಾದ–** ವಸ್ತುಸ್ಥಿತಿಯಲ್ಲಿ ಆ ಎರಡು ಚೇತನಗಳಿಗೆ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವ ರೂಪವಾದ ವಿಶೇಷಣ ಬಲದಿಂದ ಮೊದಲಿದ್ದ ಭೇದವೇ ಚೆನ್ನಾಗಿ ತಿಳಿಯಲ್ಪಡುತ್ತದೆ. ಆದ್ದರಿಂದ ವಿಶಿಷ್ಟಭೇದ ಪ್ರತಿಪಾದಕವಾದ ವಾಕ್ಯವು ಚಿದೈಕ್ಯಕ್ಕೆ ಬಾಧಕವಲ್ಲ ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ.

**ಭಾವವಿಲಾಸಿನೀ–** ಅಂಗೀಕೃತ್ಯ ವಿಶಿಷ್ಟಭೇದಬೋಧಕವಾಕ್ಯಾಲ್ಲಕ್ಷಣಯಾ ಚಿದ್ಭೇದಸಿದ್ಧಿರಿತ್ಯುಕ್ತಮ್ । ವಸ್ತುಗತ್ಯಾ ವಿಶಿಷ್ಟಭೇದಕಥನಸಮಯ ಏವ ವಿಶೇಷ್ಯಭೂತಚಿತೋರಪಿ ಭೇದಃ ಸಿಧ್ಯತೀತ್ಯಾಹ – **ವಸ್ತುತ** ಇತಿ ॥ ಸಂಪಾದ್ಯತೇ ಸಮ್ಯಕ್ ಜ್ಞಾಯತೇ । ಗತ್ಯರ್ಥಾನಾಂ ಜ್ಞಾನಾರ್ಥತ್ವಾತ್ ಸರ್ವಜ್ಞತ್ವಾಲ್ಪಜ್ಞತ್ವರೂಪವಿರುದ್ಧವಿಶೇಷಣಾಭ್ಯಾಂ ಪ್ರಾಕ್ ವಿದ್ಯಮಾನ ಏವ ಚಿದ್ಭೇದೋ ಬೋಧ್ಯತೇ । ನತ್ವಪೂರ್ವಃ ಕ್ರಿಯತೇ ಗೋತ್ವಾಶ್ವತ್ವಯೋರಿವ ಏಕಸ್ಮಿಂಧರ್ಮಿಣಿ ಏಕದೈವ ಸಂಬಂಧಾಯೋಗ್ಯಯೋರ್ವಿರುದ್ಧ ವಿಶೇಷಣಯೋಃ ಸಂಬಂಧಸ್ಫುಟನಾಯೈವ ಪ್ರಾಕ್ ಭೇದಸ್ಯಾಪೇಕ್ಷಿತತ್ವಾತ್ । ಅತಃ ಕಥಂ ವಿರುದ್ಧವಿಶೇಷಣಸಂಬಂಧಾತ್ ಪ್ರಾಗವಿದ್ಯಮಾನ ಚಿದ್ಭೇದಕರಣಮ್ । ಕಿಂತು ವಿರುದ್ಧವಿಶೇಷಣಸಂಬಂಧಾತ್ ಪೂರ್ವಮೇವ ಸಹಾನವಸ್ಥಿತಯೋಸ್ತಯೋಃ ಪೃಥಕ್ ಪೃಥಕ್ ಸಹಾನವಸ್ಥಾನಾಯ ಕೇವಲಚಿತ್ಯೇವ ಪಾರ್ಥಕ್ಯಂ ಚ ವಕ್ತವ್ಯಮ್ । ಅನ್ಯಥಾ ಅನ್ಯೋನ್ಯಾಶ್ರಯ ಪ್ರಸಂಗಃ । ನ ಚ ವಾಚ್ಯಮೇಕೇನೈವ ಘಟಾದ್ಯುಪಾಧಿನಾ ಯತ್ರ ಭೇದಃ ಸಂಪಾದ್ಯತೇ ತತ್ರೋಕ್ತವಿರೋಧಾಭಾವಾತ್ ಭೇದಃ ಕರ್ತುಂ ಶಕ್ಯತ ಇತಿ । ತತ್ರಾಪ್ಯಾಕಾಶೈಕದೇಶಸಂಬದ್ಧೇನ ಘಟೇನ ಸ್ವಾಸಂಬಂಧಿಪ್ರದೇಶಾಂತರಾತ್ ಖಲು ಭೇದಃ ಸಂಪಾದನೀಯಃ । ತಥಾ ಚೋಪಾಧಿಸಂಬಂಧವತ್ತ್ವಾಸಂಬಂಧವತ್ತ್ವಾಖ್ಯ ವಿರುದ್ಧವಿಶೇಷಣದ್ವಯಾದೇವ ಭೇದಜ್ಞಾಪನೇನಾಸ್ಯಾಪಿ ಪಕ್ಷಸ್ಯ ಪ್ರಾಚೀನಪಕ್ಷಸಮತ್ವಾದೇಕದೇಶತ್ವಸ್ಯಾಪಿ ಭೇದಸಾಪೇಕ್ಷತ್ವಾಚ್ಚೇತಿ ಭಾವಃ । ತೇನ ಕಾರಣೇನ । ಚೋದ್ಯಸ್ಯ ವಿಶಿಷ್ಟಭೇದಪ್ರತಿಪಾದಕವಾಕ್ಯಂ ಚಿದೈಕ್ಯಸ್ಯ ನ ಬಾಧಕಮಿತಿ ಚೋದ್ಯಸ್ಯ ॥ ೮೨೭ ॥

**ವಿವರಣೆ–** ವಿಶಿಷ್ಟಭೇದಬೋಧಕವಾದ ವಾಕ್ಯದಿಂದ ಲಕ್ಷಣಾವೃತ್ತಿಯಿಂದ ಚೈತನ್ಯಭೇದವು ಸಿದ್ಧವಾಗುತ್ತದೆ ಎಂದು ಹೇಳಿದುದು ಅಂಗೀಕೃತ್ಯವಾದ ಮಾತ್ರ. ನಿಜವಾಗಿ ವಿಶಿಷ್ಟ ಭೇದವನ್ನು ಹೇಳುವ ಸಮಯದಲ್ಲಿಯೇ ವಿಶೇಷ್ಯವಾದ ಚೈತನ್ಯಗಳಿಗೂ ಭೇದವು ಸಿದ್ಧವಾಗುತ್ತದೆ ಎಂದು ಇಲ್ಲಿ ಹೇಳುತ್ತಾರೆ. ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವ ರೂಪವಾದ ವಿರುದ್ಧ ವಿಶೇಷಣಗಳಿಂದ ಮೊದಲಿದ್ದ ಭೇದವೇ ಜ್ಞಾಪಿಸಲ್ಪಡುತ್ತದೆಯೇ ಹೊರತು

ಹೊಸದಾಗಿ ಭೇದವು ಉತ್ಪಾದಿಸಲ್ಪಡುವುದಿಲ್ಲ. ಏಕೆಂದರೆ ಒಂದೇ ಧರ್ಮಿಯಲ್ಲಿ ಒಂದೇ ಸಮಯದಲ್ಲಿ ಸಂಬಂಧವನ್ನು ಹೊಂದಲು ಸಾಧ್ಯವಿಲ್ಲದಂತಹ ಗೋತ್ವ, ಅಶ್ವತ್ವಗಳಂತೆ ವಿರುದ್ಧ ವಿಶೇಷಣಗಳ ಸಂಬಂಧವನ್ನು ಘಟನೆ ಮಾಡುವುದಕ್ಕಾಗಿ ಮೊದಲೇ ಭೇದವು ಅಪೇಕ್ಷಿತವಾಗಿರುತ್ತದೆ. ಆದ್ದರಿಂದ ವಿರುದ್ಧ ವಿಶೇಷಣಗಳ ಸಂಬಂಧದಿಂದ ಮೊದಲು ಇಲ್ಲದೇ ಇರುವ ಭೇದವು ಉತ್ಪತ್ತಿಯಾಗುತ್ತದೆ ಎಂಬುದು ಯುಕ್ತವಲ್ಲ. ಆದರೆ ವಿರುದ್ಧ ವಿಶೇಷಣಗಳ ಸಂಬಂಧಕ್ಕಿಂತ ಮೊದಲೇ ಸಹಾನವಸ್ಥಾನ ರೂಪವಾದ ವಿರೋಧವುಳ್ಳ ಆ ಎರಡು ಚೇತನಗಳಿಗೆ ಪೃಥಕ್ ಪೃಥಕ್ ಅವಸ್ಥಾನವನ್ನು ಘಟನೆ ಮಾಡಲು ಚೈತನ್ಯದಲ್ಲಿಯೇ ಮೊದಲೇ ಭೇದವನ್ನು ಅಂಗೀಕಾರ ಮಾಡಬೇಕು. ಇಲ್ಲದಿದ್ದರೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ವಿರುದ್ಧವಿಶೇಷಣಗಳು ಸಿದ್ಧವಾದರೆ ಆದರಿಂದ ಭೇದದ ಸಿದ್ಧಿಯಾಗುತ್ತದೆ. ಭೇದದ ಸಿದ್ಧಿಯಾದರೆ ಸಹಾನವಸ್ಥಾನ ವಿರೋಧವು ಉಪಪನ್ನವಾಗುವುದರಿಂದ ವಿರುದ್ಧ ವಿಶೇಷಣಗಳು ಸಿದ್ಧವಾಗುತ್ತವೆ ಎಂದು ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಹಾಗಾದರೆ ಎಲ್ಲಿ ಒಂದೇ ಘಟಾದಿ ಉಪಾಧಿಯು ಭೇದವನ್ನು ಉಂಟುಮಾಡುತ್ತದೆಯೋ ಅಲ್ಲಿ ಸಹಾನವಸ್ಥಾನ ವಿರೋಧದ ಪ್ರಸಕ್ತಿಯು ಇಲ್ಲದಿರುವುದರಿಂದ ಭೇದವು ಉತ್ಪತ್ತಿಯಾಗುತ್ತದೆ ಎಂದು ಹೇಳಬಹುದಲ್ಲವೇ ಎಂಬ ಶಂಕೆಯೂ ಸರಿ ಇಲ್ಲ. ಅಲ್ಲಿಯೂ ಕೂಡ ಆಕಾಶದ ಯಾವ ಅಂಶಕ್ಕೆ ಘಟದ ಸಂಬಂಧವಾಗುತ್ತದೆಯೋ, ಆ ಅಂಶದಲ್ಲಿ ಸಂಬಂಧವಾಗದಿದ್ದ ಆಕಾಶದ ಇತರ ಅಂಶದ ಭೇದವು ಮೊದಲೇ ಇದ್ದಿತು. ಘಟವು ಬಂದಮೇಲೆ ಆ ಭೇದವು ಸ್ಪಷ್ಟವಾಗಿ ಕಾಣುತ್ತದೆ. ಇಲ್ಲದಿದ್ದರೆ ಘಟವು ಸರ್ವಾಕಾಶ ಸಂಬದ್ಧವಾಗಿ ಘಟಾಕಾಶವನ್ನು ಉತ್ಪಾದನೆ ಮಾಡುತ್ತದೆಯೋ ಅಥವಾ ಆಕಾಶೈಕದೇಶ ಸಂಬದ್ಧವಾಗಿ ಘಟಾಕಾಶವನ್ನು ಉತ್ಪಾದನೆ ಮಾಡುತ್ತದೆಯೋ ಎಂಬ ಪ್ರಶ್ನೆಯನ್ನು ಮಾಡಿ ಎರಡು ಕಲ್ಪಗಳಲ್ಲಿಯೂ ಅನವಸ್ಥಾದಿ ದೋಷಗಳನ್ನು ಹೇಳಲು ಬರುವುದರಿಂದ ಅಲ್ಲಿಯೂ ಹಾಗೆ ಶಂಕೆ ಮಾಡಲು ಸಾಧ್ಯವಿಲ್ಲ. ಉಪಾಧಿಯಿಂದ ಅಥವಾ ವಿಶೇಷಣಗಳಿಂದ ಮೊದಲೇ ಇರುವ ಭೇದವೇ ಜ್ಞಾಪಿತವಾಗುತ್ತದೆಯೇ ಹೊರತು ಹೊಸದಾಗಿ ಭೇದವು ಉಂಟು ಮಾಡಲ್ಪಡುವುದಿಲ್ಲ ಎಂದು ಅಭಿಪ್ರಾಯ.

ಅನ್ಯದೌಪಾಧಿಕಂ ಸರ್ವಮುಪಾಧೌ ಸತಿ ಜಾಯತೇ ।
ಉಪಾಧ್ಯಪಗಮೇ ಗಚ್ಛೇತ್ ಭೇದಸ್ತು ನ ತಥಾ ಕಿಲ ॥ ೮೨೮ ॥

**ಅರ್ಥ–** ಅನ್ಯತ್= ಉಳಿದ, ಸರ್ವಂ= ಎಲ್ಲ, ಔಪಾಧಿಕಂ= ಔಪಾಧಿಕವಾದ ವಸ್ತುವು, ಉಪಾಧೌ ಸತಿ= ಉಪಾಧಿ ಇದ್ದರೆ, ಜಾಯತೇ= ಹುಟ್ಟುತ್ತದೆ, ಉಪಾಧ್ಯಪಗಮೇ= ಉಪಾಧಿಯು ನಾಶವಾದರೆ, ಗಚ್ಛೇತ್= ನಾಶವಾಗುತ್ತದೆ, ಭೇದಸ್ತು= ಭೇದವಾದರೂ, ನ ತಥಾ ಕಿಲ= ಹಾಗಲ್ಲವಷ್ಟೆ.

**ಅರ್ಥ–** ವಸ್ತುತಸ್ತು= ವಸ್ತು ಸ್ಥಿತಿಯಲ್ಲಿ, ತಯೋಃ ಚಿತೋರೇವ= ಆ ಚೈತನ್ಯಗಳಿಗೆ, ವಿಶೇಷಣ ಬಲಾತ್= ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವರೂಪವಾದ ವಿಶೇಷಣಗಳ ಬಲದಿಂದ, ಭಿದಾ= ಭೇದವು, ಸಂಪಾದ್ಯತೇ= ಚೆನ್ನಾಗಿ ತಿಳಿಯಲ್ಪಡುತ್ತದೆ, ತೇನ= ಆ ಕಾರಣದಿಂದ, ಚೋದ್ಯಸ್ಯ= ವಿಶಿಷ್ಟ ಭೇದಪ್ರತಿಪಾದಕವಾದ ವಾಕ್ಯವು ಚಿದೈಕ್ಯಕ್ಕೆ ಬಾಧಕವಲ್ಲ ಎಂಬ ಆಕ್ಷೇಪಕ್ಕೆ, ಅಪಸರೋಽಪಿ= ಅವಕಾಶವೇ, ನ= ಇಲ್ಲ.

**ಅನುವಾದ–** ವಸ್ತುಸ್ಥಿತಿಯಲ್ಲಿ ಆ ಎರಡು ಚೇತನಗಳಿಗೆ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವ ರೂಪವಾದ ವಿಶೇಷಣ ಬಲದಿಂದ ಮೊದಲಿದ್ದ ಭೇದವೇ ಚೆನ್ನಾಗಿ ತಿಳಿಯಲ್ಪಡುತ್ತದೆ. ಆದ್ದರಿಂದ ವಿಶಿಷ್ಟಭೇದ ಪ್ರತಿಪಾದಕವಾದ ವಾಕ್ಯವು ಚಿದೈಕ್ಯಕ್ಕೆ ಬಾಧಕವಲ್ಲ ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ.

**ಭಾವವಿಲಾಸಿನೀ–** ಅಂಗೀಕೃತ್ಯ ವಿಶಿಷ್ಟಭೇದಬೋಧಕವಾಕ್ಯಾಲ್ಲಕ್ಷಣಯಾ ಚಿದ್ಭೇದಸಿದ್ಧಿರಿತ್ಯುಕ್ತಮ್ । ವಸ್ತುಗತ್ಯಾ ವಿಶಿಷ್ಟಭೇದಕಥನಸಮಯ ಏವ ವಿಶೇಷ್ಯಭೂತಚಿತೋರಪಿ ಭೇದಃ ಸಿಧ್ಯತೀತ್ಯಾಹ – **ವಸ್ತುತ ಇತಿ** ॥ ಸಂಪಾದ್ಯತೇ ಸಮ್ಯಕ್ ಜ್ಞಾಯತೇ । ಗತ್ಯರ್ಥಾನಾಂ ಜ್ಞಾನಾರ್ಥತ್ವಾತ್ ಸರ್ವಜ್ಞತ್ವಾಲ್ಪಜ್ಞತ್ವರೂಪವಿರುದ್ಧವಿಶೇಷಣಾಭ್ಯಾಂ ಪ್ರಾಕ್ ವಿದ್ಯಮಾನ ಏವ ಚಿದ್ಭೇದೋ ಬೋಧ್ಯತೇ । ನತ್ವಪೂರ್ವಃ ಕ್ರಿಯತೇ ಗೋತ್ವಾಶ್ವತ್ವಯೋರಿವ ಏಕಸ್ಮಿಂಧರ್ಮಿಣಿ ಏಕದೈವ ಸಂಬಂಧಾಯೋಗ್ಯಯೋರ್ವಿರುದ್ಧ ವಿಶೇಷಣಯೋಃ ಸಂಬಂಧಸ್ಫುಟನಾಯೈವ ಪ್ರಾಕ್ ಭೇದಸ್ಯಾಪೇಕ್ಷಿತತ್ವಾತ್ । ಅತಃ ಕಥಂ ವಿರುದ್ಧವಿಶೇಷಣಸಂಬಂಧಾತ್ ಪ್ರಾಗವಿದ್ಯಮಾನ ಚಿದ್ಭೇದಕರಣಮ್ । ಕಿಂತು ವಿರುದ್ಧವಿಶೇಷಣಸಂಬಂಧಾತ್ ಪೂರ್ವಮೇವ ಸಹಾನವಸ್ಥಿತಯೋಸ್ತಯೋಃ ಪೃಥಕ್ ಪೃಥಕ್ ಸಹಾನವಸ್ಥಾನಾಯ ಕೇವಲಚಿತ್ಯೇವ ಪಾರ್ಥಕ್ಯಂ ಚ ವಕ್ತವ್ಯಮ್ । ಅನ್ಯಥಾ ಅನ್ಯೋನ್ಯಾಶ್ರಯ ಪ್ರಸಂಗಃ । ನ ಚ ವಾಚ್ಯಮೇಕೇನೈವ ಘಟಾದ್ಯುಪಾಧಿನಾ ಯತ್ರ ಭೇದಃ ಸಂಪಾದ್ಯತೇ ತತ್ರೋಕ್ತವಿರೋಧಾಭಾವಾತ್ ಭೇದಃ ಕರ್ತುಂ ಶಕ್ಯತ ಇತಿ । ತತ್ರಾಪ್ಯಾಕಾಶೈಕದೇಶಸಂಬದ್ಧೇನ ಘಟೇನ ಸ್ವಾಸಂಬಂಧಿಪ್ರದೇಶಾಂತರಾತ್ ಖಲು ಭೇದಃ ಸಂಪಾದನೀಯಃ । ತಥಾ ಚೋಪಾಧಿಸಂಬಂಧವತ್ತ್ವಾಸಂಬಂಧವತ್ತ್ವಾಖ್ಯ ವಿರುದ್ಧವಿಶೇಷಣದ್ವಯಾದೇವ ಭೇದಜ್ಞಾಪನೇನಾಸ್ಯಾಪಿ ಪಕ್ಷಸ್ಯ ಪ್ರಾಚೀನಪಕ್ಷಸಮತ್ವಾದೇಕದೇಶತ್ವಸ್ಯಾಪಿ ಭೇದಸಾಪೇಕ್ಷತ್ವಾಚ್ಚೇತಿ ಭಾವಃ । ತೇನ ಕಾರಣೇನ । ಚೋದ್ಯಸ್ಯ ವಿಶಿಷ್ಟಭೇದಪ್ರತಿಪಾದಕವಾಕ್ಯಂ ಚಿದೈಕ್ಯಸ್ಯ ನ ಬಾಧಕಮಿತಿ ಚೋದ್ಯಸ್ಯ ॥ ೮೨೭ ॥

**ವಿವರಣೆ–** ವಿಶಿಷ್ಟಭೇದಬೋಧಕವಾದ ವಾಕ್ಯದಿಂದ ಲಕ್ಷಣಾವೃತ್ತಿಯಿಂದ ಚೈತನ್ಯಭೇದವು ಸಿದ್ಧವಾಗುತ್ತದೆ ಎಂದು ಹೇಳಿದುದು ಅಂಗೀಕೃತ್ಯವಾದ ಮಾತ್ರ. ನಿಜವಾಗಿ ವಿಶಿಷ್ಟ ಭೇದವನ್ನು ಹೇಳುವ ಸಮಯದಲ್ಲಿಯೇ ವಿಶೇಷ್ಯವಾದ ಚೈತನ್ಯಗಳಿಗೂ ಭೇದವು ಸಿದ್ಧವಾಗುತ್ತದೆ ಎಂದು ಇಲ್ಲಿ ಹೇಳುತ್ತಾರೆ. ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವ ರೂಪವಾದ ವಿರುದ್ಧ ವಿಶೇಷಣಗಳಿಂದ ಮೊದಲಿದ್ದ ಭೇದವೇ ಜ್ಞಾಪಿಸಲ್ಪಡುತ್ತದೆಯೇ ಹೊರತು

ಹೊಸದಾಗಿ ಭೇದವು ಉತ್ಪಾದಿಸಲ್ಪಡುವುದಿಲ್ಲ. ಏಕೆಂದರೆ ಒಂದೇ ಧರ್ಮಿಯಲ್ಲಿ ಒಂದೇ ಸಮಯದಲ್ಲಿ ಸಂಬಂಧವನ್ನು ಹೊಂದಲು ಸಾಧ್ಯವಿಲ್ಲದಂತಹ ಗೋತ್ವ, ಅಶ್ವತ್ವಗಳಂತೆ ವಿರುದ್ಧ ವಿಶೇಷಣಗಳ ಸಂಬಂಧವನ್ನು ಘಟನೆ ಮಾಡುವುದಕ್ಕಾಗಿ ಮೊದಲೇ ಭೇದವು ಅಪೇಕ್ಷಿತವಾಗಿರುತ್ತದೆ. ಆದ್ದರಿಂದ ವಿರುದ್ಧ ವಿಶೇಷಣಗಳ ಸಂಬಂಧದಿಂದ ಮೊದಲು ಇಲ್ಲದೇ ಇರುವ ಭೇದವು ಉತ್ಪತ್ತಿಯಾಗುತ್ತದೆ ಎಂಬುದು ಯುಕ್ತವಲ್ಲ. ಆದರೆ ವಿರುದ್ಧ ವಿಶೇಷಣಗಳ ಸಂಬಂಧಕ್ಕಿಂತ ಮೊದಲೇ ಸಹಾನವಸ್ಥಾನ ರೂಪವಾದ ವಿರೋಧವುಳ್ಳ ಆ ಎರಡು ಚೇತನಗಳಿಗೆ ಪೃಥಕ್ ಪೃಥಕ್ ಅವಸ್ಥಾನವನ್ನು ಘಟನೆ ಮಾಡಲು ಚೈತನ್ಯದಲ್ಲಿಯೇ ಮೊದಲೇ ಭೇದವನ್ನು ಅಂಗೀಕಾರ ಮಾಡಬೇಕು. ಇಲ್ಲದಿದ್ದರೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ವಿರುದ್ಧವಿಶೇಷಣಗಳು ಸಿದ್ಧವಾದರೆ ಅದರಿಂದ ಭೇದದ ಸಿದ್ಧಿಯಾಗುತ್ತದೆ. ಭೇದದ ಸಿದ್ಧಿಯಾದರೆ ಸಹಾನವಸ್ಥಾನ ವಿರೋಧವು ಉಪಪನ್ನವಾಗುವುದರಿಂದ ವಿರುದ್ಧ ವಿಶೇಷಣಗಳು ಸಿದ್ಧವಾಗುತ್ತವೆ ಎಂದು ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಹಾಗಾದರೆ ಎಲ್ಲಿ ಒಂದೇ ಘಟಾದಿ ಉಪಾಧಿಯು ಭೇದವನ್ನು ಉಂಟುಮಾಡುತ್ತದೆಯೋ ಅಲ್ಲಿ ಸಹಾನವಸ್ಥಾನ ವಿರೋಧದ ಪ್ರಸಕ್ತಿಯು ಇಲ್ಲದಿರುವುದರಿಂದ ಭೇದವು ಉತ್ಪತ್ತಿಯಾಗುತ್ತದೆ ಎಂದು ಹೇಳಬಹುದಲ್ಲವೇ ಎಂಬ ಶಂಕೆಯೂ ಸರಿ ಇಲ್ಲ. ಅಲ್ಲಿಯೂ ಕೂಡ ಆಕಾಶದ ಯಾವ ಅಂಶಕ್ಕೆ ಘಟದ ಸಂಬಂಧವಾಗುತ್ತದೆಯೋ, ಆ ಅಂಶದಲ್ಲಿ ಸಂಬಂಧವಾಗದಿದ್ದ ಆಕಾಶದ ಇತರ ಅಂಶದ ಭೇದವು ಮೊದಲೇ ಇದ್ದಿತು. ಘಟವು ಬಂದಮೇಲೆ ಆ ಭೇದವು ಸ್ಪಷ್ಟವಾಗಿ ಕಾಣುತ್ತದೆ. ಇಲ್ಲದಿದ್ದರೆ ಘಟವು ಸರ್ವಾಕಾಶ ಸಂಬದ್ಧವಾಗಿ ಘಟಾಕಾಶವನ್ನು ಉತ್ಪಾದನೆ ಮಾಡುತ್ತದೆಯೋ ಅಥವಾ ಆಕಾಶೈಕದೇಶ ಸಂಬದ್ಧವಾಗಿ ಘಟಾಕಾಶವನ್ನು ಉತ್ಪಾದನೆ ಮಾಡುತ್ತದೆಯೋ ಎಂಬ ಪ್ರಶ್ನೆಯನ್ನು ಮಾಡಿ ಎರಡು ಕಲ್ಪಗಳಲ್ಲಿಯೂ ಅನವಸ್ಥಾದಿ ದೋಷಗಳನ್ನು ಹೇಳಲು ಬರುವುದರಿಂದ ಅಲ್ಲಿಯೂ ಹಾಗೆ ಶಂಕೆ ಮಾಡಲು ಸಾಧ್ಯವಿಲ್ಲ. ಉಪಾಧಿಯಿಂದ ಅಥವಾ ವಿಶೇಷಣಗಳಿಂದ ಮೊದಲೇ ಇರುವ ಭೇದವೇ ಜ್ಞಾಪಿತವಾಗುತ್ತದೆಯೇ ಹೊರತು ಹೊಸದಾಗಿ ಭೇದವು ಉಂಟು ಮಾಡಲ್ಪಡುವುದಿಲ್ಲ ಎಂದು ಅಭಿಪ್ರಾಯ.

**ಅನ್ಯದೌಪಾಧಿಕಂ ಸರ್ವಮುಪಾಧೌ ಸತಿ ಜಾಯತೇ ।**
**ಉಪಾಧ್ಯಪಗಮೇ ಗಚ್ಛೇತ್ ಭೇದಸ್ತು ನ ತಥಾ ಕಿಲ ॥ ೮೨೮ ॥**

**ಅರ್ಥ–** ಅನ್ಯತ್= ಉಳಿದ, ಸರ್ವಂ= ಎಲ್ಲ, ಔಪಾಧಿಕಂ= ಔಪಾಧಿಕವಾದ ವಸ್ತುವು, ಉಪಾಧೌ ಸತಿ= ಉಪಾಧಿ ಇದ್ದರೆ, ಜಾಯತೇ= ಹುಟ್ಟುತ್ತದೆ, ಉಪಾಧ್ಯಪಗಮೇ= ಉಪಾಧಿಯು ನಾಶವಾದರೆ, ಗಚ್ಛೇತ್= ನಾಶವಾಗುತ್ತದೆ, ಭೇದಸ್ತು= ಭೇದವಾದರೂ, ನ ತಥಾ ಕಿಲ= ಹಾಗಲ್ಲವಷ್ಟೆ.

**ಅನುವಾದ–** ಔಪಾಧಿಕವಾದ ಉಳಿದೆಲ್ಲವೂ ಉಪಾಧಿ ಇದ್ದರೆ ಉತ್ಪತ್ತಿಯಾಗುತ್ತದೆ, ಉಪಾಧಿಯು ನಾಶವಾದರೆ ನಾಶವನ್ನು ಹೊಂದುತ್ತದೆ. ಭೇದವು ಮಾತ್ರ ಹಾಗಲ್ಲವಷ್ಟೆ.

**ಭಾವವಿಲಾಸಿನೀ–** ನನು ಜಪಾಕುಸುಮಾದ್ಯುಪಾಧಿನಾ ಸ್ಫಟಿಕೇ ರಕ್ತಿಮೋತ್ಪತ್ತಿದರ್ಶನಾತ್ ವಿರುದ್ಧಧರ್ಮಾಖ್ಯೋಪಾಧಿನಾ ಭೇದೋತ್ಪತ್ತಿಃ ಕುತೋ ನೇತ್ಯತ ಆಹ – **ಅನ್ಯಾದಿತಿ** ॥ ಗಚ್ಛೇತ್ ನಶ್ಯೇತ್ ॥ ೮೨೮ ॥

**ವಿವರಣೆ–** ಜಪಾಕುಸುಮಸನ್ನಿಧಾನವಿದ್ದರೆ ಸ್ಫಟಿಕದಲ್ಲಿ ರಕ್ತವರ್ಣವು ಉತ್ಪತ್ತಿಯಾಗುತ್ತದೆ. ಜಪಾಕುಸುಮಸನ್ನಿಧಾನವು ಹೊರಟು ಹೋದರೆ ರಕ್ತವರ್ಣವು ನಾಶವಾಗುತ್ತದೆ. ಏಕೆಂದರೆ ರಕ್ತವರ್ಣವು ಉತ್ಪತ್ತಿವಿನಾಶವುಳ್ಳದ್ದು. ಭೇದವು ಮಾತ್ರ ಯಾವದ್‌ದ್ರವ್ಯಭಾವಿಯಾದುದು. ಆದಕ್ಕೆ ಉತ್ಪತ್ತಿ ವಿನಾಶಗಳಿಲ್ಲ. ಆದ್ದರಿಂದ ಉಪಾಧಿಯಿಂದ ಭೇದವು ಜ್ಞಾಪಿಸಲ್ಪಡುತ್ತದೆಯೇ ಹೊರತು ಉತ್ಪಾದಿಸಲ್ಪಡುವುದಿಲ್ಲ ಎಂದು ಅಭಿಪ್ರಾಯ.

ಸ್ವಸಂಬಂಧ್ಯೇಕದೇಶಸ್ಯ ಸ್ವಾಸಂಬಂಧಿಪ್ರದೇಶತಃ ।
ಭೇದಂ ಸ ಕಾಲಯೇತ್ಕಿಂ ಸ್ಯಾದ್ ಘಟಾಭ್ರಾಂತರ್ಘಟಾದ್ ಭಿದಾ ॥ ೮೨೯ ॥

**ಅರ್ಥ–** ಸಃ= ಆ ಘಟಾದಿ ಉಪಾಧಿಯು, ಸ್ವಸಂಬಂಧ್ಯೇಕದೇಶಸ್ಯ= ತನಗೆ ಸಂಬಂಧವಾದ ಏಕದೇಶಕ್ಕೆ, ಸ್ವಾಸಂಬಂಧಿಪ್ರದೇಶತಃ= ತನಗೆ ಸಂಬಂಧವಿಲ್ಲದ ಆಕಾಶ ಪ್ರದೇಶದಿಂದ, ಭೇದಂ= ಇರುವ ಭೇದವನ್ನು, ಕಾಲಯೇತ್= ಜ್ಞಾಪಿಸುತ್ತದೆ, ಘಟಾತ್= ಘಟರೂಪವಾದ ಉಪಾಧಿಯಿಂದ, ಘಟಾಭ್ರಾಂತಃ= ಘಟಾಕಾಶದ ಒಳಗೆ, ಭಿದಾ= ಭೇದವು, ಸ್ಯಾತ್ ಕಿಂ= ಉಂಟಾಗುತ್ತದೆಯೇ?

**ಅನುವಾದ–** ಘಟಾದಿ ಉಪಾಧಿಯೂ ಸಹ ಸ್ವಸಂಬದ್ಧವಾದ ಆಕಾಶದ ಏಕದೇಶದಲ್ಲಿ ಸ್ವಸಂಬದ್ಧವಲ್ಲದ ಆಕಾಶದ ಏಕದೇಶಾಂತರದಿಂದ ಮೊದಲೇ ಇರುವ ಭೇದವನ್ನು ತಿಳಿಸಿಕೊಡುತ್ತದೆ. ಘಟರೂಪವಾದ ಉಪಾಧಿಯಿಂದ ಘಟಾಕಾಶದ ಒಳಗೆ ಭೇದವು ಉಂಟಾಗುತ್ತದೆಯೇ?

**ಭಾವವಿಲಾಸಿನೀ–** ಸಃ ಭೇದೋಪಾಧಿಃ । ಕಾಲಯೇತ್ ಜ್ಞಾಪಯೇತ್ । ಘಟೋಪಾಧೇಃ ಘಟಾಭ್ರಾಂತಃ ಘಟೋದರಸ್ಥಾಕಾಶಾಂತಃ ಭಿದಾ ಕಿಂ ಸ್ಯಾದಿತಿ ಸಂಬಂಧಃ । ಘಟೋಪಾಧೇಃ ಸ್ವಾಸಂಬಂಧಿಪ್ರದೇಶಾಂತರಾದೇವ ಭೇದೋ ಜ್ಞಾಪ್ಯತೇ । ನ ತು ಘಟೋದರಸ್ಥಾಕಾಶಾಂಶಾನಾಮೇವ ಮಿಥೋಭೇದಃ ಪ್ರದರ್ಶ್ಯತೇ ॥ ೮೨೯ ॥

**ವಿವರಣೆ–** ಘಟರೂಪವಾದ ಉಪಾಧಿಯು ತನ್ನ ಸಂಬಂಧವಿಲ್ಲದ ಪ್ರದೇಶಾಂತರದಿಂದ ಭೇದವನ್ನು ತಿಳಿಸಿಕೊಡುತ್ತದೆಯೇ ಹೊರತು ಘಟದ ಒಳಗೆ ಇರುವ ಆಕಾಶಾಂಶಗಳಿಗೆ ಪರಸ್ಪರ ಭೇದವನ್ನು ತಿಳಿಸಿಕೊಡುವುದಿಲ್ಲ. ಏಕೆಂದರೆ ಘಟದ ಒಳಗಿರುವ ಆಕಾಶದ ಪ್ರದೇಶಗಳಿಗೆ ಘಟಸಂಬಂಧವಿಲ್ಲ. ಆದ್ದರಿಂದ ಉಪಾಧಿಯು ಏಕದೇಶಸಂಬದ್ಧವಾಗಿ ಏಕದೇಶಾಂತರದಿಂದ ಭೇದವನ್ನು ಜ್ಞಾಪಿಸಿಕೊಡುತ್ತದೆ ಎಂದೇ ಹೇಳಬೇಕು.

**ಅತಃ ಸ್ವತೋ ವಿಶೇಷಂ ವಾ ಭೇದಂ ವಾ ಭೇದ್ಯವಸ್ತುನಿ ।**
**ಯೋऽಪೇಕ್ಷತೇ ಸ್ವಯೋಗಾಯ ಸ್ವಯಮೇವ ಕಥಂ ಪುನಃ ।**
**ಕುರ್ಯಾದುಪಾಧಿಸ್ತೌ ಪೂರ್ವೌ ನ ಹಿ ಸ ಸ್ವಪಿತುಃ ಪಿತಾ ॥ ೮೩೦ ॥**

**ಅರ್ಥ–**ಅತಃ= ಆದ್ದರಿಂದ, ಭೇದ್ಯವಸ್ತುನಿ= ಭೇದಕ್ಕೆ ಯೋಗ್ಯವಾದ ವಸ್ತುವಿನಲ್ಲಿ, ಸ್ವತಃ= ಸ್ವಯಂ, ವಿಶೇಷಂ ವಾ= ವಿಶೇಷವನ್ನಾಗಲೀ, ಭೇದಂ ವಾ= ಅಥವಾ ಭೇದವನ್ನಾಗಲೀ, ಯಃ= ಯಾವ ಉಪಾಧಿಯು, ಸ್ವಯೋಗಾಯ= ತನ್ನ ಸಂಬಂಧಕ್ಕಾಗಿ, ಅಪೇಕ್ಷತೇ= ಅಪೇಕ್ಷಿಸುತ್ತದೆಯೋ, ಅಂತಹ, ಉಪಾಧಿಃ= ಉಪಾಧಿಯು, ಸ್ವಮೇವ= ತಾನೇ, ಪುನಃ= ಮತ್ತೆ, ಪೂರ್ವೌ= ತನಗಿಂತಲೇ ಮೊದಲು ಇರುವ, ತೌ= ಆ ಭೇದವನ್ನಾಗಲೀ ಅಥವಾ ವಿಶೇಷವನ್ನಾಗಲೀ, ಕಥಂ= ಹೇಗೆ, ಪುನಃ= ಮತ್ತೆ, ಕುರ್ಯಾತ್= ಸೃಷ್ಟಿಮಾಡುತ್ತದೆ? ಸಃ= ಆ ಉಪಾಧಿಯು, ಸ್ವಪಿತುಃ= ತನ್ನ ತಂದೆಯ, ಪಿತಾ ನ ಹಿ= ತಂದೆಯಲ್ಲವಷ್ಟೆ?

**ಅನುವಾದ–** ಆದ್ದರಿಂದ ಯಾವ ಉಪಾಧಿಯು ಭೇದ್ಯವಾದ ವಸ್ತುವಿನಲ್ಲಿ ತನ್ನ ಸಂಬಂಧವನ್ನು ಉಂಟುಮಾಡುವುದಕ್ಕಾಗಿ ಮೊದಲೇ ಇರುವ ಸ್ವಾಭಾವಿಕವಾದ ವಿಶೇಷವನ್ನಾಗಲೀ ಅಥವಾ ಭೇದವನ್ನಾಗಲೀ ಅಪೇಕ್ಷಿಸುತ್ತದೆಯೋ ಅಂತಹ ಉಪಾಧಿಯು ತನಗಿಂತಲೇ ಮೊದಲೇ ಇರುವ ಆ ಭೇದ ಅಥವಾ ವಿಶೇಷಗಳನ್ನು ತಾನೇ ಪುನಃ ಹೇಗೆ ಉಂಟು ಮಾಡುತ್ತದೆ? ಉಪಾಧಿಯು ತನ್ನ ತಂದೆಯ ತಂದೆಯಲ್ಲವಷ್ಟೆ?

**ಭಾವವಿಲಾಸಿನೀ–** ಉಪಾಧೇಃ ಸಂಬಂಧಾಸಂಬಂಧೌ ಚ ಪ್ರಾಗೇವಸ್ಥಿತಭೇದಸಾಪೇಕ್ಷಾವಿತಿ ಕಥಂ ತಸ್ಯ ಕಾರಕಾವಿತ್ಯಾಹ – **ಅತ ಇತಿ** ॥ ಅತಃ ಘಟೋಪಾಧಿನಾ ಘಟಾಭ್ರಮ ಏವಭೇದಸ್ಯಾ-ಜ್ಞಾಪನಾತ್ । ಯಃ ಭೇದಕೋಪಾಧಿಃ । ತೌ ಭೇದವಿಶೇಷೌ । ಸಃ ಉಪಾಧಿಃ ॥ ೮೩೦ ॥

**ವಿವರಣೆ–** ಸ್ವಾಭಾವಿಕ ಭೇದವಿದ್ದರೆ ಮಾತ್ರ ಉಪಾಧಿಸಂಬಂಧವು ಉಂಟಾಗುವುದರಿಂದ ಭೇದವು ಉಪಾಧಿಯ ತಂದೆಯ ಸ್ಥಾನದಲ್ಲಿದೆ. ಉಪಾಧಿಯೇ ಪುನಃ ಭೇದವನ್ನು ಉಂಟು ಮಾಡಿದರೆ ಉಪಾಧಿಯು ತನ್ನ ತಂದೆಗೆ ತಂದೆಯಾಗಬೇಕಾಗುತ್ತದೆ. ಇದು ಅಯುಕ್ತವಾದುದು ಎಂದು ಅಭಿಪ್ರಾಯ.

**ವೃಕ್ಷಾಗ್ರೇ ಕಪಿಸಂಯೋಗೋ ವೃಕ್ಷಮೂಲೇ ಪರಂ ನ ಸಃ ।**
**ಭಾವಾಭಾವವಿರೋಧಸ್ಯ ನ ಚೇಚ್ಛಾಂತಿರ್ಭವಿಷ್ಯತಿ ।**
**ತತ್ಸಂಯೋಗಸ್ವಭಾವಾಚ್ಚ ಪರಿಹಾರೋ ಭವೇನ್ನ ತೇ ॥ ೮೩೧ ॥**

**ಅರ್ಥ–** ವೃಕ್ಷಾಗ್ರೇ= ವೃಕ್ಷದ ಮೇಲ್ಭಾಗದಲ್ಲಿ, ಕಪಿಸಂಯೋಗಃ= ಕಪಿಸಂಯೋಗವು ಇರುತ್ತದೆ, ಪರಂ= ಆದರೆ, ವೃಕ್ಷಮೂಲೇ= ವೃಕ್ಷದ ಮೂಲದಲ್ಲಿ, ಸಃ= ಆ ಕಪಿಸಂಯೋಗವು, ನ= ಇರುವುದಿಲ್ಲ, ನ ಚೇತ್= ಹಾಗಿಲ್ಲದೆ ಒಂದೇ ಕಡೆ ಕಪಿಸಂಯೋಗ ಮತ್ತು ತದಭಾವವನ್ನು ಅಂಗೀಕರಿಸಿದರೆ, ಭಾವಾಭಾವವಿರೋಧಸ್ಯ= ಭಾವಾಭಾವವಿರೋಧಕ್ಕೆ, ಶಾಂತಿಃ= ಉಚ್ಛೇದವು (ನಾಶವು), ಭವಿಷ್ಯತಿ= ಉಂಟಾಗುತ್ತದೆ, ತತ್= ಆದ್ದರಿಂದ, ಸಂಯೋಗ ಸ್ವಭಾವಾಚ್ಚ= ಸಂಯೋಗ ಸ್ವಭಾವದಿಂದಲೂ, ತೇ= ನಿನಗೆ, ಪರಿಹಾರಃ= ಪರಿಹಾರವು, ನ ಭವೇತ್= ಉಂಟಾಗುವುದಿಲ್ಲ.

**ಅನುವಾದ–** ವೃಕ್ಷದ ಮೇಲ್ಭಾಗದಲ್ಲಿ ಕಪಿಸಂಯೋಗವಿರುತ್ತದೆ. ವೃಕ್ಷದ ಮೂಲದಲ್ಲಿ ಕಪಿಸಂಯೋಗ ಇರುವುದಿಲ್ಲ. ಒಂದೇ ಸ್ಥಳದಲ್ಲಿ ಸಂಯೋಗ ತದಭಾವವನ್ನು ಅಂಗೀಕರಿಸಿದರೆ ಭಾವಾಭಾವವಿರೋಧವೇ ನಾಶವನ್ನು ಹೊಂದುತ್ತದೆ. ಆದ್ದರಿಂದ ಸಂಯೋಗ ಸ್ವಭಾವದಿಂದಲೂ ನಿನಗೆ ಪರಿಹಾರವು ದೊರೆಯುವುದಿಲ್ಲ.

**ಭಾವವಿಲಾಸಿನೀ–** ನನ್ವೇಕಸ್ಮಿನ್‌ವೃಕ್ಷ ಏವ ಕಪಿಸಂಯೋಗತದಭಾವವತ್ ಏಕಸ್ಮಿನ್ನೇವ ಗಗನೇ ಘಟಸಂಬಂಧತದಸಂಬಂಧಾವಪಿ ಸ್ಯಾತಾಮಿತ್ಯತ ಆಹ – **ವೃಕ್ಷೇತಿ** ॥ ತತ್ರಾಪ್ಯಂಶಭೇದಾದೇವ ಸಂಯೋಗತದಭಾವೌ ನ ತ್ವೇಕಸ್ಮಿನ್ನೇವೇತಿ ಭಾವಃ । ತತ್ತಸ್ಮಾತ್ ॥ ೮೩೧ ॥

**ವಿವರಣೆ–** ತಾರ್ಕಿಕ ರೀತ್ಯಾ ಸಂಯೋಗ ತದಭಾವಗಳು ಒಂದೇ ವಸ್ತುವಿನಲ್ಲಿ ಇದ್ದಂತೆ ಅಲ್ಪಜ್ಞತ್ವ ಮತ್ತು ಸರ್ವಜ್ಞತ್ವ ರೂಪಧರ್ಮಗಳು ಒಂದೇ ಚೈತನ್ಯದಲ್ಲಿ ಇರಬಹುದು. ಚೈತನ್ಯ ಭೇದದ ಅವಶ್ಯಕತೆ ಇಲ್ಲ ಎಂಬ ಶಂಕೆಗೆ ಇಲ್ಲಿ ಸಮಾಧಾನವನ್ನು ಹೇಳುತ್ತಾರೆ. ತಾರ್ಕಿಕರ ಈ ಅಂಗೀಕಾರವು ಸಾಧುವಾದುದಲ್ಲ. ಸಂಯೋಗ ತದಭಾವಗಳು ಭಿನ್ನ ಭಿನ್ನ ಪ್ರದೇಶದಲ್ಲಿ ಇರುತ್ತವೆ. ಹಾಗೆ ಅಂಗೀಕರಿಸದಿದ್ದರೆ ಭಾವಾಭಾವ ವಿರೋಧವೇ ನಾಶವನ್ನು ಹೊಂದುತ್ತದೆ. ಆದ್ದರಿಂದ ಚೈತನ್ಯಭೇದವನ್ನು ಅಂಗೀಕರಿಸದೆ ವಿರುದ್ಧ ವಿಶೇಷಣಗಳನ್ನು ಉಪಪಾದನೆ ಮಾಡಲು ಬರುವುದಿಲ್ಲ ಎಂದು ಅಭಿಪ್ರಾಯ.

ಏವಂ ಚ ಭೇದಮಾತ್ರಸ್ಯೋಪಾಧೇರ್ಜನ್ಮ ನ ಯುಕ್ತಿಮತ್ ।
ತದ್ ವಿದ್ಯಮಾನಭೇದಸ್ಯ ಜ್ಞಾಪಕೋಽಸೌ ನ ಕಾರಕಃ ॥ ೮೩೨ ॥

**ಅರ್ಥ–** ಏವಂ ಚ= ಈ ರೀತಿಯಾಗಿ, ಭೇದಮಾತ್ರಸ್ಯ= ಯಾವ ಭೇದಕ್ಕೂ, ಉಪಾಧೇಃ= ಉಪಾಧಿಯಿಂದ, ಜನ್ಮ= ಉತ್ಪತ್ತಿಯು, ನ ಯುಕ್ತಿಮತ್= ಯುಕ್ತಿಯುಕ್ತವಾದುದಲ್ಲ,

ತತ್= ಆದ್ದರಿಂದ ಅಸೌ= ಈ ಉಪಾಧಿಯು, ವಿದ್ಯಮಾನಸ್ಯ= ಮೊದಲೇ ವಿದ್ಯಮಾನವಾದ, ಭೇದಸ್ಯ= ಭೇದಕ್ಕೆ, ಜ್ಞಾಪಕಃ= ಜ್ಞಾಪಕವೇ ಹೊರತು, ಕಾರಕಃ ನ= ಜನಕವಲ್ಲ

**ಅನುವಾದ–** ಈ ರೀತಿಯಾಗಿ ಉಪಾಧಿಯಿಂದ ಭೇದವು ಉಂಟಾಗುತ್ತದೆ ಎಂಬುದು ಯುಕ್ತಿಯುಕ್ತವಾದುದಲ್ಲ. ಆದ್ದರಿಂದ ಉಪಾಧಿಯು ಮೊದಲೇ ವಿದ್ಯಮಾನವಾದ ಭೇದಕ್ಕೆ ಜ್ಞಾಪಕವೇ ಹೊರತು ಕಾರಕವಲ್ಲ.

**ಭಾವವಿಲಾಸಿನೀ–** ಭೇದಮಾತ್ರಸ್ಯ ಕೇವಲಭೇದಸ್ಯ । ತತ್ತಸ್ಮಾತ್ ಅಸೌ ಭೇದೋಪಾಧಿಃ ॥ ೮೩೨ ॥

ಅತೋ ವಿಶಿಷ್ಟಭೇದಶ್ಚ ಸ್ವತಶ್ಚಿದ್ಭೇದಮಾಕ್ಷಿಪೇತ್ ।
ದ್ವಿರ್ಬದ್ಧಭೇದಾದ್ ಬಾಧಸ್ತಚ್ಚಿದೈಕ್ಯಸ್ಯೈವ ಘಾತಕಃ ॥ ೮೩೩ ॥

**ಅರ್ಥ–** ಅತಃ= ಆದ್ದರಿಂದ, ವಿಶಿಷ್ಟಭೇದಶ್ಚ= ವಿಶಿಷ್ಟ ಭೇದವೂ ಕೂಡ, ಸ್ವತಃ= ತಾನೇ, ಚಿದ್ಭೇದಂ= ಚೈತನ್ಯ ಭೇದವನ್ನು, ಆಕ್ಷಿಪೇತ್= ಆಕ್ಷೇಪಿಸುತ್ತದೆ (ಸಿದ್ಧ ಮಾಡಿಕೊಡುತ್ತದೆ), ದ್ವಿರ್ಬದ್ಧ ಭೇದಾತ್= ವಿಶಿಷ್ಟ ಭೇದದ ಬಲದಿಂದ ಮತ್ತು ಲಕ್ಷಣದ ಬಲದಿಂದ ಪ್ರಾಪ್ತವಾದ ಚಿದ್ಭೇದದಿಂದ ಬಾಧಃ= ಉಂಟಾಗುವ ಬಾಧವು, ಚಿದೈಕ್ಯಸ್ಯೈವ= ಚಿದೈಕ್ಯಕ್ಕೇ, ಘಾತಕಃ= ನಾಶಕವಾಗುತ್ತದೆ.

**ಅನುವಾದ–** ವಿಶಿಷ್ಟ ಭೇದವೇ ಸ್ವತಃ ಚೈತನ್ಯಭೇದವನ್ನು ಆಕ್ಷೇಪಿಸುತ್ತದೆ (ಸಾಧಿಸಿಕೊಡುತ್ತದೆ). ಆದ್ದರಿಂದ ವಿಶಿಷ್ಟ ಭೇದದಿಂದಲೂ ಮತ್ತು ಲಕ್ಷಣ ಬಲದಿಂದಲೂ ಪ್ರಾಪ್ತವಾದ ಚೈತನ್ಯ ಭೇದದಿಂದ ಉಂಟಾಗುವ ಬಾಧವು ಚೈತನ್ಯೈಕ್ಯಕ್ಕೇ ಹಾನಿಯನ್ನು ಉಂಟುಮಾಡುತ್ತದೆ.

**ಭಾವವಿಲಾಸಿನೀ–** ಸ್ವತಃ ಸ್ವಸ್ವಭಾವತಃ । ದ್ವಿರ್ಬದ್ಧಭೇದಾತ್ ವಿಶಿಷ್ಟಸ್ವಭಾವಗತಚಿದ್ಭೇದಾತ್ । ಪೂರ್ವೋಕ್ತರೀತ್ಯಾ ಲಕ್ಷಣಬಲಾದಾಗತಚಿದ್ಭೇದಾಚ್ಚೇತ್ಯರ್ಥಃ । ತತ್ತಸ್ಮಾತ್ ಪ್ರಕಾರದ್ವಯೇನ ಪ್ರಮಾಣಸಿದ್ಧತ್ವಾತ್ ॥ ೮೩೩ ॥

ತದ್ಯಾಮಿಕಾನಾಂ ಸದಸಿ ಕಿಂ ಸ್ಯಾತ್ ತಸ್ಕರಕೈತವೈಃ ।
ಉಕ್ತಿವ್ಯತ್ಯಾಸೇಽಪಿ ಕುರ್ಯುರ್ಶ್ಚೌರ್ಯಸ್ಯ ಸ್ಥೈರ್ಯಮೇವ ತೇ॥ ೮೩೪ ॥

**ಅರ್ಥ–** ತತ್= ಆದ್ದರಿಂದ, ಯಾಮಿಕಾನಾಂ ಸದಸಿ= ಯಾಮಿಕರ ಸಭೆಯಲ್ಲಿ ತಸ್ಕರಕೈತವೈಃ= ಕಳ್ಳರ ವಂಚನೆಯಿಂದ, ಕಿಂ ಸ್ಯಾತ್= ಏನಾದೀತು, ಉಕ್ತಿವ್ಯತ್ಯಾಸೇಪಿ= ಮಾತಿನಲ್ಲಿ ಸ್ವಲ್ಪ ವ್ಯತ್ಯಾಸ ಉಂಟಾದರೂ, ತೇ= ಅವರು, ಚೌರ್ಯಸ್ಯ= ಕಳ್ಳತನದ, ಸ್ಥೈರ್ಯಮೇವ= ಸ್ಥಿರತ್ವವನ್ನೇ, ಕುರ್ಯುಃ= ನಿಶ್ಚಯ ಮಾಡುತ್ತಾರೆ.

**ಅನುವಾದ–** ಆದ್ದರಿಂದ ಯಾಮಿಕರ ಸಭೆಯಲ್ಲಿ ಕಳ್ಳರ ವಂಚನೆಯಿಂದ ಏನಾದೀತು? ಮಾತಿನಲ್ಲಿ ಸ್ವಲ್ಪ ವ್ಯತ್ಯಾಸ ಮಾಡಿದರೂ ಆರಕ್ಷಕರು ಕಳ್ಳತನದ ಸ್ಥೈರ್ಯವನ್ನೇ ನಿಶ್ಚಯ ಮಾಡುತ್ತಾರೆ.

**ಭಾವವಿಲಾಸಿನೀ–** ಲೋಕರೀತ್ಯಾ ಪರಮಪಹಸತಿ ॥ **ತದಿತಿ** ॥ ತತ್ ತಸ್ಮಾತ್ । ತೇ ಯಾಮಿಕಾಃ ॥ ೮೩೪ ॥

**ವಿವರಣೆ–** ವಿಶಿಷ್ಟೈಕ್ಯವನ್ನು ಹೇಳುವ ವಾಕ್ಯವು ಎರಡು ರೀತಿಯಲ್ಲಿಯೂ ಚೈತನ್ಯಭೇದವನ್ನು ಹೇಳುವುದರಿಂದ ಯಾಮಿಕರ (ಆರಕ್ಷಕರ) ಸಭೆ ಇದ್ದಂತೆ. ಚೈತನ್ಯೈಕ್ಯವನ್ನು ಹೇಳಬೇಕಾದರೂ ವಿಶಿಷ್ಟಭೇದ ಪ್ರತಿಪಾದಕ ವಾಕ್ಯದಿಂದಲೇ ಹೇಳಬೇಕು. ಆಗ ಅದಕ್ಕೆ ಲಕ್ಷಣಾ ಮಾಡಬೇಕಾಗುತ್ತದೆ. ಹಾಗೆ ಮಾಡಿದರೆ ಉಕ್ತಿ ವ್ಯತ್ಯಾಸವು ಉಂಟಾಗುವುದರಿಂದ ಆರಕ್ಷಕರು ಮಾಡಿದಂತೆ ಕಳ್ಳತನವೇ ಸ್ಥಿರವಾಗುತ್ತದೆ. ಎಂದರೆ ಲಕ್ಷಣಾವೃತ್ತಿಯಿಂದ ಚೈತನ್ಯೈಕ್ಯವನ್ನು ಹೇಳುವುದು ಅಯುಕ್ತವಾದುದು ಎಂದು ಅಭಿಪ್ರಾಯ.

ಪರೇಽವ್ಯಯೇ ಸರ್ವ ಏಕೀಭವಂತೀತಿ ಚ ಯಾ ಶ್ರುತಿಃ ।
ಸಾ ಚ ಗೋಷ್ಠೇ ಗಾವ ಏಕೀಭವಂತೀತ್ಯಾದಿ ವಾಕ್ಯವತ್ ।
ಮುಕ್ತಾನಾಮೇಕತಾಮಾಹ ಗವಾಮಿವ ಪರಸ್ಪರಮ್ ॥ ೮೩೫ ॥

**ಅರ್ಥ–** ಪರೇಽವ್ಯಯೇ ಸರ್ವ ಏಕೀಭವಂತೀತಿ= ಪರೇಽವ್ಯಯೇ ಸರ್ವ ಏಕೀಭವಂತಿ ಎಂಬ, ಯಾ ಶ್ರುತಿಃ= ಯಾವ ಶ್ರುತಿಯಿದೆಯೋ, ಸಾ ಚ= ಅದೂ ಸಹ, ಗೋಷ್ಠೇ= ಕೊಟ್ಟಿಗೆಯಲ್ಲಿ, ಗಾವಃ= ಗೋವುಗಳು, ಏಕೀಭವಂತಿ= ಒಂದಾಗುತ್ತವೆ, ಇತ್ಯಾದಿ ವಾಕ್ಯವತ್= ಇವೇ ಮೊದಲಾದ ವಾಕ್ಯದಂತೆ, ಮುಕ್ತಾನಾಂ= ಮುಕ್ತರಿಗೆ, ಗವಾಮಿವ= ಗೋವುಗಳಿಗೆ ಹೇಳಿದಂತೆ, ಪರಸ್ಪರಂ= ಪರಸ್ಪರವಾಗಿ, ಏಕತಾಂ= ಒಂದಾಗುವಿಕೆಯನ್ನು (ಒಂದು ಸ್ಥಾನದಲ್ಲಿ ಸೇರುವುದನ್ನು), ಆಹ= ಹೇಳುತ್ತದೆ.

**ಅನುವಾದ–** ಪರೇಽವ್ಯಯೇ ಸರ್ವ ಏಕೀಭವಂತಿ ಎಂಬ ಶ್ರುತಿಯಾದರೂ ಕೊಟ್ಟಿಗೆಯಲ್ಲಿ ಗೋವುಗಳು ಒಂದಾಗುತ್ತವೆ ಎಂಬ ವಾಕ್ಯವು ಗೋವುಗಳಿಗೆ ಪರಸ್ಪರವಾಗಿ ಏಕಸ್ಥಾನ ಸ್ಥಿತಿರೂಪವಾದ ಐಕ್ಯವನ್ನು ಹೇಳಿದಂತೆ ಮುಕ್ತರಿಗೂ ಏಕಸ್ಥಾನಸ್ಥಿತಿರೂಪವಾದ ಐಕ್ಯವನ್ನು ಹೇಳುತ್ತದೆ.

**ಭಾವವಿಲಾಸಿನೀ–** ಅಧುನಾ ಮೋಕ್ಷೇ ಐಕ್ಯಪ್ರತಿಪಾದಕತಯಾ ಪರಾಭಿಮತಸ್ಯ ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾಪರೇಽವ್ಯಯೇ ಸರ್ವ ಏಕೀಭವಂತೀತಿವಾಕ್ಯಸ್ಯಾರ್ಥಮಾಹ – **ಪರೇಽವ್ಯಯ ಇತಿ** ॥ ೮೩೫ ॥

**ಆಧಾರಂ ಗೋಷ್ಠವದ್ ಬ್ರಹ್ಮ ಪರಂ ಸರ್ವೋತ್ತಮತ್ವತಃ ।**
**ಪೂರ್ಣತ್ವತೋ ವಾ ಮಹಿಮವ್ಯಯಸ್ಯಾಭಾವತೋಽವ್ಯಯಮ್ ॥ ೮೩೭ ॥**

**ಅನುಶಾಸ್ತಿ ನ ಚೇಚ್ಚ್ವಿಸ್ತ್ವಾಂ ಹಿನಸ್ತೀತಿ ಮತಿರ್ಮಮ ।**
**ಅಭೂತತದ್ಭಾವವಾದೀ ಭೂತತದ್ಭಾವವಾದಿನಮ್ ॥ ೮೩೮ ॥**

**ಅರ್ಥ–** ಗೋಷ್ಠವತ್= ಕೊಟ್ಟಿಗೆಯಂತೆ, ಬ್ರಹ್ಮ= ಬ್ರಹ್ಮನು, ಆಧಾರಂ= ಆಧಾರನೆಂದು, ಸರ್ವೋತ್ತಮತ್ವತಃ= ಸರ್ವೋತ್ತಮನಾದುದರಿಂದ, ವಾ= ಅಥವಾ, ಪೂರ್ಣತ್ವತಃ= ಪೂರ್ಣನಾದುದರಿಂದ, ಪರಂ= ಪರನೆಂದು, ಮಹಿಮವ್ಯಯಸ್ಯ ಅಭಾವತಃ= ಮಹಿಮೆಯ ನಾಶವಿಲ್ಲದಿರುವುದರಿಂದ, ಅವ್ಯಯಂ= ಅವ್ಯಯನೆಂದು, ಅನುಶಾಸ್ತಿ= ಅನುಶಾಸನ ಮಾಡುತ್ತಿದೆ, ನ ಚೇತ್= ಹಾಗಿಲ್ಲದಿದ್ದರೆ, ಅಭೂತತದ್ಭಾವವಾದೀ= ಅಭೂತ ತದ್ಭಾವಾರ್ಥಕವಾದ, ಚ್ವಿಃ= ಏಕೀಭವಂತಿ ಎಂಬಲ್ಲಿರುವ ಚ್ವಿಪ್ರತ್ಯಯವು, ಭೂತತದ್ಭಾವ-ವಾದಿನಂ= ಮೊದಲೇ ಇರುವ ಐಕ್ಯವನ್ನು ಹೇಳುವ ನಿನ್ನನ್ನು, ಹಿನಸ್ತಿ= ನಾಶಗೊಳಿಸುತ್ತದೆ, ಇತಿ= ಎಂದು, ಮಮ ಮತಿಃ= ನನ್ನ ಅಭಿಪ್ರಾಯ.

**ಅನುವಾದ– ಈ ಶ್ರುತಿಯು ಗೋಷ್ಠದಂತೆ ಬ್ರಹ್ಮನು ಆಧಾರನೆಂದೂ ಸರ್ವೋತ್ತಮ-ನಾದುದರಿಂದ ಅಥವಾ ಪೂರ್ಣನಾದುದರಿಂದ ಪರನೆಂದೂ, ಮಹಿಮೆಯ ನಾಶವಿಲ್ಲದಿರುವುದರಿಂದ ಅವ್ಯಯನೆಂದೂ ಅನುಶಾಸನ ಮಾಡುತ್ತಿದೆ. ಹಾಗಿಲ್ಲದಿದ್ದರೆ ಅಭೂತತದ್ಭಾವವಾಚಿಯಾದ ಚ್ವಿಪ್ರತ್ಯಯವು ಮೊದಲೇ ಇದ್ದ ಐಕ್ಯವನ್ನು ಹೇಳುವ ನಿನ್ನನ್ನು ನಾಶ ಮಾಡುತ್ತದೆ ಎಂದು ನನ್ನ ಅಭಿಪ್ರಾಯ.**

**ಭಾವವಿಲಾಸಿನೀ–** ಆಧಾರಮನುಶಾಸ್ತಿ ಸಪ್ತಮೀಬಲಾದಾಧಾರಮನುಶಾಸ್ತಿ । ಚ್ವಿಃ ಏಕೀ-ಭವಂತೀತ್ಯತ್ರ ವಿದ್ಯಮಾನಶ್ಚ್ವಿಪ್ರತ್ಯಯಃ । ಭೂತತದ್ಭಾವವಾದಿನಂ ಭೂತಸ್ಯ ಪ್ರಾಗೇವ ವಿದ್ಯ-ಮಾನಸ್ಯ ತದ್ಭಾವಸ್ಯ ಬ್ರಹ್ಮಭಾವಸ್ಯ, ವಾದಿನಮ್ । ಅಭೂತತದ್ಭಾವಾರ್ಥಕಚ್ವಿಪ್ರತ್ಯಯಃ ಪ್ರಾಗವಿದ್ಯಮಾನಸ್ಯ ಮುಕ್ತಾನಾಂ ಹರೇಶ್ಚ ವೈಕುಂಠಾಖ್ಯ ಸ್ಥಾನೈಕ್ಯಸ್ಯ ಪ್ರತಿಪಾದನ ಏವ ಘಟತೇ । ನ ತು ಸಂಸಾರದಶಾಯಾಮಪಿ ವಿದ್ಯಮಾನತಯಾಂಗೀಕೃತಜೀವಬ್ರಹ್ಮೈಕ್ಯಸ್ಯ ಪ್ರತಿಪಾದನ ಇತಿ ಭಾವಃ ॥ ೮೩೭-೮೩೮ ॥

**ವಿವರಣೆ–** ಅದ್ವೈತಿಗಳ ರೀತಿಯಲ್ಲಿ ಐಕ್ಯವು ಮೊದಲೇ ಇದೆ. ಹೀಗಿರುವಾಗ ಅದನ್ನು ಐಕ್ಯವು ಉಂಟಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಚ್ವಿ ಪ್ರತ್ಯಯವು ಮೊದಲು ಇಲ್ಲದೆ ಅನಂತರ ಉಂಟಾಗುತ್ತದೆ ಎಂಬ ಅರ್ಥದಲ್ಲಿ ಮಾತ್ರ ಬರುತ್ತದೆ. ಆದ್ದರಿಂದ ನಾವು ಹೇಳಿದಂತೆ ಮೊದಲು ಇಲ್ಲದ ಸ್ಥಾನೈಕ್ಯವು ಮೋಕ್ಷದಲ್ಲಿ ಉಂಟಾಗುತ್ತದೆ ಎಂದು ಹೇಳಿಯೇ ಚ್ವಿಪ್ರತ್ಯಯಕ್ಕೆ ಸಾರ್ಥಕ್ಯವನ್ನು ಹೇಳಬೇಕು ಎಂದು ಅಭಿಪ್ರಾಯ.

ಕಾಲಾನಾಂ ಕರ್ಮಣಾಂ ಚೈವ ಜಡಾನಾಂ ಕಥಮೇಕತಾ ।
ಪರೇಣೈಕೀಭವಂತೀತಿ ಪ್ರಯೋಗಶ್ಚ ಭವೇತ್ ತದಾ ।
ಸಪ್ತಮೀಯಂ ಭವದ್ಗ್ರಂಥಸ್ಯಾಷ್ಟಮೀಂ ಕುರುತೇ ಸದಾ ॥ ೮೩೮ ॥

**ಅರ್ಥ–** ಜಡಾನಾಂ= ಜಡವಾದ, ಕಾಲಾನಾಂ= ಕಾಲಗಳಿಗೂ, ಕರ್ಮಣಾಂ ಚೈವ= ಮತ್ತು ಕರ್ಮಗಳಿಗೂ ಸಹ, ಏಕತಾ= ಚೇತನನಿಂದ ಐಕ್ಯವು, ಕಥಂ= ಹೇಗೆ ಉಂಟಾಗುತ್ತದೆ? ತದಾ= ಹಾಗೆ ಹೇಳುವುದಾದರೆ, ಪರೇಣ= ಪರನಿಂದ, ಏಕೀಭವಂತಿ= ಏಕೀಭಾವವನ್ನು ಹೊಂದುತ್ತಾರೆ, ಇತಿ= ಎಂದು, ಪ್ರಯೋಗಶ್ಚ= ಪ್ರಯೋಗವು, ಭವೇತ್= ಇರಬೇಕಾಗಿದ್ದಿತು, ಇಯಂ ಸಪ್ತಮೀ= ಪರೇ ಅವ್ಯಯೇ ಎಂಬಲ್ಲಿರುವ ಸಪ್ತಮೀ ವಿಭಕ್ತಿಯು, ಭವದ್ಗ್ರಂಥಸ್ಯ= ನಿನ್ನ ಗ್ರಂಥಕ್ಕೆ, ಸದಾ= ಯಾವಾಗಲೂ, ಅಷ್ಟಮೀಂ= ಅಷ್ಟಮೀ ತಿಥಿಯನ್ನು, ಕುರುತೇ= ಉಂಟುಮಾಡುತ್ತದೆ.

**ಅನುವಾದ–** ಜಡವಾದ ಕಾಲಕ್ಕೆ ಮತ್ತು ಕರ್ಮಗಳಿಗೆ ಹೇಗೆ ಚೈತನ್ಯೈಕ್ಯವು ಉಂಟಾಗುತ್ತದೆ? ಚೈತನ್ಯೈಕ್ಯವನ್ನು ಹೇಳುವುದಾದರೆ ಪರೇಣ ಎಂದು ತೃತೀಯಾ ವಿಭಕ್ತಿಯ ಪ್ರಯೋಗವು ಇರಬೇಕಾಗಿದ್ದಿತು. ಪರೇ ಅವ್ಯಯೇ ಎಂಬಲ್ಲಿರುವ ಸಪ್ತಮೀ ವಿಭಕ್ತಿಯು ನಿನ್ನ ಗ್ರಂಥಕ್ಕೆ ಯಾವಾಗಲೂ ಅಷ್ಟಮೀ ತಿಥಿಯನ್ನು ಉಂಟುಮಾಡಿಕೊಡುತ್ತದೆ.

**ಭಾವವಿಲಾಸಿನೀ–** ಪರಪಕ್ಷೇ ದೂಷಣಾಂತರಮಾಹ – **ಕಲಾನಾಮಿತಿ** ॥ ಗತಾಃ ಕಲಾಃ ಪಂಚದಶ-ಪ್ರತಿಷ್ಠಾ ಇತ್ಯತ್ರೋಕ್ತಕಲಾನಾಮ್ । ಕರ್ಮಾಣೀತ್ಯತ್ರೋಕ್ತಕರ್ಮಣಾಮ್ । ಐಕ್ಯಾ-ಸಂಭವಸೂಚನಾಯ ಜಡಾನಾಮಿತಿ ಗ್ರಂಥಕೃತೋ ವಚನಮ್ । ತದಾ ಬ್ರಹ್ಮಣೈವೈಕ್ಯಸ್ಯ ಶ್ರುತ್ಯಭಿಪ್ರೇತತ್ವೇ । ಪರೇಣೇತಿ ತೃತೀಯಾ ಪ್ರಯೋಗ ಏವ ಸ್ಯಾತ್ । ನ ತು ಸಪ್ತಮೀತ್ಯರ್ಥಃ । ಶಬ್ದಾರ್ಥಕುಶಲಂ ಪರಮಪಹಸತಿ– **ಸಪ್ತಮೀತಿ** ॥ ಅಷ್ಟಮೀಂ ಅಷ್ಟಮೀತಿಥಿಮ್ । ಭಗವದ್ಗ್ರಂಥ-ಸ್ಯಾಪಾಠ್ಯತ್ವಪ್ರಯೋಜಕಾನಧ್ಯಯನಾಂ ಕುರುತ ಇತಿ ಭಾವಃ ॥ ೮೩೮ ॥

**ವಿವರಣೆ–** ಐಕ್ಯವನ್ನು ಹೇಳುವುದಾದರೆ ತೃತೀಯಾ ವಿಭಕ್ತಿಯ ಪ್ರಯೋಗ ವಿರಬೇಕಾಗಿದ್ದಿತು. ಇಲ್ಲಿರುವ ಸಪ್ತಮೀ ವಿಭಕ್ತಿಯ ಪ್ರಯೋಗವು ಅನುಪಪನ್ನವಾಗುತ್ತದೆ. ಅಷ್ಟಮಿಯು ಅನಧ್ಯಯನದ ತಿಥಿ. ಇಲ್ಲಿರುವ ಸಪ್ತಮೀ ವಿಭಕ್ತಿಗೆ ನೀನು ತೃತೀಯಾ ವಿಭಕ್ತಿಯ ಅರ್ಥವನ್ನು ಹೇಳಿದರೆ ನಿನ್ನ ಗ್ರಂಥವು ಎಂದೂ ಅಧ್ಯಯನಕ್ಕೆ ಯೋಗ್ಯವಾಗುವುದಿಲ್ಲ ಎಂದು ಅಭಿಪ್ರಾಯ.

ವಕ್ತಿ ಕಾರಣಮಾತ್ರಸ್ಯ ಸತ್ಯತಾಂ ಮೃತ್ತಿಕಾಶ್ರುತಿಃ ।
ಕಾರ್ಯಮಾತ್ರಸ್ಯ ಸದ್ಭಾವಂ ವಕ್ತಿ ಕಾರ್ಷ್ಣಾಯಸಶ್ರುತಿಃ ॥ ೮೩೯ ॥

**ಅರ್ಥ–** ಮೃತ್ತಿಕಾಶ್ರುತಿಃ= ಮೃತ್ತಿಕೇತ್ಯೇವ ಸತ್ಯಂ ಎಂಬ ಶ್ರುತಿಯು, ಕಾರಣಮಾತ್ರಸ್ಯ= ಎಲ್ಲ ಕಾರಣಕ್ಕೂ, ಸತ್ಯತಾಂ= ಸತ್ಯತ್ವವನ್ನು, ವಕ್ತಿ= ಹೇಳುತ್ತದೆ, ಕಾರ್ಷ್ಣಾಯಸಶ್ರುತಿಃ= ಕಾರ್ಷ್ಣಾಯಸಶ್ರುತಿಯು, ಕಾರ್ಯಮಾತ್ರಸ್ಯ= ಕಾರ್ಯಮಾತ್ರಕ್ಕೆ, ಸದ್ಭಾವಂ= ಸತ್ಯತ್ವವನ್ನು, ವಕ್ತಿ= ಹೇಳುತ್ತದೆ.

**ಅನುವಾದ–** ಮೃತ್ತಿಕೇತ್ಯೇವ ಸತ್ಯಂ ಎಂಬ ಶ್ರುತಿಯು ಕಾರಣಮಾತ್ರಕ್ಕೆ ಸತ್ಯತ್ವವನ್ನು ಹೇಳುತ್ತದೆ. ಕಾರ್ಷ್ಣಾಯಸಶ್ರುತಿಯು ಕಾರ್ಯಮಾತ್ರಕ್ಕೆ ಸತ್ಯತ್ವವನ್ನು ಹೇಳುತ್ತದೆ.

**ಭಾವವಿಲಾಸಿನೀ–**ವಾಚಾರಂಭಣಶ್ರುತ್ಯಾ ಸತ್ಯತ್ವಸಾಧನಪ್ರಕಾರಮಾಹ–**ವಕ್ತೀತಿ**॥ ಮೃತ್ತಿಕಾಶ್ರುತಿಃ ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮಿತಿ ಶ್ರುತಿರಿತ್ಯರ್ಥಃ। ಕಾರಣಮಾತ್ರಸ್ಯ ಉಪ-ಲಕ್ಷಣಯಾ ಉಪಾದಾನಕಾರಣಸಮುದಾಯಸ್ಯ ಸಕಲಕಾರಣಸಮುದಾಯಸ್ಯ ವಾ ಸತ್ಯತಾಂ ವಕ್ತೀತಿ ಯೋಜನಾ। ನ ತ್ವಕಾರಣತಯಾ ಪರೇಣಾಭಿಮತ ಬ್ರಹ್ಮಚಿನ್ಮಾತ್ರಸ್ಯೇತಿ ಭಾವಃ। ಕಾರ್ಯಮಾತ್ರಸ್ಯ ನಖನಿಕೃಂತನಾಖ್ಯಕಾರ್ಷ್ಣಾಯಸಸ್ಯ ಕಾರ್ಯರೂಪತ್ವೇನ ಉಪಲಕ್ಷಣಯಾ ಸಕಲಕಾರ್ಯಸ್ಯ ನ ತು ಸರ್ವಥಾ ಅಕಾರ್ಯಸ್ಯ ಬ್ರಹ್ಮಚಿನ್ಮಾತ್ರಸ್ಯೇತಿ ಭಾವಃ। ಸದ್ಭಾವಂ ಸತ್ಯತ್ವಮ್। ಕಾರ್ಷ್ಣಾಯಸಶ್ರುತಿಃ ಯಥಾ ಸೌಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ಜ್ಞಾತಂ ಸ್ಯಾತ್। ವಾಚಾರಂಭಣಂ ವಿಕಾರೋ ನಾಮಧೇಯಂ ಕಾರ್ಷ್ಣಾಯಸಮಿತ್ಯೇವ ಸತ್ಯಮಿತಿ ಶ್ರುತಿರಿತ್ಯರ್ಥಃ॥ ೮೩೯॥

**ವಿವರಣೆ–** ಇನ್ನು ಹಿಂದೆ ವಿಚಾರ ಮಾಡಿದ ವಾಚಾರಂಭಣ ಶ್ರುತ್ಯರ್ಥವನ್ನು ಸಂಕ್ಷೇಪವಾಗಿ ನಿರೂಪಿಸುತ್ತಾರೆ. ಮೃತ್ತಿಕೇತ್ಯೇವ ಸತ್ಯಂ ಎಂಬ ಶ್ರುತಿಯು ಉಪಾದಾನ ಕಾರಣವಾದ ಮೃತ್ತಿಕೆಗೂ ಮತ್ತು ಅದನ್ನು ಉಪಲಕ್ಷಣವಾಗಿ ಇಟ್ಟುಕೊಂಡು ಉಳಿದ ಎಲ್ಲಾ ಕಾರಣಗಳಿಗೂ ಸತ್ಯತ್ವವನ್ನು ಹೇಳುತ್ತದೆ. ಕಾರ್ಷ್ಣಾಯಸವು ಇಲ್ಲಿ ನಖನಿಕೃಂತಃ ರೂಪವಾದ ಕಾರ್ಯ. ಒಂದು ಕಾರ್ಯಕ್ಕೆ ಸತ್ಯತ್ವವನ್ನು ಹೇಳಿದರೆ ಉಪಲಕ್ಷಣತಯಾ ಎಲ್ಲ ಕಾರ್ಯಗಳಿಗೂ ಸತ್ಯತ್ವವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಉಪಾದಾನಸ್ಯ ಸತ್ಯತ್ವೇ ಕಾರ್ಯಸತ್ತ್ವಮಭೂದ್ ಬಲಾತ್।**
**ಉಪಾದೇಯಸ್ಯ ಸತ್ಯತ್ವೇ ತತ್ಸತ್ವಂ ಚ ಭವೇದ್ ಬಲಾತ್।**
**ಅತೋ ದ್ವಿರ್ಬದ್ಧಸತ್ಯತ್ವಂ ಕೋ ವಾ ಮೋಚಯಿತುಂ ಕ್ಷಮಃ॥ ೮೪೦॥**

**ಅರ್ಥ–** ಉಪಾದಾನಸ್ಯ ಸತ್ಯತ್ವೇ= ಉಪಾದಾನವು ಸತ್ಯವಾದರೆ, ಬಲಾತ್= ನ್ಯಾಯ ಸಾಮರ್ಥ್ಯದಿಂದ, ಕಾರ್ಯಸತ್ತ್ವಂ= ಕಾರ್ಯದ ಸತ್ತ್ವವು, ಅಭೂತ್= ಸಿದ್ಧವಾಯಿತು, ಉಪಾದೇಯಸ್ಯ ಸತ್ಯತ್ವೇ= ಉಪಾದೇಯವು ಸತ್ಯವಾದರೆ, ತತ್ಸತ್ವಂ= ಉಪಾದಾನ ಸತ್ವವು, ಬಲಾತ್= ನ್ಯಾಯಬಲದಿಂದಲೇ, ಭವೇತ್= ಉಂಟಾಗುತ್ತದೆ, ಅತಃ= ಆದ್ದರಿಂದ,

ದ್ವಿರ್ಬದ್ಧಸತ್ಯತ್ವಂ= ಎರಡು ರೀತಿಯಲ್ಲಿ ಸಿದ್ಧವಾದ ಸತ್ಯತ್ವವನ್ನು, ಕೋ ವಾ= ಯಾವನು ತಾನೇ, ಮೋಚಯಿತುಂ= ನಿರಾಕರಿಸಲು, ಕ್ಷಮಃ= ಸಮರ್ಥನಾಗುತ್ತಾನೆ?

**ಅನುವಾದ–** ಉಪಾದಾನವು ಸತ್ಯವಾದರೆ ಉಪಾದಾನ ಉಪಾದೇಯಗಳಿಗೆ ಅಭೇದವಿರುವುದರಿಂದ ಈ ಯುಕ್ತಿಯ ಬಲದಿಂದ ಕಾರ್ಯವೂ ಸತ್ಯವಾಯಿತು. ಉಪಾದೇಯವು ಸತ್ಯವಾದರೆ ಅದೇ ಯುಕ್ತಿಯ ಬಲದಿಂದ ಉಪಾದಾನವೂ ಸತ್ಯವಾಯಿತು. ಆದ್ದರಿಂದ ಎರಡು ರೀತಿಯಲ್ಲಿ ಪ್ರಾಪ್ತವಾದ ಈ ಸತ್ಯತ್ವವನ್ನು ಯಾವನು ತಾನೇ ನಿರಾಕರಿಸಲು ಸಮರ್ಥನಾಗುತ್ತಾನೆ?

**ಭಾವವಿಲಾಸಿನೀ–** ವಾಕ್ಯಮರ್ಯಾದಾಯಾ ಆಗತಕಾರ್ಯಕಾರಣಸತ್ಯತ್ವಮುಕ್ತ್ವಾಽರ್ಥಾದಾಗತತತ್ಸತ್ಯತ್ವಮುಪ್ಯಾಹ – **ಉಪದಾನಸ್ಯೇತಿ** ॥ ತತ್ಸತ್ತ್ವಮ್ ಉಪಾದಾನಸತ್ತ್ವಮ್ ॥ ಉಪಾದಾನೋಪಾದೇಯಯೋರಭಿನ್ನತ್ವೇ ನೈಕಸತ್ಯತ್ವೇ ಅಪರ ಸತ್ಯತ್ವಸ್ಯಾಪ್ಯಾವಶ್ಯಕತ್ವಾದಿತಿ ಭಾವಃ ॥ ದ್ವಿರ್ಬದ್ಧ ಸತ್ಯತ್ವಂ ವಾಕ್ಯಾದರ್ಥಾಚ್ಚಾಗತಸತ್ಯತ್ವಮ್ । ಇದಂ ಚ ಇತಿ ಶಬ್ದಮುಪೇಕ್ಷ್ಯ ಪರರೀತ್ಯೈವಾರ್ಥಕಥನೇಽಪಿ ವಾಕ್ಯದ್ವಯಸ್ಯ ಸ್ವಾರಸಿಕಾರ್ಥಮರ್ಯಾದಯಾ ಕಾರ್ಯಕಾರಣಾತ್ಮಾತ್ಮಕಪ್ರಪಂಚಸತ್ಯತೈವ ಸಿದ್ಧ್ಯೇತ್ । ನ ತು ಬ್ರಹ್ಮಸತ್ಯತ್ವಂ ಜಗನ್ಮಿಥ್ಯಾತ್ವಂಚೇತಿ ಜ್ಞಾಪನಾಯೋದಿತಮ್ । ವಸ್ತುತಸ್ತು ವಿಷ್ಣುತತ್ವನಿರ್ಣಯಾದಾವುಕ್ತ ಏವಾರ್ಥೋ ದ್ರಷ್ಟವ್ಯಃ ॥ ೮೪೦ ॥

ವಾಚಾರಂಭಣವಾಕ್ ತಸ್ಮಾದ್ ಯಥಾಪೂರ್ವಮಿತಿ ಶ್ರುತೇಃ ।
ನಾಮರೂಪಾತ್ಮಕಸ್ಯಾಸ್ಯ ವಕ್ತ್ಯೇಕವಿಧತಾಂ ಸದಾ ।
ಉಕ್ತಂ ವಿಕಾರಸತ್ಯತ್ವಂ ತ್ವದರ್ಥಂ ಬಾಧತೇ ಯತಃ ॥ ೮೪೧ ॥

**ಅರ್ಥ–** ತಸ್ಮಾತ್= ಆದ್ದರಿಂದ, ವಾಚಾರಂಭಣವಾಕ್= ವಾಚಾರಂಭಣ ಶ್ರುತಿಯು, ಯಥಾ ಪೂರ್ವಮಿತಿ ಶ್ರುತೇಃ= ಧಾತಾಯಥಾಪೂರ್ವಮಕಲ್ಪಯತ್ ಎಂಬ ಶ್ರುತಿ ಇರುವುದರಿಂದ, ನಾಮರೂಪಾತ್ಮಕಸ್ಯ= ನಾಮರೂಪಾತ್ಮಕವಾದ ಪ್ರಪಂಚಕ್ಕೆ, ಸದಾ= ಯಾವಾಗಲೂ, ಏಕವಿಧತಾಂ= ಏಕವಿಧತ್ವವನ್ನು, ವಕ್ತಿ= ಹೇಳುತ್ತದೆ, ಯತಃ= ಏಕೆಂದರೆ, ಉಕ್ತಂ= ಇಲ್ಲಿ ಹೇಳಲ್ಪಟ್ಟ, ವಿಕಾರ ಸತ್ಯತ್ವಂ= ವಿಕಾರ ಸತ್ಯತ್ವವು, ತ್ವದರ್ಥಂ= ನಿನ್ನ ಅರ್ಥವನ್ನು, ಬಾಧತೇ= ಬಾಧಿಸುತ್ತದೆ.

**ಅನುವಾದ–** ಆದ್ದರಿಂದ ವಾಚಾರಂಭಣ ಶ್ರುತಿಯು ಧಾತಾಯಥಾಪೂರ್ವಮಕಲ್ಪಯತ್ ಎಂಬ ಶ್ರುತಿ ಇರುವುದರಿಂದ ನಾಮರೂಪಾತ್ಮಕವಾದ ಈ ಪ್ರಪಂಚಕ್ಕೆ ಯಾವಾಗಲೂ ಏಕರೂಪತ್ವವನ್ನು ಹೇಳುತ್ತದೆ. ಏಕೆಂದರೆ ಇಲ್ಲಿ ಹೇಳುವ ವಿಕಾರಸತ್ಯತ್ವವು ನಿನ್ನ ಅರ್ಥವನ್ನು ಬಾಧಿಸುತ್ತದೆ.

**ಭಾವವಿಲಾಸಿನೀ–** ಶ್ರೌತಪದಶಕ್ತ್ಯೈವ ಲಭ್ಯಂ ಮೂಲಗ್ರಂಥಾನುಕೂಲಮರ್ಥಾಂತರಂ ಚಾಹ **– ವಾಚಾರಂಭಣೇತಿ** ॥ ತಸ್ಮಾತ್ ಪರೋದೀರಿತಾರ್ಥಸ್ಯ ಶ್ರೌತಪದಾಲಭ್ಯತ್ವಾತ್ । ಅಸ್ಯ ಜಗತಃ ಸದೈಕವಿಧತಾಮ್ । ವಿಕಾರಃ ಘಟಶರಾವಾದಿವಿಕಾರಃ । ಮೃತ್ತಿಕಾ, ವಾಚಾರಂಭಣಂ ವಾಚಾ ವಾಗಿಂದ್ರಿಯೇಣ ಆರಂಭಣಂ ಯಸ್ಯ ತತ್ ವಾಚಾರಂಭಣಂ ನಾಮಧೇಯಂ ಘಟಮೃತ್ತಿಕಾದಿನಾಮಧೇಯಂ ಚ ಇತ್ಯೇವ ಇದಾನೀಂ ಯಥಾ ವರ್ತತೇ ಅನೇನ ಪ್ರಕಾರೇಣೈವ ಸರ್ವದಾ ತಿಷ್ಠತಿ । ಕಾರ್ಯಕಾರಣಾತ್ಮಕಂ ನಾಮರೂಪಾತ್ಮಕಮಿದಂ ಜಗತ್ ಅನಾದ್ಯಂತ-ಕಾಲೇಷ್ವಪ್ಯೇಕಪ್ರಕಾರಮೇವೇತ್ಯರ್ಥಃ । ಅತ ಏವ ಶುಕ್ಲಃ ಕಂಬಲಃ, ಶುಕ್ಲಾ ಪಟೀ, ಶುಕ್ಲಂ ವಸ್ತ್ರಂ, ತಾನೀಮಾನಿ ಶುಕ್ಲಾನಿ, ತದಿದಂ ಶುಕ್ಲಮಿತಿವತ್ ವಿಕಾರಃ ಸತ್ಯಃ, ಮೃತ್ತಿಕೇತ್ಯೇವ ಸತ್ಯಾ, ನಾಮಧೇಯಂ ಸತ್ಯಂ, ತಾನೀಮಾನಿ ಸತ್ಯಾನಿ ತದಿದಂ ಸತ್ಯಮಿತಿ ಶ್ರುತೇಃ ಏಕಪ್ರಕಾರವದ್ವಿಷಯ-ಜಗತ್ಸತ್ಯತ್ವರೂಪಾರ್ಥದ್ವಯಲಾಭಾತ್ ಅನಾದಿಕಾಲಮಾರಭ್ಯ ಯಸ್ಯ ಯಸ್ಯ ಘಟಾದೇರ್ಯದ್ರೂಪಂ ಯಚ್ಚ ನಾಮ ತಸ್ಯ ತಸ್ಯ ಪದಾರ್ಥಸ್ಯ ಸರ್ವದಾ ತದ್ರೂಪತ್ವಂ ತನ್ನಾಮಧೇಯತ್ವಂ ಚ ವಾಚಾರಂಭಣವಾಕ್ ವಕ್ತೀತಿ (ಸಂಬಂಧಃ) ಭಾವಃ । ಇದಂ ಚೋಪಲಕ್ಷಣಮ್ । ಕಾರ್ಯಕಾರಣಾತ್ಮಕಸ್ಯ ನಾಮರೂಪಾತ್ಮಕಸ್ಯಾಸ್ಯೈವ ಪ್ರಪಂಚಸ್ಯ ವೈಯಾಕರಣ ಮರ್ಯಾದಯಾ । ಪೃಥಕ್ ಪೃಥಕ್ ಬಹೂನಾಂ ಬಹುವಚನೈಕ ವಚನಾಂತ-ತಯೇತಿ ತ್ರಿವಾಚಾಶಪಥಪೂರ್ವಕಂ ಸತ್ಯತ್ವಂ ಚ ವಕ್ತೀತ್ಯಪಿ ದ್ರಷ್ಟವ್ಯಮ್ । ಅತ ಏವ ನಪುಂಸಕೈಕ ವಚನಪ್ರಯೋಗಃ । ಯತ ಇತ್ಯಸ್ಯಾರ್ಥ ಸ್ವಯಮೇವಾಹ **– ಉಕ್ತಮಿತಿ** ॥ ವಿಕಾರಸತ್ಯತ್ವಂ ನಖನಿಕೃಂತನಾಖ್ಯವಿಕಾರಸತ್ಯತ್ವಮ್ । ತ್ವದರ್ಥಂ ವಿಕಾರೋ ನಾಮಧೇಯಮಿತ್ಯತ್ರಾಭಿಪ್ರೇತಂ ಕಾರ್ಯಮಿಥ್ಯಾತ್ವಮ್ ॥ ೮೪೧ ॥

**ವಿವರಣೆ–** ವಾಚಾರಂಭಣ ಶ್ರುತಿಗೆ ಶ್ರೌತಪದಶಕ್ತಿಯಿಂದಲೇ ಲಭ್ಯವಾದ, ಮೂಲ ಗ್ರಂಥಕ್ಕೆ ಅನುಕೂಲವಾದ, ಇನ್ನೊಂದು ಅರ್ಥವನ್ನು ಇಲ್ಲಿ ಹೇಳುತ್ತಾರೆ. ತಸ್ಮಾತ್ ಎಂದರೆ ಪರೋದೀರಿತವಾದ ಕಾರ್ಯಮಿಥ್ಯಾತ್ವರೂಪವಾದ ಅರ್ಥವು ಶ್ರೌತಪದಗಳಿಂದ ಲಭ್ಯವಲ್ಲವಾದಕಾರಣ ಎಂದು ಅರ್ಥ. ವಾಚಾರಂಭಣ ಶ್ರುತಿಯು ಈ ಜಗತ್ತಿಗೆ ಯಾವಾಗಲೂ ಒಂದೇ ವಿಧವಾದ ಸ್ಥಿತಿಯನ್ನು ಹೇಳುತ್ತದೆ ಎಂದು ಅನ್ವಯ. 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂಬ ಈ ಶ್ರುತಿಗೆ ಈಗ ಹೀಗೆ ಅರ್ಥವನ್ನು ಹೇಳುತ್ತಾರೆ. ವಿಕಾರಃ= ಘಟಶರಾವಾದಿ ವಿಕಾರವು, ಮೃತ್ತಿಕಾ= ಮೃತ್ತಿಕೆಯು. ವಾಚಾರಂಭಣಂ= ವಾಗಿಂದ್ರಿಯದಿಂದ ಆರಂಭಣವುಳ್ಳ, ನಾಮಧೇಯಂ= ಘಟಶರಾವಮೃತ್ತಿಕಾದಿ ನಾಮಧೇಯವೂ ಕೂಡ, ಇತ್ಯೇವ= ಈಗ ಹೇಗೆ ಇದೆಯೋ ಅದೇ ರೀತಿಯಿಂದಲೇ, ಸತ್ಯಂ= ಯಾವಾಗಲೂ ಇರುತ್ತದೆ. ಎಂದರೆ ಕಾರ್ಯ-ಕಾರಣಾತ್ಮಕವೂ ನಾಮರೂಪಾತ್ಮಕವೂ ಆದ ಈ ಜಗತ್ತು ಅನಾದ್ಯನಂತ ಕಾಲದಲ್ಲಿ ಒಂದೇ ಪ್ರಕಾರದಿಂದ ಇರುತ್ತದೆ ಎಂದು ಅರ್ಥ. ಆದ್ದರಿಂದಲೇ ಶುಕ್ಲಃ ಕಂಬಲಃ ಶುಕ್ಲಾಪಟೀ, ಶುಕ್ಲಂ ವಸ್ತ್ರಂ, ತಾನಿ ಇಮಾನಿ ಶುಕ್ಲಾನಿ, ತದಿದಂ ಶುಕ್ಲಂ ಎಂದು ಹೇಳಿ ಎಲ್ಲವನ್ನೂ

ಸಂಗ್ರಹಿಸಿ ಶುಕ್ಲಂ ಎಂಬ ಏಕವಚನದಿಂದ ಶುಕ್ಲತ್ವರೂಪವಾದ ಒಂದೇ ಪ್ರಕಾರವನ್ನು ಹೇಳುವಂತೆ ವಿಕಾರಃ ಸತ್ಯಃ, ಮೃತ್ತಿಕಾ ಸತ್ಯಾ, ನಾಮಧೇಯಂ ಸತ್ಯಂ, ತಾನಿ ಇಮಾನಿ ಸತ್ಯಾನಿ, ತದಿದಂ, ಸತ್ಯಂ ಎಂದು ಏಕಪ್ರಕಾರತ್ವವಾದ ಸತ್ವವನ್ನೇ ಎಲ್ಲ ಜಗತ್ತಿಗೂ ಹೇಳುವುದರಿಂದ ಸತ್ಯಂ ಎಂಬಲ್ಲಿರುವ ಏಕವಚನವು ಉಪಪನ್ನವಾಗುತ್ತದೆ. ಅನಾದಿಕಾಲದಿಂದ ಆರಂಭಿಸಿ ಯಾವ ಯಾವ ಘಟಾದಿಗಳಿಗೆ ಯಾವ ರೂಪ, ಯಾವ ನಾಮಗಳು ಇದ್ದವೋ ಅಂತಹ ಘಟಾದಿ ಪದಾರ್ಥಗಳಿಗೆ ಅಂತಹ ರೂಪ ಮತ್ತು ಅಂತಹ ನಾಮಗಳು ಯಾವಾಗಲೂ ಇರುತ್ತವೆ ಎಂದು ವಾಚಾರಂಭಣಶ್ರುತಿಯು ಹೇಳುತ್ತದೆ ಎಂದು ಅಭಿಪ್ರಾಯ. ಅಷ್ಟೇ ಅಲ್ಲ, ಕಾರ್ಯಕಾರಣಾತ್ಮಕವಾದ ನಾಮರೂಪಾತ್ಮಕವಾದ ಇದೇ ಪ್ರಪಂಚಕ್ಕೆ ಮೂರು ಬಾರಿ ಶಪಥಪೂರ್ವಕವಾಗಿ ಸತ್ಯತ್ವವನ್ನು ಹೇಳುತ್ತದೆ ಎಂದೂ ಇಟ್ಟುಕೊಳ್ಳಬೇಕು. ತ್ವದರ್ಥ ಎಂಬಲ್ಲಿ ನೀನು ಹೇಳುವ ಅರ್ಥವನ್ನು ಎಂದರೆ ಕಾರ್ಯಮಿಥ್ಯಾತ್ವರೂಪವಾದ ಅರ್ಥವನ್ನು ವಿಕಾರ ಸತ್ಯತ್ವವು ಬಾಧಿಸುತ್ತದೆ ಎಂದು ಅರ್ಥ.

**ಅಕ್ಲೀಬೇನ ಸಹೋಕ್ತೌ ಚ ಕ್ಲೀಬೋಽಸೌ ಶಿಷ್ಯತೇ ಕಿಲ ।**
**ಶಿಷ್ಯಮಾಣಸ್ಯ ತಸ್ಯೈಕವದ್ಭಾವೋಽಪ್ಯುಚಿತಃ ಕಿಲ ॥ ೮೪೨ ॥**

**ಅರ್ಥ–** ಅಕ್ಲೀಬೇನ ಸಹೋಕ್ತೌ= ನಪುಂಸಕ ಲಿಂಗವಿಲ್ಲದ ಶಬ್ದದ ಜೊತೆಯಲ್ಲಿ ಹೇಳಿದರೆ, ಅಸೌ ಕ್ಲೀಬಃ= ಈ ನಪುಂಸಕ ಲಿಂಗಶಬ್ದವು, ಶಿಷ್ಯತೇ ಕಿಲ= ಉಳಿಯುವುದಷ್ಟೆ, ಶಿಷ್ಯಮಾಣಸ್ಯ ತಸ್ಯ= ಉಳಿಯುವ ಆ ನಪುಂಸಕಲಿಂಗ ಶಬ್ದಕ್ಕೆ, ಏಕವದ್ಭಾವೋಪಿ= ಏಕವದ್ಭಾವವು, ಉಚಿತಃ ಕಿಲ= ಉಚಿತವೇ ಆಗಿದೆಯಷ್ಟೆ.

**ಅನುವಾದ–** ನಪುಂಸಕಲಿಂಗವಿಲ್ಲದ ಶಬ್ದದ ಜೊತೆಯಲ್ಲಿ ನಪುಂಸಕಲಿಂಗದ ಶಬ್ದವನ್ನು ಸಮಾಸ ಮಾಡಿದರೆ ನಪುಂಸಕಲಿಂಗದ ಶಬ್ದವೇ ಉಳಿಯುವುದಷ್ಟೆ. ಉಳಿಯುವ ನಪುಂಸಕ ಲಿಂಗ ಶಬ್ದಕ್ಕಾದರೂ ಏಕವದ್ಭಾವವೇ ಉಚಿತವಾಗಿರುವುದಷ್ಟೆ.

**ಭಾವವಿಲಾಸಿನೀ–** ನನು ಕಥಮಯಂ ಶ್ರುತೇರರ್ಥೋ ಲಭ್ಯತ ಇತ್ಯಾಶಂಕ್ಯ ನಪುಂಸಕೇನೈಕವಚನಮನ್ಯತರಸ್ಯಾಮಿತಿ ಸೂತ್ರಂ ಕಿಲಪದೇನ ಸೂಚಯನ್ ಅಕ್ಲೀಬೇನ ಸಹೋಕ್ತೌ ಕ್ಲೀಬಂ ಶಿಷ್ಯತೇ ಏಕತ್ವಮಸ್ಯ ವಾ ಸ್ಯಾದಿತಿ ವೃತ್ತಿಂ ದರ್ಶಯತಿ– **ಅಕ್ಲೀಬೇನೇತಿ ॥** ಅಕ್ಲೀಬೇನ ಸ್ತ್ರೀಲಿಂಗಪುಂಲ್ಲಿಂಗಾಂತಪದೇನ ಸಹೋಕ್ತೌ ನಪುಂಸಕಲಿಂಗಾಂತಪದಸ್ಯ ಸಹಕಥನೇ ಸ್ತ್ರೀಲಿಂಗ-ಪುಂಲ್ಲಿಂಗನಪುಂಸಕಲಿಂಗಾಂತಪದಾನಾಮೇಕಸ್ಮಿನ್ವಾಕ್ಯೇ ಸಹಪಾಠ ಇತ್ಯರ್ಥಃ । ಅಸೌ ತ್ರಿಲಿಂಗಾಂತಪದಾರ್ಥವಿಷಯಕಃ ಶಬ್ದಃ ಕ್ಲೀಬಃ ನಪುಂಸಕಲಿಂಗಾಂತಃ ಶಿಷ್ಯತೇ ಪ್ರಾಕ್ ತ್ರಿಲಿಂಗಾಂತವಿಶೇಷಣಪದೇನೋದಿತಾನಾಂ ತೇಷಾಂ ಪುನಸ್ತೇನೈವ ಪದೇನ ಪರಾಮರ್ಶೇ ತತ್ಪದಂ ಬಹುವಚನಾಂತನಪುಂಸಕಲಿಂಗಂ ಭವತಿ ಏಕವಚನಾಂತಂ ವಾ ಸ್ಯಾದಿತ್ಯರ್ಥಃ ।

ಏಕವದ್ಭಾವಃ ಏಕವಚನಾಂತತ್ವಮ್ । ಅತ ಸ್ತ್ರೀಲಿಂಗಾಂತಪದೋಕ್ತಾನಾಂ ಮೃತ್ತಿಕಾದೀನಾಂ ಸತ್ಯಮಿತ್ಯೇಕವಚನಾಂತ ನಪುಂಸಕಲಿಂಗಪದೇನ ಸತ್ಯತ್ವವಿಧಾನಂ ಘಟತ ಇತಿ ಭಾವಃ ॥೮೪೨॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಅರ್ಥವು ಶ್ರುತಿಯಿಂದ ಹೇಗೆ ಲಭ್ಯವಾಗುತ್ತದೆ ಎಂಬ ಶಂಕೆಗೆ ನಪುಂಸಕಂ ಅನಪುಂಸಕೇನ ಏಕವಚ್ಚ ಅಸ್ಯ ಅನ್ಯತರಸ್ಯಾಂ (1.2.69) ಎಂಬ ಪಾಣಿನಿ ಸೂತ್ರದಿಂದ ಲಬ್ಧವಾಗುತ್ತದೆ ಎಂದು ಸೂಚಿಸುತ್ತಾ ಪ್ರತಿಪಾದನೆ ಮಾಡುತ್ತಾರೆ. ನಪುಂಸಕ ಲಿಂಗ ಶಬ್ದವನ್ನು ನಪುಂಸಕ ಲಿಂಗವಿಲ್ಲದ ಶಬ್ದದ ಜೊತೆಯಲ್ಲಿ ಸಮಾಸ ಮಾಡಿದರೆ ನಪುಂಸಕಲಿಂಗ ಶಬ್ದವೇ ಉಳಿಯುತ್ತದೆ ಆದಕ್ಕೆ ಏಕವಚನವು ವಿಕಲ್ಪದಿಂದ ಬರುತ್ತದೆ ಎಂದು ಸೂತ್ರಾರ್ಥ. ಪ್ರಕೃತದಲ್ಲಿ ವಿಕಾರಃ ಸತ್ಯಃ, ಮೃತ್ತಿಕಾ ಸತ್ಯಾ, ನಾಮಧೇಯಂ ಸತ್ಯಂ ಎಂದು ಹೇಳಿದ್ದರಿಂದ ಸತ್ಯಶ್ಚ ಸತ್ಯಾಚ ಸತ್ಯಂ ಚ ಸತ್ಯಂ ಎಂದೇ ಆಗುತ್ತದೆ. ಮೃತ್ತಿಕೇತ್ಯೇವ ಸತ್ಯಂ ಎಂಬಲ್ಲಿರುವ ಸತ್ಯಂ ಎಂಬ ಪದವು ಏಕಶೇಷಸಮಾಸರೂಪವಾಗಿದೆ. ಆದಕ್ಕೆ ಏಕವಚನವು ವಿಕಲ್ಪವಾಗಿ ಬರುವುದರಿಂದ ಸತ್ಯಂ ಎಂಬ ಏಕವಚನವು ಉಪಪನ್ನವಾಗುತ್ತದೆ. ಆದ್ದರಿಂದ ಪಾಣಿನಿಯ ಸಮ್ಮತಿಯಿಂದಲೇ ಹಿಂದಿನ ಶ್ಲೋಕದಲ್ಲಿ ಹೇಳಿದ ಅರ್ಥವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಮೃಜ್ಜ್ಞಾನೇ ಸರ್ವಮೃತ್ಕಾರ್ಯಜ್ಞಾನಂ ಸರ್ವತ್ರ ಸರ್ವದಾ ।
ನಾಮಾದ್ಯವ್ಯತ್ಯಯೇ ಸತ್ಯೇವ ಸ್ಯಾದಿತ್ಯಾಹ ತಂ ಚ ವಾಕ್ ॥ ೮೪೩ ॥

**ಅರ್ಥ–** ಮೃಜ್ಜ್ಞಾನೇ= ಮೃತ್ತಿನ ಜ್ಞಾನವಾದರೆ, ಸರ್ವತ್ರ= ಎಲ್ಲ ಕಡೆಗಳಲ್ಲಿಯೂ, ಸರ್ವದಾ= ಯಾವಾಗಲೂ, ಸರ್ವಮೃತ್ಕಾರ್ಯಜ್ಞಾನಂ= ಸರ್ವಮೃತ್ಕಾರ್ಯಜ್ಞಾನವು, ನಾಮದ್ಯವ್ಯತ್ಯಯೇ ಸತ್ಯೇವ= ನಾಮಾದಿಗಳ ವ್ಯತ್ಯಾಸವಿಲ್ಲದಿದ್ದರೆ ಮಾತ್ರ, ಸ್ಯಾತ್= ಆಗುತ್ತದೆ, ಇತಿ= ಎಂಬ ಕಾರಣದಿಂದ, ವಾಕ್= ಆ ವಾಕ್ಯವು, ತಂ ಚ= ನಾಮಾದಿ ವ್ಯತ್ಯಾಸಾಭಾವವನ್ನು, ಆಹ= ಹೇಳುತ್ತದೆ.

**ಅನುವಾದ–** ಒಂದು ಮೃತ್ಪಿಂಡಜ್ಞಾನದಿಂದ ಸರ್ವತ್ರ, ಸರ್ವದಾ ವಿದ್ಯಮಾನವಾದ ಸರ್ವಮೃನ್ಮಯದ ಜ್ಞಾನವು ನಾಮಾದಿಗಳ ವ್ಯತ್ಯಾಸವಿಲ್ಲದಿದ್ದರೆ ಮಾತ್ರ ಉಂಟಾಗುತ್ತದೆ ಎಂಬ ಕಾರಣದಿಂದ ಶ್ರುತಿಯು ನಾಮಾದಿ ವ್ಯತ್ಯಾಸಾಭಾವವನ್ನೂ ಹೇಳುತ್ತದೆ.

**ಭಾವವಿಲಾಸಿನೀ–** ನನು ಕಿಮರ್ಥಃ ನಾಮಾದೀನಾಮವ್ಯತ್ಯಾಸಃ ಶ್ರುತ್ಯಾ ಪ್ರತಿಪಾದ್ಯತ ಇತ್ಯತಃ ಪ್ರಯೋಜನದ್ವಯಮಾಹ – **ಮೃದಿತಿ** ॥ ತಂ ಅವ್ಯತ್ಯಯಮ್ । ಅಸ್ಮಿನ್‌ಕಲ್ಪೇ ಮೃತ್ತಿಕಾವಾಚಕ-ಮೃತ್ಪದಸ್ಯ ಕಲ್ಪಾಂತರೇ ಪದಾರ್ಥಾಂತರವಾಚಕತ್ವೇ ಮೃತ್ತಿಕಾಯಾಃ ಪದಾಂತರವಾಚ್ಯತ್ವೇ ಚ ಏತತ್ಕಲ್ಪೀಯಮೃತ್ಪಿಂಡಃ ಕಲ್ಪಾಂತರೀಯಮೃತ್ಪಿಂಡಃ ಏತತ್ಕಲ್ಪೀಯಮೃಣ್ಮಯಂ ಕಲ್ಪಾಂತರೀಯ-ಮೃಣ್ಮಯಂ ಚ ಭಿನ್ನಂ ಭಿನ್ನಂ ಸ್ಯಾತ್ । ಇದಾನೀಂತನ ಮೃಣ್ಮಯಾನಾಂ ಕಲ್ಪಾಂತರೀಯ-

**ಮೃಣ್ಮಯಾನಾಂ ಚಾಕಾರಶ್ಚ ಭಿನ್ನ ಭಿನ್ನಃ ಸ್ಯಾತ್ । ತಥಾ ಚೇದಾನೀಂ ಜ್ಞಾತೇನೈಕ-ಮೃತ್ಪಿಂಡೇನೈತಾದ್ವಿಜಾತೀಯಕಲ್ಪಾಂತರಸ್ಥಮೃಣ್ಮಯ ಜ್ಞಾನಾಯೋಗಾತ್ ಸರ್ವಮೃಣ್ಮಯ-ಜ್ಞಾನಂ ಕಥಂ ಸ್ಯಾತ್ । ಇದಾನೀಂ ಜ್ಞಾತಘಟಾಕಾರಾತ್ಕಲ್ಪಾಂತರಸ್ಥ ಘಟಾಕಾರಸ್ಯಾಪಿ ವ್ಯತ್ಯಾಸೇ ಶ್ರುತ್ಯುಕ್ತಂ ಸಾದೃಶ್ಯಾದೇಕವಿಜ್ಞಾನೇನ ಸರ್ವವಿಜ್ಞಾನಂ ಚ ಕಥಂ ಸ್ಯಾತ್ । ವ್ಯಾಪ್ತಿಜ್ಞಾನ ಸಂಕೇತಗ್ರಹಣಾದಿಕಂ ಚ ಕಥಂ ಸ್ಯಾತ್ । ಅತಃ ಶ್ರುತಿರ್ನಾಮ್ನಾಂ ರೂಪಾಣಾಂ ಚಾವ್ಯತ್ಯಾಸ-ಮಾಹೇತಿ ಭಾವಃ ॥ ೮೪೩ ॥**

**ವಿವರಣೆ–** ಶ್ರುತಿಯು ಏತಕ್ಕೆ ನಾಮಾದಿವ್ಯತ್ಯಾಸಾಭಾವವನ್ನು ಹೇಳುತ್ತದೆ ಎಂಬುದಕ್ಕೆ ಇಲ್ಲಿ ಕಾರಣವನ್ನು ನಿರೂಪಿಸುತ್ತಾರೆ. ಈ ಕಲ್ಪದಲ್ಲಿ ಮೃತ್ತಿಕಾವಾಚಿಯಾದ ಮೃತ್ಪದವು ಕಲ್ಪಾಂತರದಲ್ಲಿ ಪದಾಂರ್ಥಾಂತರವಾಚಕವಾದರೆ ಮತ್ತು ಮೃತ್ತಿಕೆಯು ಬೇರೆ ಪದದಿಂದ ವಾಚ್ಯವಾದರೆ ಈ ಕಲ್ಪದಲ್ಲಿ ಮೃತ್ಪಿಂಡ ಎಂದು ಹೇಳುವುದು ಕಲ್ಪಾಂತರದಲ್ಲಿ ಮೃತ್ಪಿಂಡ ಎಂದು ಹೇಳುವುದು, ಅದರಂತೆ ಈ ಕಲ್ಪದಲ್ಲಿ ಮೃನ್ಮಯ ಎಂದು ಹೇಳುವುದು, ಕಲ್ಪಾಂತರದಲ್ಲಿ ಮೃನ್ಮಯ ಎಂದು ಹೇಳುವುದು ಭಿನ್ನ ಭಿನ್ನವೇ ಆಗುತ್ತದೆ. ಹಾಗೆಯೇ ಈ ಕಲ್ಪದ ಮೃನ್ಮಯದ ಆಕಾರವು, ಕಲ್ಪಾಂತರದ ಮೃನ್ಮಯದ ಆಕಾರವು ಭಿನ್ನ ಭಿನ್ನವೇ ಆಗುತ್ತದೆ. ಆದ್ದರಿಂದ ಈ ಕಲ್ಪದಲ್ಲಿ ಒಂದು ಮೃತ್ಪಿಂಡದ ಜ್ಞಾನವಾದರೆ ಅದರಿಂದ ವಿಜಾತೀಯವಾದ ಕಲ್ಪಾಂತರೀಯವಾದ ಮೃನ್ಮಯಜ್ಞಾನವು ಸಾದೃಶ್ಯವಿಲ್ಲದಿರುವ ಕಾರಣ ಕೂಡುವುದಿಲ್ಲವಾದ್ದರಿಂದ ಸರ್ವಮೃನ್ಮಯಜ್ಞಾನವು ಹೇಗೆ ಉಂಟಾಗುತ್ತದೆ? ಈಗ ಜ್ಞಾತವಾದ ಘಟದ ಆಕಾರಕ್ಕೂ ಕಲ್ಪಾಂತರದ ಘಟದ ಆಕಾರಕ್ಕೂ ವ್ಯತ್ಯಾಸವಿದ್ದರೆ ಶ್ರುತಿಯು ಹೇಳಿದ ಸಾದೃಶ್ಯದಿಂದ ಏಕಜ್ಞಾನದಿಂದ ಸರ್ವವಿಜ್ಞಾನವು ಹೇಗೆ ಕೂಡುತ್ತದೆ? ವ್ಯಾಪ್ತಿಜ್ಞಾನಶಕ್ತಿಜ್ಞಾನವಾದರೂ ಹೇಗೆ ಉಂಟಾಗುತ್ತದೆ? ಆದ್ದರಿಂದ ಶ್ರುತಿಯು ನಾಮರೂಪಗಳ ವ್ಯತ್ಯಾಸಾಭಾವವನ್ನು ಹೇಳುತ್ತದೆ ಎಂದು ಅಭಿಪ್ರಾಯ.

ವ್ಯತ್ಯಾಸಾಭಾವತಃ ಸ್ವೋಕ್ತಸತ್ಯತ್ವಸ್ಥಾಪನಾಯ ಚ ।
ಮಹಾವಾಕ್ಯೋಕ್ತತತ್ತ್ವೇಽಸ್ಮಿನ್ ವ್ಯಾವಹಾರಿಕತಾ ಚ ನ ॥ ೮೪೪ ॥

**ಅರ್ಥ–** ವ್ಯತ್ಯಾಸಾಭಾವತಃ= ವ್ಯತ್ಯಾಸವಿಲ್ಲದಿರುವುದರಿಂದ, ಸ್ವೋಕ್ತಸತ್ಯತ್ವಸ್ಥಾಪನಾಯ ಚ= ಮೃತ್ತಿಕೇತ್ಯೇವ ಸತ್ಯಂ ಎಂದು ತಾನು ಹೇಳಿದ ಸತ್ಯತ್ವವನ್ನು ಸ್ಥಾಪನೆ ಮಾಡುವುದಕ್ಕೋಸ್ಕರವಾಗಿಯೂ ಸಹ, ಅಸ್ಮಿನ್= ಈ, ಮಹಾವಾಕ್ಯೋಕ್ತತತ್ತ್ವೇ= ಮಹಾ-ವಾಕ್ಯೋಕ್ತವಾದ ತತ್ತ್ವದಲ್ಲಿ, ವ್ಯಾವಹಾರಿಕತಾ ಚ= ವ್ಯಾವಹಾರಿಕತ್ವವೂ, ನ= ಇಲ್ಲ.

**ಅನುವಾದ–** ತಾನು ಹೇಳಿದ ಸತ್ಯತ್ವವನ್ನು ಸ್ಥಾಪನೆ ಮಾಡುವುದಕ್ಕೋಸ್ಕರ ಶ್ರುತಿಯು ವ್ಯತ್ಯಾಸಾಭಾವವನ್ನು ಹೇಳಿರುವುದರಿಂದ ಮಹಾವಾಕ್ಯೋಕ್ತವಾದ ಈ ತತ್ತ್ವದಲ್ಲಿ ವ್ಯಾವಹಾರಿಕತ್ವವೂ ಇಲ್ಲ.

**ಭಾವವಿಲಾಸಿನೀ–** ಅತ್ರೋಕ್ತಸತ್ಯಪದಸ್ಯ ವ್ಯಾವಹಾರಿಕಸತ್ಯತ್ವಪರತಾಂ ನಿವಾರಯತಿ–ಮಹಾವಾಕ್ಯೇತಿ ॥ ೮೪೪ ॥

**ವಿವರಣೆ–** ಇಲ್ಲಿರುವ ಸತ್ಯಪದಕ್ಕೆ ವ್ಯಾವಹಾರಿಕ ಸತ್ಯ ಎಂದು ಅರ್ಥವಾಗಲಿ ಎಂಬ ಶಂಕೆಯನ್ನು ಇಲ್ಲಿ ನಿವಾರಿಸುತ್ತಾರೆ. ಇದು ಮಹಾವಾಕ್ಯವಾದ್ದರಿಂದ ಇಲ್ಲಿ ಹೇಳಲ್ಪಡುವ ಸತ್ಯತ್ವವು ಪಾರಮಾರ್ಥಿಕವೇ ಆಗಬೇಕು. ವ್ಯಾವಹಾರಿಕವಾದರೆ ಅದು ಬಾಧ್ಯವಾಗುವುದರಿಂದ ಈ ವಾಕ್ಯಕ್ಕೆ ಮಹಾವಾಕ್ಯತ್ವವೇ ಕೂಡುವುದಿಲ್ಲ ಎಂದು ಅಭಿಪ್ರಾಯ.

ಏವಕಾರೋಽಕಾರಣಸ್ಯಾಕಾರ್ಯಸ್ಯ ಚ ನ ಸತ್ಯತಾ ।
ಇತ್ಯಾಹ ತೇನ ಸತ್ತಾಯಾಸ್ತ್ರೈವಿಧ್ಯಂ ಪ್ರತ್ಯಷಿಧ್ಯತ ॥ ೮೪೫ ॥

**ಅರ್ಥ–** ಏವಕಾರಃ= ಏವಕಾರವು, ಅಕಾರಣಸ್ಯ= ಕಾರಣವಲ್ಲದುದಕ್ಕೆ, ಚ= ಮತ್ತು, ಅಕಾರ್ಯಸ್ಯ= ಕಾರ್ಯವಲ್ಲದುದಕ್ಕೆ, ಸತ್ಯತಾ ನ= ಸತ್ಯತ್ವವು ಇಲ್ಲ, ಇತ್ಯಾಹ= ಎಂದು ಹೇಳುತ್ತದೆ, ತೇನ= ಆದ್ದರಿಂದ, ಸತ್ತಾಯಾಃ= ಸತ್ತ್ವದ, ತ್ರೈವಿಧ್ಯಂ= ತ್ರೈವಿಧ್ಯವನ್ನು, ಪ್ರತ್ಯಷಿಧ್ಯತ= ಪ್ರತಿಷೇಧ ಮಾಡಿತು.

**ಅನುವಾದ–** ಏವಕಾರವು ಕಾರಣವಲ್ಲದುದು ಮತ್ತು ಕಾರ್ಯವಲ್ಲದುದು ಸತ್ಯವಲ್ಲ ಎಂದು ಹೇಳುತ್ತದೆ. ಆದ್ದರಿಂದ ಅದು ಸತ್ತಾ ತ್ರೈವಿಧ್ಯವನ್ನು ನಿಷೇಧಿಸುತ್ತದೆ.

**ಭಾವವಿಲಾಸಿನೀ–** ಇತ್ಯೇವೇತಿ ಪದಂ ದೇಹಲೀದೀಪನ್ಯಾಯೇನ ಪೂರ್ವತ್ರೋತ್ತರತ್ರ ಚ ಸಂಬಧ್ಯತೇ । ಏವಂ ಚ ಇತ್ಯೇವ ಸತ್ಯಂ ನ ತ್ವನ್ಯದಿತ್ಯರ್ಥಲಾಭೇನಾಕಾರಣರೂಪಸ್ಯಾಕಾರ್ಯರೂಪಸ್ಯ ಚ ಶುಕ್ತಿರೂಪ್ಯಾದೇಃ ಪರೋದೀರಿತಸತ್ಯತಾನಿವಾರಿತೇತ್ಯಾಹ – **ಏವಕಾರ ಇತಿ** ॥ ತೇನಕಾರಣೇಣ ॥ ೮೪೫ ॥

**ವಿವರಣೆ–** ಶುಕ್ತಿರಜತವು ಕಾರಣವೂ ಅಲ್ಲ, ಕಾರ್ಯವೂ ಅಲ್ಲ, ಆದ್ದರಿಂದ ಅಲ್ಲಿ ಸತ್ತ್ವವಿಲ್ಲ. ಹೀಗೆ ಮಾಯಾವಾದಿಗಳು ಒಪ್ಪುವ ಪ್ರಾತಿಭಾಸಿಕ ಸತ್ತ್ವವನ್ನು ನಿರಾಕರಣೆ ಮಾಡಿದ್ದರಿಂದ ಸತ್ತಾತ್ರೈವಿಧ್ಯವು ನಿರಾಕೃತವಾಗುತ್ತದೆ ಎಂದು ಅಭಿಪ್ರಾಯ.

ಯನ್ನಾಮರೂಪಯೋಶ್ಚಾನ್ಯಥಾತ್ವಂ ನ ಸ ಕದಾಽನ್ಯಥಾ ।
ಕಾರ್ಯಕಾರಣರೂಪಂ ಚ ನಾಮರೂಪಾತ್ಮಕಂ ಜಗತ್ ।
ದ್ವೇಧಾ ನಿರ್ದಿಶ್ಯ ತತ್ಸತ್ತ್ವಮಪಿ ವಕ್ತಿ ಸಯುಕ್ತಿಕಮ್ ॥ ೮೪೬ ॥

**ಅರ್ಥ–** ಯನ್ನಾಮರೂಪಯೋಃ= ಯಾವ ವಸ್ತುವಿನ ನಾಮರೂಪಗಳಿಗೆ, ಅನ್ಯಥಾತ್ವಂ= ವ್ಯತ್ಯಾಸವು, ನ= ಇಲ್ಲವೋ, ಸ= ಆ ವಸ್ತುವು, ಕದಾ= ಯಾವಾಗ, ಅನ್ಯಥಾ= ಬೇರೆ ರೀತಿಯಾಗಿ ಎಂದರೆ ಮಿಥ್ಯಾಭೂತವಾಗಿ ಆಗುತ್ತದೆ? ಕಾರ್ಯಕಾರಣರೂಪಂ=

ಕಾರ್ಯ ಮತ್ತು ಕಾರಣರೂಪವಾದ, ಚ= ಮತ್ತು, ನಾಮರೂಪಾತ್ಮಕಂ= ನಾಮಾತ್ಮಕವಾದ ಮತ್ತು ರೂಪಾತ್ಮಕವಾದ, ಜಗತ್= ಪ್ರಪಂಚವನ್ನು, ದ್ವೇಧಾ ನಿರ್ದಿಶ್ಯ= ಎರಡು ರೀತಿಯಾಗಿ ನಿರ್ದೇಶ ಮಾಡಿ ಶ್ರುತಿಯು, ತತ್ಸತ್ತ್ವಮಪಿ= ಆ ಜಗತ್ತಿನ ಸತ್ಯತ್ವವನ್ನೂ, ಸಯುಕ್ತಿಕಂ= ಯುಕ್ತಿಸಹಿತವಾಗಿ, ವಕ್ತಿ= ಹೇಳುತ್ತದೆ.

**ಅನುವಾದ–** ಯಾವ ವಸ್ತುವಿನ ನಾಮರೂಪಗಳಿಗೆ ವ್ಯತ್ಯಾಸವೇ ಇಲ್ಲವೋ ಅದು ಯಾವಾಗ ಮಿಥ್ಯಾಭೂತವಾಗುತ್ತದೆ? ಶ್ರುತಿಯು ಕಾರ್ಯಕಾರಣರೂಪವಾದ ಪ್ರಪಂಚವನ್ನು, ನಾಮರೂಪಾತ್ಮಕವಾದ ಪ್ರಪಂಚವನ್ನು ಎರಡು ಪ್ರಕಾರದಿಂದ ನಿರ್ದೇಶ ಮಾಡಿ ಅದರ ಸತ್ಯತ್ವವನ್ನು ಸಯುಕ್ತಿಕವಾಗಿ ಹೇಳುತ್ತದೆ.

**ಭಾವವಿಲಾಸಿನೀ–** ತರ್ಹಿ ಬ್ರಹ್ಮಣಿ ಜಗತಿ ಚ ಸತ್ತಾದ್ವೈವಿಧ್ಯಂ ಸ್ಯಾದಿತ್ಯೇತತ್ ಪ್ರಾಗರ್ಥಾ-ದ್ದೂಷಿತಮಪಿ ಪುನಃ ಶ್ರೌತಮರ್ಯಾದಯಾ ಚ ದೂಷಯತಿ- ಯದಿತಿ ॥ **ಯದ್ಯಸ್ಮಾತ್** ॥ ನಾಮರೂಪಯೋಶ್ಚಾನ್ಯಥಾತ್ವಂ ವೈಪರೀತ್ಯಮ್ । ನ ಇತ್ಯೇವೇತಿ ಶ್ರುತ್ಯಾ ಪ್ರತಿಪಾದನಾತ್ ಕದಾಪಿ ನ ಘಟತೇ । ತಸ್ಮಾತ್ ಸಃ ನಾಮರೂಪಾತ್ಮಕಪ್ರಪಂಚಃ । ಕದಾ ಅನ್ಯಥಾ ಮಿಥ್ಯಾಭೂತಃ । ನ ಕದಾಪೀತ್ಯರ್ಥಃ । ಜಗತೋಽಪಿ ಬ್ರಹ್ಮವತ್ಕದಾಪಿ ವ್ಯತ್ಯಾಸಾಭಾವಾತ್ ಪಾರಮಾರ್ಥಿಕ-ತ್ವಮೇವ ವಕ್ತವ್ಯಮ್ । ಅತಃ ಸತ್ತಾದ್ವೈವಿಧ್ಯಮಪಿ ನ ಶ್ರುತೇರಭಿಪ್ರೇತಮಿತಿಭಾವಃ । ನನ್ವೇವಂ ತರ್ಹಿ ಜಗದಿತ್ಯೇವ ಸತ್ಯಮಿತ್ಯೇತಾವತ್ಯೆವಾಲಂ ಕಿಮರ್ಥಂ ಜಗತೋ ವಿಭಾಗಕಥನಮಿತ್ಯತ ಆಹ – **ಕಾರ್ಯೇತಿ** ॥ ಸಯುಕ್ತಿಕಮಿತಿ ವದತಾ ನಾಮಾಭಿಧೇಯತ್ವಾದ್ರೂಪವತ್ತ್ವಾತ್ಕಾರಣ-ರೂಪತ್ವಾತ್ಕಾರ್ಯರೂಪತ್ವಾಚ್ಚೇತಿ ಯುಕ್ತಿಚತುಷ್ಟಯ ಸೂಚನಾರ್ಥಂ ವಿಭಾಗಕಥನಮಿತಿ ದ್ಯೋತಿತಮ್ ॥ ೮೪೬ ॥

**ವಿವರಣೆ–** ಹಾಗಾದರೆ ಮೂರು ಸತ್ತ್ವವು ಇರುವುದು ಬೇಡ, ಬ್ರಹ್ಮನಲ್ಲಿ ಮತ್ತು ಜಗತ್ತಿನಲ್ಲಿ ಎರಡು ಸತ್ತ್ವಗಳಿರಲಿ ಎಂಬ ಶಂಕೆಯನ್ನು ಹಿಂದೆ ನಿರಾಸ ಮಾಡಿದ್ದರೂ ಪುನಃ ಇಲ್ಲಿ ಶ್ರುತಿಮರ್ಯಾದೆಯಿಂದ ದೂಷಿಸುತ್ತಾರೆ. ಜಗತ್ತಿಗೂ ಸಹ ಬ್ರಹ್ಮನಂತೆ ಯಾವಾಗಲೂ ವ್ಯತ್ಯಾಸವಿಲ್ಲದಿರುವುದರಿಂದ ಪಾರಮಾರ್ಥಿಕತ್ವವನ್ನೇ ಹೇಳಬೇಕು. ಆದ್ದರಿಂದ ಸತ್ತಾದ್ವೈವಿಧ್ಯವೂ ಶ್ರುತಿಗೆ ಅಭಿಪ್ರೇತವಲ್ಲ ಎಂದು ಸಿದ್ಧವಾಗುತ್ತದೆ. ಹಾಗಾದರೆ ಶ್ರುತಿಯು ಜಗದಿತ್ಯೇವ ಸತ್ಯಂ ಎಂದು ಹೇಳಬೇಕಾಗಿದ್ದಿತು. ಅದನ್ನು ಬಿಟ್ಟು ಮೃತ್ತಿಕೇತ್ಯೇವ ಸತ್ಯಂ ಕಾರ್ಷ್ಣಾಯಸಮಿತ್ಯೇವ ಸತ್ಯಂ ಮೊದಲಾದ ರೀತಿಯಲ್ಲಿ ಏಕೆ ಹೇಳುತ್ತದೆ? ಎಂಬ ಶಂಕೆಗೆ ಜಗತ್ತು ನಾಮರೂಪಾತ್ಮಕವಾಗಿದೆ ಮತ್ತು ಕಾರ್ಯಕಾರಣಾತ್ಮಕವಾಗಿದೆ. ಆದ್ದರಿಂದ ಬ್ರಹ್ಮನಂತೆ ನಾಮಾಭಿದೇಯತ್ವ, ರೂಪವತ್ವ ಮತ್ತು ಕಾರಣರೂಪತ್ವವು ಇರುವುದರಿಂದಲೂ ಮತ್ತು ಕಾರ್ಯರೂಪತ್ವವು ಇರುವುದರಿಂದಲೂ (ಶುಕ್ತಿರಜತಕ್ಕೆ ವ್ಯತಿರಿಕ್ತವಾಗಿ) ಜಗತ್ತಿಗೆ ಸತ್ಯತ್ವವೇ ಸಿದ್ಧವಾಗುತ್ತದೆ ಎಂದು ವಿಭಾಗವನ್ನು ಮಾಡಿ ಹೇಳುತ್ತಾರೆ ಎಂದು ಅಭಿಪ್ರಾಯ.

**ಯದಾಮೃದಪಿ ವಿಜ್ಞಾತಾ ಸಾದೃಶ್ಯಾದ್ ಜ್ಞಾಪಯೇಜ್ಜಗತ್ ।**
**ತದಾ ಸಮರ್ಥಃ ಸಾಮರ್ಥ್ಯಾದ್ ವಿಜ್ಞಾತಃ ಪುರುಷೋತ್ತಮಃ ।**
**ಕಥಂ ನ ದದ್ಯಾತ್ ಸಾರ್ವಜ್ಞಮಿತಿ ಕೈಮುತ್ಯತಃ ಪ್ರಭೋಃ ॥ ೮೪೭ ॥**

**ಸಾರ್ವಜ್ಞದಾನಶಕ್ತಿಂ ಸಾ ಬೋಧಯಂತೀ ಮುಹುರ್ಮುಹುಃ ।**
**ನಿದರ್ಶನತ್ರಯಮಿದಂ ನೃಣಾಂ ಪ್ರಾದರ್ಶಯಚ್ಛ್ರುತಿಃ ॥ ೮೪೮ ॥**

**ಅರ್ಥ–** ಯದಾ= ಯಾವಾಗ, ವಿಜ್ಞಾತಾ= ವಿಜ್ಞಾತವಾದ, ಮೃದಪಿ= ಮೃತ್ತಿಕೆಯೂ ಸಹ, ಸಾದೃಶ್ಯಾತ್= ಸಾದೃಶ್ಯದಿಂದ, ಜಗತ್= ಜಗತ್ತನ್ನು, ಜ್ಞಾಪಯೇತ್= ಜ್ಞಾಪಿಸುತ್ತದೆಯೋ (ಜಗತ್ತಿನ ಜ್ಞಾನವನ್ನು ಉಂಟುಮಾಡಿಕೊಡುತ್ತದೆಯೋ), ತದಾ= ಆಗ, ಸಮರ್ಥಃ= ಸಮರ್ಥನಾದ, ಪುರುಷೋತ್ತಮಃ= ಪುರುಷೋತ್ತಮನು, ವಿಜ್ಞಾತಃ= ಜ್ಞಾತನಾಗಿ, ಸಾಮರ್ಥ್ಯಾತ್= ತನ್ನ ಸಾಮರ್ಥ್ಯದಿಂದ, ಸಾರ್ವಜ್ಞಂ= ಸಾರ್ವಜ್ಞವನ್ನು, ಕಥಂ ನ ದಧ್ಯಾತ್= ಹೇಗೆ ಕೊಡುವುದಿಲ್ಲ, ಇತಿ= ಎಂಬುದಾಗಿ, ಕೈಮುತ್ಯತಃ= ಕೈಮುತ್ಯ ನ್ಯಾಯದಿಂದ, ಪ್ರಭೋಃ= ಪ್ರಭುವಿಗೆ, ಸಾರ್ವಜ್ಞಾದಿ ದಾನಶಕ್ತಿಂ ಬೋಧಯಂತೀ= ಸಾರ್ವಜ್ಞಾದಿ ದಾನಶಕ್ತಿಯನ್ನು ಬೋಧಿಸುತ್ತಾ, ಸಾ ಶ್ರುತಿಃ= ಆ ಶ್ರುತಿಯು, ಮುಹುರ್ಮುಹುಃ= ಮತ್ತೆ ಮತ್ತೆ, ಇದಂ ನಿದರ್ಶನತ್ರಯಂ= ಈ ಮೂರು ದೃಷ್ಟಾಂತಗಳನ್ನು, ನೃಣಾಂ= ಮನುಷ್ಯರಿಗೆ, ಪ್ರಾದರ್ಶಯತ್= ತೋರಿಸಿತು.

**ಅನುವಾದ– ಯಾವಾಗ ಮೃತ್ತಿಕೆಯು ವಿಜ್ಞಾತವಾದರೆ ಸಾದೃಶ್ಯದಿಂದ ಜಗತ್‌ಜ್ಞಾನವನ್ನು ಉಂಟು ಮಾಡಿಕೊಡುತ್ತದೆಯೋ ಆಗ ಸರ್ವಸಮರ್ಥನಾದ ಪುರುಷೋತ್ತಮನು ವಿಜ್ಞಾತನಾದರೆ ತನ್ನ ಸಾಮರ್ಥ್ಯದಿಂದ ಹೇಗೆ ಸಾರ್ವಜ್ಞವನ್ನು ಕೊಡದೇ ಇರುತ್ತಾನೆ ಎಂದು ಪ್ರಭುವಿಗೆ ಕೈಮುತ್ಯನ್ಯಾಯದಿಂದ ಸಾರ್ವಜ್ಞದಾನಶಕ್ತಿಯನ್ನು ಬೋಧಿಸುತ್ತಾ ಆ ಶ್ರುತಿಯು ಮೂರು ದೃಷ್ಟಾಂತಗಳಿಂದ ಪುನಪುನಃ ಇದನ್ನು ಅಧಿಕಾರಿಗಳಿಗೆ ಪ್ರದರ್ಶಿಸಿತು.**

**ಭಾವವಿಲಾಸಿನೀ–** ಇದಾನೀಂ ಯಥಾ ಸೋಮ್ಯೇತಿ ವಾಕ್ಯತ್ರಯಸ್ಯ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ ಭವತೀತಿ ಮೂಲೋಪಕ್ರಮವಾಕ್ಯೇನ ಮೂಲಗ್ರಂಥಾನುಕೂಲಂ ಸಂಗತ್ಯಂತರ ಸಂಗತಿಮಾಹ – **ಯದೇತಿ** ॥ ಸಾ ಯಥಾ ಸೋಮ್ಯೇತ್ಯಾದಿ ಶ್ರುತಿಃ। ನಿದರ್ಶನತ್ರಯಮಿತಿ ವದತಾ ಅತಿಸ್ಪಷ್ಟೀಕರಣಾಯ ಶ್ರುತೇಃ ಪ್ರವೃತ್ತಿರಿತಿ ಸೂಚಿತಮ್ ॥ ೮೪೭-೮೪೮ ॥

**ವಿವರಣೆ–** ಈಗ ಯಥಾಸೋಮ್ಯೈಕೇನ ಎಂಬ ಮೂರು ವಾಕ್ಯಗಳಿಗೂ ಯೇನಾಶ್ರುತಂ ಶ್ರುತಂ ಭವತಿ ಎಂಬ ವಾಕ್ಯಕ್ಕೂ ಇಲ್ಲಿ ಸಂಗತಿಯನ್ನು ಸೂಚಿಸುತ್ತಾರೆ.

ಜಡವಾದ ಅಲ್ಪ ಸಾಮರ್ಥ್ಯವುಳ್ಳ ಮೃತ್ತಿಕೆಯ ಜ್ಞಾನದಿಂದಲೇ ಜಗತ್‌ಜ್ಞಾನವು ಉಂಟಾಗುವಾಗ ಸಮರ್ಥನಾದ ಚೇತನೋತ್ತಮನಾದ ಭಗವಂತನ ಜ್ಞಾನದಿಂದ ಸಾರ್ವಜ್ಞವು ಉಂಟಾಗುವುದು ಯಾವ ಆಶ್ಚರ್ಯ ಎಂದು ಕೈಮುತ್ಯನ್ಯಾಯದ ಅಭಿಪ್ರಾಯ.

**ಇತ್ಯೇವ ವಾಚ್ಯಃ ಶ್ರುತ್ಯರ್ಥೋ ನೋ ಚೇತ್ ಕುಪ್ಯೇದಿಯಂ ಕೃತಿಃ ।**
**ಹಯಗ್ರೀವಪ್ರಸಾದೋತ್ಥಸಾಮರ್ಥ್ಯಕೃತಕೌತುಕಾ ॥ ೮೪೯ ॥**

**ಅರ್ಥ–** ಶ್ರುತ್ಯರ್ಥಃ= ಶ್ರುತ್ಯರ್ಥವು, ಇತ್ಯೇವ= ಇದೇ ರೀತಿಯಲ್ಲಿಯೇ, ವಾಚ್ಯಃ= ಹೇಳಲ್ಪಡಬೇಕು, ನೋ ಚೇತ್= ಇಲ್ಲದಿದ್ದರೆ, ಹಯಗ್ರೀವಪ್ರಸಾದೋತ್ಥ ಸಾಮರ್ಥ್ಯ-ಕೃತಕೌತುಕಾ= ಹಯಗ್ರೀವ ದೇವರ ಅನುಗ್ರಹದಿಂದ ಉಂಟಾದ ಸಾಮರ್ಥ್ಯದಿಂದ ಶಕ್ತಿಸಂತೋಷ ಭರಿತವಾದ, ಇಯಂ ಕೃತಿಃ= ಈ ಯುಕ್ತಿಮಲ್ಲಿಕಾ ರೂಪವಾದ ಗ್ರಂಥವು, ಕುಪ್ಯೇತ್= ಪರರನ್ನು ದೂಷಿಸುತ್ತದೆ.

**ಅನುವಾದ–** ಶ್ರುತ್ಯರ್ಥವನ್ನು ಹೀಗೆಯೇ ಹೇಳಬೇಕು. ಇಲ್ಲದಿದ್ದರೆ ಹಯಗ್ರೀವದೇವರ ದಯೆಯಿಂದ ಸಾಮರ್ಥ್ಯಾತಿಶಯವನ್ನು ಪಡೆದ ಪ್ರಬಲವಾದ ಈ ಯುಕ್ತಿಮಲ್ಲಿಕಾ ಗ್ರಂಥವು ಪರರಿಗೆ ದೋಷವನ್ನು ಹೇಳುತ್ತದೆ.

**ಭಾವವಿಲಾಸಿನೀ–** ನೋ ಚೇತ್ ಸರ್ವವಿಜ್ಞಾನೇನ ವಿಜ್ಞಾತುಃ ಸಾರ್ವಜ್ಞಾಖ್ಯಫಲಸಿದ್ಧಿ ಪ್ರತಿಪಾದಿಕಾ ನೋ ಚೇತ್ । ಕುಪ್ಯೇತ್ ಪರಂ ದೂಷಯೇದಿತ್ಯರ್ಥಃ । ಮಮ ಕರ್ತೃಃ ಸ್ವಭಜಕ ಯೋಗೀ ಸ್ವರಸ್ಯಾಭಿನವೇದ್ಯಶಯುಕ್ತಿ ಚಮತ್ಕಾರ ಸಂದೋಹದಾಯೀ ಸ್ವಭಜಕ ಬ್ರಹ್ಮಾದೀನಾಂ ಕಥಂ ನ ಸಾರ್ವಜ್ಞದ ಇತಿ ಪರಂ ದೂಷಯೇದಿತಿ ಭಾವಃ । ಸ್ವಕೀಯಕೃತೇಃ ಪರದೂಷಣೇ ಕಥಂ ಶಕ್ತಿರಿತ್ಯತ ಆಹ – ಹಯಗ್ರೀವೇತಿ ॥ ೮೪೯ ॥

**ಶ್ರುತ್ಯಾ ದ್ವಿತೀಯಮಾತ್ರಸ್ಯ ನಿಷೇಧೇ ಸತಿ ತೇ ಮತೇ ।**
**ಅತ್ಯಂತಾಭಾವೋಽಪಿ ನೇತಿ ದ್ವಿತೀಯಂ ಪುನರಾಪತೇತ್ ॥ ೮೫೦ ॥**

**ಅರ್ಥ–** ತೇ ಮತೇ= ನಿನ್ನ ಮತದಲ್ಲಿ, ಶ್ರುತ್ಯಾ= ಶ್ರುತಿಯಿಂದ, ದ್ವಿತೀಯಮಾತ್ರಸ್ಯ ನಿಷೇಧೇ ಸತಿ= ದ್ವಿತೀಯವಾದುದನ್ನೆಲ್ಲಾ ನಿಷೇಧ ಮಾಡಿದರೆ, ಅತ್ಯಂತಾಭಾವೋಪಿ ನ ಇತಿ= ಅತ್ಯಂತಾಭಾವವೂ ಇಲ್ಲವೆಂದು, ದ್ವಿತೀಯಂ= ದ್ವಿತೀಯ ವಸ್ತುವು, ಪುನಃ= ಮತ್ತೆ, ಆಪತೇತ್= ಉಂಟಾಗುತ್ತದೆ.

**ಅನುವಾದ–** ನಿನ್ನ ಮತದಲ್ಲಿ ಏಕಮೇವಾದ್ವಿತೀಯಂ ಎಂಬ ಶ್ರುತಿಯು ದ್ವಿತೀಯ ಮಾತ್ರವನ್ನು ನಿಷೇಧ ಮಾಡುತ್ತದೆಯೆಂದಾದರೆ ಅತ್ಯಂತಾಭಾವವು ನಿಷೇಧಿಸಲ್ಪಡುವುದರಿಂದ ದ್ವಿತೀಯ ವಸ್ತುವಿನ ಪುನರುನ್ಮಜ್ಜನೆಯೇ ಉಂಟಾಗುತ್ತದೆ.

**ಭಾವವಿಲಾಸಿನೀ–** ಇದಾನೀಮೇಕಮೇವಾದ್ವಿತೀಯಮಿತಿ ಶ್ರುತ್ಯಾ ಭಾವಾಭಾವಾತ್ಮಕ-ದ್ವಿತೀಯಮಾತ್ರನಿಷೇಧಃ ಕ್ರಿಯತೇ ವಾ ಉತ ಭಾವತ್ವೇನ ಸಕಲಭಾವಾನಾಮೇವ ನಿಷೇಧಃ ಕ್ರಿಯತೇ ವಾ, ಅಥವಾ ಸಕಲಭಾವಾನಾಂ ಸ್ವರೂಪಸ್ಯಾಪಿ ನಿಷೇಧಃ ಕ್ರಿಯತೇ ವಾ ಬ್ರಹ್ಮವ್ಯತಿರಿಕ್ತ ಸಕಲಭಾವಸ್ವರೂಪಾಣಾಮೇವ ನಿಷೇಧಃ ಕ್ರಿಯತೇ ವೇತ್ಯಾದಿ ವಿಕಲ್ಪಂ ಮನಸಿ ನಿಧಾಯ ಕ್ರಮೇಣ ದೂಷಯತಿ ॥ **ಶ್ರುತ್ಯೇತ್ಯಾದಿನಾ** ॥ ದ್ವಿತೀಯಮಾತ್ರಸ್ಯ ಭಾವಾಭಾವಾತ್ಮಕದ್ವಿತೀಯಮಾತ್ರಸ್ಯ ಅತ್ಯಂತಾಭಾವೋಽಪಿ ನೇತಿ ಕೃತ್ವಾ ದ್ವಿತೀಯಂ ಭಾವರೂಪದ್ವಿತೀಯಂ ಪುನರಾಪತೇದಿತಿ ಸಂಬಂಧಃ । ಅಭಾವಾಭಾವಸ್ಯ ಭಾವಾತ್ಮಕತ್ವಾತ್ ಅತ್ಯಂತಾಭಾವನಿಷೇಧೇ ಭಾವಾತ್ಮಕಂ ದ್ವಿತೀಯಂ ಬಲಾತ್ಸಿದ್ಧ್ಯೇದಿತಿ ಭಾವಃ । ಉಪಲಕ್ಷಣಂ ಚೈತತ್ । ಭಾವನಿಷೇಧೇ ಚ ತದಭಾವೋಽಪ್ಯರ್ವರಿತಃ ಸ್ಯಾತ್ । ಭೂತಲೇ ಘಟಾಭಾವನಿಷೇಧಕಾಲೇ ಘಟದರ್ಶನೇನ ಘಟನಿಷೇಧ ಕಾಲೇ ಚ ಘಟಾಭಾವದರ್ಶನೇನೋಭಯ ನಿಷೇಧಸ್ತ್ವಸಂಭಾವಿತ ಏವೇತ್ಯಪಿ ದ್ರಷ್ಟವ್ಯಮ್ ॥ ೮೫೦ ॥

**ವಿವರಣೆ–** ಇನ್ನು ಏಕಮೇವಾದ್ವಿತೀಯಂ ಎಂಬ ಶ್ರುತ್ಯರ್ಥವನ್ನು ವಿಚಾರ ಮಾಡುತ್ತಾರೆ. ಈ ಶ್ರುತಿಯು ಭಾವಾಭಾವಾತ್ಮಕವಾದ ಎಲ್ಲಾ ದ್ವಿತೀಯವನ್ನೂ ನಿಷೇಧ ಮಾಡುತ್ತದೆಯೋ ಅಥವಾ ಭಾವತ್ವೇನ ಸಕಲ ಭಾವಗಳನ್ನು ಮಾತ್ರ ನಿಷೇಧ ಮಾಡುತ್ತದೆಯೋ ಅಥವಾ ಸಕಲ ಭಾವಗಳನ್ನು ಸ್ವರೂಪತಃ ಏವ ನಿಷೇಧ ಮಾಡುತ್ತದೆಯೋ ಅಥವಾ ಬ್ರಹ್ಮವ್ಯತಿರಿಕ್ತವಾದ ಸಕಲಭಾವಸ್ವರೂಪಗಳನ್ನು ನಿಷೇಧ ಮಾಡುತ್ತದೆಯೋ ಎಂಬ ವಿಕಲ್ಪಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಕ್ರಮವಾಗಿ ದೂಷಿಸುತ್ತಾರೆ. ಭಾವಾಭಾವ ರೂಪವಾದ ಎಲ್ಲಾ ದ್ವಿತೀಯವನ್ನು ನಿಷೇಧ ಮಾಡುತ್ತದೆ ಎಂಬ ಪಕ್ಷದಲ್ಲಿ ಅಭಾವವನ್ನು ನಿಷೇಧ ಮಾಡಿದರೆ ಅಭಾವಾಭಾವವು ಭಾವರೂಪ- ವಾಗುವುದರಿಂದ ಪುನಃ ಭಾವದ ಉನ್ಮಜ್ಜನ ಉಂಟಾಗುತ್ತದೆ, ಭೂತಲದಲ್ಲಿ ಘಟಾಭಾವ- ವನ್ನು ನಿಷೇಧ ಮಾಡಿದರೆ ಘಟವು ಸಿದ್ಧವಾಗುವಂತೆ ಎಂದು ದೋಷವನ್ನು ಹೇಳುತ್ತಾರೆ.

ಭಾವಸ್ಯೈವ ನಿಷೇಧೇ ಸತ್ಯಭಾವಾಭಾವಸಂಭವಾತ್ ।
ತದಾಕಾರೇಣ ಸಕಲಂ ದ್ವಿತೀಯಂ ಪುನರಾಪತೇತ್ ॥ ೮೫೧ ॥

**ಅರ್ಥ–** ಭಾವಸ್ಯೈವ= ಭಾವವನ್ನು ಮಾತ್ರ, ನಿಷೇಧೇ ಸತಿ= ನಿಷೇಧವನ್ನು ಮಾಡಿದರೆ, ಅಭಾವಾಭಾವಸಂಭವಾತ್= ಅಭಾವಾಭಾವವು ಇರಬಹುದಾದ್ದರಿಂದ, ತದಾಕಾರೇಣ= ಅಭಾವಾಭಾವತ್ವಾಕಾರದಿಂದ, ಸಕಲಂ ದ್ವಿತೀಯಂ= ಎಲ್ಲ ದ್ವಿತೀಯವು, ಪುನಃ ಆಪತೇತ್= ಪುನಃ ಉಂಟಾಗುತ್ತದೆ.

**ಅನುವಾದ–** ಭಾವವನ್ನು ಮಾತ್ರ ನಿಷೇಧ ಮಾಡಿದರೆ ಅಭಾವಾಭಾವವು ಇರಬಹುದಾದ್ದರಿಂದ ಅಭಾವಾಭಾವತ್ವರೂಪದಿಂದ ಸಕಲ ಭಾವಗಳಿಗೂ ಪುನಃ ಸ್ಥಿತಿಯು ಉಂಟಾಗುತ್ತದೆ.

ಜಡವಾದ ಅಲ್ಪ ಸಾಮರ್ಥ್ಯವುಳ್ಳ ಮೃತ್ತಿಕೆಯ ಜ್ಞಾನದಿಂದಲೇ ಜಗತ್‌ಜ್ಞಾನವು ಉಂಟಾಗುವಾಗ ಸಮರ್ಥನಾದ ಚೇತನೋತ್ತಮನಾದ ಭಗವಂತನ ಜ್ಞಾನದಿಂದ ಸಾರ್ವಜ್ಞವು ಉಂಟಾಗುವುದು ಯಾವ ಆಶ್ಚರ್ಯ ಎಂದು ಕೈಮುತ್ಯನ್ಯಾಯದ ಅಭಿಪ್ರಾಯ.

**ಇತ್ಯೇವ ವಾಚ್ಯಃ ಶ್ರುತ್ಯರ್ಥೋ ನೋ ಚೇತ್ ಕುಪ್ಯೇದಿಯಂ ಕೃತಿಃ ।**
**ಹಯಗ್ರೀವಪ್ರಸಾದೋತ್ಥಸಾಮರ್ಥ್ಯಕೃತಕೌತುಕಾ ॥ ೮೪೯ ॥**

**ಅರ್ಥ–** ಶ್ರುತ್ಯರ್ಥಃ= ಶ್ರುತ್ಯರ್ಥವು, ಇತ್ಯೇವ= ಇದೇ ರೀತಿಯಲ್ಲಿಯೇ, ವಾಚ್ಯಃ= ಹೇಳಲ್ಪಡಬೇಕು, ನೋ ಚೇತ್= ಇಲ್ಲದಿದ್ದರೆ, ಹಯಗ್ರೀವಪ್ರಸಾದೋತ್ಥ ಸಾಮರ್ಥ್ಯ-ಕೃತಕೌತುಕಾ= ಹಯಗ್ರೀವ ದೇವರ ಅನುಗ್ರಹದಿಂದ ಉಂಟಾದ ಸಾಮರ್ಥ್ಯದಿಂದ ಶಕ್ತಿಸಂತೋಷ ಭರಿತವಾದ, ಇಯಂ ಕೃತಿಃ= ಈ ಯುಕ್ತಿಮಲ್ಲಿಕಾ ರೂಪವಾದ ಗ್ರಂಥವು, ಕುಪ್ಯೇತ್= ಪರರನ್ನು ದೂಷಿಸುತ್ತದೆ.

**ಅನುವಾದ–** ಶ್ರುತ್ಯರ್ಥವನ್ನು ಹೀಗೆಯೇ ಹೇಳಬೇಕು. ಇಲ್ಲದಿದ್ದರೆ ಹಯಗ್ರೀವದೇವರ ದಯೆಯಿಂದ ಸಾಮರ್ಥ್ಯಾತಿಶಯವನ್ನು ಪಡೆದ ಪ್ರಬಲವಾದ ಈ ಯುಕ್ತಿಮಲ್ಲಿಕಾ ಗ್ರಂಥವು ಪರರಿಗೆ ದೋಷವನ್ನು ಹೇಳುತ್ತದೆ.

**ಭಾವವಿಲಾಸಿನೀ–** ನೋ ಚೇತ್ ಸರ್ವವಿಜ್ಞಾನೇನ ವಿಜ್ಞಾತುಃ ಸಾರ್ವಜ್ಞಾಖ್ಯಫಲಸಿದ್ಧಿ ಪ್ರತಿಪಾದಿಕಾ ನೋ ಚೇತ್ । ಕುಪ್ಯೇತ್ ಪರಂ ದೂಷಯೇದಿತ್ಯರ್ಥಃ । ಮಮ ಕರ್ತ್ರುಃ ಸ್ವಭಜಕ ಯೋಗೀ ಸ್ವರಸ್ಯಾಭಿನವೇದ್ಯಶಯುಕ್ತಿ ಚಮತ್ಕಾರ ಸಂದೋಹದಾಯೀ ಸ್ವಭಜಕ ಬ್ರಹ್ಮಾದೀನಾಂ ಕಥಂ ನ ಸಾರ್ವಜ್ಞದ ಇತಿ ಪರಂ ದೂಷಯೇದಿತಿ ಭಾವಃ । ಸ್ವೀಯಕೃತೇಃ ಪರದೂಷಣೇ ಕಥಂ ಶಕ್ತಿರಿತ್ಯತ ಆಹ – **ಹಯಗ್ರೀವೇತಿ** ॥ ೮೪೯ ॥

**ಶ್ರುತ್ಯಾ ದ್ವಿತೀಯಮಾತ್ರಸ್ಯ ನಿಷೇಧೇ ಸತಿ ತೇ ಮತೇ ।**
**ಅತ್ಯಂತಾಭಾವೋಽಪಿ ನೇತಿ ದ್ವಿತೀಯಂ ಪುನರಾಪತೇತ್ ॥ ೮೫೦ ॥**

**ಅರ್ಥ–** ತೇ ಮತೇ= ನಿನ್ನ ಮತದಲ್ಲಿ, ಶ್ರುತ್ಯಾ= ಶ್ರುತಿಯಿಂದ, ದ್ವಿತೀಯಮಾತ್ರಸ್ಯ ನಿಷೇಧೇ ಸತಿ= ದ್ವಿತೀಯವಾದುದನ್ನೆಲ್ಲಾ ನಿಷೇಧ ಮಾಡಿದರೆ, ಅತ್ಯಂತಾಭಾವೋಽಪಿ ನ ಇತಿ= ಅತ್ಯಂತಾಭಾವವೂ ಇಲ್ಲವೆಂದು, ದ್ವಿತೀಯಂ= ದ್ವಿತೀಯ ವಸ್ತುವು, ಪುನಃ= ಮತ್ತೆ, ಆಪತೇತ್= ಉಂಟಾಗುತ್ತದೆ.

**ಅನುವಾದ–** ನಿನ್ನ ಮತದಲ್ಲಿ ಏಕಮೇವಾದ್ವಿತೀಯಂ ಎಂಬ ಶ್ರುತಿಯು ದ್ವಿತೀಯ ಮಾತ್ರವನ್ನು ನಿಷೇಧ ಮಾಡುತ್ತದೆಯೆಂದಾದರೆ ಅತ್ಯಂತಾಭಾವವು ನಿಷೇಧಿಸಲ್ಪಡುವುದರಿಂದ ದ್ವಿತೀಯ ವಸ್ತುವಿನ ಪುನರುನ್ಮಜ್ಜನೆಯೇ ಉಂಟಾಗುತ್ತದೆ.

**ಭಾವವಿಲಾಸಿನೀ–** ಇದಾನೀಮೇಕಮೇವಾದ್ವಿತೀಯಮಿತಿ ಶ್ರುತ್ಯಾ ಭಾವಾಭಾವಾತ್ಮಕ-ದ್ವಿತೀಯಮಾತ್ರನಿಷೇಧಃ ಕ್ರಿಯತೇ ವಾ ಉತ ಭಾವತ್ವೇನ ಸಕಲಭಾವಾನಾಮೇವ ನಿಷೇಧಃ ಕ್ರಿಯತೇ ವಾ, ಅಥವಾ ಸಕಲಭಾವಾನಾಂ ಸ್ವರೂಪಸ್ಯಾಪಿ ನಿಷೇಧಃ ಕ್ರಿಯತೇ ವಾ ಬ್ರಹ್ಮವ್ಯತಿರಿಕ್ತ ಸಕಲಭಾವಸ್ವರೂಪಾಣಾಮೇವ ನಿಷೇಧಃ ಕ್ರಿಯತೇ ವೇತ್ಯಾದಿ ವಿಕಲ್ಪಂ ಮನಸಿ ನಿಧಾಯ ಕ್ರಮೇಣ ದೂಷಯತಿ ॥ **ಶ್ರುತ್ಯೇತ್ಯಾದಿನಾ** ॥ ದ್ವಿತೀಯಮಾತ್ರಸ್ಯ ಭಾವಾಭಾವಾತ್ಮಕದ್ವಿತೀಯಮಾತ್ರಸ್ಯ ಅತ್ಯಂತಾಭಾವೋಽಪಿ ನೇತಿ ಕೃತ್ವಾ ದ್ವಿತೀಯಂ ಭಾವರೂಪದ್ವಿತೀಯಂ ಪುನರಾಪತೇದಿತಿ ಸಂಬಂಧಃ । ಅಭಾವಾಭಾವಸ್ಯ ಭಾವಾತ್ಮಕತ್ವಾತ್ ಅತ್ಯಂತಾಭಾವನಿಷೇಧೇ ಭಾವಾತ್ಮಕಂ ದ್ವಿತೀಯಂ ಬಲಾತ್ಸಿದ್ಧ್ಯೇದಿತಿ ಭಾವಃ । ಉಪಲಕ್ಷಣಂ ಚೈತತ್ । ಭಾವನಿಷೇಧೇ ಚ ತದಭಾವೋಽಪ್ಯುರ್ವರಿತಃ ಸ್ಯಾತ್ । ಭೂತಲೇ ಘಟಾಭಾವನಿಷೇಧಕಾಲೇ ಘಟದರ್ಶನೇನ ಘಟನಿಷೇಧ ಕಾಲೇ ಚ ಘಟಾಭಾವದರ್ಶನೇನೋಭಯ ನಿಷೇಧಸ್ತ್ವಸಂಭಾವಿತ ಏವೇತ್ಯಪಿ ದ್ರಷ್ಟವ್ಯಮ್ ॥ ೮೫೦ ॥

**ವಿವರಣೆ–** ಇನ್ನು ಏಕಮೇವಾದ್ವಿತೀಯಂ ಎಂಬ ಶ್ರುತ್ಯರ್ಥವನ್ನು ವಿಚಾರ ಮಾಡುತ್ತಾರೆ. ಈ ಶ್ರುತಿಯು ಭಾವಾಭಾವಾತ್ಮಕವಾದ ಎಲ್ಲಾ ದ್ವಿತೀಯವನ್ನೂ ನಿಷೇಧ ಮಾಡುತ್ತದೆಯೋ ಅಥವಾ ಭಾವತ್ವೇನ ಸಕಲ ಭಾವಗಳನ್ನು ಮಾತ್ರ ನಿಷೇಧ ಮಾಡುತ್ತ ದೆಯೋ ಅಥವಾ ಸಕಲ ಭಾವಗಳನ್ನು ಸ್ವರೂಪತಃ ಏವ ನಿಷೇಧ ಮಾಡುತ್ತದೆಯೋ ಅಥವಾ ಬ್ರಹ್ಮವ್ಯತಿರಿಕ್ತವಾದ ಸಕಲಭಾವಸ್ವರೂಪಗಳನ್ನು ನಿಷೇಧ ಮಾಡುತ್ತದೆಯೋ ಎಂಬ ವಿಕಲ್ಪಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಕ್ರಮವಾಗಿ ದೂಷಿಸುತ್ತಾರೆ. ಭಾವಾಭಾವ ರೂಪವಾದ ಎಲ್ಲಾ ದ್ವಿತೀಯವನ್ನು ನಿಷೇಧ ಮಾಡುತ್ತದೆ ಎಂಬ ಪಕ್ಷದಲ್ಲಿ ಅಭಾವವನ್ನು ನಿಷೇಧ ಮಾಡಿದರೆ ಅಭಾವಾಭಾವವು ಭಾವರೂಪ- ವಾಗುವುದರಿಂದ ಪುನಃ ಭಾವದ ಉನ್ಮಜ್ಜನ ಉಂಟಾಗುತ್ತದೆ, ಭೂತಲದಲ್ಲಿ ಘಟಾಭಾವ- ವನ್ನು ನಿಷೇಧ ಮಾಡಿದರೆ ಘಟವು ಸಿದ್ಧವಾಗುವಂತೆ ಎಂದು ದೋಷವನ್ನು ಹೇಳುತ್ತಾರೆ.

ಭಾವಸ್ಯೈವ ನಿಷೇಧೇ ಸತ್ಯಭಾವಾಭಾವಸಂಭವಾತ್ ।
ತದಾಕಾರೇಣ ಸಕಲಂ ದ್ವಿತೀಯಂ ಪುನರಾಪತೇತ್ ॥ ೮೫೧ ॥

**ಅರ್ಥ–** ಭಾವಸ್ಯೈವ= ಭಾವವನ್ನು ಮಾತ್ರ, ನಿಷೇಧೇ ಸತಿ= ನಿಷೇಧವನ್ನು ಮಾಡಿದರೆ, ಅಭಾವಾಭಾವಸಂಭವಾತ್= ಅಭಾವಾಭಾವವು ಇರಬಹುದಾದ್ದರಿಂದ, ತದಾಕಾರೇಣ= ಅಭಾವಾಭಾವತ್ವಾಕಾರದಿಂದ, ಸಕಲಂ ದ್ವಿತೀಯಂ= ಎಲ್ಲ ದ್ವಿತೀಯವು, ಪುನಃ ಆಪತೇತ್= ಪುನಃ ಉಂಟಾಗುತ್ತದೆ.

**ಅನುವಾದ–** ಭಾವವನ್ನು ಮಾತ್ರ ನಿಷೇಧ ಮಾಡಿದರೆ ಅಭಾವಾಭಾವವು ಇರಬಹುದಾದ್ದರಿಂದ ಅಭಾವಾಭಾವತ್ವರೂಪದಿಂದ ಸಕಲ ಭಾವಗಳಿಗೂ ಪುನಃ ಸ್ಥಿತಿಯು ಉಂಟಾಗುತ್ತದೆ.

**ಭಾವವಿಲಾಸಿನೀ–** ದ್ವಿತೀಯಂ ದೂಷಯತಿ ॥ **ಭಾವಸ್ಯೇತಿ** ॥ ತದಾಕಾರೇಣ ಅಭಾವಾಭಾವಕಾರೇಣ । ಭಾವತ್ವಾಕಾರೇಣ ಭಾವನಿಷೇಧೇಽಪಿ ಅಭಾವಾಭಾವರೂಪೇಣ ತಸ್ಯೈವಾವಸ್ಥಾನಸಂಭವಾದಿತಿ ಭಾವಃ ॥ ೮೫೧ ॥

**ವಿವರಣೆ–** ಭಾವತ್ವೇನ ಸಕಲಭಾವ ನಿಷೇಧ ಎಂಬ ಎರಡನೆಯ ಪಕ್ಷದಲ್ಲಿ ಇಲ್ಲಿ ದೋಷವನ್ನು ಹೇಳುತ್ತಾರೆ. ಭಾವತ್ವೇನ ಭಾವವನ್ನು ನಿಷೇಧ ಮಾಡಿದರೂ ಅಭಾವಾಭಾವತ್ವೇನ ಭಾವವು ಇರಬಹುದಾದ್ದರಿಂದ ಅಭಾವಾಭಾವವು ಭಾವರೂಪವೇ ಆಗುವುದರಿಂದ ಪುನಃ ಭಾವಗಳ ಉನ್ಮಜ್ಜನವು ಉಂಟಾಗುತ್ತದೆ ಎಂದು ಅಭಿಪ್ರಾಯ.

**ಭಾವಸ್ವರೂಪಮಾತ್ರಸ್ಯಾಸತ್ತ್ವಾತ್ ತಸ್ಯಾಪಿ ಬಾಧನೇ ।**
**ಬ್ರಾಹ್ಮ್ಯಾಶ್ಚಿತ್ತೋಪಿ ಬಾಧೇನ ದ್ವಿತೀಯಂ ಪುನರಾಪತೇತ್ ॥ ೮೫೨ ॥**

**ಅರ್ಥ–** ಭಾವಸ್ವರೂಪಮಾತ್ರಸ್ಯ= ಯಾವ ಆಕಾರಗಳಲ್ಲೂ ಭಾವವಿಲ್ಲವೆಂದು, ಬಾಧನೇ= ನಿಷೇಧ ಮಾಡಿದರೆ, ಅಸತ್ತ್ವಾತ್= ಸ್ವರೂಪೇಣಭಾವನಿಷೇಧವೇ ಮಿಥ್ಯಾತ್ವ ರೂಪವಾದುದರಿಂದ, ಬ್ರಾಹ್ಮ್ಯಾಶ್ಚಿತ್ತೋಪಿ= ಬ್ರಹ್ಮರೂಪವಾದ ಚೈತನ್ಯಕ್ಕೂ, ಬಾಧೇನ= ಬಾಧ ಉಂಟಾಗುವುದರಿಂದ, ದ್ವಿತೀಯಂ= ದ್ವಿತೀಯವಾದ ವಸ್ತುವು, ಪುನಃ ಆಪತೇತ್= ಪುನಃ ಉಂಟಾಗುತ್ತದೆ.

**ಅನುವಾದ–** ಎಲ್ಲ ಭಾವವನ್ನು ಸ್ವರೂಪೇಣ ನಿಷೇಧ ಮಾಡಿದರೆ ಸ್ವರೂಪೇಣ ನಿಷೇಧವೇ ಮಿಥ್ಯಾತ್ವರೂಪವಾದ್ದರಿಂದ ಬ್ರಹ್ಮರೂಪಚೈತನ್ಯಕ್ಕೂ ಬಾಧ ಉಂಟಾಗುತ್ತದೆ. ಬ್ರಹ್ಮರೂಪ ಚೈತನ್ಯವೇ ಇಲ್ಲದಿರುವುದರಿಂದ ಬ್ರಹ್ಮಪ್ರಮಾರೂಪವಾದ ಬಾಧಕವೂ ಇಲ್ಲದಿರುವುದರಿಂದ ಆಗ ಜಗತ್ತು ಪುನಃ ಸತ್ಯವಾಗುತ್ತದೆ.

**ಭಾವವಿಲಾಸಿನೀ–** ತೃತೀಯಂ ದೂಷಯತಿ ॥ **ಭಾವಸ್ವರೂಪೇತಿ** ॥ ಭಾವಸ್ವರೂಪಮಾತ್ರಸ್ಯ ಯೇನ ಕೇನಾಪ್ಯಾಕಾರೇಣ ಭಾವತ್ವಾಕಾರೇಣ ವಿಶಿಷ್ಟಸ್ಯ ಸಕಲಭಾವಸ್ವರೂಪಸ್ಯೇತ್ಯರ್ಥಃ । ಅಸತ್ತ್ವಾನ್ಮಿಥ್ಯಾತ್ವಾತ್ ತಸ್ಯ ಭಾವಸ್ವರೂಪಸ್ಯ ಬ್ರಾಹ್ಮ್ಯಾಃ ಪರಬ್ರಹ್ಮಸಂಬಂಧಿನ್ಯಾಃ ಭಾವಮಾತ್ರನಿಷೇಧೇ ಬ್ರಹ್ಮಚಿತೋಽಪಿ ನಿಷೇಧಪ್ರಸಂಗೇನ ಬ್ರಹ್ಮೈವ ನ ಸ್ಯಾತ್ । ತಥಾ ಚ ಬ್ರಹ್ಮಪ್ರಮಾಖ್ಯಬಾಧಕಾಭಾವೇನ ದ್ವಿತೀಯಂ ಜಗತ್ ಪುನರಾಪತೇದಿತಿ ಭಾವಃ ॥ ೮೫೨ ॥

**ವಿವರಣೆ–** ಎಲ್ಲ ಭಾವಗಳಿಗೆ ಸ್ವರೂಪೇಣ ನಿಷೇಧ ಎಂಬ ಮೂರನೆಯ ಪಕ್ಷವನ್ನು ಇಲ್ಲಿ ದೂಷಿಸುತ್ತಾರೆ. ಬ್ರಹ್ಮನಿಗೆ ಬಾಧ ಬಂದರೆ ಬ್ರಹ್ಮಪ್ರಮಾ ಎಂಬುದೇ ಇರುವುದಿಲ್ಲ. ನೀನು ಬ್ರಹ್ಮಪ್ರಮೆಯನ್ನು ಬಾಧವೆಂದು ಅಂಗೀಕರಿಸುತ್ತೀಯೇ. ಅದೇ ಇಲ್ಲದಿದ್ದಮೇಲೆ ಜಗತ್ತಿಗೆ ಬಾಧವೇ ಇಲ್ಲದಿರುವುದರಿಂದ ಎಲ್ಲ ದ್ವಿತೀಯವು ಇರುತ್ತದೆ ಎಂದು ಅಭಿಪ್ರಾಯ.

**ಬ್ರಹ್ಮರೂಪಸ್ಯ ಭಾವಸ್ಯಾನಿಷೇಧೇ ತದ್ಗುಣಾಂಬುಧೇಃ ।**
**ಅಬಾಧಸಂಭವೇನ ತ್ವದ್ದ್ವಿತೀಯಂ ಪುನರಾಪತೇತ್ ॥ ೮೫೩ ॥**

**ಅರ್ಥ–** ಬ್ರಹ್ಮರೂಪಸ್ಯ ಭಾವಸ್ಯ= ಬ್ರಹ್ಮರೂಪವಾದ ಭಾವವನ್ನು, ಅನಿಷೇಧೇ= ನಿಷೇಧ ಮಾಡದಿದ್ದರೆ, ತದ್ಗುಣಾಂಬುಧೇಃ= ಬ್ರಹ್ಮನ ಗುಣಸಮೂಹಕ್ಕೂ ಸಹ, ಅಬಾಧ ಸಂಭವೇನ= ಬಾಧವು ಇಲ್ಲದಿರುವುದರಿಂದ, ತ್ವದ್ದ್ವಿತೀಯಂ= ನಿನ್ನ ರೀತಿಯಲ್ಲಿ ದ್ವಿತೀಯವಾದ ಬ್ರಹ್ಮನ ಗುಣಸಮುದ್ರವು, ಪುನಃ ಆಪತೇತ್= ಪುನಃ ಉಂಟಾಗುತ್ತದೆ.

**ಅನುವಾದ–** ಬ್ರಹ್ಮರೂಪವಾದ ಭಾವವನ್ನು ನಿಷೇಧ ಮಾಡದಿದ್ದರೆ ಬ್ರಹ್ಮನ ಗುಣಸಮೂಹಕ್ಕೂ ನಿಷೇಧವಿಲ್ಲದಿರುವುದರಿಂದ ನಿನ್ನ ರೀತಿಯಲ್ಲಿ ದ್ವಿತೀಯವಾದ ಅವನ ಗುಣಗಳು ಪುನಃ ಉಳಿಯುತ್ತವೆ.

**ಭಾವವಿಲಾಸಿನೀ–** ಚತುರ್ಥಂ ದೂಷಯತಿ ॥ ಬ್ರಹ್ಮರೂಪಸ್ಯೇತಿ ॥ ತದ್ಗುಣಾಂಬುಧೇಃ ಬ್ರಹ್ಮಣಃ ಸಾರ್ವಜ್ಞಾದಿಗುಣಾಂಬುಧೇಃ ಅಬಾಧಸಂಭವೇನ । ಆವಯೋರ್ಮತೇ ಗುಣಗುಣಿನೋ-ರಭೇದೇನ ತಸ್ಯಾಪಿ ಬ್ರಹ್ಮರೂಪಭಾವತಯಾ ಬಾಧಾಭಾವಸಂಭವೇನೇತ್ಯರ್ಥಃ । ಏತಾದೃಶ ಗುಣಸಮುದಾಯಸ್ಯಾಪಿ ಮಾಯಾವಾದಿನಾ ನಿಷೇಧ್ಯ ದ್ವಿತೀಯಕೋಟೌ ಪ್ರಕ್ಷೇಪಾತ್ ದ್ವಿತೀಯಮಿತ್ಯುಕ್ತಮ್ ಯದ್ಯಪಿ ಮೃದ್‌ಘಟಯೋರ್ದ್ರವ್ಯಯೋರೇಕಸತ್ವೇಪ್ಯಪರನಾಶೋಸ್ತಿ ತಥಾಪಿ ಅತ್ಯಂತಾಭಾವರೂಪಮಿಥ್ಯಾತ್ವಂ ತು ನ ಕುತ್ರಾಪಿ । ಅಪಾಕಜತೇಜೋರೂಪ ಬ್ರಹ್ಮಗುಣೇಷು ನಾಶೋಪಿ ನೋಚಿತ ಇತಿ ಭಾವಃ ॥ ೮೫೩ ॥

**ವಿವರಣೆ–** ಬ್ರಹ್ಮವ್ಯತಿರಿಕ್ತಸರ್ವಭಾವನಿಷೇಧ ಎಂಬ ಚತುರ್ಥಪಕ್ಷಕ್ಕೆ ಇಲ್ಲಿ ದೋಷವನ್ನು ಹೇಳುತ್ತಾರೆ. ಬ್ರಹ್ಮನ ಗುಣಗಳು ಬ್ರಹ್ಮನಿಂದ ಅಭಿನ್ನವಾದುದರಿಂದ ಬ್ರಹ್ಮನಿಗೆ ಬಾಧವಿಲ್ಲದಿದ್ದರೆ ಬ್ರಹ್ಮನ ಗುಣಗಳಿಗೂ ಬಾಧವಿಲ್ಲ. ಗುಣಗುಣಿಗಳಿಗೆ ನಮ್ಮಿಬ್ಬರ ಮತದಲ್ಲಿ ಅಭೇದವಿದೆ. ಆದ್ದರಿಂದ ಬ್ರಹ್ಮನಿಗೆ ಬಾಧವಿಲ್ಲದಿದ್ದರೆ ಬ್ರಹ್ಮನ ಗುಣಗಳಿಗೂ ಬಾಧವಿಲ್ಲದಿರುವುದರಿಂದ ದ್ವಿತೀಯ ವಸ್ತುವಿನ ಅವಸ್ಥಿತಿ ಉಂಟಾಗುತ್ತದೆ ಎಂದು ಅಭಿಪ್ರಾಯ.

**ಏಕಶೇಷೇಣ ತದ್ಬಾಧೇ ಪುನರ್ಜ್ಞಾನನಿಷೇಧನಾತ್ ।**
**ಬ್ರಹ್ಮಣೋ ಜಡತಾಪತ್ತ್ಯಾ ದ್ವಿತೀಯಂ ಪುನರಾಪತೇತ್ ॥ ೮೫೪ ॥**

**ಅರ್ಥ–** ಏಕಶೇಷೇಣ= ಒಂದು ಮಾತ್ರವೇ ಉಳಿಯಬೇಕಾಗುವುದರಿಂದ, ತದ್ಬಾಧೇ= ಬ್ರಹ್ಮನ ಗುಣಗಳನ್ನು ಬಾಧಿಸುವುದಾದರೆ, ಜ್ಞಾನನಿಷೇಧನಾತ್= ಬ್ರಹ್ಮನ ಜ್ಞಾನವನ್ನೂ ನಿಷೇಧ ಮಾಡುವುದರಿಂದ, ಪುನಃ= ಮತ್ತೆ, ಬ್ರಹ್ಮಣಃ= ಬ್ರಹ್ಮನಿಗೆ, ಜಡತಾಪತ್ತ್ಯಾ= ಜಡತ್ವಾಪತ್ತಿಯು ಉಂಟಾಗುವುದರಿಂದ, ದ್ವಿತೀಯಂ= ದ್ವಿತೀಯವಸ್ತುವು, ಪುನರಾಪತೇತ್= ಪುನಃ ಉಂಟಾಗುತ್ತದೆ.

**ಅನುವಾದ–** ಏಕಶೇಷ ಪ್ರಸಂಗದಿಂದ ಬ್ರಹ್ಮನ ಗುಣಗಳಿಗೂ ಬಾಧವನ್ನು ಹೇಳುವುದಾದರೆ ಬ್ರಹ್ಮನ ಜ್ಞಾನವನ್ನೂ ನಿಷೇಧ ಮಾಡುವುದರಿಂದ ಬ್ರಹ್ಮನಿಗೆ ಜಡತ್ವ ಉಂಟಾಗುತ್ತದೆ. ಆಗ ಪುನಃ ದ್ವಿತೀಯ ವಸ್ತುವಿನ ಉನ್ಮಜ್ಜನವು ಉಂಟಾಗುತ್ತದೆ.

**ಭಾವವಿಲಾಸಿನೀ–** ನನು ಬ್ರಹ್ಮಗುಣಯೋರಭೇದೇ ಅಭಿನ್ನಯೋರ್ಘಟ(ಕಲಶಯೋ)-ಕರೀರಯೋರೇಕಶೇಷತ್ವದರ್ಶನೇನ ಪ್ರಕೃತೇ ಏಕಶೇಷತ್ವಪ್ರಾಪ್ತೌ ಪ್ರಾಧಾನ್ಯಾತ್ತದ್ಧರ್ಮಿಣ ಏವಾವಶೇಷೇ ಪರಿಶೇಷಗುಣಾನಾಮೇವ ಬಾಧ ಇತ್ಯತ ಆಹ – **ಏಕಶೇಷೇಣೇತಿ** ॥ ಜಡ-ಪ್ರಮಾಯಾಃ ಬಾಧಕತ್ವಾಸಂಭವಾತ್ ದ್ವಿತೀಯಂ ಪುನರಾಪತೇದಿತಿ ಭಾವಃ । ಉಪಲಕ್ಷಣಂ ಚೈತತ್ । ಕರೀರಸ್ಯ ಘಟಗುಣತ್ವಾಭಾವೇನ ಘಟತನ್ಮಾತ್ರತ್ವಾದಸ್ತ್ವೇಕಶೇಷಃ । ಗುಣಗುಣಿನೋಸ್ತು ಭೇದವಾದಿನಸ್ತವ ಮತೇ ಭೇದಸದ್ಭಾವಾತ್ ಮಮ ಮತೇ ವಿಶೇಷಸದ್ಭಾವನ್ನೈಕಶೇಷ ಇತ್ಯಪಿ ದ್ರಷ್ಟವ್ಯಮ್ ॥ ೮೫೪ ॥

**ವಿವರಣೆ–** ಬ್ರಹ್ಮ ಮತ್ತು ಬ್ರಹ್ಮನ ಗುಣಗಳಿಗೆ ಅಭೇದವನ್ನು ಅಂಗೀಕರಿಸಿದರೆ ಘಟ ಮತ್ತು ಕಲಶಗಳಿಗೆ ಅಭೇದವಿರುವಾಗ ಹೇಗೆ ಒಂದೇ ವಸ್ತುವು ಉಳಿಯುತ್ತದೆಯೋ, ಹಾಗೆ ಬ್ರಹ್ಮನಾಗಲೀ ಅಥವಾ ಗುಣಗಳಾಗಲೀ ಉಳಿಯಬೇಕು. ಗುಣಗಳಾದರೂ ಧರ್ಮಗಳು, ಬ್ರಹ್ಮನು ಧರ್ಮಿ, ಧರ್ಮಗಳಿಗಿಂತ ಧರ್ಮಿಯು ಪ್ರಧಾನ. ಆದ್ದರಿಂದ ಗುಣಗಳಿಗೇ ಬಾಧವೇ ಹೊರತು ಬ್ರಹ್ಮನಿಗೆ ಬಾಧವಿಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಬ್ರಹ್ಮನ ಗುಣಗಳು ಬಾಧಿತವಾದರೆ ಜ್ಞಾನವೂ ಒಂದು ಗುಣವಾದ್ದರಿಂದ ಬ್ರಹ್ಮನ ಜ್ಞಾನವೂ ಬಾಧಿತವಾಗುತ್ತದೆ. ಬ್ರಹ್ಮನ ಜ್ಞಾನವು ಬಾಧಿತವಾದರೆ ಬ್ರಹ್ಮನಲ್ಲಿ ಜ್ಞಾನವಿಲ್ಲ ಎಂದಾಗಿ ಬ್ರಹ್ಮನು ಜಡ ಎಂದಾಗುತ್ತದೆ. ಜಡಪ್ರಮಾ ಎಂಬುದು ನಿನ್ನ ರೀತಿ ಅಜ್ಞಾನನಿವರ್ತಕವೂ ಅಲ್ಲ, ಬಾಧವೂ ಅಲ್ಲ. ಆದ್ದರಿಂದ ಬಾಧವೇ ಇಲ್ಲದಿರುವುದರಿಂದ ಜಗತ್ತು ಸತ್ಯವಾಗಿಯೇ ಉಳಿಯುತ್ತದೆ ಎಂದು ಅಭಿಪ್ರಾಯ. ಈ ದೋಷವನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. ಘಟಕಲಶಗಳಲ್ಲಿ ಗುಣಗುಣಿಭಾವವು ಇಲ್ಲದಿರುವುದರಿಂದ ಒಂದೇ ಉಳಿಯುತ್ತದೆ. ಗುಣಗುಣಿಗಳ ಸ್ಥಳದಲ್ಲಿ ಮಾತ್ರ ನೀನು ಭೇದಾಭೇದವನ್ನು ಒಪ್ಪುತ್ತೀಯೆ, ನಾವು ವಿಶೇಷವನ್ನು ಒಪ್ಪುತ್ತೇವೆ. ಆದ್ದರಿಂದ ನಿನಗೆ ಭೇದದ ಬಲದಿಂದ ಮತ್ತು ನಮಗೆ ವಿಶೇಷದ ಬಲದಿಂದ ಏಕಶೇಷ ಪ್ರಸಕ್ತಿಯೇ ಇಲ್ಲ ಎಂದೂ ಇಟ್ಟುಕೊಳ್ಳಬೇಕು.

**ಶ್ರುತ್ಯಬಾಧೇ ವೇದರೂಪಂ ದ್ವಿತೀಯಂ ಪುನರಾಪತೇತ್ ।**
**ಶ್ರುತೇರ್ಬಾಧೇ ತ್ವಬಾಧ್ಯಂ ತದ್ ದ್ವಿತೀಯಂ ಪುನರಾಪತೇತ್॥ ೮೫೫ ॥**

**ಅರ್ಥ–** ಶ್ರುತ್ಯಬಾಧೇ= ಶ್ರುತಿಗೆ ಬಾಧವಿಲ್ಲದಿದ್ದರೆ, ವೇದರೂಪಂ ದ್ವಿತೀಯಂ= ವೇದರೂಪವಾದ ದ್ವಿತೀಯವು, ಪುನಃ ಆಪತೇತ್= ಪುನಃ ಉಂಟಾಗುತ್ತದೆ, ಶ್ರುತೇರ್ಬಾಧೇ

ತು= ಶ್ರುತಿಯೇ ಬಾಧಿತವಾದರೆ, ಅಬಾಧ್ಯಂ ತದ್ವಿತೀಯಂ= ಅಬಾಧ್ಯವಾದ ಆ ದ್ವಿತೀಯವು, ಪುನಃ ಆಪತೇತ್= ಪುನಃ ಉಂಟಾಗುತ್ತದೆ.

**ಅನುವಾದ–** ಶ್ರುತಿಗೆ ಬಾಧವಿಲ್ಲದಿದ್ದರೆ ವೇದರೂಪವಾದ ದ್ವಿತೀಯವೇ ಇರುವುದರಿಂದ ದ್ವಿತೀಯ ವಸ್ತುವೇ ಉಂಟಾಗುತ್ತದೆ. ಶ್ರುತಿಗೇ ಬಾಧವಿದ್ದರೆ ಬಾಧಕ ಶ್ರುತಿಯೇ ಇಲ್ಲವೆಂದಾಗುವುದರಿಂದ ಅಬಾಧ್ಯವಾದ ದ್ವಿತೀಯವಾದ ಜಗತ್ತು ಹಾಗೆಯೇ ಉಳಿಯುತ್ತದೆ.

**ಭಾವವಿಲಾಸಿನೀ–** ಪುನರಪಿ ಪ್ರಕಾರದ್ವಯೇನ ದ್ವಿತೀಯಾಪತ್ತಿಮುಪಪಾದಯತಿ– **ಶ್ರುತೀತಿ ॥** ಅಬಾಧ್ಯಂ ಮಿಥ್ಯಾಭೂತವೇದಸ್ಯ ಬಾಷ್ಪಾರೋಪಿತಧೂಮವತ್ ಪ್ರಮಾಜನಕತ್ವಾಸಂಭವೇನ ಬಾಧಕಪ್ರಮಾಭಾವಾದಬಾಧ್ಯಮ್ । ತತ್‌ಜಗತ್ ॥ ೮೫೫ ॥

**ವಿವರಣೆ–** ಪುನಃ ಬೇರೆ ಎರಡು ರೀತಿಯಿಂದ ದ್ವಿತೀಯಾಪತ್ತಿಯನ್ನು ಉಪಪಾದನೆ ಮಾಡುತ್ತಾರೆ. ಶ್ರುತಿಗೆ ಬಾಧವಿದ್ದರೆ ಶ್ರುತಿಯೇ ಆರೋಪಿತವೆಂದಾಯಿತು. ಆರೋಪಿತವಾದ ಧೂಮವು ಹೇಗೆ ಅಗ್ನಿಯನ್ನು ಸಾಧಿಸಿಕೊಡುವುದಿಲ್ಲ, ಅಗ್ನಿ ಪ್ರಮಾ ಜನಕವಲ್ಲವೋ, ಹಾಗೆಯೇ ಆರೋಪಿತ ಶ್ರುತಿಯೂ ಸಹ ನೀನು ಬಾಧವೆಂದು ಅಂಗೀಕರಿಸುವ ಬ್ರಹ್ಮಪ್ರಮಾ ಜನಕವಲ್ಲ. ಆದ್ದರಿಂದ ದ್ವಿತೀಯವು ಹಾಗೆಯೇ ಉಳಿಯುತ್ತದೆ ಎಂದು ಅಭಿಪ್ರಾಯ. ನಮ್ಮ ರೀತಿಯಲ್ಲಿ ಆರೋಪಿತವು ಅಸತ್ಯ ವಾದುದರಿಂದ ಪ್ರಮಾಜನಕವಲ್ಲ. ನಿನ್ನ ರೀತಿಯಲ್ಲಿ ಆರೋಪಿತವಾದುದಕ್ಕೆ ಅಸತ್ತ್ವವನ್ನು ಒಪ್ಪದಿದ್ದರೂ ಪ್ರಮಾಜನಕತ್ವವಂತೂ ಇಲ್ಲ. ಆದ್ದರಿಂದ ದ್ವಿತೀಯದ ಆಪತ್ತಿಯು ಪುನಃ ಉಂಟಾಗುತ್ತದೆ.

**ವಿಶ್ವಾನ್ಯದ್ ಬ್ರಹ್ಮ ನಾಶಾಸ್ಯಂ ದ್ವಿತೀಯಸ್ಯೈವ ದೂಷಣೇ ।**
**ತಚ್ಛೇಷೇಽನ್ಯಸ್ಯ ತನ್ನ್ಯಾಯಾದ್ ದ್ವಿತೀಯಂ ಪುನರಾಪತೇತ್ ॥ ೮೫೬ ॥**

**ಅರ್ಥ–** ದ್ವಿತೀಯಸ್ಯೈವ= ದ್ವಿತೀಯವಾದುದನ್ನೇ, ದೂಷಣೇ= ಬಾಧಿತವೆಂದು ದೂಷಿಸಿದರೆ, ವಿಶ್ವಾನ್ಯತ್= ಜಗತ್ತಿಗಿಂತ ಭಿನ್ನವಾದ, ಬ್ರಹ್ಮ= ಬ್ರಹ್ಮನೂ ಸಹ, ನಾಶಾಸ್ಯಂ= ಅಪೇಕ್ಷಿಸಲ್ಪಡಬಾರದು, ತಚ್ಛೇಷೇ= ಬ್ರಹ್ಮನನ್ನು ಉಳಿಸಿದರೆ, ತನ್ನ್ಯಾಯಾತ್= ಅದೇ ನ್ಯಾಯದಿಂದ, ಅನ್ಯಸ್ಯ= ಜಗತ್ತಿಗೂ (ಶೇಷಾತ್) ಅವಸ್ಥಿತಿಯು ಸಿದ್ಧವಾಗುವುದರಿಂದ, ಪುನಃ= ಮತ್ತೆ, ದ್ವಿತೀಯಂ= ದ್ವಿತೀಯ ವಸ್ತುವು, ಆಪತೇತ್= ಉಂಟಾಗುತ್ತದೆ.

**ಅನುವಾದ–** ದ್ವಿತೀಯಮಾತ್ರವನ್ನು ನಿಷೇಧ ಮಾಡಿದರೆ ವಿಶ್ವಕ್ಕಿಂತ ಭಿನ್ನನಾದ ಬ್ರಹ್ಮನನ್ನೂ ನಿಷೇಧ ಮಾಡಬೇಕಾಗುತ್ತದೆ. ದ್ವಿತೀಯನಾದ ಬ್ರಹ್ಮನು ಉಳಿಯುವುದಾದರೆ ಅದೇ ನ್ಯಾಯದಿಂದ ದ್ವಿತೀಯವಾದ ಜಗತ್ತೂ ಪುನಃ ಉಳಿಯುತ್ತದೆ.

**ಭಾವವಿಲಾಸಿನೀ–** ಕಿಂಚ ದ್ವಿತೀಯಶಬ್ದಸ್ಯ ಸರ್ವನಾಮಶಬ್ದತ್ವೇನ ಜಗತೋ ದ್ವಿತೀಯಂ ಬ್ರಹ್ಮಾಪಿ ಭವತಿ । ಏವಂ ಚ ಸಕಲದ್ವಿತೀಯಸ್ಯಾಪಿ ನಿಷೇಧೇ ಬ್ರಹ್ಮಣೋಽಪಿ ನಿಷೇಧಃ ಸ್ಯಾತ್ । ಪ್ರಾಮಾಣಿಕತ್ವೇನ ಬ್ರಹ್ಮಣೋ ನಿಷೇಧಾಯೋಗಾತ್ತತಃ ಸಂಕೋಚೇ ತತ ಏವ ಪ್ರಪಂಚಾದಪಿ ಸಂಕೋಚಃಸ್ಯಾತ್ । ಶ್ರುತೇಶ್ಚಾಪ್ರಾಮಾಣಿಕಶೂನ್ಯನಿರ್ಗುಣಾದಿದ್ವಿತೀಯನಿಷೇಧಪರತ್ವಂ ಸ್ಯಾದಿತ್ಯಾಹ – **ವಿಶ್ವಾನ್ಯದಿತಿ** ॥ ಬ್ರಹ್ಮಣೋನ್ಯದ್ವಿತೀಯಂ ನೇತಿ ತು ವಾಕ್ಯಮೇವ ನಾಸ್ತಿ ಯೇನ ಬ್ರಹ್ಮವ್ಯತಿರಿಕ್ತ ದ್ವಿತೀಯಾಖ್ಯ ದ್ವಿತೀಯ ವಿಶೇಷ ನಿಷೇಧ ಏವ ಸ್ಯಾತ್ । ಅದ್ವಿತೀಯಂ ಬ್ರಹ್ಮೇತಿ ವಾಕ್ಯಂ ತು ಸಕಲದ್ವಿತೀಯಾಭಾವಪರತ್ವೇ ಉಕ್ತವಿಧಯಾ ದ್ವಿತೀಯ ತ್ವಾಕ್ರಾಂತ ಬ್ರಹ್ಮಣೋಪ್ಯಭವಂ ಕಥಂ ನ ಬೋಧಯೇದಿತಿ ಭಾವಃ । ತಚ್ಛೇಷೇ ಬ್ರಹ್ಮಣಃ ಶೇಷೇ ತನ್ನ್ಯಾಯಾತ್ ಬ್ರಹ್ಮನ್ಯಾಯಾತ್ ಅನ್ಯಸ್ಯ ಜಗತೋಽಪಿ ಶೇಷೇ ಸತಿ ದ್ವಿತೀಯಂ ಪುನರಾಪತೇದಿತಿ ಸಂಬಂಧಃ । ತನ್ನ್ಯಾಯಾದಿತಿ ವದತಾ ಸದೇವೇದಮಗ್ರ ಆಸೀದಿತಿ ಪ್ರಾಗ್ಬ್ರಹ್ಮಣಃ ಪ್ರಸ್ತುತತ್ವಾತ್ತತ್ ಸಂಕೋಚಶ್ಚೇತ್ತತ್ರೈವ ಇದಮಗ್ರೇ ಅಸ್ಯಾಗ್ರ ಇತಿ ಇದಂ ಪದೇನ ಜಗತಃ ಅಗ್ರಪದೇನ ಕಾಲಸ್ಯೈವ ಪ್ರಸ್ತುತತ್ವಾತ್ಕಾಲಾದಿ- ಪ್ರಪಂಚಾದಪಿ ಸಂಕೋಚಃ ಸ್ಯಾದಿತಿ ಸೂಚಿತಮ್ ॥ ೮೫೬ ॥

**ವಿವರಣೆ–** ದ್ವಿತೀಯ ಎಂಬ ಶಬ್ದವು ಸರ್ವನಾಮಶಬ್ದ. ಬ್ರಹ್ಮನಿಂದ ಜಗತ್ತು ದ್ವಿತೀಯವಾದಂತೆ ಬ್ರಹ್ಮನೂ ಜಗತ್ತಿನಿಂದ ದ್ವಿತೀಯನಾಗುತ್ತಾನೆ. ಸಕಲ ದ್ವಿತೀಯಗಳನ್ನು ನಿಷೇಧ ಮಾಡಿದರೆ ಬ್ರಹ್ಮನನ್ನೂ ನಿಷೇಧ ಮಾಡಬೇಕಾಗುತ್ತದೆ. ಬ್ರಹ್ಮನು ಪ್ರಾಮಾಣಿಕನಾದ್ದರಿಂದ ಅವನನ್ನು ನಿಷೇಧ ಮಾಡುವುದಿಲ್ಲ ಎಂದು ಹೇಳಿದರೆ ಜಗತ್ತೂ ಪ್ರಾಮಾಣಿಕವಾದ್ದರಿಂದ ಜಗತ್ತನ್ನೂ ನಿಷೇಧ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಾಮಾಣಿಕವಾದ ದ್ವಿತೀಯವನ್ನೇ ನಿಷೇಧ ಮಾಡಬೇಕು. ಅಂತಹ ಅಪ್ರಾಮಾಣಿಕ-ವಾದುದು ನಿನಗೆ ಅಭಿಮತವಾದ ನಿರ್ಗುಣಬ್ರಹ್ಮ. ಆದ್ದರಿಂದ ನಿರ್ಗುಣಬ್ರಹ್ಮನನ್ನೇ ಶ್ರುತಿಯು ನಿಷೇಧ ಮಾಡುತ್ತದೆ ಎಂದು ಅಂಗೀಕರಿಸು ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ಸದೇವಸೌಮ್ಯಮಗ್ರ ಆಸೀತ್ ಎಂಬ ಶ್ರುತಿಯಲ್ಲಿ ಸೃಷ್ಟಿಗಿಂತಲೂ ಮೊದಲು ಬ್ರಹ್ಮನು ಇದ್ದನೆಂದು ಹೇಳುವಂತೆ, ಕಾಲವು ಹೇಳಲ್ಪಡುತ್ತದೆ. ಹಾಗೆಯೇ ಇದಂ ಎಂದು ಜಗತ್ತು ಹೇಳಲ್ಪಡುತ್ತದೆ. ಬ್ರಹ್ಮನನ್ನು ಹೇಳಿದ್ದರಿಂದ ಬ್ರಹ್ಮನು ಪ್ರಾಮಾಣಿಕನಾಗುವುದಾದರೆ ಅಲ್ಲಿಯೇ ಜಗತ್ತನ್ನೂ ಮತ್ತು ಕಾಲವನ್ನೂ ಹೇಳುವುದರಿಂದ ಅವುಗಳನ್ನೂ ಪ್ರಾಮಾಣಿಕವೆಂದು ಅಂಗೀಕರಿಸು. ಆದ್ದರಿಂದ ಯಾವುದನ್ನೂ ನಿಷೇಧ ಮಾಡಬೇಡ ಎಂದು ಅಭಿಪ್ರಾಯ.

**ಅಭಾವಸ್ಯ ಯಥಾ ರಕ್ಷಾ ವಾಕ್ಯಪ್ರಾಮಾಣ್ಯಗುಪ್ತಯೇ ।**
**ತಥಾ ಭಾವಸ್ಯ ರಕ್ಷಾಯಾಂ ದ್ವಿತೀಯಂ ಪುನರಾಪತೇತ್ ॥ ೮೫೭ ॥**

**ಅರ್ಥ–** ವಾಕ್ಯಪ್ರಾಮಾಣ್ಯಗುಪ್ತಯೇ= ವಾಕ್ಯಪ್ರಾಮಾಣ್ಯವನ್ನು ರಕ್ಷಿಸಲು, ಅಭಾವಸ್ಯ= ಅಭಾವವನ್ನು, ಯಥಾ= ಹೇಗೆ, ರಕ್ಷಾ= ರಕ್ಷಣೆ ಮಾಡುತ್ತೀಯೋ, ತಥಾ= ಅದರಂತೆ,

ಭಾವಸ್ಯ ರಕ್ಷಾಯಾಂ= ಈ ವಾಕ್ಯರೂಪವಾದ ಭಾವವನ್ನು ರಕ್ಷಣೆ ಮಾಡಿದರೆ, ದ್ವಿತೀಯಂ= ದ್ವಿತೀಯ ವಸ್ತುವು, ಪುನಃ ಆಪತೇತ್= ಪುನಃ ಉಂಟಾಗುತ್ತದೆ.

**ಅನುವಾದ–** ವಾಕ್ಯಪ್ರಾಮಾಣ್ಯವನ್ನು ರಕ್ಷಣೆ ಮಾಡಲು ವಾಕ್ಯ ಪ್ರತಿಪಾದಿತವಾದ ಅಭಾವವು ಬಾಧಿತವಲ್ಲವೆಂದು ಹೇಳುವುದಾದರೆ ವಾಕ್ಯವನ್ನು ರಕ್ಷಣೆ ಮಾಡುವುದಕ್ಕೋಸ್ಕರವಾಗಿ ವಾಕ್ಯಕ್ಕೂ ಬಾಧವನ್ನು ಹೇಳಬೇಡ. ಆಗ ದ್ವಿತೀಯವು ಪುನಃ ಉಂಟಾಗುತ್ತದೆ.

**ಭಾವವಿಲಾಸಿನೀ–** ದ್ವಿತೀಯಪಕ್ಷೇ ದೂಷಣಾಂತರಂ ವದನ್ ಪುನರ್ದ್ವಿತೀಯಾಪತ್ತಿ-ಮೇವೋಪಪಾದಯತಿ ॥ **ಅಭಾವಸ್ಯೇತಿ** ॥ ೮೫೭ ॥

**ವಿವರಣೆ–** ವಾಕ್ಯವಿದ್ದರಷ್ಟೇ ವಾಕ್ಯದ ಪ್ರಾಮಾಣ್ಯವನ್ನು ರಕ್ಷಣೆ ಮಾಡುವುದು. ಆದ್ದರಿಂದ ವಾಕ್ಯಪ್ರಾಮಾಣ್ಯವನ್ನು ರಕ್ಷಣೆ ಮಾಡುವುದಕ್ಕಾಗಿ ವಾಕ್ಯವನ್ನು ಅಬಾಧಿತವೆಂದು ಅಂಗೀಕರಿಸಿದರೆ ವಾಕ್ಯರೂಪವಾದ ದ್ವಿತೀಯದ ಅವಸ್ಥಿತಿಯೇ ಉಂಟಾಗುತ್ತದೆ ಎಂದು ಅಭಿಪ್ರಾಯ.

**ಅನ್ಯೋನ್ಯಾಭಾವರೂಪತ್ವಾದ್ಭಾವಾದ್ ಭಿನ್ನಂ ಭವನ್ಮತೇ ।**
**ಭೇದಪಂಚಕರೂಪಂ ಚ ದ್ವಿತೀಯಂ ಪುನರಾಪತೇತ್ ॥ ೮೫೮ ॥**

**ಅರ್ಥ–** ಭವನ್ಮತೇ= ನಿನ್ನ ಮತದಲ್ಲಿ, ಭೇದಪಂಚಕರೂಪಂ= ಭೇದಪಂಚಕರೂಪವಾದ, ದ್ವಿತೀಯಂ= ದ್ವಿತೀಯವು, ಅನ್ಯೋನ್ಯಾಭಾವರೂಪತ್ವಾತ್= ಭೇದವು ಅನ್ಯೋನ್ಯಾಭಾವ-ರೂಪವಾದ್ದರಿಂದ, ಭಾವಾದ್ಭಿನ್ನಂ= ಭಾವಭಿನ್ನವಾದ, ದ್ವಿತೀಯಂ= ದ್ವಿತೀಯ ವಸ್ತುವು, ಪುನಃ ಆಪತೇತ್= ಪುನಃ ಉಂಟಾಗುತ್ತದೆ.

**ಅನುವಾದ–** ಭೇದಪಂಚಕವು ಅನ್ಯೋನ್ಯಾಭಾವರೂಪವಾದುದು. ಅನ್ಯೋನ್ಯಾ-ಭಾವವನ್ನು ಎಂದರೆ ಭೇದವನ್ನು ನೀನು ಭಾವಭಿನ್ನವೆಂದು ಅಂಗೀಕರಿಸುತ್ತೀಯೆ. ವಾಕ್ಯದ ಪ್ರಾಮಾಣ್ಯದ ರಕ್ಷಣೆಗಾಗಿ ಅಭಾವವನ್ನು ಉಳಿಸುವುದಾದರೆ ಭೇದಪಂಚಕವೂ ಸಹ ಉಳಿಯುತ್ತದೆ.

**ಭಾವವಿಲಾಸಿನೀ–** ದೂಷಣಾಂತರಮಪ್ಯಾಹ – **ಅನ್ಯೋನ್ಯೇತಿ** ॥ ಅಸ್ಮನ್ಮತೇ ಅನ್ಯೋನ್ಯಾ ಭಾವೇ ಘಟಾದಿ ಭಾವಸ್ವರೂಪತ್ವಸ್ಯಾಪಿ ವಿದ್ಯಮಾನತ್ವಾದ್ಭವನ್ಮತೇಭಾವಭಿನ್ನಮಿತ್ಯುಕ್ತಮ್ ॥ ೮೫೮ ॥

**ವಿವರಣೆ–** ನಮ್ಮ ಮತದಲ್ಲಿ ಭೇದವು ಧರ್ಮಿಸ್ವರೂಪವಾದರೂ ಅದ್ವೈತಿಗಳು ಅನ್ಯೋನ್ಯಾಭಾವರೂಪವಾದ ಭೇದವನ್ನು ಭಾವಭಿನ್ನವೆಂದು ಒಪ್ಪುತ್ತಾರೆ. ವಾಕ್ಯ-ಪ್ರಾಮಾಣ್ಯವನ್ನು ರಕ್ಷಿಸಲು ಅಭಾವವನ್ನು ಒಪ್ಪುವುದಾದರೆ ಅನ್ಯೋನ್ಯಾಭಾವ ರೂಪವಾದ

ಭೇದಪಂಚಕವನ್ನೂ ಅಂಗೀಕರಿಸಬೇಕು. ಆಗ ಭೇದಪಂಚಕವು ಅಬಾಧಿತವೆಂದಾಗುತ್ತದೆ. ಇದು ಪರನಿಗೆ ಅನಿಷ್ಟವಾದುದು ಎಂದು ಅಭಿಪ್ರಾಯ.

**ದಶಪ್ರಮತಿನಾಮಾ ಮೇ ಗುರುಸ್ತ್ರಿದಶತೋಚಿತಃ ।**
**ಯೋದೀದಿಶದ್ ದೋಷಮೇಕಂ ದೂಷ್ಯೇಷು ದಶಸು ಪ್ರಭುಃ ॥ ೮೫ ॥**

**ಅರ್ಥ–** ದಶಪ್ರಮತಿನಾಮಾ= ದಶಪ್ರಮತಿ ಎಂಬ ಹೆಸರುಳ್ಳ, ಮೇ ಗುರುಃ= ನನ್ನ ಗುರುಗಳು, ತ್ರಿದಶತೋಚಿತಃ= ದೇವತ್ವಯೋಗ್ಯರಾದವರು, ಯಃ= ಯಾವ, ಪ್ರಭುಃ= ಆ ಪ್ರಭುಗಳು, ದಶಸು= ಹತ್ತು, ದೂಷ್ಯೇಷು= ದೂಷ್ಯಪಕ್ಷಗಳಲ್ಲಿ, ಏಕಂ ದೋಷಂ= ಒಂದೇ ದೋಷವನ್ನು, ಅದೀದಿಶತ್= ಉಪದೇಶ ಮಾಡಿದರು.

**ಅನುವಾದ–** ಯಾವ ನಮ್ಮ ಗುರುಗಳು ದೂಷ್ಯವಾದ ಹತ್ತು ಪಕ್ಷಗಳಲ್ಲಿ ದ್ವಿತೀಯಾಪತ್ತಿ ರೂಪವಾದ ಒಂದೇ ದೋಷವನ್ನು ಉಪಪಾದನೆ ಮಾಡಿದರೋ ಅಂತಹ ನಮ್ಮ ಗುರುಗಳು ತ್ರಿದಶತ್ವ ಯೋಗ್ಯರಾದವರು.

**ಭಾವವಿಲಾಸಿನೀ–** ದಶಸು ಪಕ್ಷೇಷು ಏಕಸ್ಯೈವ ದೂಷಣಸ್ಯದಾನಕೌಶಲಮಾಚಾರ್ಯಸ್ಯೈವ ನ ಮಮೇತ್ಯಾಶಯೇನ ತಂ ಸ್ತುವನ್ ಅನಯೈವ ಶಕ್ತ್ಯಾ ತಸ್ಯ ದೇವತ್ವಂ ಚೋಪಪಪಾದಯತಿ **॥ ದಶೇತಿ ॥** ತ್ರಿದಶತೋಚಿತಃ ತ್ರಿದಶಪದವಾಚ್ಯ ದೇವತ್ವೋಚಿತಃ । ಏಕಂ ದಶಸು ಪ್ರಯುಂಜನ್ ತ್ರೀನ್ ದೋಷಾನ್ ದಶಸು ಸುತರಾಂ ಪ್ರಯುಂಜ್ಯಾತ್ । ಅತಸ್ತ್ರಯೋ ದೋಷಾ ದಶಸು ಯಸ್ಯೇತಿ ವ್ಯುತ್ಪತ್ತ್ಯಾ ತ್ರಿದಶತ್ವಂ ತಸ್ಯ ಕೈಮುತ್ಯಾಸಿದ್ಧಮಿತ್ಯುತ್ಪ್ರೇಕ್ಷಿತಮ್ ॥ ೮೫ ॥

**ವಿವರಣೆ–** ತ್ರಿದಶ ಎಂದರೆ ದೇವತೆಗಳು ಎಂದು ಒಂದು ಅರ್ಥವಾಗುತ್ತದೆ. ತ್ರಯಃ ದೋಷಃ ದಶಸು ಯಸ್ಯ ಎಂಬ ವ್ಯುತ್ಪತ್ತಿಯಿಂದ ಹತ್ತು ಪಕ್ಷಗಳಲ್ಲಿ ಮೂರು ದೋಷಗಳನ್ನು ಹೇಳುವವರು ಎಂದು ಆಗುತ್ತದೆ. ಯಾರು ಹತ್ತು ಪಕ್ಷಗಳಲ್ಲಿ ಒಂದೇ ದೋಷಗಳನ್ನು ಹೇಳುತ್ತಾರೆಯೋ ಅವರು ಅನಾಯಾಸವಾಗಿ ಮೂರು ದೋಷಗಳನ್ನು ಹೇಳುತ್ತಾರೆ ಎಂಬುದು ಒಂದು ಅರ್ಥ. ಅಂತಹ ನಮ್ಮ ಆಚಾರ್ಯರು ದೇವತೆಗಳು ಎಂಬುದು ಧ್ವನಿ.

**ಕಿಂ ಚ ದ್ವಿತೀಯಾಜ್ಞಾನಸ್ಯ ಕಾರ್ಯತ್ವಾದ್ ಬ್ರಹ್ಮಣೋ ಜಗತ್ ।**
**ತೃತೀಯಂ ತೇನ ಗೌರ್ದೋಗ್ಧ್ರೀ ವಿದ್ಯತೇ ತೇ ನ ಕಾಚನ ॥ ೮೬ ॥**

**ಅರ್ಥ–** ಕಿಂಚ= ಮತ್ತು, ಬ್ರಹ್ಮಣಃ= ಬ್ರಹ್ಮನಿಂದ, ದ್ವಿತೀಯಾಜ್ಞಾನಸ್ಯ= ದ್ವಿತೀಯವಾದ ಅಜ್ಞಾನದ, ಕಾರ್ಯತ್ವಾತ್= ಕಾರ್ಯವಾದುದರಿಂದ, ಜಗತ್= ಪ್ರಪಂಚವು, ತೃತೀಯಂ= ಮೂರನೆಯ ವಸ್ತು, ತೇನ= ಆ ಕಾರಣದಿಂದ, ತೇ= ನಿನಗೆ, ದೋಗ್ಧ್ರೀ= ಹಾಲನ್ನು ಕೊಡುವಂತಹ, ಕಾಚನ ಗೌ= ಯಾವ ಗೋವೂ, ನ ವಿದ್ಯತೇ= ಇರುವುದಿಲ್ಲ.

**ಅನುವಾದ–** ಮತ್ತು ಬ್ರಹ್ಮನಿಂದ ದ್ವಿತೀಯವಾದುದು ಅಜ್ಞಾನ. ಅಜ್ಞಾನ-ಕಾರ್ಯವಾದುದು ಜಗತ್ತು. ದ್ವಿತೀಯವನ್ನು ನಿಷೇಧ ಮಾಡಿದರೆ ಅಜ್ಞಾನವೇ ನಿಷಿದ್ಧವಾಗುತ್ತದೆ. ಜಗತ್ತು ನಿಷಿದ್ಧವಾಗುವುದಿಲ್ಲ. ನಿನಗೆ ಅಭೀಷ್ಟವಾದ ಜಗನ್ನಿಷೇಧವೆಂಬ ಕ್ಷೀರವನ್ನು ಕೊಡುವ ಯಾವ ಧೇನುವೂ ನಿನ್ನ ಬಳಿಯಲ್ಲಿಲ್ಲ.

**ಭಾವವಿಲಾಸಿನೀ–** ಕಿಂ ಚ ನ ವಿದ್ಯತೇ ದ್ವಿತೀಯಂ ಯಸ್ಯೇತಿ ತ್ವದಭಿಮತಸಮಾಸೇ ಬ್ರಹ್ಮ-ಪ್ರತಿಯೋಗಿಕ ದ್ವಿತೀಯನಿಷೇಧರೂಪೇ ತ್ವದಭಿಮತಾರ್ಥೇಚಾನಾದಿಕಾಲಮಾರಭ್ಯ ಬ್ರಹ್ಮಣ್ಯೇವ ವಿದ್ಯಮಾನತ್ವಾಂಗೀಕಾರಾತ್ತವ ಮತೇ ಬ್ರಹ್ಮಣೋ ದ್ವಿತೀಯಮಜ್ಞಾನಮೇವೇತಿ ತಸ್ಯೈವ ನಿಷೇಧಃ ಸ್ಯಾತ್ । ನ ತ್ವಜ್ಞಾನಕಾರ್ಯತಯಾ ತೃತೀಯಸ್ಯ ಜಗತಃ। ಏವಂ ಚ ತವ ಬ್ರಹ್ಮಾಶ್ರಿತಾ ಜ್ಞಾನಸ್ಯೈವ ಖಂಡನಾತ್ತದಭಾವೇ ಜಗತ್ಯಜ್ಞಾನಕಾರ್ಯತ್ವರೂಪ ಮಿಥ್ಯಾತ್ವಖಂಡನಾಚ್ಚ ಶ್ರುತಿಸ್ತವೈವ ದ್ವೇಧಾಪ್ಯನಿಷ್ಟದಾಯಿನ್ಯಭೂತ್ । ಮಮ ತು ಮದನಭಿಮತಪ್ರಯೇಯದ್ವಯಸ್ಯಾಪಿ ನಿವಾರಣಾತ್ ದ್ವೇಧಾಪ್ಯನುಕೂಲೈವೇತ್ಯಾಹ – **ಕಿಂಚೇತಿ** ॥ ದ್ವಿತೀಯಾಜ್ಞಾನಸ್ಯ ದ್ವಿತೀಯಂ ಯದಜ್ಞಾನಂತಸ್ಯೇತ್ಯರ್ಥಃ। ತೇನ ಕಾರಣೇನ । ಗೌಃ ಗೌರಿವ ಗೌಃ। ವೇದರೂಪಾಗೌರಿತ್ಯರ್ಥಃ। ದೋಗ್ಧ್ರೀನೇತ್ಯುಪಲಕ್ಷಣಮ್ । ಉಕ್ತವಿಧಯಾ ಮಮೇಷ್ಟದೋಗ್ಧ್ರೀ ತವಾನಿಷ್ಟದೋಗ್ಧ್ರೀ ಚೇತ್ಯಪಿ ದ್ರಷ್ಟವ್ಯಮ್ ॥ ೮೬೦ ॥

**ವಿವರಣೆ–** ಅದ್ವಿತೀಯಂ ಎಂಬುದಕ್ಕೆ 'ನ ವಿದ್ಯತೇ ದ್ವಿತೀಯಂ ಯಸ್ಯ' ಎಂದು ಪರರು ಮಾಡುವ ವಿಗ್ರಹವನ್ನು ಸ್ವೀಕರಿಸಿದರೂ ಪರರ ಅಭೀಷ್ಟವು ಸಿದ್ಧವಾಗುವುದಿಲ್ಲ. ನಮ್ಮ ಅಭೀಷ್ಟವೇ ಸಿದ್ಧವಾಗುತ್ತದೆ. ಬ್ರಹ್ಮನಿಂದ ದ್ವಿತೀಯವಾದುದು ಅಜ್ಞಾನ, ತೃತೀಯವಾದುದು ಜಗತ್ತು. ದ್ವಿತೀಯವನ್ನು ನಿಷೇಧ ಮಾಡಿದರೆ ತೃತೀಯವು ನಿಷಿದ್ಧ-ವಾಗುವುದಿಲ್ಲ. ಜಗನ್ಮಿಥ್ಯಾತ್ವವು ಸಿದ್ಧಿಸುವುದಿಲ್ಲ. ಜಗತ್ಸತ್ಯತ್ವವೇ ಸಿದ್ಧಿಸುತ್ತದೆ. ಗೌಃ ಎಂದರೆ ಧೇನುವೆಂತಲೂ ಅರ್ಥ, ವಾಕ್ ಎಂತಲೂ ಅರ್ಥ. ನಿನಗೆ ಅಭಿಪ್ರೇತವಾಗುವ ವಾಕ್ಯವೂ ಇಲ್ಲ, ನನಗೆ ಅಭಿಪ್ರೇತವಾದ ಜಗತ್ಸತ್ಯತ್ವವೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ,

ಯದಖಂಡಾರ್ಥವಾದೀ ತ್ವಂ ತೃಣಖಂಡಂ ಚ ನಾದಿಶಃ ।
ತೈಲಂ ಧೂಲಿಷು ನಿಕ್ಷಿಪ್ತಂ ಪಿಣ್ಯಾಕಂ ಭಸ್ಮಸಾತ್ಕೃತಮ್ ।
ನಿಷೇಧೋ ನ ನಿಷೇಧ್ಯಂ ನ ಕೇನ ವಾ ಗೌರ್ಜಿಜೀವಿಷೇತ್ ॥ ೮೬೧ ॥

**ಅರ್ಥ–** ಯತ್= ಯಾವ ಕಾರಣದಿಂದ, ಅಖಂಡಾರ್ಥವಾದೀ= ಅಖಂಡಾರ್ಥ-ವಾದಿಯಾದ, ತ್ವಂ= ನೀನು, ತೃಣಖಂಡಂ ಚ= ತೃಣವನ್ನಾಗಲೀ ಅಥವಾ ತೃಣಖಂಡ-ವನ್ನಾಗಲಿ ಕೊಡಲಿಲ್ಲವೋ, ತೈಲಂ= ತೈಲವು, ಧೂಲಿಷು= ಮಣ್ಣಿನಲ್ಲಿ, ನಿಕ್ಷಿಪ್ತಂ= ಬಿದ್ದು ಹೋಯಿತೋ, ಪಿಣ್ಯಾಕಂ= ಹಿಂಡಿಯು, ಭಸ್ಮಸಾತ್ಕೃತಂ= ಸುಟ್ಟು ಬೂದಿಯಾಯಿತೋ, ನಿಷೇಧೋ ನ= ನಿಷೇಧವೂ ಇಲ್ಲ, ನಿಷೇಧ್ಯಂ ನ= ನಿಷೇಧ್ಯವೂ ಇಲ್ಲ ಆದ್ದರಿಂದ, ಗೌಃ= ವೇದರೂಪವಾದ ಗೋವು, ಕೇನ ವಾ= ಯಾವುದರಿಂದ, ಜಿಜೀವಿಷೇತ್= ಬದುಕುತ್ತದೆ?

**ಅನುವಾದ–** ಅಖಂಡವಾದಿಯಾದ ನೀನು ವೇದರೂಪವಾದ ಗೋವಿಗೆ ತೃಣವನ್ನಾಗಲೀ, ಅಥವಾ ತೃಣಖಂಡವನ್ನಾಗಲೀ ಕೊಡಲಿಲ್ಲ. ಗೋಪುಷ್ಟಿಕರವಾದ ತೈಲವು ಮಣ್ಣಿನಲ್ಲಿ ಬಿದ್ದುಹೋಯಿತು. ಹಿಂಡಿಯು ಸುಟ್ಟು ಬೂದಿಯಾಯಿತು. ನಿಷೇಧವೂ ಇಲ್ಲ ನಿಷೇಧ್ಯವೂ ಇಲ್ಲ. ಆದ್ದರಿಂದ ವೇದರೂಪವಾದ ಗೋವು ಯಾವ ರೀತಿಯಿಂದ ಜೀವಿಸುತ್ತದೆ?

**ಭಾವವಿಲಾಸಿನೀ–** ವೇದಸ್ಯ ಗೋತ್ವೇನ ವರ್ಣನಾತ್ತೇನೈವ ನಿದರ್ಶನೇನ ಪರಸಿದ್ಧಾಂತಸ್ಯ ಹೇಯತಾಂ ಸ್ವಸಿದ್ಧಾಂತಸ್ಯೋಪಾದೇಯತಾಂ ಚೋಪಪಾದಯತಿ ॥ **ಯದಿತಿ** ॥ ಯದ್ಯಸ್ಮಾತ್ ತೃಣಖಂಡಂ ತೃಣಂ ಚ ಖಂಡಂ ಚ ತೃಣಖಂಡಮ್ ಗೌಃ ಅಖಂಡಮ್ । ತೃಣಂ ಯಥಾ ಕಶ್ಚಿನ್ನ ದಿಶತಿ ತಥಾ ಅಖಂಡಂ ಬ್ರಹ್ಮ ಸ್ವಪ್ರಕಾಶತಯಾ ಸಿದ್ಧ್ಯದ್ವಾಕ್ಯಸ್ಯಾರ್ಥತಯಾನಾದಿಶಃ । ತೃಣಸ್ಯ ಖಂಡಂ ಯಥಾ ನ ದಿಶತಿ ತಥಾ ಬ್ರಹ್ಮಣೋ ವಿಶೇಷಣತಯಾ ಖಂಡಭೂತಮೈಕ್ಯಂ-ಚಾಖಂಡವಾದಿತ್ವಾದ್ವಾಕ್ಯಸ್ಯಾರ್ಥ ತಯಾನಾದಿಶ ಇತಿ ಭಾವಃ । ತೈಲಂ ಗವಾಂ ಪುಷ್ಟ್ಯರ್ಥೇ ದೀಯಮಾನತೈಲಮಿವ ವಾಕ್ಯಪ್ರಾಮಾಣ್ಯರಕ್ಷಣಾಯ ವಿಚಾರಾಖ್ಯಮಥನೇ ಕೃತೇ ಸತಿ ಪರ್ಯವಸಿತೋಽರ್ಥಽನಿಷೇಧಃ ತೈಲಂ ಧೂಲಿಷು ನಿಕ್ಷಿಪ್ತಂ ಧೂಲಿಷು ನಿಕ್ಷಿಪ್ತತೈಲಮಿವ ಸರ್ವಮಿಥ್ಯಾತ್ವವಾದೇನ ನಾಶಿತ ಇತಿ ಭಾವಃ । ಪಿಣ್ಯಾಕಂ ತೈಲಂ ಗೃಹೀತ್ವಾ ಬಹಿಷ್ಕ್ರಿಯಮಾಣಂ ಪಿಣ್ಯಾಕಮಿವ ವಾಕ್ಯೇನ ನಿರಸ್ಯಮಾನಂ ಜಗದಿತಿ ಭಾವಃ । ತದೇವ ದರ್ಶಯತಿ ॥ **ನಿಷೇಧೋ ನ ನಿಷೇಧ್ಯಂ ನೇತಿ** ॥ **ಗೌಃ ಗೋಸದೃಶೀ ವೇದವಾಕ್** ॥ ೮೬೧ ॥

**ವಿವರಣೆ–** ಗೋವಿಗೆ ತೃಣವನ್ನು ಕೊಡದೇ ಇದ್ದಂತೆ ಸ್ವಪ್ರಕಾಶತಯಾ ಸಿದ್ಧನಾದ ಅಖಂಡ ಬ್ರಹ್ಮನನ್ನು ನೀನು ವೇದಕ್ಕೆ ಅರ್ಥವಾಗಿ ಕೊಡಲಿಲ್ಲ. ಆದ್ದರಿಂದ ತೃಣವಿಲ್ಲದಂತಾಯಿತು. ತೃಣಖಂಡವೆಂದರೆ ಬ್ರಹ್ಮಧರ್ಮವಾದ ಐಕ್ಯ. ಅಖಂಡಾರ್ಥ-ವಾದದಲ್ಲಿ ಐಕ್ಯವು ವೇದಪ್ರತಿಪಾದ್ಯವಲ್ಲವಾದ್ದರಿಂದ ಐಕ್ಯವನ್ನೂ ನೀನು ಆಹಾರವಾಗಿ ಕೊಡಲಿಲ್ಲ. ತೈಲವೆಂದರೆ ವಾಕ್ಯಾರ್ಥವನ್ನು ವಿಮರ್ಶೆ ಮಾಡಿ ಬಂದ ಫಲ. ಸರ್ವಮಿಥ್ಯಾತ್ವವನ್ನು ಹೇಳುವುದರಿಂದ ಅಂತಹ ಫಲವು ಯಾವುದೂ ಇಲ್ಲ. ಆದ್ದರಿಂದ ತೈಲವೂ ಮಣ್ಣಿನಲ್ಲಿ ಬಿದ್ದು ಹಾಳಾಯಿತು. ಪಿಣ್ಯಾಕ ಎಂದರೆ ಹಿಂಡಿ. ತೈಲವನ್ನು ತೆಗೆದುಕೊಂಡು ಹಿಂಡಿಯನ್ನು ಎಸೆದಂತೆ ನೀನು ನಿಷೇಧವನ್ನು ಮಾಡಿ ಜಗತ್ತನ್ನು ಎಸೆಯುವವನು, ಆದರೆ ಸರ್ವ ಮಿಥ್ಯಾತ್ವವನ್ನು ಹೇಳುವುದರಿಂದ ಜಗತ್ತು ಭಸ್ಮವೇ ಆಯಿತು. ಆದ್ದರಿಂದ ವೇದವಾಕ್ಯಕ್ಕೆ ನಿಷೇಧವೂ ಅರ್ಥವಲ್ಲ, ನಿಷೇಧ್ಯವೂ ಅರ್ಥವಲ್ಲ. ನೀನು ಅದಕ್ಕೆ ಯಾವ ಅರ್ಥರೂಪವಾದ ಆಹಾರವನ್ನೂ ಕೊಡದಿದ್ದರೆ ಆ ಗೋವು ಹೇಗೆ ಜೀವಿಸುತ್ತದೆ ಎಂದು ಆಕ್ಷೇಪದ ಅಭಿಪ್ರಾಯ.

ಏವಂ ನಿರಾಶಾಸ್ತಾಃ ಸರ್ವಾಃ ಕ್ರಂದಂತ್ಯೋ ವಾಜಿನೋಽನುಗಾಃ ।
ವಾಜಿಕಿಂಕರಮಧ್ವಾಖ್ಯಯೋಗೀಂದ್ರೇಣ ಪದೇ ಪದೇ ॥ ೮೬೨ ॥

**ದತ್ತಗ್ರಾಸಾಃ ಸತಾಂ ವೃಂದಾರಣ್ಯಮೇತ್ಯ ಕೃತೋತ್ಸವಾಃ ।**
**ಗೋವಿಂದಮೇವ ಪರಿತಃ ಪ್ರಾಪುರಿತ್ಯತಿಮಂಗಲಮ್ ॥ ೮೬೩ ॥**

**ಅರ್ಥ–** ಏವಂ= ಈ ರೀತಿಯಾಗಿ, ತಾಃ ಸರ್ವಾಃ= ಆ ಎಲ್ಲ ವಾಕ್ಯಗಳೂ, ನಿರಾಶಾಃ= ನೈರಾಶ್ಯವನ್ನು ಹೊಂದಿ, ವಾಜಿನಃ= ಹಯಗ್ರೀವ ದೇವರನ್ನು, ಅನುಗಾಃ= ಹಿಂಬಾಲಿಸುತ್ತಾ, ವಾಜಿ ಕಿಂಕರಮಧ್ವಾಖ್ಯಯೋಗೀಂದ್ರೇಣ= ಹಯಗ್ರೀವ ದೇವರ ಸೇವಕರಾದ ಮಧ್ವಾಚಾರ್ಯರೆಂಬ ಯೋಗೀಂದ್ರರಿಂದ, ಪದೇ ಪದೇ= ಹೆಜ್ಜೆ ಹೆಜ್ಜೆಗೂ, ದತ್ತಗ್ರಾಸಾಃ= ಕೊಡಲ್ಪಟ್ಟ ಆಹಾರವುಳ್ಳವರಾಗಿ, ಸತಾಂ= ಸಜ್ಜನರ, ವೃಂದಾರಣ್ಯಂ= ವೃಂದರೂಪವಾದ ಅರಣ್ಯವನ್ನು, ಏತ್ಯ= ಪ್ರವೇಶಿಸಿ, ಕೃತೋತ್ಸವಾಃ= ಸಂತೋಷವನ್ನು ಹೊಂದಿದವುಗಳಾಗಿ, ಗೋವಿಂದಮೇವ= ಗೋವಿಂದನನ್ನೇ, ಪರಿತಃ= ಎಲ್ಲ ಕಡೆಗಳಿಂದಲೂ, ಪ್ರಾಪುಃ= ಸೇರಿದವು, ಇತಿ= ಎಂದು, ಅತಿಮಂಗಲಂ= ಪರಮ ಮಂಗಲವಾದುದು.

**ಅನುವಾದ– ಹೀಗೆ ಆ ಗೋವುಗಳೆಲ್ಲವೂ ನಿರಾಶೆಯಿಂದ ಅರಚುತ್ತಾ ಹಯಗ್ರೀವ-ದೇವರನ್ನು ಹಿಂಬಾಲಿಸಿ, ಹಯಗ್ರೀವ ದೇವರ ಕಿಂಕರರಾದ ಮಧ್ವಾಚಾರ್ಯರೆಂಬ ಯೋಗೀಂದ್ರರಿಂದ ಹೆಜ್ಜೆ ಹೆಜ್ಜೆಗೆ ಆಹಾರವನ್ನು ಸ್ವೀಕರಿಸುತ್ತಾ, ಸಜ್ಜನರ ವೃಂದವೆಂಬ ಅರಣ್ಯವನ್ನು ಪ್ರವೇಶಿಸಿ ಸಂತೋಷವನ್ನು ಹೊಂದಿದವುಗಳಾಗಿ ಗೋವಿಂದನನ್ನೇ ಎಲ್ಲ ಕಡೆಗಳಿಂದಲೂ ಬಂದು ಸೇರಿದವು ಎಂಬುದು ಅತಿಮಂಗಲವಾದುದು.**

**ಭಾವವಿಲಾಸಿನೀ–** ತಾಃ ವೇದವಾಗಾಖ್ಯಗಾವಃ । ಕ್ರಂದಂತ್ಯಃ ಯೇ ಅಭಿತೋ ವೇದಾದಿ-ದ್ರೋಹಕಾರಿಣಃ ಪುರುಷಸ್ಯಾಪದೇ ಸ್ಥಾನೇ ಅಂಧೇ ತಮಸಿ ಪಾತಯಿತುಂ ಯೋಗ್ಯಾಃ । ಯೇ ಚ ರಾಮಾಖ್ಯ ಪರದೇವತಾವಂತೋ ನ ಭವಂತಿ ಅನ್ಯೇಷ್ವೇವ ಜಾಗೃಧುಃ ಪ್ರೇತ್ಯಸ್ತೇನೇಭ್ಯಃ ಪ್ರನಃ ಅಸ್ಮಾನ್ಮಾಬ್ರೂಹೀತಿಮಾನಸ್ತೇನೇಭ್ಯ ಇತ್ಯಾದಿಶ್ರುತ್ಯಾ ಹಯಗ್ರೀವಂ ಪ್ರತ್ಯಾಕ್ರೋಶಂ ಕುರ್ವತ್ಯಃ । ವಾಜಿನಃ ಹಯಗ್ರೀವಸ್ಯ । ಯಥಾ ಚೋರೈರುಪಹೃತಾ ಗಾವಃ ಸ್ವಗ್ರಾಮಮಲಭಮಾನಾಃ ಗ್ರಾಮಂ ಪ್ರತಿ ಗಚ್ಛಂತಂ ಮಾರ್ಗಜ್ಞಮಶ್ವಮನುಸೃತ್ಯ ಗಚ್ಛಂತಿ ತಥಾ ಸ್ವಾರ್ಥದರ್ಶಕಂ ಹಯಗ್ರೀವ-ಮನುಸೃತ್ಯೈವ ಗಚ್ಛಂತ್ಯ ಇತ್ಯರ್ಥಃ । ಆಹಾರಪ್ರದಃ ಕ ಇತ್ಯತ ಆಹ – **ವಾಜಿಕಿಂಕರೇತಿ** ॥ ಯಥಾ ಅಶ್ವರಕ್ಷಕಃ ಪುರುಷಃ ಅಶ್ವಗ್ರಾಸಾದೇಕದೇಶಂ ಪದೇ ಪದೇ ಕ್ರಂದಂತೀನಾಂ ಗವಾಮಪಿ ಕೃಪಯಾ ದಿಶತಿ ತಥಾ ಹಯಗ್ರೀವಕಿಂಕರಮಧ್ವಾಖ್ಯಯೋಗೀಂದ್ರೇಣ ವೇದಾ ಅಪಿ ಪದೇಪದೇ ನಿರವಧಿ ಕಸರ್ವಜ್ಞಸ್ಯ ಹಯಗ್ರೀವಸ್ಯೈವಾನುಭವಯೋಗ್ಯಜ್ಞಾನಾನಂದಾದಿ ದಿವ್ಯಗುಣಾನಾಂ ಏಕದೇಶ ಏವ ಯತೋ ವಾಚೋ ನಿವರ್ತಂತ ಇತಿ ಶ್ರುತ್ಯಾ ದತ್ತೋ ಗ್ರಾಸೋ ಯಾಸಾಂತಾಃ । ಮಧ್ವಮುನಿನಾ ಹಯಗ್ರೀವಗುಣಸ್ತೋಮಪ್ರತಿಪಾದನೇನ ಪ್ರಮಾಣೀಕೃತಾ ಇತಿ ಭಾವಃ । ಬೃಂದಾರಣ್ಯಂ ಬೃಂದಾಖ್ಯಾರಣ್ಯಮ್ । ಅರಣ್ಯ ಏವ ಸಾಧುಭಿರುಪನಿಷದಾಂ ಪಠ್ಯಮಾನ-ತ್ವಾದ್ಬೃಂದಸಹಿತಾರಣ್ಯಂ ವಾ । ಗೋಯೋಗ್ಯಬೃಂದಾವನಮಿತಿ ಧ್ವನಿಃ । ಪ್ರಾಪುಃ ಬೃಂದಾವನೇ ಗಾವೋ ಗೋವಿಂದಮಿವ ಇಮಾ ಅಪಿ ಮೂರ್ತಿಮತ್ಯಃ ಗೋವಿಂದಮೇವ ಪರಿತಸ್ತುಷ್ಟುವುರಿತಿ

ಭಾವಃ । ನನು ಕಥಂ ತರ್ಹಿ ಅಥ ಯೋನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಮಿತಿ ಭೇದೋಪಾಸಕಾನಾಂ ನಿಂದೇತಿ ಚೇತ್ ನ । ಅಭೇದಸ್ಯಾನುಪಾಸ್ಯತ್ವಮಂಗೀಕುರ್ವತಾ ತ್ವಯಾಪಿ ಉಪಾಸನಾಕಾಲೇ ಭೇದೋಪಾಸ್ತೇರೇವಾಂಗೀಕೃತತ್ವೇನ ತವೈವ ನಿಂದಾಪ್ರಸಂಗಾತ್ । ತಥಾ ಚಾಯಂ ಶ್ರುತ್ಯರ್ಥಃ ಸ್ಯಾತ್ । ಯಃ ಅನ್ಯಾಂ ವಸ್ತುತ ಏವ ಭಿನ್ನಾಂ ದೇವತಾಂ ಅನ್ಯೋಽಸಾವನ್ಯೋಽಹಮಸ್ಮೀತಿ ಉಪಾಸ್ತೇ ತಥಾ ಅವಿದ್ಯಮಾನಂ ವಕ್ತಿ ನ ತು ವೇದ ವೇದನವಿಷಯಂ ಕರೋತಿ । ಸಃ ಯಥಾ ಪಶುರೇವಮಿತಿ ಶ್ರುತ್ಯರ್ಥಸ್ಯ ಪದಸಂಪದೈವ ಲಾಭಾತ್ । ಅಥವಾ ಬ್ರಹ್ಮನಾಮಕ ವಿಷ್ಣೋಪಾಸ್ತಿಃ ಪ್ರಾಗುಕ್ತಾ । ಅಥ ಯಃ ಅನ್ಯಾಂ ವಿಷ್ಣೋರನ್ಯಾಂ ಶಿವಾದಿದೇವತಾಮ್ ಉಪಾಸ್ತೇ ದ್ವಾರತಯಾ ಅನ್ಯೋಽಸೌ ಸ್ವಾಮೀ ಅನ್ಯೋಽಹಂ ದಾಸೋಽಸ್ಮೀತಿ । ಸ ನ ವೇದ ಯಥಾ ಪಶುರೇವಮಿತಿ । ಅನ್ಯೋಽಸೌ ವೈಷ್ಣವಕುಲೋತ್ಪನ್ನಃ ಅನ್ಯೋಽಹಂ ಶೈವಕುಲೋತ್ಪನ್ನ ಇತಿ ವಾ । ಅನ್ಯೋಽಸೌ ವಿಷ್ಣುಃ ಶೈವನಾಮಸಂಬಂಧೀ ಅನ್ಯೋಽಹಂ ಶೈವೋ ವಿಷ್ಣುಸಂಬಂಧೀತಿ ವಾ ಮತ್ವಾ ಉಪಾಸ್ತೇ ಸಃ ನ ವೇದ ಯಥಾ ಪಶುರೇವಮಿತಿ ಶೈವಶಾಕ್ತಾದಿನಿಂದಾಪರಂ ವಾಕ್ಯಂ ಸ್ಯಾತ್ । ಅನ್ಯದೇವತಾಪದಸ್ಯೈತದುಪನಿಷತ್ಪ್ರತಿಪಾದ್ಯದೇವತಾ ತೋಽನ್ಯದೇವತಾಯಾ ಏವ ಉಕ್ತೌ ಸ್ವಾರಸ್ಯಾತ್ ।

ನ ಚ ವಾಚ್ಯಂ ತದಿದಮಪಿ ಏತರ್ಹಿ ಯ ಏವಂ ವೇದಾ ಬ್ರಹ್ಮಾಸ್ಮೀತಿ ಇದಂ ಸರ್ವಂ ಭವತೀತಿ ವಾಕ್ಯೇ ಐಕ್ಯವೇದನಸ್ಯೈವೋಕ್ತಿರಿತಿ । ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ತಸ್ಮಾತ್ತತ್ಸರ್ವಮಭವದಿತಿ ತತೋಽಪಿ ಪೂರ್ವವಾಕ್ಯೇ ಪ್ರಸ್ತುತಬ್ರಹ್ಮೈವ ತದಿದಮಿತಿ ಪರಾಮೃಶ್ಯ ಏವಮಿತಿ ಪ್ರಾಗುಕ್ತಬ್ರಹ್ಮವೇದನಪ್ರಾಕಾರೇಣೈವ ವೇದನೋಕ್ತೇರಹಮಸ್ಮೀತಿ ಪದಯೋರಪಿ ಹಾತುಂ ಯೋಗ್ಯಂ ಹಂ, ತನ್ನ ಭವತೀತ್ಯಹಂ ಸದಾ ಅಸ್ತಿತಯಾ ಮೀಯಮಾನಸ್ಮೀತಿ ಚ ವ್ಯುತ್ಪತ್ತ್ಯಾ ಅಂತರ್ಯಾಮಿತಯಾ ಸರ್ವಾಹೇಯಸ್ಯ ಆಸೀದಿತ್ಯುಕ್ತ್ಯಾ ಅತೀತಕಾಲಸತ್ತಾಮಾತ್ರ ಪ್ರತೀತಿನಿರಾಸಾಯ ಸದಾ ಅಸ್ತಿತಯಾ ಪ್ರಮೀಯಮಾಣಸ್ಯ ಚ ಬ್ರಹ್ಮಾಣ ಏವ ಗ್ರಾಹ್ಯತ್ವೇನ ತ್ವದಭಿಲಷಿತಜೀವೈಕ್ಯಸ್ಯಾನಾವಕಾಶಾತ್ । ಅವಶ್ಯಂ ಚೈತದೇವಮ್ ।

ಅಹಮಸ್ಮೀತಿ ಪದಾಜ್ಜೀವಗ್ರಹಣೇ ಪ್ರಾಗುಕ್ತಪ್ರಕಾರಾರ್ಥಕೈವಂಪದಸ್ಯ ವ್ಯಾಕೋಪಪ್ರಸಂಗಾತ್ । ಏಷ ತ ಆತ್ಮಾಂತರ್ಯಾಮೀ, ಯ ಆತ್ಮನಿ ತಿಷ್ಠನ್ ಆತ್ಮನೋಽಂತರೋ ಯಮಾತ್ಮಾನಂ ವೇದೇತಿ ಚಾಭ್ಯಾಸೇನ ಸತಾತ್ಪರ್ಯಸಯುಕ್ತಿಕನಿರವಕಾಶೋತ್ತರವಾಕ್ಯವ್ಯಾಕೋಪಾತ್ । ಜೀವಬ್ರಹ್ಮಣೋರಭೇದಾಭಿಪ್ರಾಯೇ ಬ್ರಹ್ಮವದಹಮಿತ್ಯುಲ್ಲಿಖ್ಯಮಾನ ಜೀವಾನಾಮಪಿ ಸತ್ತ್ವಾವಶ್ಯಂಭಾವೇನ ಬ್ರಹ್ಮ ವಾ ಇದಮಗ್ರ ಆಸೀದಿತಿ ಬ್ರಹ್ಮಸ್ಥಿತಿಮಾತ್ರಪ್ರತಿಪಾದಕಪೂರ್ವವಾಕ್ಯಕೋಪಾಚ್ಚ । ತ್ವಯಾಪಿ ಜೀವತ್ವಯೋಗ್ಯಬ್ರಹ್ಮಚಿನ್ಮಾತ್ರಸ್ಯೈವ ತದಾಸತ್ತ್ವಾಂಗೀಕಾರೇಣ ಜೀವಭಾವಾಪನ್ನಚೈತನ್ಯಾನಾಂ ಸೃಷ್ಟೇಃ ಪೂರ್ವಮಭಾವಸ್ಯಾಪರಿಹಾರಾತ್ । ತೇಷಾಮಪಿ ತದ್ರೂಪೇಣ ತದೈವ ಸತ್ತ್ವೇ ಅಹಂ ಬ್ರಹ್ಮಾಸ್ಮೀತಿ ತದುಕ್ತೇರೇವ ಸಕಲಜೀವೋಕ್ತಿತ್ವಾತ್ ಪುನಃ ಏತರ್ಹಿ ಯ ಏವಂ ವೇದೇತ್ಯಾದಿವಾಕ್ಯಾನಾಂ ವೈಯರ್ಥ್ಯಪ್ರಸಂಗಾದೇತರ್ಹೀತ್ಯುಕ್ತೇದಾನೀಂತನ ಜೀವಾಭೇದಸ್ಯ ತ್ವದ್ರೀತ್ಯೈವಾಯೋಗಾಚ್ಚ । ಅಹಮಸ್ಮೀತಿ

ಪದಯೋರಪ್ರಸಿದ್ಧಾರ್ಥ ಕಥನಸ್ಯೋಪನಿಷದೋರಹಸ್ಯವಿದ್ಯಾತ್ವಘಟನಾಯ ಬ್ರಹ್ಮವಾಕ್ಯೇ ಅಪೂರ್ವಾರ್ಥತಯಾ ಸಿದ್ಧಾನುವಾದಕತ್ವದೋಷಪರಿಹಾರಾಯ ಪ್ರಾಗುಕ್ತಭೇದವಾಕ್ಯ-ವಿರೋಧಪರಿಹಾರಾಯೋತ್ತಮಪುರುಷಾಹಂಪದಬಲಾದೇವ ಸ್ವತ್ವಲಾಭೇನಾತ್ಮಾನಮೇವೇತ್ಯಸ್ಯ ವೈಯರ್ಥ್ಯಪರಿಹಾರಾಯ ಚಾವಶ್ಯಕತ್ವಾತ್ । ಏವಂ ಚಾಯೋನ್ಯಾಂ ಸಕಲಜೀವೇಭ್ಯೋ ಭಿನ್ನಾಂ ಪರದೇವತಾಮ್, ಅನ್ಯೋಽಸೌ ವಿಷ್ಣುರ್ಬ್ರಹ್ಮಶಬ್ದಾರ್ಥಃ ಅಹಮಸ್ಮಿಶಬ್ದಾರ್ಥಶ್ಚಾನ್ಯೋ ಜೀವ ಇತಿ ಮತ್ವಾ ಅಹಂ ಬ್ರಹ್ಮಾಸ್ಮೀತಿ ಪ್ರಾಗುಕ್ತವಾಕ್ಯೇ ಜೀವ ಇತಿ ಮತ್ವಾ ಅಹಂ ಬ್ರಹ್ಮಾಸ್ಮೀತೀ ಪ್ರಾಗುಕ್ತವಾಕ್ಯೇ ಜೀವಾಭಿನ್ನತಯಾ ಉಪಾಸ್ತೇ ನ ಸ ವೇದ ಯಥಾ ಪಶುರಿತಿ ಚ ಪೂರ್ವೋತ್ತರ-ವಾಕ್ಯಾನುಗುಣೋ ವಾಕ್ಯಾರ್ಥಃ ಸ್ಯಾತ್ । ಅತಃ ಪೂರ್ವೋತ್ತರ ವಾಕ್ಯಾರ್ಥಮನಾಲೋಚ್ಯ ಜೀವಾಭೇದಮಂಗೀಕುರ್ವತೋ ಗರ್ವನಿವಾರಣಾಯೇದಂ ವಾಕ್ಯಂ ಪ್ರವೃತ್ತಮ್ । ಏವಂ ತರ್ಹಿ ಸ ಇದಂ ಸರ್ವಂ ಭವತೀತಿ ಸರ್ವಭಾವಾಪತ್ಯಾಖ್ಯಫಲೋಕ್ತಿಃ ಕಥಮಿತಿ ಚೇನ್ನ ಕಥಂಚಿತ್ । ಇದಂ ಮುಮುಕ್ಷೋರ್ಮನಸಿ ಮೋಕ್ಷರೂಪತಯಾ ಸದಾ ವಿದ್ಯಮಾನಂ ಸರ್ವಂ ನಾನಾವಿಧವಿಷಯಭೋಗಂ ಭವತಿ ಪ್ರಾಪ್ನೋತೀತಿ ಫಲಸ್ಯೈವ ಶ್ರುತ್ಯಾ ಪ್ರತಿಪಾದನಾತ್ । ಭೂಶ್ರ್ಪ್ರಾಪ್ತಾವಿತಿ ಧಾತುವ್ಯಾಖ್ಯಾನಾತ್ । ಪರಸ್ಮೈಪದಂ ತು ಫಲಸ್ಯ ಪರಾಧೀನತ್ವ-ಜ್ಞಾಪನಾರ್ಥಮ್ । ಪಶುಪಕ್ಷ್ಯಾದಿಸಕಲಜಗದಾಕಾರೇಣ ಪರಿಣಾಮಾಖ್ಯಸಂಸಾರರೂಪ-ಸರ್ವಭಾವಸ್ಯ ಬ್ರಹ್ಮವಿದ್ಯಾಫಲತ್ವಾಯೋಗಾತ್ ।

ನ ಚ ವಾಚ್ಯಂ ಸರ್ವನಿವೃತ್ತಿರತ್ರಾಭಿಪ್ರೇತೇತಿ ಅಪದಾರ್ಥತ್ವಾತ್ ಅವಾಕ್ಯಾರ್ಥತ್ವಾತ್ ಮುಖ್ಯೇ ಸಂಭವತ್ಯಮುಖ್ಯಾಯೋಗಾತ್ । ತಸ್ಮಾತ್ ಸರ್ವಮಭವದಿತಿ ವಾಕ್ಯೇ ಸೃಷ್ಟೇಃ ಪೂರ್ವ-ಕಾಲೀನಬ್ರಹ್ಮಣಿ ಸಕಲಜಗದಾಕಾರೇಣ ಪರಿಣಾಮಸ್ಯೈವ ಪರೇಣಾಪಿ ವಕ್ತವ್ಯತ್ವೇನ ಪ್ರಕ್ರಮ-ವಿರೋಧಾಚ್ಚ । ನ ಹಿ ತದಾಪಿ ತಸ್ಯ ಸರ್ವನಿವೃತ್ತಿರೇವ ಫಲಂ ಸಂಸಾರಸ್ಯೈವಾಭಾವಪ್ರಸಂಗಾತ್ ಸಕಲಜಗದಾಕಾರೇಣ ಪರಿಣಾಮಾಖ್ಯಪ್ರಮೇಯೇ ಪ್ರಮಾಣಾಭಾವಪ್ರಸಂಗಾಚ್ಚ । ಅಹಂ ಮನುರಭವಮಿತ್ಯಾದಿ ವಾಮದೇವ ವಾಕ್ಯೇ ಸರ್ವಭಾವಾಖ್ಯಸರ್ವತ್ವಸ್ಯ ಸ್ಪಷ್ಟಮುಕ್ತತಯಾ ಪೂರ್ವೋತ್ತರವಾಕ್ಯೇಷ್ವಪಿ ತಸ್ಯೈವ ವಕ್ತವ್ಯತ್ವಾಚ್ಚ । ವಸ್ತುತಸ್ತು ಪದಾನಾಮನು-ಪಮರ್ದೇನಾರ್ಥಕಥನೇ ದೈವಾಸುರಸಂಪದ್ವಿಭಾಗಯೋಗಾಖ್ಯ ಗೀತಾಧ್ಯಾಯವದ-ಭೇದವಾದಿನಾಂ ನಿಂದಾರ್ಥಂ ಭೇದವಾದಿನಾಂ ಪ್ರಶಂಸಾರ್ಥಂ ಚ ತದಾಹೂರ್ಯದ್ಬ್ರಹ್ಮ-ವಿದ್ಯಯಾ ಸರ್ವಂ ಭವಿಷ್ಯಂತೋ ಮನುಷ್ಯಾ ಮನ್ಯಂತೇ ಕಿಮು ತದ್ಬ್ರಹ್ಮಾವೇದ್ಯಸ್ಮಾತ್ತತ್ ಸರ್ವಮಭವದಿತಿ ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ತಸ್ಮಾತ್ತತ್ ಸರ್ವಮಭವತ್ ತದ್ಯೋ ದೇವಾನಾಂ ಪ್ರತ್ಯುಬುಧ್ಯತ ಸ ಏವ ತದಭವತ್ ತಥರ್ಷೀಣಾಂ ತಥಾ ಮನುಷ್ಯಾಣಾಂ ತಥೈವ ತತ್‌ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚೇತಿ ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ । ತಸ್ಯ ಹನ ದೇವಾಶ್ಚ ನಾಭೂತ್ಯಾ ಈಶತ ಆತ್ಮಾ ಹ್ಯೇಷಾಂ ಸ ಭವತ್ಯಥ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಂ ಸ

ದೇವಾನಾಂ ಚ ಯಥಾ ಹ ವೈ ಹವಃ ಪಶವೋ ಮನುಷ್ಯಾ ಭುಂಜ್ಯುರೇವಮೇಕೈಕಃ ಪುರುಷೋ ದೇವಾನ್ ಭುನಕ್ತ್ಯೇಕಸ್ಮಿನ್ನೇವ ಪಶಾವಾದಿಯಮಾನೇ ಪ್ರಿಯಂ ಭವತಿ ಕಿಮು ಬಹುಷು । ತಸ್ಮಾದೋಷಾಂ ತನ್ನಪ್ರಿಯಂ ಯದೇತನ್ಮನುಷ್ಯಾ ವಿದ್ಯುರಿತಿ ಖಂಡೋಽಯಂ ಪ್ರವೃತ್ತಃ । ತಥಾ ಹಿ । ತತ್ ಉಪರಿ ವಕ್ಷ್ಯಮಾಣಂ ಪ್ರಮೇಯಮಾಹುಃ ಪೂರ್ವಾಚಾರ್ಯಾಃ ಇತಿ ವೇದ-ದ್ರಷ್ಟುರ್ವಚನಮ್ ।

ಬ್ರಹ್ಮವಿದ್ಯಯಾ ಅದ್ವೈತವಿಷಯಶಬ್ದಶ್ರವಣಮಾತ್ರಜನ್ಯಯಾ ಅದ್ವೈತಸಾಕ್ಷಾತ್ಕಾರರೂಪ-ಸ್ವಾಭಿಮತ ಬ್ರಹ್ಮವಿದ್ಯಯಾ ಸರ್ವಂ ನಾನಾವಿಧಪಶುಪಕ್ಷ್ಯಾದಿರೂಪಂ ಜಗತ್ ಭವಿಷ್ಯಂತಃ ಉಪರ್ಯಪಿ ಭವಿತುಂ ಯೋಗ್ಯಂ ವ್ಯುತ್ಪನ್ನಮಾತ್ರಸ್ಯೋಕ್ತಬ್ರಹ್ಮವಿದ್ಯಯಾ ಅನಾದಿಕಾಲಮಾರಭ್ಯ ಸರ್ವಭಾವಾಖ್ಯಸಂಸಾರಪ್ರಾಪ್ತಿವದ್ಬ್ರಹ್ಮಪ್ರಲಯೇಽಪಿ ಸರ್ವಭಾವಾಖ್ಯಸಂಸಾರಮೇವ ಪ್ರಾಪ್ಸ್ಯಂತ ಇತಿ ಯಾವತ್ । ಅಥ ಯೋಽನ್ಯಾಂ ದೇವತಾಮುಪಾಸ್ತ ಇತ್ಯುತ್ತರವಾಕ್ಯಬಲಾದಿ-ಹಾಭೇದವಾದಿನ ಇತ್ಯತೋ ಮನುಷ್ಯಾಃ ಮನು ಅವಬೋಧನ ಇತಿ ಧಾತೋರ್ಭಗವತೋಽ-ಧಸ್ತಾದೇವಬೋಧನಯೋಗ್ಯಾಸ್ತಾವಮಸಾ ಜನಾಃ ಯತ್ ಮನ್ಯಂತೇ ಆಲೋಚಯಂತಿ ತದಾಹುರಿತಿ ಪೂರ್ವವಾಕ್ಯಾರ್ಥಃ ।

ಕಿಂ ತದಾಲೋಚನಮಿತ್ಯತಃ ಪ್ರಾಪ್ತಂ ಕಿಮು ತದ್ಬ್ರಹ್ಮೇತಿ ವಾಕ್ಯಮ್ । ತದ್ಬ್ರಹ್ಮ ಅಸ್ಮಾಭಿರಹಂತ್ವೇನ ಜ್ಞಾಯಮಾನಂ ಬ್ರಹ್ಮ ಅವೇತ್ಕಿಮು ಅಸ್ಮದ್ವದ್ಬ್ರಹ್ಮಾಭೇದಮ್ ಅಜ್ಞಾಸೀತ್ಕಿಮ್ । ಯಸ್ಮಾತ್ಕಾರ-ಣಾತ್ತದ್ಬ್ರಹ್ಮಾಪಿ ಸರ್ವಂ ಸಕಲಜಗದಾಕಾರೇಣ ಪರಿಣತಮಭವತ್ । ಯಥಾ ಬ್ರಹ್ಮವಿದ್ಯಾಯಾಂ ಸತ್ಯಾಮೇವಾಸ್ಮಾಕಮ್ ಅಯಂ ಸಂಸಾರ ಆಪಾತಿತಃ ತಥಾ ಬ್ರಹ್ಮಣೋಽಪಿ ಈದೃಗ್ಜ್ಞಾನೇ ಸತ್ಯೇವ ಸಂಸಾರ ಆಪಾತಿತಃ ಕಿಮಿತಿ ಪ್ರಶ್ನವಾಕ್ಯಾರ್ಥಃ ।

ಬ್ರಹ್ಮ ವಾ ಇದಮಗ್ರ ಆಸೀತಿತ್ಯುತ್ತರವಾಕ್ಯಮಾರಭ್ಯ ತದಿದಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತೀತಿ ವಾಕ್ಯಪರ್ಯಂತಂ ತೇಷು ಕಸ್ಯಚಿತ್ಪ್ರೌಢಸ್ಯೋತ್ತರಮ್ । ಇದಮಗ್ರೇ ಬ್ರಹ್ಮಾಸೀದ್ವೈ ತದ್ಬ್ರಹ್ಮಾತ್ಮಾನವೇವಾಹಂ ಬ್ರಹ್ಮಾಸ್ಮೀತ್ಯವೇದಜ್ಞಾಸೀತ್ । ಅಸ್ಮಾಕಮಪಿ ವಿದ್ಯಮಾನಂ ಬ್ರಹ್ಮಜ್ಞಾನಂ ಸರ್ವಜ್ಞಸ್ಯ ಬ್ರಹ್ಮಣಃ ಕಥಂ ನ ಸ್ಯಾದಿತಿ ಭಾವಃ । ತಠಇಚಚಿತ್ ಜ್ಞಾನಸ್ಯಾವಿದ್ಯಮಾನತ್ವಾತ್ತದ್ಬ್ರಹ್ಮಾಪಿ ಸರ್ವಂ ಸರ್ವಾಕಾರೇಣ ಪರಿಣತವಮಭವತ್ । ಅಸ್ಮದ್ವದ್ಬ್ರಹ್ಮಾಪಿ ಜ್ಞಾನೇ ಸತ್ಯೇವ ಸಂಸರತೀತ್ಯುಕ್ತಂ ಭವತಿ । ತದ್ಬ್ರಹ್ಮ ಯೋ ದೇವಾನಾಂ ಮಧ್ಯೇ ಪ್ರತ್ಯಬುಧ್ಯತ ಸ ತದೇವ ಸರ್ವಮೇವಾಭವತ್ । ದೇವೋ ವಾ ಋಷಿರ್ವಾ ಮನುಷ್ಯೋ ವಾ ಸರ್ವೇಽಪಿ ಜ್ಞಾನೇ ಸತ್ಯೇವ ಸಂಸರಂತೀತಿ ಭಾವಃ । ತಮೇವ ಸರ್ವಭಾವಂ ವಾಮದೇವ-ವಾಕ್ಯೇನ ಅಹಂ ಮನುರಭವಮಿತ್ಯಾದಿನಾ ವಿವೇಚಯತಿ । ತತ್ ತಸ್ಮಾತ್ಸರ್ವತ್ರಾಪಿ ಜ್ಞಾನೇ ಸತ್ಯೇವ ಸಂಸಾರಸ್ಯ ದೃಶ್ಯಮಾನತ್ವಾತ್ । ಏತರ್ಹ್ಯಪಿ ಇದಾನೀಮಿದಂ ಬ್ರಹ್ಮ ಯಃ ಅಯಂ ಬ್ರಹ್ಮಾಸ್ಮೀತ್ಯೇವಂ ವೇದ ಇದಂ ಸರ್ವಂ ಭವತಿ । ನ ತ್ವಸ್ಮಾತ್ಸಂಸಾರಾನ್ಮುಚ್ಯತೇ । ತಸ್ಮಾದ್ರೋಚನಾರ್ಥಂ ಫಲಶ್ರುತಿರಿತಿ ನ್ಯಾಯೇನ ಸ್ವೋಕ್ತಬ್ರಹ್ಮವಿದ್ಯಾಯಾಮ್ ಅಸ್ಮಾನ್ ಪ್ರವರ್ತಯಿತುಮೇವಾಸ್ಮದಾರ್ಯೇಣೇದೃಕ್ ಫಲಮುಕ್ತಮ್ । ನ ತು ಕದಾಪಿ ಭವಿಷ್ಯತಿ ।

ಕಿಂತು ನೀವೀಮೋಕ್ಷೋ ಹಿ ಮೋಕ್ಷ ಇತ್ಯಮರಕೋಕ್ತಗುರೂಪದೇಶಾನುಸಾರೇಣ ವನಿತಾ-ವಿಷಯಾನುಭವ ಏವಾದ್ವೈತಭಾವನಾಯಾಃ ಫಲಮ್ । ಅತೋ ವಯಮಪಿ ತೈರೇವ ಚೋಕ್ತಗುಪ್ತಪಟಲಾನುಸಾರೇಣ ಶಾಕ್ತಾದಿಮತಮವಲಂಬ್ಯ ಮಧುಪಾನರತೋತ್ಸವಾದಾವೇವ ನಿರತಾ ಭವಾಮ ಇತಿ ಯನ್ಮನ್ಯಂತೇ । ತದಾಹುರಿತಿ ಪೂರ್ವೇಣಾನ್ವಯಃ । ಇದಾನೀಂ ಶ್ರುತಿರೇಷಾಂ ಮಿಥ್ಯಾಜ್ಞಾನಿನಾಮಂಧಂತಮ ಏವ ಫಲಮಿತ್ಯಾಹ - **ತಸ್ಯ ಹೇತಿ ॥** ದೇವಾಶ್ಚಾಭೂತ್ಯೈ ಸರ್ವೈಶ್ವರ್ಯಾಭಾವಾಯ ಅಭೂತ್ಯೈ ಪುನರ್ಭವನಶೂನ್ಯಾಂಧತಮಸೇ ವಾ ನೇಶತ ಇತಿ ನ ಈಶತ ಏವೇತಿ ಭಾವಃ । ಕಿಮರ್ಥಂ ದೇವಾನಾಂ ತೇಷು ದ್ವೇಷ ಇತ್ಯತ ಉಕ್ತಮ್ ॥ **ಆತ್ಮಾ ಹೀತಿ ॥** ಏಷಾಂ ದೇವಾನಾಂ ಸಃ ಏಭಿರ್ಮಿಥ್ಯಾಜ್ಞಾನಿಭಿಃ ಸ್ವಾಭಿನ್ನ-ತಯೋಪಾಸಿತೋ ನಾರಾಯಣಃ ಆತ್ಮಾ ಸ್ವಾಮೀ ಭವತಿ । ಸ್ವಸ್ವಾಮಿದ್ರೋಹಿತ್ವಾತ್ ದ್ವೇಷಂ ಕುರ್ವಂತೀತಿ ಭಾವಃ ।

ದುರ್ಮತಮನೂದ್ಯ ತೇಷಾಮನರ್ಥಂ ಚೋಕ್ತ್ವಾ ಶ್ರುತಿರ್ಭೇದವಾದಿನಂ ಸ್ತೌತಿ–**ಅಥೇತ್ಯಾ-ದಿನಾ** । ಅನ್ಯೋಽಸೌ ವಿಷ್ಣುಃ ಅಹಂ ತು ಜೀವೋಽನ್ಯೋಽಸ್ಮೀತಿ ಯೋ ದೇವತಾಮನ್ಯಾಂ ಸ್ವಭಿನ್ನಾಮುಪಾಸ್ತೇ ಸಃ ಭೇದಜ್ಞಾನೀ ಯಥಾ ಪಶುಃ ಪ್ರಾಗುಕ್ತೋ ಮಿಥ್ಯಾಜ್ಞಾನಿ ಏವಂ ನ ವೇದ ತಚ್ಛ್ರುತ್ಯಾದಾವವಮಾನಂ ಕೃತ್ವಾ ವಿಷಯಲಂಪಟೋ ನ ಭವತಿ । ಕಿಂತು ದುರ್ವಿಷಯೇಷು ವಿರಕ್ತಃ ಶ್ರುತ್ಯುಕ್ತಮುಕ್ತಿಮೇವ ಸಾಧಯತೀತಿ ಭಾವಃ । ಭೇದಜ್ಞಾನಿನ ಏವ ಗುಣಾನಾಹ । ಸ ದೇವಾನಾಂ ಪಶುಃ ಕಾಮಧೇನುರಿತ್ಯಾದಿನಾ । ಮನುಷ್ಯಾಃ ಮನುಷ್ಯಾನ್ಭುಂಜ್ಯುಃ ಭೋಜ-ಯೇಯುಃ ಆನಂದಯೇಯುಃ । ನನು ಇದಾನೀಂ ಭೇದಜ್ಞಾನಿನೋ ಜನ್ಮಾಂತರೇ ಕರ್ಮವಶಾ-ದಭೇದವಾದಿಕುಲೇ ಜನಿಶ್ಚೇತ್ತಾಕ ತಸ್ಯ ಗತಿರಿತ್ಯತ ಆಹ – **ತಸ್ಮಾದಿತಿ** ॥ ತಸ್ಮಾದ್ಭೇದವಾದಿನಾಂ ದೇವಪಶುತ್ವಾತ್ ಏಷಾಂ ಯತ್ರ ಕುತ್ರಾಪ್ಯುತ್ಪನ್ನಾನಾಂ ಭೇದಜ್ಞಾನಿನಾಂ ಮನುಷ್ಯಾಃ ಮನುಷ್ಯರೂಪಪಶವಃ ಪ್ರಾಗುಕ್ತಮಿಥ್ಯಾಜ್ಞಾನಿನಃ ಯತ್ಪ್ರಮೇಯಂ ವಿದ್ಯುಃ ಚರ್ಚಿತವಂತಃ । ತನ್ನ ಪ್ರಿಯಮ್ । ತಥಾ ಚಾಪ್ರಿಯಭೂತತದೀಯದುರ್ಬೋಧಂ ಶ್ರುತ್ವಾ ತಾನುಪೇಕ್ಷ್ಯ ವೈಷ್ಣವ-ಮತಮೇವಾವಲಂಬಮಾನೋ ಭವತಿ । ಸ್ವಭೋಜಕಪಶುತ್ವಾತ್ತೇಷು ತಥಾ ದೇವಾಃ ಕೃಪಯತೀತಿ ಭಾವಃ । ಇದಂ ಚ ಗೀತಾವಾಕ್ಯೇ ಕೃಷ್ಣವಾಚಕ ಗೋವಿಂದಪದ-ಪ್ರಯೋಗಾನ್ಮೂಲಕೃತ್ಯೈವ ಸೂಚಿತಮ್ ॥ ೮೬೨–೮೬೩ ॥

**ವಿವರಣೆ–** ಕ್ರಂದತ್ಯಃ ಎಂಬ ಪದದಿಂದ ವೇದಗಳು ದೇವರಲ್ಲಿ ಮಾಡುವ ಪ್ರಾರ್ಥನೆಯನ್ನು ಸೂಚಿಸುತ್ತಾರೆ. ಆ ಪ್ರಾರ್ಥನೆಯ ಮಂತ್ರವು 'ಮಾನಃ ಸ್ತೇನೇಭ್ಯೋ ಯೇ ಅಭಿದ್ರುಹ ಸ್ಪದೇ ನಿರಾಮಿಣೋ ರಿಪವೋ ಅನ್ನೇಷು ಜಾಗೃಧುಃ' ಎಂದು ಯೇ= ಯಾರು, ನಿರಾಮಿಣಃ= ರಾಮರೂಪ ಪರದೇವತೆಗೆ ವಿರೋಧಿಗಳಾಗಿ, ಅನ್ನೇಷೇವ= ಭೋಗಗಳಲ್ಲಿಯೇ, ಜಾಗೃಧುಃ= ಆಸಕ್ತರಾಗಿದ್ದಾರೆಯೋ, ಸ್ತೇನೇಭ್ಯಃ= ಅಂತಹ ಕಳ್ಳರಿಗೆ, ನಃ= ನಮ್ಮನ್ನು, ಮಾಬ್ರೂಹಿ= ಉಪದೇಶಿಸಬೇಡ ಎಂದು ವಿದ್ಯಾಭಿಮಾನಿ ದೇವತೆಗಳು ದೇವರಲ್ಲಿ ಮಾಡಿದ ಪ್ರಾರ್ಥನೆಯ ಮಂತ್ರ. ಬ್ರೂಹಿ ಎಂಬ ಪದವು ಆ ಮಂತ್ರದ

ಉತ್ತರಾರ್ಧದಲ್ಲಿದೆ. ಅದನ್ನು ತೆಗೆದುಕೊಂಡು ಇಲ್ಲಿ ಅನ್ವಯವನ್ನು ಹೇಳಬೇಕು. ಕಳ್ಳರಿಂದ ಅಪಹರಿಸಲ್ಪಟ್ಟ ಗೋವುಗಳು ತಮ್ಮ ಗ್ರಾಮವನ್ನು ತಿಳಿಯದೆ ತಮ್ಮ ಗ್ರಾಮಕ್ಕೆ ಹೋಗುವ ಅಶ್ವವನ್ನು ಹಿಂಬಾಲಿಸಿದಂತೆ .ವೇದಗಳೂ ಸಹ ತಮಗೆ ಅರ್ಥವನ್ನು ತೋರಿಸುವ ಹಯಗ್ರೀವ ದೇವರನ್ನೇ ಹಿಂಬಾಲಿಸುತ್ತವೆ. ಮಧ್ವಾಚಾರ್ಯರು ಆ ಅಶ್ವರಕ್ಷಕರಾದವರು ಎಂದರೆ ಅಶ್ವಕಿಂಕರರಾದವರು. ಹೇಗೆ ಅಂತಹ ಕಿಂಕರರು ಹೆಜ್ಜೆ ಹೆಜ್ಜೆಗೂ ಅಶ್ವದ ಆಹಾರದಿಂದ ಒಂದು ಹಿಡಿ ಆಹಾರವನ್ನು ಗೋವುಗಳಿಗೆ ಕೊಟ್ಟು ಅವುಗಳನ್ನು ಕರೆದುಕೊಂಡು ಹೋಗುತ್ತಾರೆಯೋ, ಅದರಂತೆ ಮಧ್ವಾಚಾರ್ಯರೂ ಸಹ ಅಶ್ವರೂಪನಾದ ಹರಿಯ ಭೋಗ್ಯವೆನಿಸಿದ ಸಕಲ ಸದ್ಗುಣಾಂಭೋಧಿಯಲ್ಲಿ ಒಂದೊಂದು ಗುಣವನ್ನು ತೆಗೆದು ಒಂದೊಂದು ವಾಕ್ಯಗಳಿಗೆ ಅರ್ಥವೆಂದು ಕಲ್ಪಿಸಿ, ಆ ವಾಕ್ಯಗಳೆಂಬ ಗೋವುಗಳಿಗೆ ಆಹಾರವನ್ನು ನೀಡುತ್ತಾರೆ. ಆ ಗೋವುಗಳಾದರೋ ವೃಂದಾರಣ್ಯವನ್ನು ಪ್ರವೇಶಿಸಿದವು ಎಂದರೆ ಅರಣ್ಯದಲ್ಲಿ ಪಠಿಸಲು ಯೋಗ್ಯವಾದ ಉಪನಿಷತ್ತುಗಳು ಅರಣ್ಯಗಳು. ಸಜ್ಜನರ ವೃಂದ ಸಹಿತವಾದ ಅರಣ್ಯವನ್ನು ಪ್ರವೇಶಿಸಿದವು ಎಂದರೆ ಉಪನಿಷತ್ತುಗಳಿಗೆ ಸಂವಾದಿಯಾಗಿ ಸಜ್ಜನರ ಮನಸ್ಸಿನಲ್ಲಿ ನಿಂತವು ಎಂದು ಅರ್ಥ. ಗೋವುಗಳಿಗೆ ಯೋಗ್ಯವಾದ ವೃಂದಾವನವನ್ನು ಸೇರಿದವು ಎಂದು ಧ್ವನಿ. ವೃಂದಾವನದಲ್ಲಿ ಗೋವುಗಳು ಕೃಷ್ಣನ ಸುತ್ತಲೂ ನಿಂತಂತೆ ಎಲ್ಲ ವೇದವಾಕ್ಯಗಳೂ ಒಂದೊಂದು ವಾಕ್ಯವು ಕೆಲವು ಕೆಲವು ಗುಣಗಳಂತೆ ಅವನ ಅನಂತ ಗುಣಗಳನ್ನು ಸ್ತೋತ್ರ ಮಾಡಿದವು ಎಂದು ಅಭಿಪ್ರಾಯ.

ಹಾಗಾದರೆ 'ಅಥ ಯೋನ್ಯಾಂ ದೇವತಾಂ ಉಪಾಸ್ತೇ ಅನ್ಯೋಸೌ ಅನ್ಯೋಹ ಮಸ್ಮೀತಿ ನ ಸ ವೇದಯಥಾ ಪಶುರೇವಂ' ಎಂಬ ವಾಕ್ಯದಲ್ಲಿ ಭೇದೋಪಾಸಕರು ಏಕೆ ನಿಂದಿಸಲ್ಪಡುತ್ತಾರೆ ಎಂದು ಪ್ರಶ್ನೆಯನ್ನು ಮಾಡಿದರೆ ಅದಕ್ಕೆ ನಮ್ಮ ಉತ್ತರವು ಹೀಗೆ:- ನಿನ್ನ ಮತದಲ್ಲಿಯೇ ನೀನು ಉಪಾಸ್ಯವು ಮಿಥ್ಯಾಭೂತವಾದುದೆಂದು ಸತ್ಯವಾದುದು ಅನುಪಾಸ್ಯವೆಂದೂ ಸ್ವೀಕರಿಸುತ್ತೀಯೆ. ಆದ್ದರಿಂದ ನೀನು ಐಕ್ಯವನ್ನು ತತ್ತ್ವವೆಂದು ಹೇಳಿದರೂ ನಿನ್ನ ಉಪಾಸನೆಯು ಭೇದೋಪಾಸನೆಯೇ ಆಗಿದೆ. ಆದ್ದರಿಂದ ಅಂಗೀಕೃತ ತತ್ತ್ವಕ್ಕೆ ವಿರುದ್ಧವಾಗಿ ಭೇದೋಪಾಸನೆಯನ್ನು ಮಾಡುವ ನಿನ್ನನ್ನು ನಿಂದಿಸುವುದೇ ಆ ವಾಕ್ಯದ ಅಭಿಪ್ರಾಯವಾಗಿದೆ. ಯಃ= ಯಾವನು, ಅನ್ಯಾಂ= ನಿಜವಾಗಿ ಭಿನ್ನವಾದ, ದೇವತಾಂ= ದೇವತೆಯನ್ನು, ಅನ್ಯೋಸೌ ಅನ್ಯೋಹಮಸ್ಮೀತಿ ಉಪಾಸ್ತೇ= ಅವನು ಭಿನ್ನನಾದವನು ಮತ್ತು ನಾನು ಭಿನ್ನನಾದವನು ಎಂದು ಉಪಾಸನೆಯನ್ನು ಮಾಡುತ್ತಾನೆಯೋ, ಎಂದರೆ ಉಪಾಸನೆಯ ಕಾಲದಲ್ಲಿ ವೇದವಾಕ್ಯಗಳಿಂದ ಮತ್ತು ಉಳಿದ ವಾಕ್ಯಗಳಿಂದ ತನ್ನ ಮುಖದಿಂದ ಭೇದವನ್ನೇ ಹೇಳುತ್ತಾನೆಯೋ, ನ ತು ವೇದ= ಆದರೆ ಭೇದವು ತತ್ತ್ವವೆಂದು ತಿಳಿದಿಲ್ಲವೋ, ಸಃ= ಅವನು, ಯಥಾ ಪಶುಃ= ಹೇಗೆ ಪಶುವೋ, ಏವಂ= ಅದರಂತೆ ಎಂಬ ಈ ಅರ್ಥವು ಶ್ರುತಿಯ ಪದಗಳ ಸ್ವಾರಸ್ಯಿಕ

ಅರ್ಥದಿಂದಲೇ ಲಭ್ಯವಾಗುತ್ತದೆ. ಅಥವಾ ಬ್ರಹ್ಮನಾಮಕನಾದ ವಿಷ್ಣುವಿನ ಉಪಾಸನೆಯು ಹಿಂದೆ ಹೇಳಲ್ಪಟ್ಟಿದೆ. ಅಲ್ಲಿ ಅನ್ಯಾಂ ದೇವತಾಂ ಎಂದರೆ ವಿಷ್ಣುವ್ಯತಿರಿಕ್ತವಾದ ಶಿವಾದಿ ದೇವತೆಯನ್ನು ಎಂದು ಅರ್ಥ. ಈಗ ಯಃ= ಯಾವನು, ಅನ್ಯಾಂ= ವಿಷ್ಣುವಿಗಿಂತ ಭಿನ್ನವಾದ, ದೇವತಾಂ= ಶಿವಾದಿ ದೇವತೆಗಳನ್ನು, ಉಪಾಸ್ತೇ= ಶಿವನು ವಿಷ್ಣುವಿನ ಅನುಗ್ರಹಕ್ಕೆ ದ್ವಾರವಲ್ಲ ಆದರೆ, ಅಸೌ= ಈ ಶಿವನೇ, ಸ್ವಾಮಿ, ಅನ್ಯೋಹಂ= ಭಿನ್ನನಾದ ನಾನು, ಅಸ್ಮಿ= ಅವನ ದಾಸನಾಗಿದ್ದೇನೆ, ಎಂದು ಯಾರು ಉಪಾಸನೆಯನ್ನು ಮಾಡುತ್ತಾನೆಯೋ ಅವನು ಪಶುವಿನಂತೆ ಜ್ಞಾನಶೂನ್ಯನಾದವನು ಎಂದು ಅರ್ಥ. ಅಥವಾ ಅನ್ಯೋಸೌ ಅನ್ಯೋಹಂ ಎಂಬುದಕ್ಕೆ ಅವನು ವೈಷ್ಣವ ಕುಲೋತ್ಪನ್ನನಾದವನು ನಾನು ಸ್ವತಂತ್ರನಾದ ಶಿವನ ಕುಲದಲ್ಲಿ ಉತ್ಪನ್ನನಾದವನು ಎಂದು ಯಾವನು ತಿಳಿಯುತ್ತಾನೆಯೋ ಅವನು ಪಶುವಿನಂತೆ ಜ್ಞಾನಹೀನ ಎಂದೂ ಅರ್ಥವನ್ನು ಮಾಡಬಹುದು. ಅಥವಾ ಅನ್ಯೋಸೌ ಎಂಬಲ್ಲಿ ಅಸೌ= ಈ ವಿಷ್ಣುವು, ಅನ್ಯಃ= ಶೈವರಿಗೆ ಸಂಬಂಧಿಸಿದವನಲ್ಲ, ಅಹಂ= ಶೈವನಾದ ನಾನು, ಅನ್ಯಃ= ವಿಷ್ಣುವಿಗೆ ಸಂಬಂಧಿಸಿದವನಲ್ಲ, ಇತಿ= ಹೀಗೆ ತಿಳಿದು ಯಾವನು ಉಪಾಸನೆಯನ್ನು ಮಾಡುತ್ತಾನೆಯೋ ಅವನು ಪಶುವಿನಂತೆ ಜ್ಞಾನಶೂನ್ಯನಾದವನು ಎಂದು ಅರ್ಥ ಮಾಡಿ ಶೈವಶಾಕ್ತಾದಿ ನಿಂದಾಪರವಾಗಿಯೂ ಈ ವಾಕ್ಯವನ್ನು ವ್ಯಾಖ್ಯಾನ ಮಾಡಬಹುದು. ಈ ಅರ್ಥವು ಹೆಚ್ಚು ಶ್ರೇಷ್ಠವಾಗುತ್ತದೆ. ಅನ್ಯದೇವತೆ ಎಂದರೆ ಈ ಉಪನಿಷತ್‌ಪ್ರತಿಪಾದ್ಯವಾದ ದೇವತೆಗಿಂತ ಭಿನ್ನವಾದ ದೇವತೆ ಎಂಬುವುದೇ ಸ್ವಾರಸಿಕವಾಗಿ ಲಬ್ಧವಾಗುವ ಅರ್ಥ.

ಹಾಗಾದರೆ 'ತದಿದಮಪಿ ಏತರ್ಹಿಯ ಏವಂ ವೇದ ಅಹಂ ಬ್ರಹ್ಮಾಸ್ಮಿ ಇತಿ ಸ ಇದಂ ಸರ್ವಂ ಭವತಿ' ಎಂದು ಈ ವಾಕ್ಯದ ಉತ್ತರ ವಾಕ್ಯದಲ್ಲಿ ಐಕ್ಯಜ್ಞಾನವನ್ನೇ ಹೇಳಿರುವುದರಿಂದ ಅದರ ವಿರೋಧವು ಉಂಟಾಗುತ್ತದೆ ಎಂಬ ಶಂಕೆಯೂ ಸರಿಯಲ್ಲ. ಏಕೆಂದರೆ ತದಿದಂ ಎಂಬ ಸರ್ವನಾಮದಿಂದ ಪರಾಮರ್ಶೆಯನ್ನು ಮಾಡುವುದು ಈ ವಾಕ್ಯಕ್ಕಿಂತಲೂ ಹಿಂದಿನ ವಾಕ್ಯವಾದ 'ಬ್ರಹ್ಮವಾ ಇದಮಗ್ರ ಆಸೀತ್ ತದಾತ್ಮಾನಮೇವ ಆವೇತ್ ಅಹಂ ಬ್ರಹ್ಮಾಸ್ಮಿ ಇತಿ ತಸ್ಮಾತ್ ತತ್ಸರ್ವಂ ಅಭವತ್' ಎಂಬ ವಾಕ್ಯದಲ್ಲಿ ಹೇಳಿರುವ ಬ್ರಹ್ಮನನ್ನೇ ಪರಾಮರ್ಶೆ ಮಾಡಿ 'ಯ ಏವಂ ವೇದ' ಎಂದು ಹಿಂದೆ ಹೇಳಿದ ಬ್ರಹ್ಮನ ಜ್ಞಾನಕ್ಕೆ ಸಮಾನ ಪ್ರಕಾರಕವಾದ ಜ್ಞಾನವನ್ನೇ ಹೇಳಿರುವುದರಿಂದ ಮತ್ತು ಅಹಂ ಬ್ರಹ್ಮಾಸ್ಮಿ ಇತಿ ಎನ್ನುವ ವಾಕ್ಯದಲ್ಲಿ ಅಹಂ ಪದಕ್ಕೆ ಅಂತರ್ಯಾಮಿಯಾದ್ದರಿಂದ ಅಹೇಯನಾದ ಕಾರಣದಿಂದ ನಾನು ಅಹಂ ಶಬ್ದವಾಚ್ಯನಾಗುತ್ತೇನೆ. ಯಾವಾಗಲೂ ಅಸ್ತಿ ಎಂಬ ಜ್ಞಾನಕ್ಕೆ ವಿಷಯನಾಗುವುದರಿಂದ ಅಸ್ತಿ ಎಂಬ ಶಬ್ದದಿಂದ ವಾಚ್ಯನಾಗಿದ್ದೇನೆ ಎಂದು ಅರ್ಥವಿರುವುದರಿಂದ ಅಲ್ಲಿ ಜೀವೈಕ್ಯ ವಾರ್ತೆಯ ಪ್ರಸಕ್ತಿಯೇ ಇಲ್ಲ. ಅಹಮಸ್ಮಿ ಎಂಬುದಕ್ಕೆ ಹೀಗೆಯೇ ಬ್ರಹ್ಮಪರವಾಗಿ ಅರ್ಥವನ್ನು ಮಾಡಬೇಕು. ಅಹಮಸ್ಮಿ ಎಂಬ ಪದದಿಂದ ಜೀವನನ್ನು ತೆಗೆದುಕೊಂಡರೆ ವೇದನೆಗಳಲ್ಲಿ ಸಮಾನ ಪ್ರಕಾರತ್ವವನ್ನು ಹೇಳುವ ಏವಂ ಎಂಬ ಶಬ್ದದ ವಿರೋಧವು ಬರುತ್ತದೆ. ಮತ್ತು ಈ ಉಪನಿಷತ್ತಿನಲ್ಲಿಯೇ ಅನೇಕ

ವಾಕ್ಯಗಳಲ್ಲಿ 'ಏಷತ ಆತ್ಮಾಂತರ್ಯಾಮೀ, ಯ ಆತ್ಮನಿತಿಷ್ಠನ್ ಆತ್ಮನೋ ಅಂತರಃ ಯಮಾತ್ಮಾ ನ ವೇದ' ಮುಂತಾದ ವಾಕ್ಯಗಳಲ್ಲಿ ಅಭ್ಯಾಸಪೂರ್ವಕವಾಗಿ ಮತ್ತು ಯುಕ್ತಿಪೂರ್ವಕವಾಗಿ ಬ್ರಹ್ಮನ ಉಲ್ಲೇಖವಿದೆಯೇ ಹೊರತು ಜೀವನ ಉಲ್ಲೇಖವಿಲ್ಲ. ಜೀವಬ್ರಹ್ಮರಿಗೆ ಅಭೇದವು ಶ್ರುತ್ಯರ್ಥವಾದರೆ ಬ್ರಹ್ಮವಾ ಇದಮಗ್ರಾಸೀತ್ ಬ್ರಹ್ಮನು ಮಾತ್ರ ಸೃಷ್ಟಿಗಿಂತ ಮುಂಚೆ ಇದ್ದನು ಎಂದು ಹೇಳುವ ಪೂರ್ವವಾಕ್ಯದ ವಿರೋಧವು ಬರುತ್ತದೆ. ಏಕೆಂದರೆ ಆಗ ಜೀವರೂ ಇದ್ದಾರಷ್ಟೆ. ಜೀವಭಾವಯೋಗ್ಯವಾದ ಬ್ರಹ್ಮಚೈತನ್ಯ ಮಾತ್ರವೇ ಆಗ ಇದ್ದಿತು ಎಂದು ಅರ್ಥವನ್ನು ಅಂಗೀಕರಿಸಿದರೆ ಸೃಷ್ಟಿಗಿಂತ ಪೂರ್ವದಲ್ಲಿ ಜೀವಾಭಾವಾಪನ್ನರಾದ ಚೈತನ್ಯರು ಇರಲಿಲ್ಲವೆಂಬ ದೋಷವು ಹಾಗೆಯೇ ಉಳಿಯುತ್ತದೆ. ಜೀವಬ್ರಹ್ಮರಿಗೆ ಅಭೇದವಿದ್ದರೆ ಬ್ರಹ್ಮನಿರುವಾಗ ಜೀವರು ಇರಲೇಬೇಕಷ್ಟೆ. ಜೀವರಿಗೂ ಜೀವರೂಪದಿಂದ ಆಗ ಸತ್ತ್ವವನ್ನು ಅಂಗೀಕರಿಸಿದರೆ ಅಹಂ ಬ್ರಹ್ಮಾಸ್ಮಿ ಎಂಬ ಬ್ರಹ್ಮನ ಉಕ್ತಿಯೇ ಸಕಲ ಜೀವರ ವಚನವಾಗುವುದರಿಂದ ಪುನಃ 'ಏತರ್ಹಿ ಯ ಏವಂ ವೇದ' ಮೊದಲಾದ ವಾಕ್ಯಗಳು ವ್ಯರ್ಥವಾಗುತ್ತವೆ. ಏತರ್ಹಿ ಎಂದು ಹೇಳಿದ ಇದಾನೀಂ ತನ ಜೀವರ ಭೇದವು ನಿನ್ನ ರೀತಿಯಿಂದಲೇ ಅಯುಕ್ತವಾಗುತ್ತದೆ. ಏಕೆಂದರೆ ಈ ಕಾಲದಲ್ಲಿ ಜೀವ ವಿಶಿಷ್ಟನಾಗಿದ್ದಾನೆ. ಆದ್ದರಿಂದ ಜೀವಬ್ರಹ್ಮರಿಗೆ ಅಭೇದವನ್ನು ಹೇಳುವುದಕ್ಕೆ ಬರುವುದಿಲ್ಲ. ಇನ್ನು ಅಹಮಸ್ಮಿ ಎಂಬ ಪದಗಳಿಗೆ ನಾವು ಹೇಳಿದ ಅರ್ಥವು ಅಪ್ರಸಿದ್ಧವಾದುದು ಎಂಬ ಒಂದು ಆಕ್ಷೇಪವು ಉಳಿಯುತ್ತದೆ. ಆದರೆ ಉಪನಿಷತ್ತುಗಳು ರಹಸ್ಯವಿದ್ಯೆಯಾದ್ದರಿಂದ ಅಪ್ರಸಿದ್ಧವಾದ ಅರ್ಥವನ್ನು ಹೇಳುವುದೇ ಭೂಷಣವಾಗುತ್ತದೆ. ಮತ್ತು ಬ್ರಹ್ಮನ ವಾಕ್ಯದಲ್ಲಿ ಅಪೂರ್ವಾರ್ಥತ್ವವು ಸಿದ್ಧವಾಗುವುದರಿಂದ ಅನುವಾದಕತ್ವ ದೋಷವು ಪರಿಹಾರವಾಗುತ್ತದೆ. ಮತ್ತು ಪೂರ್ವದಲ್ಲಿರುವ ಭೇದವಾಕ್ಯಗಳ ವಿರೋಧವೂ ಪರಿಹಾರವಾಗುತ್ತದೆ. ಮತ್ತು ಅಹಂ ಪದವು ಅಸ್ಮತ್ ಶಬ್ದರೂಪವಾದರೆ ಅಹಂ ಎಂದು ಹೇಳಿದ್ದರಿಂದಲೇ ತಾನು ಎಂಬ ಅರ್ಥವು ಲಭ್ಯವಾಗುವುದರಿಂದ ಪುನಃ ತನ್ನನ್ನು ಎಂದು ಹೇಳುವ ಆತ್ಮಾನಮೇವ ಎಂಬ ಶಬ್ದವು ವ್ಯರ್ಥವಾಗುತ್ತದೆ ಎಂಬ ದೋಷವೂ ಇರುವುದಿಲ್ಲ. ಆದ್ದರಿಂದ ಈ ಎಲ್ಲ ಕಾರಣಗಳಿಂದ ಅಹಂ ಮತ್ತು ಅಸ್ಮಿ ಪದಗಳಿಗೆ ಅಪ್ರಸಿದ್ಧವಾದ ಆದರೆ ಶಾಸ್ತ್ರಪ್ರಮಾಣಸಿದ್ಧವಾದ ಅರ್ಥವನ್ನು ಅಂಗೀಕರಿಸುತ್ತೇವೆ.

ಹೀಗೆ ಯಃ= ಯಾವನು, ಅನ್ಯಾಂ= ಸಕಲ ಜೀವಭಿನ್ನವಾದ ಪರದೇವತೆಯನ್ನು, ಅನ್ಯೋSಸೌ= ಈ ಬ್ರಹ್ಮಶಬ್ದಾರ್ಥನಾದ ವಿಷ್ಣುವು, ಅಹಮಸ್ಮಿ ಶಬ್ದಾರ್ಥಗಳಾದ ವಿಷ್ಣುವು, ಅನ್ಯಃ= ಜೀವ ಎಂದು ತಿಳಿದು, ಅಹಂ ಬ್ರಹ್ಮಾಸ್ಮಿ ಎಂದು ಹಿಂದೆ ಹೇಳಿದ ವಾಕ್ಯದಲ್ಲಿ ಅಹಂ ಎಂದರೆ ಜೀವ ಎಂದು ತಿಳಿದು, ಅಹಂ ಬ್ರಹ್ಮಾಸ್ಮಿ ಎಂಬ ವಾಕ್ಯದಂತೆ ಬ್ರಹ್ಮನನ್ನು ಜೀವಾಭಿನ್ನನೆಂದು ಉಪಾಸನೆ ಮಾಡುತ್ತಾನೆಯೋ, ನ ಸ ವೇದ ಯಥಾ ಪಶುಃ ಅವನು ಪಶುವಿನಂತೆ ಜ್ಞಾನಶೂನ್ಯನಾದವನು ಎಂಬ ವಾಕ್ಯಾರ್ಥವೇ ಪೂರ್ವೋತ್ತರ ವಾಕ್ಯಗಳಿಗೆ

ಅನುಗುಣವಾಗುತ್ತದೆ. ಆದ್ದರಿಂದ ಪೂರ್ವೋತ್ತರ ವಾಕ್ಯಗಳನ್ನು ಪರಿಶೀಲನೆ ಮಾಡದೆ ಜೀವಾಭೇದವನ್ನು ಅಂಗೀಕಾರ ಮಾಡುವವರ ಗರ್ವ ಪರಿಹಾರಕ್ಕಾಗಿಯೇ ಈ ವಾಕ್ಯವು ಪ್ರವೃತ್ತವಾಗಿದೆ.

ಹಾಗಾದರೆ 'ಸ ಇದಂ ಸರ್ವಂ ಭವತಿ' ಎಂದು ಸರ್ವಭಾವಾಪತ್ತಿರೂಪವಾದ ಫಲವಚನವು ಹೇಗೆ ಸಂಗತವಾಗುತ್ತದೆ ಎಂದು ಪ್ರಶ್ನಿಸಿದರೆ, ಹೇಗೂ ಸಂಗತವಾಗುವುದಿಲ್ಲ ಎಂದೇ ಉತ್ತರ. ಇದಂ ಎಂದರೆ ಮುಮುಕ್ಷುವಿನ ಮನಸ್ಸಿನಲ್ಲಿ ಸದಾ ಇರುವ ಮೋಕ್ಷರೂಪವಾದ ಸರ್ವಂ ಎಂದರೆ ನಾನಾವಿಧವಿಷಯಭೋಗಗಳನ್ನು, ಭವತಿ ಎಂದರೆ ಹೊಂದುತ್ತಾನೆ ಎಂದೇ ಶ್ರುತಿಯ ಅರ್ಥ. ಭೂ ಪ್ರಾಪ್ತೌ ಎಂದು ಪ್ರಾಪ್ತ್ಯರ್ಥದಲ್ಲಿ ಭೂಧಾತುವಿದೆ. ಯದ್ಯಪಿ ಅದು ಆತ್ಮನೇ ಪದ, ಆದರೂ ಅಂತಹ ಫಲವು ಪರಾಧೀನವೆಂದು ತಿಳಿಸಲು ಇಲ್ಲಿ ಪರಸ್ಮೈಪದಪ್ರಯೋಗವಿದೆ. ಮತ್ತು ಪಶುಪಕ್ಷ್ಯಾದಿ ಸಕಲ ಜಗದಾಕಾರ ಪರಿಣಾಮ ರೂಪವಾದ ಸಂಸಾರರೂಪವಾದ ಸರ್ವಭಾವವು ಎಂದೂ ಬ್ರಹ್ಮವಿದ್ಯೆಯ ಫಲವಾಗುವುದಿಲ್ಲ. ಸ ಇದಂ ಸರ್ವಂ ಭವತಿ ಎಂದು ಸರ್ವಭಾವವನ್ನು ಹೇಳುವುದಿಲ್ಲ, ಸರ್ವನಿವೃತ್ತಿಯನ್ನು ಹೇಳುತ್ತದೆ ಎಂಬ ಶಂಕೆಯೂ ಸರಿಯಲ್ಲ. ಏಕೆಂದರೆ ಅಂತಹ ನಿವೃತ್ತಿರೂಪವಾದ ಅರ್ಥವು ಯಾವ ಪದದ ಅರ್ಥವೂ ಅಲ್ಲ ಮತ್ತು ವಾಕ್ಯದ ಅರ್ಥವೂ ಅಲ್ಲ. ಮತ್ತು ಮುಖ್ಯವಾದ ಅರ್ಥವು ಉಪಪನ್ನವಾಗುವಾಗ ಲಕ್ಷಣಾವೃತ್ತಿಯನ್ನು ಅಂಗೀಕರಿಸಿ ಅಮುಖ್ಯವಾದ ಅರ್ಥವನ್ನು ಹೇಳಬಾರದು. ಆದ್ದರಿಂದ ಪರನೂ ಸಹ ತಸ್ಮಾತ್ ತತ್ಸರ್ವಮ ಭವತ್ ಎನ್ನುವ ವಾಕ್ಯದಲ್ಲಿ ಸೃಷ್ಟಿಗಿಂತ ಪೂರ್ವಕಾಲದಲ್ಲಿ ಇದ್ದ ಬ್ರಹ್ಮನು ಜಗದಾಕಾರಪರಿಣಾಮವನ್ನು ಹೊಂದಿದನು ಎಂಬ ಅರ್ಥವನ್ನೇ ಹೇಳಬೇಕು. ಈ ವಾಕ್ಯಕ್ಕೆ ಸರ್ವನಿವೃತ್ತಿಯು ಅರ್ಥ ಎಂದು ಹೇಳಿದರೆ ಆ ಉಪಕ್ರಮವಾಕ್ಯದ ವಿರೋಧವು ಬರುತ್ತದೆ. ಉಪಕ್ರಮವಾಕ್ಯದಲ್ಲಿಯೂ ಸಹ ಸರ್ವನಿವೃತ್ತಿಯನ್ನೇ ಹೇಳಿದೆ ಎಂದು ಹೇಳಲು ಬರುವುದಿಲ್ಲ. ಸೃಷ್ಟಿಗಿಂತ ಮೊದಲೇ ಸರ್ವವು ನಿವೃತ್ತವಾದರೆ ಸಂಸಾರವೇ ಇಲ್ಲವೆಂದಾಗುವ ಪ್ರಸಂಗ ಬರುತ್ತದೆ. ಮತ್ತು ಆ ವಾಕ್ಯಕ್ಕೆ ಬ್ರಹ್ಮನಿಗೆ ಸಕಲ ಜಗದಾಕಾರೇಣ ಪರಿಣಾಮವನ್ನು ಅರ್ಥವೆಂದು ಹೇಳದಿದ್ದರೆ ಆ ಅರ್ಥವನ್ನು ಹೇಳುವ ಇನ್ನೊಂದು ವಾಕ್ಯವಿಲ್ಲವಾದದಿಂದ ಬ್ರಹ್ಮನಿಗೆ ಜಗದಾಕಾರ ಪರಿಣಾಮವೇ ಸಿದ್ಧವಾಗುವುದಿಲ್ಲ. ಅಹಂ ಮನುರಭವಂ ಸೂರ್ಯಶ್ಚ ಎಂಬ ವಾಮದೇವರ ವಾಕ್ಯದಲ್ಲಿ ಸ್ಪಷ್ಟವಾಗಿ ಸರ್ವಭಾವವೇ ಶ್ರುತವಾಗುವುದರಿಂದ ಸರ್ವನಿವೃತ್ತಿರೂಪವಾದ ಅರ್ಥವು ಆ ವಾಕ್ಯಕ್ಕೂ ವಿರುದ್ಧವಾಗುತ್ತದೆ. ಆದ್ದರಿಂದ ಈ ವಾಕ್ಯವು ಸರ್ವನಿವೃತ್ತಿಯನ್ನು ಹೇಳುತ್ತದೆ ಎಂದಾಗಲೀ, ಬ್ರಹ್ಮಭಾವವು ಸರ್ವವಿದ್ಯೆಯ ಫಲವೆಂದಾಗಲೀ ಹೇಳಬಾರದು.

ನಿಜವಾಗಿ ವಿಚಾರ ಮಾಡಿ ಪದಗಳಿಗೆ ಹಿಂಸೆಯಾಗದಂತೆ ಅರ್ಥವನ್ನು ಹೇಳುವುದಾದರೆ ಭಗವದ್ಗೀತೆಯಲ್ಲಿ ದೇವಾಸುರ ವಿಭಾಗಯೋಗದಲ್ಲಿ ಇರುವ ವಾಕ್ಯಗಳು ಹೇಗೆ ಅಸುರನಿಂದೆಗಾಗಿಯೂ ಮತ್ತು ದೇವತೆಗಳ ಪ್ರಶಂಸೆಗಾಗಿಯೂ

ಇವೆಯೋ, ಅದರಂತೆ ಇಲ್ಲಿ ಈ ವಾಕ್ಯವು ಅಭೇದವಾದಿಗಳ ನಿಂದೆಗೂ ಮತ್ತು ಭೇದವಾದಿಗಳ ಪ್ರಶಂಸೆಗೋಸ್ಕರವಾಗಿಯೂ ಪ್ರವೃತ್ತವಾಗಿದೆ. ಆ ಪೂರ್ಣವಾಕ್ಯ ಹೀಗಿದೆ: 'ತದಾಹುಃ ಯದ್ಬ್ರಹ್ಮವಿದ್ಯಯಾ ಸರ್ವಂ ಭವಿಷ್ಯಂತೋ ಮನುಷ್ಯಾಮನ್ಯಂತೇ ಕಿಮುತದ್‌ಬ್ರಹ್ಮಾವ್ರೇತ್ ಯಸ್ಮಾತ್ ತತ್ಸರ್ವಮಭವದಿತಿ। ಬ್ರಹ್ಮವಾ ಇದಮಗ್ರ ಆಸೀತ್ । ತದಾತ್ಮಾನ ಮೇವಾವೇತ್ ಅಹಂ ಬ್ರಹ್ಮಾಸ್ಮಿ ಇತಿ । ತಸ್ಮಾತ್ ತತ್ಸರ್ವಮಭವತ್ । ತದ್ಯೋಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ । ತಥರ್ಷೀಣಾಂ । ತದ್ಧೈತತ್ ಪಶ್ಯನ್ ಋಷಿಃ ವಾಮದೇವಃ ಪ್ರತಿಪೇದೇ ಅಹಂ ಮನುರಭಂ ಸೂರ್ಯಶ್ಚೇತಿ । ತದಿದಮಪಿ ಏತರ್ಹಿ ಯ ಏವಂ ವೇದ ಅಹಂ ಬ್ರಹ್ಮಾಸ್ಮಿ ಇತಿ ಸ ಇದಂ ಸರ್ವಂ ಭವತಿ । ತಸ್ಯಹ ನ ದೇವಾಶ್ಚ ನಾಭೂತ್ಯಾ ಈಶತೇ । ಆತ್ಮಾಹ್ಯೇಷಾಂ ಸಭವತಿ । ಅಥ ಯೋಽನ್ಯಾಂ ದೇವತಾಂ ಉಪಾಸ್ತೇ । ಅನ್ಯೋಽಸಾವನ್ಯೋಽಹಮಸ್ಮಿ ಇತಿ । ನ ಸ ವೇದ ಯಥಾ ಪಶುರೇವಂ । ಸ ದೇವಾನಾಂ ಚ ಯಥಾ ವೈಭಹವಃ ಪಶವೋ ಮನುಷ್ಯಂ ಭುಂಜ್ಯುಃ ಏವಮ್ಯೈಕೈಕಃ ಪುರುಷಃ ದೇವಾನ್ ಭುನಕ್ತಿ । ಏಕಸ್ಮಿನ್ ಏವ ಪಶಾವಾದೀಯಮಾನೇ ಪ್ರಿಯಂ ಭವತಿ । ಕಿಮು ಬಹುಷು ತಸ್ಮಾತ್ ಏಷಾಂ ತನ್ನಪ್ರಿಯಂ ಯನ್ನನುಷ್ಯಾವಿದ್ಯುರಿತಿ' ಇದು ಆ ಖಂಡದ ಪೂರ್ಣವಾದ ಪಾಠ. ಈ ಖಂಡದ ಅರ್ಥವು ಹೀಗಿದೆ:- ತತ್= ಮುಂದೆ ಹೇಳಲಿರುವ ಪ್ರಮೇಯವನ್ನು, ಆಹುಃ= ಪೂರ್ವಾಚಾರ್ಯರು ಹೇಳುತ್ತಾರೆ ಎಂದು ಇದು ವೇದದ್ರಷ್ಟ್ರುವಾದ ಋಷಿಯ ವಚನ. ಬ್ರಹ್ಮವಿದ್ಯಯಾ= ಅದ್ವೈತ ವಿಷಯಕವಾದ ಶ್ರವಣ ಮನನ ಜನ್ಯವಾದ ಅದ್ವೈತ ಸಾಕ್ಷಾತ್ಕಾರರೂಪವಾದ ತಮಗೆ ಅಭಿಮತವಾದ ಬ್ರಹ್ಮವಿದ್ಯೆಯಿಂದ, ಸರ್ವಂ= ನಾನಾವಿಧಪಶುಪಕ್ಷ್ಯಾದಿ ಜಗತ್ತಾಗಿ, ಭವಿಷ್ಯಂತಃ= ಮುಂದೆ ಪರಿಣಾಮ ಹೊಂದುವವರಾಗಿ, ಎಂದು ಈ ಭಾಗದ ಅರ್ಥ. ಉತ್ತರವಾಕ್ಯದಲ್ಲಿ ಭೇದವನ್ನು ಹೇಳುವುದರಿಂದ ಇಲ್ಲಿ ಅಭೇದವಾದಿಗಳಾದ ಮನುಷ್ಯರೇ ಹೇಳಲ್ಪಡುತ್ತಾರೆ. ಇಲ್ಲಿಯೇ ಮನುಷ್ಯಾ ಎಂಬ ಪದವಿದೆ. ಮನು ಅವಬೋಧನೇ ಎಂದು ಧಾತು. ಅವಬೋಧನ ಎಂದರೆ ಕೆಳಗೇ ಇರುವ ಜ್ಞಾನ ಎಂದು ಅರ್ಥ. ಭಗವಂತನ ಕೆಳಗೇ ಇರುವ ಜ್ಞಾನ ಎಂದು ಅರ್ಥ, ಎಂದರೆ ಭಗವಂತನನ್ನು ಯಥಾರ್ಥವಾಗಿ ತಿಳಿಯದ ತಾಮಸ ಜನರು ಮನುಷ್ಯಶಬ್ದವಾಚ್ಯರು ಎಂದು ಅರ್ಥ. ಅಂತಹ ಮನುಷ್ಯರು ಯತ್ ಮನ್ಯಂತೇ= ಏನನ್ನು ಆಲೋಚಿಸುತ್ತಾರೋ, ತದಾಹುಃ= ಪೂರ್ವಾಚಾರ್ಯರು ಅದನ್ನು ಹೇಳುತ್ತಾರೆ ಎಂದು ಹಿಂದಿನ ವಾಕ್ಯದ ಅರ್ಥ. ಅವರು ಏನನ್ನು ಆಲೋಚಿಸುತ್ತಾರೆ ಎಂದು ತಿಳಿಸಲು ಹೊರಟ ವಾಕ್ಯ ಕಿಮುತದ್ಬ್ರಹ್ಮಾವ್ರೇತ್ ಇತ್ಯಾದಿ ವಾಕ್ಯ. ತದ್ಬ್ರಹ್ಮ= ನಾವು ಅಹಂ ಎಂದು ತಿಳಿದುಕೊಂಡಿರುವ ಬ್ರಹ್ಮನು, ಅವೇತ್ ಕಿಮುಃ= ನಮ್ಮಂತೆ ಬ್ರಹ್ಮಾಭೇದವನ್ನು ತಿಳಿದುಕೊಂಡಿದ್ದಾನೆಯೇ, ಯಸ್ಮಾತ್= ಏಕೆಂದರೆ, ತತ್= ಆ ಬ್ರಹ್ಮನು, ಸರ್ವಂ= ಸಕಲ ಜಗದಾಕಾರೇಣ ಪರಿಣಾಮವನ್ನು, ಅಭವತ್= ಹೊಂದಿದನು, ಹೇಗೆ ನಮಗೆ ಬ್ರಹ್ಮವಿದ್ಯೆ ಇರುವಾಗಲೇ ಈ ಸಂಸಾರವು ಉಂಟಾಗಿದೆಯೋ, ಹಾಗೆ ಬ್ರಹ್ಮನಿಗೂ ಸಹ

ನಮಗೆ ಇರುವಂತಹ ಬ್ರಹ್ಮಜ್ಞಾನವಿರುವಾಗಲೇ ಇಂತಹ ಸಂಸಾರವುಂಟಾಯಿತೇ ಎಂದು ಪ್ರಶ್ನವಾಕ್ಯದ ಅರ್ಥ. ಬ್ರಹ್ಮವಾ ಇದಮಗ್ರಾಸೀತ್ ಎಂದು ಆರಂಭಿಸಿ ತದಿದಮಪಿ ಏತರ್ಹಿ ಯ ಏವಂ ವೇದ ಅಹಂ ಬ್ರಹ್ಮಾಸ್ಮಿ ಇತಿ ಎನ್ನುವವರೆಗೆ ಆ ತಾಮಸಜ್ಞಾನಗಳಲ್ಲಿಯೇ ಪ್ರೌಢರಾದವರ ಒಬ್ಬರ ಉತ್ತರ. ಇದಮಗ್ರೇ= ಈ ಜಗತ್ತಿನ ಸೃಷ್ಟಿಗಿಂತ ಮೊದಲು, ಬ್ರಹ್ಮ ಆಸೀತ್ ವೈ= ಬ್ರಹ್ಮನು ಇದ್ದನಷ್ಟೆ, ತದ್ಬ್ರಹ್ಮ= ಆ ಬ್ರಹ್ಮನು, ಆತ್ಮಾನಮೇವ= ಆತ್ಮನನ್ನೇ, ಅಹಂ ಬ್ರಹ್ಮಾಸ್ಮಿ ಇತಿ= ನಾನು ಬ್ರಹ್ಮನಾಗಿದ್ದೇನೆ ಎಂದು, ಅವೇತ್= ತಿಳಿದನು. ನಮಗೂ ಇರುವ ಬ್ರಹ್ಮಜ್ಞಾನವು ಸರ್ವಜ್ಞನಾದ ಬ್ರಹ್ಮನಿಗೆ ಹೇಗೆ ಇಲ್ಲದೇ ಇರಲು ಸಾಧ್ಯ ಎಂದು ಅಭಿಪ್ರಾಯ. ತಸ್ಮಾತ್= ಅಂತಹ ಜ್ಞಾನವು ಇರುವುದರಿಂದ, ತತ್= ಆ ಬ್ರಹ್ಮನೂ ಸಹ, ಸರ್ವಂ= ಸರ್ವಾಕಾರ ಪರಿಣಾಮವನ್ನು, ಅಭವತ್= ಹೊಂದಿದನು, ನಮ್ಮಂತೆ ಬ್ರಹ್ಮನೂ ಸಹ ಬ್ರಹ್ಮಜ್ಞಾನವಿರುವಾಗಲೇ ಸಂಸಾರವನ್ನು ಹೊಂದಿದನು ಎಂದು ಅಭಿಪ್ರಾಯ. ತದ್ಬ್ರಹ್ಮ= ಆ ಬ್ರಹ್ಮನನ್ನು, ದೇವಾನಾಂ= ದೇವತೆಗಳ ಮಧ್ಯದಲ್ಲಿ, ಯಃ= ಯಾವನು, ಪ್ರತ್ಯಬುಧ್ಯತ= ತಿಳಿದನೋ, ಸಃ= ಆ ದೇವನು, ತದೇವ= ಸರ್ವವೇ, ಅಭವತ್= ಆದನು. ದೇವತೆಗಳಾಗಲೀ, ಋಷಿಯಾಗಲೀ ಅಥವಾ ಮನುಷ್ಯನಾಗಲೀ ಎಲ್ಲರೂ ಬ್ರಹ್ಮಜ್ಞಾನವಿದ್ದಾಗಲೇ ಸಂಸಾರವನ್ನು ಹೊಂದುತ್ತಾರೆ ಎಂದು ಅಭಿಪ್ರಾಯ. ತದ್ಧೈತತ್= ಆ ಸರ್ವಭಾವವನ್ನು, ಪಶ್ಯನ್= ನೋಡುತ್ತಾ, ವಾಮದೇವ ಋಷಿಃ= ವಾಮದೇವ ಋಷಿಯು, ಅಹಂ ಮನುಃ= ನಾನೇ ಮನು, ಅಹಂ ಸೂರ್ಯಶ್ಚ= ನಾನೇ ಸೂರ್ಯನೆಂದು, ಪ್ರತಿಪೇದೇ= ತಿಳಿದನು, ತತ್= ಆದ್ದರಿಂದ= ಜ್ಞಾನವು ಇದ್ದಾಗಲೇ ಎಲ್ಲ ವ್ಯಕ್ತಿಗಳಲ್ಲಿಯೂ ಸಂಸಾರವು ಕಾಣುವುದರಿಂದ, ಏತರ್ಹ್ಯಪಿ= ಈಗ, ಇದಂ= ಬ್ರಹ್ಮನನ್ನು, ಯಃ= ಯಾವನು, ಅಹಂ ಬ್ರಹ್ಮಾಸ್ಮಿ ಇತಿ ವೇದ= ನಾನು ಬ್ರಹ್ಮನಾಗಿದ್ದೇನೆ ಎಂದು ತಿಳಿಯುತ್ತಾನೆಯೋ, ಸಃ= ಅವನು, ಇದಂ ಸರ್ವಂ ಭವತಿ= ಈ ಸರ್ವವೂ ಆಗುತ್ತಾನೆ, ಈ ಸಂಸಾರದಿಂದ ಮುಕ್ತನಾಗುವುದಿಲ್ಲ. ಆದ್ದರಿಂದ ಫಲಶ್ರುತಿಯು ರೋಚನಾರ್ಥವೆಂದು ತಿಳಿದು ನಮ್ಮ ಗುರುಗಳು ಹೇಳಿದ ಫಲವು ಎಂದೂ ದೊರೆಯುವುದಿಲ್ಲವೆಂದು ತಿಳಿದು ನಾವು ವನಿತಾದಿ ಭೋಗಗಳಲ್ಲಿ ಆಸಕ್ತರಾಗಿರಬೇಕು, ಇತಿ= ಎಂದು, ಯನ್ಮನ್ಯಂತೇ= ಯಾವುದನ್ನು ತಿಳಿಯುತ್ತಾರೆಯೋ, ತದ್= ಅದನ್ನು, ಆಹುಃ= ಪೂರ್ವಾಚಾರ್ಯರು ಅನುವಾದ ಮಾಡಿ ಹೇಳುತ್ತಾರೆ ಎಂದು ಹಿಂದಿನಿಂದ ಅನ್ವಯ.

ಇನ್ನು ಶ್ರುತಿಯು ಮುಂದಿನ ವಾಕ್ಯದ ಸಂದರ್ಭದಿಂದ ಇಂತಹ ಮಿಥ್ಯಾಜ್ಞಾನಿಗಳಿಗೆ ಅಂಧಃತಮಸ್ಸೇ ಫಲವೆಂದು ನಿರೂಪಿಸುತ್ತದೆ. ತಸ್ಯ= ಅಂತಹ ಮಿಥ್ಯಾಜ್ಞಾನಿಗೆ, ದೇವಾಶ್ಚ= ದೇವತೆಗಳೂ ಕೂಡ, ಅಭೂತ್ಯೈ= ಸರ್ವೈಶ್ವರ್ಯಾಭಾವರೂಪವಾದ, ಮತ್ತು ಅನಿವೃತ್ತಿರೂಪವಾದ ಅಂಧಂತಮಸ್ಸನ್ನು ಕೊಡಲು, ನೇಶತೇ ಇತಿ ನ= ಸಮರ್ಥ-ರಾಗುವುದಿಲ್ಲ ಎಂದು ಇಲ್ಲ, ಅಂಧಂತಮಸ್ಸನ್ನು ಕೊಡಲು ಸಮರ್ಥರಾಗಿಯೇ ಇರುತ್ತಾರೆ

ಎಂದು ಅಭಿಪ್ರಾಯ, ದೇವತೆಗಳಿಗೆ ಆ ಮಿಥ್ಯಾಜ್ಞಾನಿಗಳಲ್ಲಿ ಏಕೆ ದ್ವೇಷ ಎಂಬುದಕ್ಕೆ ಕಾರಣವನ್ನು ಆತ್ಮಾಹಿ ಎಂಬ ಭಾಗದಿಂದ ನಿರೂಪಿಸುತ್ತಾರೆ. ಏಷಾಂ= ಈ ದೇವತೆಗಳಿಗೆ, ಸಃ= ಮಿಥ್ಯಾಜ್ಞಾನಿಗಳಿಂದ ತಮಗಿಂತ ಅಭಿನ್ನನಾಗಿ ಉಪಾಸಿಸಲ್ಪಟ್ಟ ನಾರಾಯಣನು, ಆತ್ಮಾ ಭವತಿ= ಸ್ವಾಮಿಯಾಗಿದ್ದಾನೆ. ತಮ್ಮ ಸ್ವಾಮಿಗೆ ದ್ರೋಹವನ್ನು ಮಾಡಿದ್ದಾರಾದ್ದರಿಂದ ದೇವತೆಗಳು ದ್ವೇಷ ಮಾಡುತ್ತಾರೆಂದು ಅಭಿಪ್ರಾಯ. ಹೀಗೆ ಶ್ರುತಿಯು ದುರ್ಮತವನ್ನು ಅನುವಾದ ಮಾಡಿ ಅದನ್ನು ಅನುಸರಿಸುವವರಿಗೆ ಅನರ್ಥವನ್ನು ಹೇಳಿ ಅಥಯೋನ್ಯಾಂ ಎಂಬ ವಾಕ್ಯದಿಂದ ಭೇದವಾದಿಯನ್ನು ಪ್ರಶಂಸೆ ಮಾಡುತ್ತದೆ. ಅನ್ಯೋಽಸೌ= ಈ ವಿಷ್ಣುವು ಅನ್ಯನಾದವನು, ಅಹಂ ತು= ಜೀವನಾದ ನಾನೂ ಸಹ, ಅನ್ಯೋಽಸ್ಮಿ ಇತಿ= ಭಿನ್ನನಾಗಿದ್ದೇನೆ ಎಂದು, ಯಃ= ಯಾವನು, ದೇವತಾಂ= ದೇವತೆಯನ್ನು, ಅನ್ಯಾಂ ಉಪಾಸ್ತೇ= ತನಗಿಂತ ಭಿನ್ನವಾಗಿ ಉಪಾಸನೆ ಮಾಡುತ್ತಾನೆಯೋ, ಸಃ= ಆ ಭೇದಜ್ಞಾನಿಯು, ಯಥಾ ಪಶುಃ ಏವಂ= ಹಿಂದೆ ಮಿಥ್ಯಾಜ್ಞಾನಿಯು ಹೇಗೆ ತಿಳಿಯುತ್ತಾನೆಯೋ ಹಾಗೆ, ನ ವೇದ= ತಿಳಿಯುವುದಿಲ್ಲ ಎಂದರೆ ಶ್ರುತ್ಯಾದಿಗಳಿಗೆ ಅವಮಾನವನ್ನು ಮಾಡಿ ವಿಷಯಲಂಪಟನಾಗಿರುವುದಿಲ್ಲ. ಆದರೆ ದುರ್ವಿಷಯಗಳಲ್ಲಿ ವಿರಕ್ತನಾಗಿ ಶ್ರುತಿಯು ಫಲವೆಂದು ಹೇಳಿದ ಮೋಕ್ಷವನ್ನೇ ಸಾಧಿಸುತ್ತಾನೆ ಎಂದು ಅಭಿಪ್ರಾಯ. ಭೇದಜ್ಞಾನಿಯ ಗುಣಗಳನ್ನೇ ಸ ದೇವಾನಾಂ ಪಶುಃ ಎಂಬ ವಾಕ್ಯದಿಂದ ಹೇಳುತ್ತಾರೆ. ಅಂತಹ ಭೇದಜ್ಞಾನಿಯು ದೇವತೆಗಳಿಗೆ ಕಾಮಧೇನುವಿದ್ದಂತೆ. ಯಥಾ= ಹೇಗೆ, ಬಹವಃ ಪಶವಃ= ಅನೇಕ ಗೋವುಗಳು, ಮನುಷ್ಯಂ= ಮನುಷ್ಯರಿಗೆ, ಭುಂಜ್ಯುಃ= ಭೋಜನವನ್ನು ಕೊಟ್ಟು ಆನಂದಪಡಿಸುತ್ತವೆಯೋ, ಅದರಂತೆ, ಏಕೈಕ ಪುರುಷಃ= ಒಬ್ಬೊಬ್ಬ ಭೇದಜ್ಞಾನಿಯೂ, ದೇವಾನ್ ಭುನಕ್ತಿ= ದೇವತೆಗಳನ್ನು ಸಂತೋಷಪಡಿಸುತ್ತಾನೆ ಎಂದು ಅರ್ಥ.

ಈಗ ಭೇದಜ್ಞಾನಿಯಾದವನಿಗೆ ಜನ್ಮಾಂತರದಲ್ಲಿ ಕರ್ಮವಶದಿಂದ ಅಭೇದವಾದಿಗಳ ಕುಲದಲ್ಲಿ ಜನ್ಮವುಂಟಾದರೆ ಅವನಿಗೆ ಏನು ಗತಿಯಾಗುತ್ತದೆ ಎಂಬುದನ್ನು ತಸ್ಮಾದೇಷಾಂ ತನ್ನಪ್ರಿಯಂ ಎಂಬ ವಾಕ್ಯಭಾಗದಿಂದ ಹೇಳುತ್ತಾರೆ. ತಸ್ಮಾತ್= ಭೇದವಾದಿಗಳು ದೇವತೆಗಳಿಗೆ ಕಾಮಧೇನುವಿನಂತೆ ಸಂತೋಷದಾಯಕರಾದ್ದರಿಂದ, ಏಷಾಂ= ಯಾವ ಕುಲದಲ್ಲಿ ಹುಟ್ಟಿದರೂ ಭೇದಜ್ಞಾನಿಗಳಿಗೆ, ಯದೇತನ್ ಮನುಷ್ಯಾ ವಿದ್ಯುಃ= ಮಿಥ್ಯಾಜ್ಞಾನಿಗಳು ಈ ಯಾವ ಪ್ರಮೇಯವನ್ನು ತಿಳಿದಿದ್ದಾರೆಯೋ, ತತ್= ಅದು, ನ ಪ್ರಿಯಂ= ಪ್ರಿಯವಾಗುವುದಿಲ್ಲ, ಆದ್ದರಿಂದ ಸಜ್ಜನರು ಅದ್ವೈತಿಗಳ ಕುಲದಲ್ಲಿ ಹುಟ್ಟಿದರೂ ತಮಗೆ ಅಪ್ರಿಯವಾದ ಅವರ ದುರ್ಬೋಧನೆಯನ್ನು ಕೇಳಿ ಅವರನ್ನು ತಿರಸ್ಕರಿಸಿ ವೈಷ್ಣವ ಮತವನ್ನೇ ಅವಲಂಬಿಸುತ್ತಾರೆ. ಭೇದಜ್ಞಾನಿಗಳು ತಮಗೆ ಸುಖವನ್ನು ಕೊಡುವ ಪಶುವಿನಂತೆ ಇರುವುದರಿಂದ ದೇವತೆಗಳು ಅವರಲ್ಲಿ ಅಂತಹ ಕೃಪೆಯನ್ನು

ತೋರಿಸುತ್ತಾರೆ ಎಂದು ಅಭಿಪ್ರಾಯ. ಭಗವದ್ಗೀತೆಯಲ್ಲಿರುವ ಕೃಷ್ಣವಾಚಕವಾದ ಗೋವಿಂದ ಶಬ್ದವನ್ನು ಇಲ್ಲಿ ಗೋವಿಂದಮೇವ ಪರಿತಃ ಪ್ರಾಪುಃ ಎಂದು ಹೇಳಿ ಹೇಗೆ ದೇವಾಸುರ ವಿಭಾಗಯೋಗದಲ್ಲಿ ಅಸುರ ನಿಂದೆಯೂ ಮತ್ತು ದೇವತೆಗಳ ಸ್ತುತಿಯೂ ಅಭಿಪ್ರೇತವಾಗಿದೆಯೋ, ಹಾಗೆಯೇ ಈ ಖಂಡದಲ್ಲಿ ಮಿಥ್ಯಾಜ್ಞಾನಿಗಳ ನಿಂದೆಯೂ ಮತ್ತು ಭೇದಜ್ಞಾನಿಗಳ ಪ್ರಶಂಸೆಯೂ ಹೇಳಲ್ಪಟ್ಟಿದೆ ಎಂದು ಶ್ರೀರಾಜರೇ ಸೂಚಿಸಿದ್ದಾರೆ.

**ಈಶಾತ್ ಸರ್ವೇಶ್ವರಾದ್ ವಿಷ್ಣೋರಪೇತಸ್ಯ ತತಃ ಪ್ರಭೋಃ ।**
**ಬ್ರಹ್ಮಣಸ್ತು ದ್ವಿತೀಯೇಽಪಿ ಬ್ರಹ್ಮಣ್ಯಭಿನಿವೇಶತಃ ॥ ೮೬೪ ॥**

**ನಿರ್ಗುಣಾಖ್ಯೇಽಭಿಮಾನೇನ ಭಯಂ ಭವತಿ ಯನ್ನೃಣಾಮ್ ।**
**ವಿಪರ್ಯಯೋಽಸ್ಮೃತಿಶ್ಚ ಸ್ಯಾನ್ಮುಕುಂದಬ್ರಹ್ಮಮೋಚನಾತ್ ॥ ೮೬೫ ॥**

**ಅರ್ಥ–** ಈಶಾತ್= ಸರ್ವೇಶ್ವರಾತ್= ಸರ್ವೇಶ್ವರನಾದ ವಿಷ್ಣುವಿನಿಂದ, ಅಪೇತಸ್ಯ= ವಿಮುಖನಾದಂತಹ, ತತಃ= ಹಿಂದಿನ ಶ್ಲೋಕದಲ್ಲಿ ಹೇಳಿದ ಆ, ಪ್ರಭೋಃ= ಪ್ರಭುವಾದ, ಬ್ರಹ್ಮಣಸ್ತು= ಬ್ರಹ್ಮನಿಂದ, ದ್ವಿತೀಯೇ= ದ್ವಿತೀಯನಾದ, ನಿರ್ಗುಣಾಖ್ಯೇ= ನಿರ್ಗುಣನೆಂದು ಕರೆಯಲ್ಪಡುವ, ಬ್ರಹ್ಮಣ್ಯಪಿ= ಬ್ರಹ್ಮನಲ್ಲಿ, ಅಭಿನಿವೇಶತಃ= ಅಭಿಮಾನೇನ= ಗೌರವ ಇರುವ ಕಾರಣದಿಂದ, ನೃಣಾಂ= ಮನುಷ್ಯರಿಗೆ, ಮುಕುಂದಬ್ರಹ್ಮಮೋಚನಾತ್= ಮುಕುಂದನಾದ ಬ್ರಹ್ಮನನ್ನು ಪರಿತ್ಯಾಗ ಮಾಡುವುದರಿಂದ, ಭಯಂ ಭವತಿ= ಭಯವು ಉಂಟಾಗುತ್ತದೆ, ವಿಪರ್ಯಯಃ= ಭ್ರಾಂತಿಯೂ, ಅಸ್ಮೃತಿಶ್ಚ= ಮತ್ತು ಸ್ಮರಣೆಯ ಅಭಾವವೂ, ಸ್ಯಾತ್= ಆಗುತ್ತದೆ.

**ಅನುವಾದ–** ಸರ್ವೇಶ್ವರನಾದ ವಿಷ್ಣುವಿಗೆ ವಿಮುಖನಾಗಿ ಮತ್ತು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಪ್ರಭುವಾದ ಅವನಿಂದ ದ್ವಿತೀಯವಾದ ನಿರ್ಗುಣಬ್ರಹ್ಮನಲ್ಲಿ ಅಭಿಮಾನವನ್ನು ಹೊಂದಿದ ಮನುಷ್ಯರಿಗೆ ಮುಕುಂದರೂಪಬ್ರಹ್ಮನನ್ನು ಪರಿತ್ಯಾಗ ಮಾಡುವುದರಿಂದ ಭಯವೂ, ವಿಪರೀತ ಜ್ಞಾನವೂ ಮತ್ತು ಅಸ್ಮೃತಿಯೂ ಉಂಟಾಗುತ್ತದೆ.

**ಭಾವವಿಲಾಸಿನೀ–** ಭಯಂ ದ್ವಿತೀಯಾಭಿನಿವೇಶತಸ್ಸ್ಯಾದೀಶಾದಪೇತಸ್ಯ ವಿಪರ್ಯಯೋ ಸ್ಮೃತಿಃ । ಯನ್ಮಾಯಯಾಽತೋಬುಧ ಆಭಜೇತ್ತಂ ಭಕ್ತ್ಯೈಕಯೇಶಂ ಗುರುದೇವತಾತ್ಮೇತಿ ಭಾಗವತಶ್ಲೋಕಸ್ಯ ಪ್ರಾಗ್ವ್ಯಾಖ್ಯಾತಸ್ಯಾಪಿ ಸವಿಸ್ತರಮರ್ಥಾಂತರಮಾಹ – **ಈಶಾದಿತಿ** ॥ ಬ್ರಹ್ಮಣಃ ಬ್ರಹ್ಮಶಬ್ದವಾಚ್ಯಾತ್ ಪ್ರಭೋಃ ತತಃ ವಿಷ್ಣೋರ್ದ್ವಿತಿಯೇ ಭಿನ್ನೇ ನಿರ್ಗುಣಾಖ್ಯೇ ಬ್ರಹ್ಮಣೆ । ಮನ್ಯೇಽಕುತಶ್ಚಿದ್ಭಯಮಚ್ಯುತಸ್ಯ ಪಾದಾಂಬುಜೋಪಾಸನಮತ್ರ ನಿತ್ಯಮ್ । ಉದ್ವಿಗ್ನಬುದ್ಧೇರ-ಸದಾತ್ಮಭಾವಾದ್ವಿಶ್ವಾತ್ಮನಾ ಯತ್ರ ನಿವರ್ತತೇಭೀರಿತಿ ಪ್ರಾಚೀನಶ್ಲೋಕೇ ಸ್ಪಷ್ಟಂ ವಿಷ್ಣೋಃ ಪ್ರಸ್ತುತ-

ತ್ವಾತ್ । ಅತ ಏವೋತ್ತರಶ್ಲೋಕೇ ಈಶಪದೇನೋದಿತ ಇತಿ ಸೂಚನಾಯ ತತ ಇತ್ಯುಕ್ತಮ್ । ಅಭಿನಿವೇಶತ ಇತ್ಯಸ್ಯಾರ್ಥಕಥನಮಭಿಮಾನೇನೇತಿ । ಯದ್ಯಸ್ಮಾತ್ ॥ ೮೬೪-೮೬೫ ॥

**ವಿವರಣೆ–** 'ಭಯಂ ದ್ವಿತೀಯಾಭಿನಿವೇಶತಃಽಸ್ಯಾತ್ ಈಶಾದಪೇತಸ್ಯ ವಿಪರ್ಯಯೋ ಸ್ಮೃತಿಃ । ಯನ್ಮಾಯಯಾಽತೋ ಬುಧ ಆಭಜೇತ್ತಂ ಭಕ್ತ್ಯೈಕಯೇಶಂ ಗುರುದೇವತಾತ್ಮಾ' (11.2.37) ಎಂಬ ಭಾಗವತ ಶ್ಲೋಕವನ್ನು ಹಿಂದೆ ವ್ಯಾಖ್ಯಾನ ಮಾಡಿದ್ದರೂ ಹೊಸ ಅರ್ಥವನ್ನು ಹೇಳಲು ಪುನಃ ಇಲ್ಲಿ ವಿಚಾರ ಮಾಡುತ್ತಾರೆ. ಇದಕ್ಕಿಂತ ಹಿಂದಿನ ಶ್ಲೋಕವಾದ 'ಮನ್ಯೇ ಅಕುತಶ್ಚಿದ್ ಭಯಮಚ್ಯುತಸ್ಯ ಪಾದಾಂಬುಜೋ- ಪಾಸನಮತ್ರ ನಿತ್ಯಂ' (11.2.33) ಎಂಬ ಶ್ಲೋಕದಲ್ಲಿ ಅಚ್ಯುತ ಎಂಬ ಶಬ್ದದಿಂದ ವಿಷ್ಣುವೇ ಪ್ರಸ್ತುತನಾಗಿರುವುದರಿಂದ ಅವನನ್ನು ಬಿಟ್ಟು ಇನ್ನೊಬ್ಬ ನಿರ್ಗುಣಬ್ರಹ್ಮನಲ್ಲಿ ಅಭಿಮಾನವನ್ನು ಮಾಡಿದರೆ ಭಯಾದಿಗಳು ಉಂಟಾಗುತ್ತವೆ ಎಂದು ಅಭಿಪ್ರಾಯ.

**ಸಗುಣಸ್ಯ ದ್ವಿತೀಯಂ ಹಿ ನಿರ್ಗುಣಂ ಸ್ಯಾನ್ನ ಚಾಪರಮ್ ।**
**ನಿರರ್ಥೋಽಸಿ ನಿರರ್ಥಾಖ್ಯಭೇದಕಂ ಯದಿ ಮುಂಚಸಿ ॥ ೮೬೬ ॥**

**ಅರ್ಥ–** ಸಗುಣಸ್ಯ= ಸಗುಣನ ಅಪೇಕ್ಷೆಯಿಂದ, ದ್ವಿತೀಯಂ= ದ್ವಿತೀಯವು, ನಿರ್ಗುಣಂ ಹಿ ಸ್ಯಾತ್= ನಿರ್ಗುಣವೇ ಆಗುವುದಷ್ಟೆ, ಇನ್ನೊಂದು ವಸ್ತುವು, ನ ಚ= ಆಗುವುದಿಲ್ಲವಷ್ಟೆ. ನಿರರ್ಥಾಖ್ಯ ಭೇದಕಂ= ನಿರ್ ಎಂಬ ಉಪಸರ್ಗದ ಅರ್ಥವಾದ ಭೇದವನ್ನು, ಯದಿ= ಒಂದು ಪಕ್ಷ, ಮುಂಚಸೀ= ನೀನು ಬಿಡುವುದಾದರೆ, ನಿರರ್ಥೋಸಿ= ನಿರ್ಗುಣ ಎಂಬಲ್ಲಿ ಇರುವ ನಿರ್ ಎಂಬ ಉಪಸರ್ಗಕ್ಕೆ ವೈಯರ್ಥ್ಯವನ್ನು ಅಂಗೀಕರಿಸುತ್ತೀಯೆ.

**ಅನುವಾದ–** ಸಗುಣನಿಂದ ದ್ವಿತೀಯನಾದವನು ನಿರ್ಗುಣನೇ ಆಗುತ್ತಾನೆ ಇನ್ನೊಬ್ಬನು ಆಗುವುದಿಲ್ಲವಷ್ಟೆ, ನಿರ್ಗುಣ ಎಂಬ ಶಬ್ದದಲ್ಲಿ ನಿರ್ ಎಂಬ ಉಪಸರ್ಗದ ಅರ್ಥವಾದ ಗುಣಶೂನ್ಯತ್ವವನ್ನು ನೀನು ಅಂಗೀಕರಿಸಿದ್ದರೆ ನಿರ್ಗುಣ ಎಂಬ ಶಬ್ದವೇ ಅರ್ಥಶೂನ್ಯವಾಗುತ್ತದೆ.

**ಭಾವವಿಲಾಸಿನೀ–** ದ್ವಿತೀಯಶಬ್ದೇನ ನಿರ್ಗುಣಮೇವ ಕುತೋ ಗ್ರಾಹ್ಯಮಿತ್ಯತ ಆಹ - **ನಿರರ್ಥೋಽಸೀತಿ** ॥ ನಿರ್ಗುಣ ಇತ್ಯತ್ರ ವಿದ್ಯಮಾನಸ್ಯ ನಿರಾಖ್ಯೋಪಸರ್ಗಸ್ಯಾರ್ಥಂ ಗುಣ-ರಾಹಿತ್ಯರೂಪಮರ್ಥಂ ಭೇದಕಂ ವಿರುದ್ಧ ಧರ್ಮರೂಪತಯಾ ಸಗುಣಾದ್ವ್ಯಾವರ್ತಕಮ್ । ಏಕಮೇವಾದ್ವಿತೀಯಮಿತಿ ವಾಕ್ಯೇ ನ ವಿದ್ಯತೇ ದ್ವಿತೀಯಮಿತ್ಯತ್ರಭೇದ ವಿರುದ್ಧ ಐಕ್ಯ-ಲಾಭಾಯಪರೇಣಾಪಿ ದ್ವಿತೀಯ ಶಬ್ದಸ್ಯ ಭಿನ್ನಮಿತ್ಯೇವಾರ್ಥೋಽಂಗೀಕ್ರಿಯತೇ । ನ ತು ಸಜಾತೀಯತ್ವ ಸದೃಶತ್ವಾದಿಕಮ್ । ಏವಂಚ ಭೇದಕಧರ್ಮ ವದೇವ ದ್ವಿತೀಯೇ ಪದೇನ ವಕ್ತುಮುಚಿತಮ್ । ನ ತು ಯತ್ಕಿಂಚಿತ್ ದ್ವಿತಿಯಮ್ । ತತಸ್ತತ್ಸಮಾನ ಅರ್ಥಕೇಷ್ವಿನ್ ಅಪಿ

ವಾಕ್ಯೇ ದ್ವಿತೀಯ ಶಬ್ದೇನ ಭಿನ್ನಮೇವ ಗ್ರಾಹ್ಯಮ್ । ಅತ್ರ ಚ ಪೂರ್ವೋತ್ತರಶ್ಲೋಕೇಷು ಅಚ್ಯುತನಾರಾಯಣಾದಿಪದ್ಯೈಃ ಸಗುಣಸ್ಯ ವಿಷ್ಣೋರೇವ ಪ್ರಸ್ತುತತ್ವಾತ್ತತೋ ವಿರುದ್ಧಧರ್ಮವನ್ನಿರ್ಗುಣಮೇವ ದ್ವಿತೀಯಂ ಭವಿತುಮರ್ಹತೀತಿಭಾವಃ ॥ ೮೬೬ ॥

**ವಿವರಣೆ–** ನಿರ್ಗುಣ ಎಂಬಲ್ಲಿರುವ ನಿರ್ ಎಂಬ ಉಪಸರ್ಗವು ಗುಣಶೂನ್ಯತ್ವವನ್ನು ಹೇಳಿ ಸಗುಣನಿಂದ ವ್ಯಾವೃತ್ತಿಯನ್ನು ತಿಳಿಸಿಕೊಡುತ್ತದೆ. ಏಕಮೇವಾದ್ವಿತೀಯಂ ಎಂಬ ವಾಕ್ಯದಲ್ಲಿ ದ್ವಿತೀಯ ಶಬ್ದದಿಂದ ಭಿನ್ನವನ್ನೇ ತೆಗೆದುಕೊಳ್ಳಬೇಕು. ಆದರೆ ಇಲ್ಲಿ ದ್ವಿತೀಯ ಶಬ್ದದಿಂದ ಪೂರ್ವೋತ್ತರ ಶ್ಲೋಕಗಳಲ್ಲಿ ಪ್ರಸ್ತುತವಾದ ಅಚ್ಯುತ ನಾರಾಯಣಾದಿ ಶಬ್ದಗಳಿಂದ ಹೇಳಲ್ಪಟ್ಟ ಸಗುಣನಾದ ವಿಷ್ಣುವನ್ನು ಬಿಟ್ಟು ಆ ವಿಷ್ಣುವಿಗೆ ವಿರುದ್ಧವಾದ ಧರ್ಮವುಳ್ಳ ನಿರ್ಗುಣನನ್ನೇ ತೆಗೆದುಕೊಳ್ಳಬೇಕು ಎಂದು ಅಭಿಪ್ರಾಯ.

**ದ್ವಿತೀಯಕೋಟಿಸ್ಥೇಶಾತ್ ತೇ ದ್ವಿತೀಯಂ ಸ್ಯಾತ್ ತದೇವ ಹಿ ॥ ೮೬೭ ॥**

**ಅರ್ಥ–** ದ್ವಿತೀಯಕೋಟಿಸ್ಥೇಶಾತ್= ಎರಡನೆಯ ಕೋಟಿಯಲ್ಲಿರುವ ಈಶಾದಿಗಳಿಂದ, ತೇ= ನಿನಗೆ, ತದೇವ= ಆ ನಿರ್ಗುಣಬ್ರಹ್ಮನೇ, ದ್ವಿತೀಯಂ ಸ್ಯಾತ್ ಹಿ= ದ್ವಿತೀಯನಾಗುತ್ತಾನಷ್ಟೆ.

**ಅನುವಾದ–** ಎರಡನೆಯ ಕೋಟಿಯಲ್ಲಿರುವ ರುದ್ರಾದಿಗಳನ್ನು ಅಪೇಕ್ಷಿಸಿ ಪ್ರಥಮ ಕೋಟಿಯಲ್ಲಿರುವ ನಿರ್ಗುಣಬ್ರಹ್ಮನೇ ನಿನಗೆ ದ್ವಿತೀಯನಾಗುತ್ತಾನಷ್ಟೆ?

**ಭಾವವಿಲಾಸಿನೀ–** ತರ್ಹ್ಯಲ್ಪಜ್ಞತ್ವಾಸರ್ವಜ್ಞತ್ವಾದಿನಾ ವಿಷ್ಣೋರ್ವಿರುದ್ಧಧರ್ಮಾಕ್ರಾಂತಾ ಬ್ರಹ್ಮರುದ್ರಾದಯೋಽತ್ರತ್ಯದ್ವಿತೀಯಶಬ್ದೇನ ಕುತೋ ನೋಚ್ಯಂತ ಇತಿ ಚೇತ್ ಸತ್ಯಮ್ । ಅಸ್ಮಾಭಿಸ್ತೇಷ್ವಪಿ ಸರ್ವೋತ್ತಮತ್ವಾಗ್ರಹಮೋಚನಾಯ ತೇಽಪ್ಯರ್ಥತಯಾಂಗೀಕ್ರಿಯಂತೇ । ತಥಾಪಿ ಸಗುಣನಿರ್ಗುಣಯೋರತ್ಯಂತ ಸಾಕ್ಷಾದ್ವಿರುದ್ಧತ್ವೇನ ಸಗುಣದ್ವಿತೀಯತಾ ನಿರ್ಗುಣ ಏವ ಮುಖ್ಯೇತಿ ಭಾವೇನೇದಮೇವೋಪಾತ್ತಮ್ । ಪರಸ್ಯ ತು ಮತೇ ವಿಷ್ಣುಬ್ರಹ್ಮಾದೀನಾಂ ಸರ್ವೇಷಾಮಪಿ ದ್ವಿತೀಯಕೋಟೌಪ್ರವೇಶಾತ್ ದ್ವಿತೀಯಕೋಟಿಸ್ಥತಯಾ ವಿಷ್ಣೋರ್ದ್ವಿತೀಯಂ ತತ್ಕೋಟಿವಿರುದ್ಧನಿರ್ಗುಣಮೇವ ಸ್ಯಾತ್ । ನ ತು ತತ್ಕೋಟಿಮಧ್ಯಪತಿತಂ ಕಿಂಚಿತ್ । ಅತಃ ಪರೇಣಾತ್ರ ಸಗುಣಪ್ರಕರಣ ದ್ವಿತೀಯಶಬ್ದೇನ ನಿರ್ಗುಣಮೇವ ವಕ್ತವ್ಯಮ್ । ಏವಂ ಚ ಪರಪ್ರಕ್ರಿಯಯೈವ ಪರಾಭಿಮತ ನಿರ್ಗುಣಸ್ಯ ಘಾತಕತ್ವಾದಿದಂ ಪದ್ಯಂ ಪರಸ್ಯ ಬಾಧಕಮೇವ ನ ತು ಸಾಧಕಮಿತ್ಯಾಹ – **ದ್ವಿತೀಯಕೋಟಿಸ್ಥೇಶಾದಿತಿ** ॥ ತದೇವ ನಿರ್ಗುಣಮೇವ । ಹೀತ್ಯನೇನ ಬ್ರಾಹ್ಮಣಕೋಟಿತೋ ದ್ವಿತೀಯಃ ಶೂದ್ರ ಏವ ಸ್ಯಾತ್ ನ ತು ಬ್ರಾಹ್ಮಣೇಷ್ವೇವ ಕಶ್ಚಿದಿತಿ ಪ್ರಸಿದ್ಧಿಂ ಸೂಚಯತಿ ॥ ೮೬೭ ॥

**ವಿವರಣೆ–** ಸಗುಣನಿಗೆ ವಿರುದ್ಧವಾದ ಧರ್ಮಗಳನ್ನು ಹೊಂದಿರುವವನಿಂದ ಭಯ ಉಂಟಾಗುತ್ತದೆ ಎಂದರೆ ನಮ್ಮ ರೀತ್ಯಾ ನಿರ್ಗುಣಬ್ರಹ್ಮನನ್ನು ತೆಗೆದುಕೊಂಡಂತೆ ನಿಮ್ಮ

ರೀತ್ಯಾ ಬ್ರಹ್ಮರುದ್ರಾದಿಗಳನ್ನು ಏಕೆ ತೆಗೆದುಕೊಳ್ಳಬಾರದು ಎಂದು ಪ್ರಶ್ನೆ ಮಾಡಿದರೆ ದ್ವಿತೀಯ ಶಬ್ದದಿಂದ ಬ್ರಹ್ಮರುದ್ರಾದಿಗಳನ್ನು ತೆಗೆದುಕೊಳ್ಳುತ್ತೇವೆ ಎಂದೇ ನಮ್ಮ ಉತ್ತರ. ಸ್ವಾತಂತ್ರ್ಯೇಣ ಅವರಲ್ಲಿ ಅಭಿಮಾನವನ್ನು ಮಾಡಿದರೆ ಭಯವು ಇದ್ದೇ ಇದೆ. ಆದರೆ ಸಗುಣ-ನಿರ್ಗುಣ ಪ್ರಕರಣದಲ್ಲಿ ಸಗುಣನಿಗೆ ಅತ್ಯಂತ ವಿರುದ್ಧನಾದವನು ನಿರ್ಗುಣನಾದ ದ್ವಿತೀಯನೇ. ಆದ್ದರಿಂದ ಈ ಶ್ಲೋಕದಲ್ಲಿ ನಿರ್ಗುಣಬ್ರಹ್ಮನನ್ನೇ ತೆಗೆದುಕೊಳ್ಳುತ್ತೇವೆ ಎಂದು ಅಭಿಪ್ರಾಯ. ಪರಮತದಲ್ಲಾದರೂ ವಿಷ್ಣು-ಬ್ರಹ್ಮ- ರುದ್ರಾದಿಗಳೆಲ್ಲರೂ ದ್ವಿತೀಯ ಕೋಟಿಯಲ್ಲೇ ಸೇರುವುದರಿಂದ ಆ ಕೋಟಿಗೆ ದ್ವಿತೀಯವಾದ ಕೋಟಿಯೆಂದರೆ ನಿರ್ಗುಣ ಬ್ರಹ್ಮನೇ ಆಗಬೇಕೇ ಹೊರತು ಆ ಕೋಟಿಯಲ್ಲೇ ಇರುವ ಯಾವುದಾದರೂ ದೇವತೆಯು ಆಗಲಾರ. ಆದ್ದರಿಂದ ಪರರು ಮಾತ್ರ ನಿರ್ಗುಣಬ್ರಹ್ಮನನ್ನೇ ತೆಗೆದುಕೊಳ್ಳಬೇಕು. ಈ ಪದ್ಯವು ಪರಪ್ರಕ್ರಿಯೆಯಿಂದಲೇ ನಿರ್ಗುಣಬ್ರಹ್ಮನ ಉಪಾಸನೆಯನ್ನು ನಿಂದಿಸುವುದಾದ್ದರಿಂದ ಪರರಿಗೆ ಬಾಧಕವಾದುದು ಎಂದು ಅಭಿಪ್ರಾಯ.

**ಅತೋ ಭಕ್ತ್ಯಾ ತಮೇವೇಶಂ ಭಜೇದ್ಯಶ್ಚ ಗುರುರ್ಭುವಿ ।**
**ದೇವತಾ ಚ ಭವೇತ್ ತಾದೃಶಾಚಾರ್ಯೇ ಯತ್ನವಾನ್ ಬುಧಃ ।**
**ಇತಿ ವಾಕ್ಯಾರ್ಥಮಾಲೋಚ್ಯ ತ್ಯಜಾನ್ಯದ್ಭಜ ನಃ ಪ್ರಭುಮ್ ॥ ೮೬೮ ॥**

**ಅರ್ಥ–** ಅತಃ= ಆದ್ದರಿಂದ, ಯಃ ಗುರುಃ= ಯಾವ ಗುರುವು, ಭುವಿ= ಭೂಮಿಯಲ್ಲಿ, ಭಕ್ತ್ಯಾ= ಭಕ್ತಿಯಿಂದ, ತಮೇವೇಶಂ= ಆ ಪ್ರಭುವನ್ನೇ, ಭಜೇತ್= ಭಜಿಸುತ್ತಾನೋ, ಚ= ಮತ್ತು, ದೇವತಾ= ದೇವತೆಯೂ, ಭವೇತ್= ಆಗಿದ್ದಾನೋ, ತಾದೃಶಾಚಾರ್ಯೇ= ಅಂತಹ ಆಚಾರ್ಯರಲ್ಲಿ, ಬುಧಃ= ವಿವೇಕಿಯಾದವನು, ಯತ್ನವಾನ್= ಯತ್ನಶೀಲನಾಗಬೇಕು, ಇತಿ= ಎಂಬ, ವಾಕ್ಯಾರ್ಥಂ= ವಾಕ್ಯಾರ್ಥವನ್ನು, ಆಲೋಚ್ಯ= ಆಲೋಚಿಸಿ, ಅನ್ಯತ್= ನಿರ್ಗುಣಬ್ರಹ್ಮನನ್ನು, ತ್ಯಜ= ಪರಿತ್ಯಾಗಮಾಡು, ನಃ ಪ್ರಭುಂ= ನಮ್ಮ ಸ್ವಾಮಿಯನ್ನು, ಭಜ= ಭಜಿಸು.

**ಅನುವಾದ–** ಆದ್ದರಿಂದ ಯಾವ ಗುರುವು ಭೂಮಿಯಲ್ಲಿ ಭಕ್ತಿಯಿಂದ ಆ ಪ್ರಭುವನ್ನೇ ಭಜಿಸುತ್ತಾನೆಯೋ ಮತ್ತು ದೇವತೆಯೂ ಆಗಿದ್ದಾನೆಯೋ, ಅಂತಹ ಗುರುಗಳಲ್ಲಿ (ಗುರುಗಳ ಅನುಗ್ರಹವನ್ನು ಸಂಪಾದಿಸುವುದರಲ್ಲಿ) ವಿವೇಕಿಯಾದವನು ಯತ್ನಶೀಲನಾಗಬೇಕು ಎಂಬ ವಾಕ್ಯಾರ್ಥವನ್ನು ಪರ್ಯಾಲೋಚಿಸಿ ನಿರ್ಗುಣ ಬ್ರಹ್ಮನನ್ನು ಬಿಟ್ಟು ನಮ್ಮ ಪ್ರಭುವನ್ನು ಭಜಿಸು.

**ಭಾವವಿಲಾಸಿನೀ–** ತಮೇವೇಶಂ ನಾರಾಯಣಖ್ಯಾಮೇವೇಶ್ವರಂ ಮಾಯಾವಾದ್ಯಭಿಮತ-ಗುರುದೇವತೈಕ್ಯಾರ್ಥಸ್ಯೇಶಂಭಜೇದಿತಿ ದೇವತಾ ಭಜನೋಕ್ತ್ಯಾ ವಿರುದ್ಧತ್ವಾತ್ ಗುರು-

ದೇವತಾತ್ಮೇತ್ಯಸ್ಯಾರ್ಥಮಾಹ – ಯಶ್ಚೇತಿ ॥ ಯಃ ಮಧ್ವಮುನಿಃ ಭುವಿ ಗುರುಶ್ಚ ಭವೇತ್ ತತ್ತ್ವೋಪದೇಷ್ಟೃತ್ವಾತ್ । ದೇವತಾ ಚ ಭವೇತ್ । ವಾಯ್ವಾಖ್ಯ ದೇವತಾರೂಪತ್ವಾತ್ । ತಾದೃಶಾಚಾರ್ಯೇ ಯತ್ನವಾನಿತಿ ಗುರುದೇವತಾತ್ಮೇತಿ ಪದಸ್ಯಾರ್ಥ ಇತಿ ಭಾವಃ । ಅನೇನ ಆತ್ಮಾ ಜೀವೇ ಧೃತೌ ಯತ್ನೇ ಸ್ವಭಾವೇ ಪರಮಾತ್ಮನಿ ಇತ್ಯಾಭಿಧಾನಾತ್ ಗುರುಶ್ಚ ಸಾ ದೇವತಾ ಚ ಗುರುದೇವತಾಯಾಮಾತ್ಮಾ ಯಸ್ಯೇತಿ ಸಮಾಸಃ ಸೂಚಿತೋ ಭವತಿ । ಇದಂ ಚ ನಾನಾಚಾರ್ಯಾಣಾಮೇವ ಲೋಕೇ ವಿದ್ಯಮಾನತ್ವಾತ್ ತಾನ್ವಿಹಾಯ ಮಧ್ವಮುನೇಸ್ತನ್ಮತಾನುವರ್ತಿನಾಂ ಚ ಚರಣಾನುಸರಣಂ ಜ್ಞಾನಾರ್ಥಿಭಿಃ ಕರ್ತವ್ಯಮಿತಿ ಸೂಚನಾರ್ಥಮ್ । ಅನ್ಯಥಾ ಗುರ್ವಾತ್ಮೇತ್ಯೇವಾವಕ್ಷ್ಯತ್ । ಮಧ್ವಮತಾನುವರ್ತಿನಾಮೇವ ವಾಯುಸ್ತುತ್ಯಾ ತನ್ನತ್ಯಾದಿಪ್ರಯತ್ನದರ್ಶನಾತ್ ತಸ್ಯೈವಾತ್ರ ಗ್ರಹಣಮುಚಿತಮಿತಿ ಸೂಚನಾಯಾತ್ಮಪದಮ್ । ಅನ್ಯತ್ ನಿರ್ಗುಣಾದಿಕಮ್ ॥ ೮೬೮ ॥

**ವಿವರಣೆ–** ಭಯಂ ದ್ವಿತೀಯಾಭಿ ನಿವೇಶತಃ ಸ್ಯಾತ್ ಎಂಬ ಶ್ಲೋಕದ ಉತ್ತರಾರ್ಧವಾದ 'ಬುಧ ಆಭಜೇತ್ತಂ ಭಕ್ತ್ಯೈಕಯೇಶಂ ಗುರುದೇವತಾತ್ಮಾ' ಎಂಬ ಭಾಗದ ಅರ್ಥವನ್ನು ಇಲ್ಲಿ ಸಂಗ್ರಹಿಸುತ್ತಾರೆ. ಯಾರು ತತ್ತ್ವೋಪದೇಶ ಮಾಡುವುದರಿಂದ ಭೂಮಿಯಲ್ಲಿ ಗುರುವು ಮತ್ತು ಮೂಲರೂಪದಲ್ಲಿ ವಾಯುದೇವರೂ ಆಗಿದ್ದಾರೋ ಅಂತಹ ಮಧ್ವಾಚಾರ್ಯರ ಅನುಗ್ರಹವನ್ನು ಪಡೆಯಲು ಪ್ರಯತ್ನಶೀಲನಾಗು ಎಂದು ಅಭಿಪ್ರಾಯ. 'ಆತ್ಮಾಜೀವೇ ಧೃತೌ ಯತ್ನೇ ಸ್ವಭಾವೇ ಪರಮಾತ್ಮನಿ' ಎಂಬ ಕೋಶದಿಂದ ಆತ್ಮಶಬ್ದಕ್ಕೆ ಪ್ರಯತ್ನ ಎಂದು ಅರ್ಥವಾಗುತ್ತದೆ. ಆದ್ದರಿಂದ ಹೀಗೆ ಅರ್ಥವನ್ನು ಹೇಳಿದ್ದಾರೆ. ಅನೇಕ ವಿಧದ ಆಚಾರ್ಯರು ಭೂಮಿಯಲ್ಲಿ ಕಾಣುವುದರಿಂದ ಜ್ಞಾನಾರ್ಥಿಗಳಾದವರು ಮಧ್ವಾಚಾರ್ಯರನ್ನು ಮತ್ತು ಮಧ್ವಾಚಾರ್ಯರ ಶಿಷ್ಯರನ್ನು ಅನುಸರಿಸಬೇಕೆಂದು ಸೂಚಿಸಲು ಹೀಗೆ ಹೇಳಿದ್ದಾರೆ. ಮಧ್ವಮತಕ್ಕೆ ಸೇರಿದವರೇ ವಾಯುಸ್ತುತ್ಯಾದಿಗಳಿಂದ ವಾಯುದೇವರ ಅನುಗ್ರಹವನ್ನು ಸಂಪಾದಿಸಲು ಪ್ರಯತ್ನ ಪಡುವುದರಿಂದ ಅವರನ್ನಾದರೂ ಅನುಸರಿಸು ಎಂದು ಅಭಿಪ್ರಾಯ.

ಅವಿದ್ಯಮಾನೋ ಹ್ಯತ್ಯಂತಾಸನ್ನಪಿ ದ್ವಯಶಬ್ದಿತಃ ।
ದ್ವಿತೀಯೋ ನಿರ್ಗುಣಾಖ್ಯಾತ್ಮಾ ಧ್ಯಾತುರ್ನೈರ್ಗುಣ್ಯವಾದಿನಃ ॥ ೮೬೯ ॥

ದುರ್ಧಿಯಾ ಭಾತಿ ತತ್ತ್ವಂ ತು ತನ್ನ ಕಿಂ ತ್ವಚ್ಯುತಾಭಿದಃ ।
ಅಸ್ಮಾತ್ ಪದ್ಯದ್ವಯಾತ್ ಪೂರ್ವಪದ್ಯೇ ಸ್ಪಷ್ಟೋದಿತಃ ಕಿಲ ।
ಉಪರ್ಯುಪರಿ ಚಕ್ರಾಂಕೋಽಧೋಽಧೋ ನಾರಾಯಣಶ್ಚ ಯಃ ॥ ೮೭೦ ॥

**ಅರ್ಥ–** ಅವಿದ್ಯಮಾನೋಪಿ= ಅತ್ಯಂತ ಅಸನ್ನಪಿ= ಅತ್ಯಂತ ಅವಿದ್ಯಮಾನವಾದರೂ, ದ್ವಯಶಬ್ದಿತಃ= ದ್ವಿತೀಯಃ, ನಿರ್ಗುಣಾತ್ಮಾ= ನಿರ್ಗುಣಬ್ರಹ್ಮನು, ಧ್ಯಾತುಃ= ಧ್ಯಾನವನ್ನು

ಮಾಡುವ, ನೈರ್ಗುಣ್ಯವಾದಿನಃ= ನೈರ್ಗುಣ್ಯವಾದಿಯ, ದುರ್ಧಿಯಾ= ದುರ್ಬುದ್ಧಿಯಿಂದ, ಭಾತಿ= ತೋರುತ್ತಾನೆ, ತತ್ ತು= ಅದಾದರೂ, ನ ತತ್ತ್ವಂ= ತತ್ತ್ವವಲ್ಲ, ಕಿಂ ತು= ಆದರೆ, ಅಸ್ಮಾತ್ ಪದ್ಯದ್ವಯಾತ್= ಈ ಎರಡು ಪದ್ಯಗಳಿಗಿಂತ, ಪೂರ್ವಪದ್ಯೇ= ಹಿಂದಿನ ಪದ್ಯದಲ್ಲಿ, ಸ್ಪಷ್ಟೋದಿತಃ= ಸ್ಪಷ್ಟವಾಗಿ ಹೇಳಲ್ಪಟ್ಟ, ಉಪರ್ಯುಪರಿ= ಮುಂದು ಮುಂದಿನ ಶ್ಲೋಕಗಳಲ್ಲಿ, ಚಕ್ರಾಂಕಃ= ಸುದರ್ಶನಧಾರಿ ಎಂದು ಹೇಳಲ್ಪಟ್ಟ, ಅಧೋಧರಃ= ಹಿಂದೆ ಸಮೀಪದಲ್ಲಿ ನಾರಾಯಣಶ್ಚ= ನಾರಾಯಣನೆಂದು ಹೇಳಲ್ಪಟ್ಟ, ಯಃ= ಯಾವನು ಇದ್ದಾನೆಯೋ, ಅಚ್ಯುತಾಭಿದಃ= ಅಚ್ಯುತನೆಂದು ಹೇಳಲ್ಪಡುವ ಅವನೇ, ತತ್ತ್ವಂ= ತತ್ತ್ವನಾಗಿದ್ದಾನೆ.

**ಅನುವಾದ–** ದ್ವಯ ಅಥವಾ ದ್ವಿತೀಯಶಬ್ದವಾಚ್ಯವಾದ ನಿರ್ಗುಣಬ್ರಹ್ಮನು ಅತ್ಯಂತ ಅಸತ್ತಾಗಿದ್ದರೂ ಧ್ಯಾನವನ್ನು ಮಾಡುವ ನೈರ್ಗುಣ್ಯವಾದಿಯ ದುರ್ಬುದ್ಧಿಯಿಂದ ಅವನು ತೋರುತ್ತಾನೆ. ಆದರೆ ಅವನು ತತ್ತ್ವವಲ್ಲ. ಈ ಪದ್ಯಕ್ಕಿಂತ ಹಿಂದಿನ ಎರಡನೆಯ ಪದ್ಯದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟ ಮತ್ತು ಮುಂದಿನ ಪದ್ಯದಲ್ಲಿ ಸುದರ್ಶನಧಾರಿ ಎಂದು ಹೇಳಲ್ಪಟ್ಟ ಮತ್ತು ಅವ್ಯವಹಿತ ಹಿಂದಿನ ಪದ್ಯದಲ್ಲಿ ನಾರಾಯಣನೆಂದು ಹೇಳಲ್ಪಟ್ಟ ಅಚ್ಯುತನೇ ಪರಮತತ್ತ್ವ.

**ಭಾವವಿಲಾಸಿನೀ–** ಇದಾನೀಮ್ ಅವಿದ್ಯಮಾನೋ ಹ್ಯವಭಾತಿ ಹಿ ದ್ವಯೋ ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ । ತತ್ಕರ್ಮಸಂಕಲ್ಪವಿಕಲ್ಪಕಂ ಮನೋ ಬುಧೋ ನಿರುಂಧ್ಯಾದಭಯಂ ಯತಸ್ಸ್ಯಾದಿತಿ ಶ್ಲೋಕಸ್ಯಾರ್ಥಮಾಹ – **ಅವಿದ್ಯಮಾನ ಇತಿ** ॥ ತತ್ ನಿರ್ಗುಣಂ, ಪೂರ್ವಪದ್ಯೇ ಮನ್ಯೇ ಕುತಶ್ಚಿದಿತಿ ಪ್ರಾಥಮಿಕಪದ್ಯೇ । ಅಚ್ಯುತಾಭಿಧಃ ಸ್ಪಷ್ಟೋದಿತೋ ಯಃ ಅಚ್ಯುತಪದೇನ ಸ್ಪಷ್ಟಮುದಿತ ಇತ್ಯರ್ಥಃ । ಉಪರ್ಯುಪರಿ ಉಪರ್ಯಧ್ಯಧಸಃ ಸಾಮೀಪ್ಯ ಇತಿ ಸೂತ್ರಾತ್ ಅವ್ಯವಹಿತೋ ಪರಿತನೇ । ಶೃಣ್ವನ್ ಸುಭದ್ರಾಣಿ ರಥಾಂಗಪಾಣೇರ್ಜನ್ಮಾನಿ ಕರ್ಮಾಣಿ ಚ ಯಾನಿ ಲೋಕೇ । ಗೀತಾನಿ ನಾಮಾನಿ ತದರ್ಥಕಾನಿ ಗಾಯನ್ವಿಲಜ್ಜೋ ವಿಚರೇದಸಂಗ ಇತಿ ಪದ್ಯೇ ಯಶ್ಚಕ್ರಾಂಕಃ ಚಕ್ರಂ ಅಂಕೋ ಯಸ್ಯ ಸಃ ಚಕ್ರಾಂಕಃ । ರಥಾಂಗಪಾಣಿಪದೋದಿತ ಇತ್ಯರ್ಥಃ । ಅಧೋಧಃ ಅಸ್ಮಾತ್ ಪದ್ಯದ್ವಯಾವ್ಯವಹಿತಪೂರ್ವಭಾಗೇ ವಿದ್ಯಮಾನೇ ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ । ಕರೋತಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯೇತ್ತದಿತಿ ಪದ್ಯೇ ಯಃ ನಾರಾಯಣಃ ನಾರಾಯಣಪದೋದಿತಃ ಸ ಏವ ತತ್ತ್ವಮಿತಿ ಸಂಬಂಧಃ । ಕಥೋಪಕ್ರಮಪದ್ಯೇ ಮಧ್ಯಸ್ಥಿತಪದ್ಯೇ ಉಪಸಂಹಾರಪದ್ಯೇ ಚ ಹರಾವೇವ ಪ್ರಸಿದ್ಧಶ್ರುತಿದ್ವಯೇನ ಲಿಂಗೇನ ಚ ನಾರಾಯಣಸ್ಯೈವ ಸ್ವಾಧ್ಯತಯಾ ಪ್ರಸ್ತುತತ್ವಾತ್ಸ ಏವ ಪರಮತತ್ತ್ವಂ ನಿರ್ಗುಣಂ ತೂಕ್ತವಿಧಯಾ ಏತದಧ್ಯಾಯಪ್ರಮೇಯವಿರುದ್ಧತ್ವಾನ್ನ ತತ್ತ್ವಮಿತಿ ಭಾವಃ ॥ ೮೬–೮೭ ॥

**ವಿವರಣೆ–** ಇವೆಲ್ಲಾ ಭಾಗವತ ಏಕಾದಶ ಸ್ಕಂದದ ದ್ವಿತೀಯಾಧ್ಯಾಯದ ಶ್ಲೋಕಗಳು. ಅವುಗಳೆಲ್ಲವನ್ನೂ ಮನಸ್ಸಿನಲ್ಲಿ ಇಟ್ಟುಕೊಂಡು ಇಲ್ಲಿ ಒಂದೊಂದು ಶ್ಲೋಕದ ಅರ್ಥವನ್ನೂ ವಿಚಾರ ಮಾಡುತ್ತಿದ್ದಾರೆ. 'ಮನ್ಯೇ ಅಕುತಶ್ಚಿತ್ ಭಯಮಚ್ಯುತಸ್ಯ' (33) 'ಕಾಯೇನ ವಾಚಾ ಮನಸೇಂದ್ರಿಯೈರ್ವಾ' (36) 'ಭಯಂ ದ್ವಿತೀಯಾಭಿನಿವೇಶತಃ ಸ್ಯಾತ್' (37) 'ಅವಿದ್ಯಮಾನೋಪ್ಯವಭಾತಿಹಿ ದ್ವಯಃ' (38), 'ಶೃಣ್ವನ್ ಸುಭದ್ರಾಣಿ ರಥಾಂಗಪಾಣೇಃ' (39) ಇದು ಈ ಶ್ಲೋಕಗಳ ಕ್ರಮ. 'ಅವಿದ್ಯಮಾನೋಪ್ಯಯಭಾತಿಹಿ ದ್ವಯೋಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ । ತತ್ಕರ್ಮ ಸಂಕಲ್ಪವಿಕಲ್ಪಕಂ ಮನೋ ಬುಧೋ ನಿರುಂಧ್ಯಾತ್ ಅಭಯಂ ತತಃ ಸ್ಯಾತ್' ಎಂಬ ಶ್ಲೋಕಕ್ಕೆ ಈಗ ವ್ಯಾಖ್ಯಾನ ಮಾಡುತ್ತಾರೆ (33) ಅಚ್ಯುತ ಪದದಿಂದ ವಿಷ್ಣುವೇ ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾನೆ. ಮುಂದಿನ ಶ್ಲೋಕದಲ್ಲಿ (39) ರಥಾಂಗಪಾಣಿ ಶಬ್ದದಿಂದ ವಿಷ್ಣುವೇ ಹೇಳಲ್ಪಟ್ಟಿದ್ದಾನೆ. ಹಿಂದಿನ ಇನ್ನೊಂದು ಶ್ಲೋಕವಾದ ಕಾಯೇನವಾಚಾ ಶ್ಲೋಕದಲ್ಲಿ (36) ನಾರಾಯಣನು ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಅಚ್ಯುತನಾರಾಯಣಾದಿ ನಾಮವುಳ್ಳ ಚಕ್ರಧಾರಿಯಾದ ವಿಷ್ಣುವೇ ಪರಮತತ್ತ್ವ. ಅವನೇ ಸರ್ವಭಯನಿವಾರಕ, ಅವನಿಂದ ಭಿನ್ನವಾದ ನಿರ್ಗುಣಬ್ರಹ್ಮನು ತತ್ತ್ವವೇ ಅಲ್ಲ ಎಂದು ಅಭಿಪ್ರಾಯ.

**ದೈವತ್ವೇನಾಸದೀಶಾದೇರ್ವಾ ದ್ವಯಸ್ಯಾಗ್ರಹಾಚ್ಚ ಭೀಃ ।**
**ಗುರುತ್ವೇನ ತು ತತ್ಸೇವಾಽಸೂಚಿ ಪೂರ್ವವಿಶೇಷಣಾತ್ ॥ ೮೭೧ ॥**

**ಅರ್ಥ–** ದೈವತ್ವೇನ= ದೇವತೆಯಾಗಿ, ಅಸದೀಶಾದೇಃ= ಅವಿದ್ಯಮಾನವಾದ ರುದ್ರಾದಿ ರೂಪವಾದ, ದ್ವಯಸ್ಯ= ದ್ವಿತೀಯ ವಸ್ತುವಿನ (ವಸ್ತುವಿನಲ್ಲಿ), ಆಗ್ರಹಾಚ್ಚ= ಆಗ್ರಹವನ್ನು ಮಾಡುವುದರಿಂದಲೂ, ಭೀಃ= ಭಯವು ಉಂಟಾಗುತ್ತದೆ, ಗುರುತ್ವೇನ ತು= ಆದರೆ ಗುರುವಿನ ರೂಪದಲ್ಲಿ, ತತ್ಸೇವಾ= ರುದ್ರಾದಿಗಳ ಸೇವೆಯು, ಪೂರ್ವವಿಶೇಷಣಾತ್= ಗುರುದೇವತಾತ್ಮಾ ಎಂಬಲ್ಲಿ ಗುರು ಎಂಬ ಮೊದಲ ವಿಶೇಷಣದಿಂದ, ಅಸೂಚಿ= ಸೂಚಿಸಲ್ಪಟ್ಟಿದೆ.

**ಅನುವಾದ–** ಸರ್ವೋತ್ತಮ ದೇವತಾತ್ವೇನ ಅವಿದ್ಯಮಾನರಾದ ರುದ್ರಾದಿಗಳಲ್ಲಿ ಸರ್ವೋತ್ತಮದೇವತೆಯೆಂದು ಆಗ್ರಹವನ್ನು ಮಾಡುವುದರಿಂದ ಭಯವು ಉಂಟಾಗುತ್ತದೆ. ಆದರೆ ಗುರುತ್ವೇನ ಅವರ ಸೇವೆಯನ್ನು ಮಾಡಬಹುದು ಎಂದು ಗುರುದೇವತಾತ್ಮಾ ಎಂಬ ಮೊದಲನೆಯ ವಿಶೇಷಣವು ಸೂಚಿಸುತ್ತದೆ.

**ಭಾವವಿಲಾಸಿನೀ–** ಅವಿದ್ಯಮಾನೋ ಹ್ಯವಭಾತಿ ಹಿ ದ್ವಯ ಇತಿ ಚರಣಸ್ಯಾರ್ಥಾಂತರಮಾಹ – ದೈವತ್ವೇನೇತಿ ॥ ಆದಿಪದೇನ ಬ್ರಹ್ಮಾದಯೋ ಗೃಹ್ಯಂತೇ । ತೇಷಾಂ ನಿರ್ಗುಣವತ್ಸರ್ವಥಾ ಅವಿದ್ಯಮಾನತ್ವಸ್ಯಾಸಂಮತತ್ವಾದ್ದೈವತ್ವೇನ ಪರದೈವತ್ವೇನ ಅಸದೀಶಾದೇರಿತ್ಯುಕ್ತಮ್ । ದ್ವಯಸ್ಯ ವಿಷ್ಣೋರ್ಭಿನ್ನತಯಾ ದ್ವಯಪದೋದಿತಸ್ಯ । ಉಪಲಕ್ಷಣಂ ಚೈತತ್ । ಭಯಂ ದ್ವಿತೀಯಾ-

ಭಿನಿವೇಶತ ಇತಿ ಪದ್ಯೇ ದ್ವಿತೀಯಪದೋದಿತಸ್ಯೇತ್ಯಪಿ ದ್ರಷ್ಟವ್ಯಮ್ । ತತ್ಸೇವಾ ರುದ್ರ-ಬ್ರಹ್ಮಾದೀನಾಂ ಸೇವಾ । ಪೂರ್ವವಿಶೇಷಣಾತ್ ಗುರುದೇವತಾತ್ಮೇತಿ ವಿಶೇಷಣಾತ್ । ಗುರು-ದೇವತಾಯಾಂ ಪ್ರಯತ್ನವತ್ತಸ್ಯ ತತ್ರೋದಿತತ್ವಾದೀಶಾದಿದೇವಾನಾಮಪಿ ಗುರುದೇವತಾತ್ವ-ಸದ್ಭಾವಾತ್ ಗುರುತ್ವೇನ ಸೇವಾ ಕರ್ತವ್ಯಾ । ಪರದೇವತಾತ್ವೇನ ಭಜನಂ ತು ಕದಾಪಿ ನ ಕರ್ತವ್ಯಮಿತಿ ಭಾವಃ ॥ ೮೭೧ ॥

**ವಿವರಣೆ**— ಅವಿದ್ಯಮಾನದ್ವಯ ಎಂದರೆ ಸರ್ವೋತ್ತಮದೇವತಾತ್ವೇನ ಅವಿದ್ಯಮಾನವಾದ ರುದ್ರಾದಿಗಳು ಎಂದು ಅರ್ಥ. ಭಯಂ ದ್ವಿತೀಯಾಭಿನಿವೇಶತಃ ಎಂಬ ಶ್ಲೋಕದಲ್ಲಿಯೂ ದ್ವಿತೀಯ ಶಬ್ದಕ್ಕೆ ಅದೇ ಅರ್ಥ. ರುದ್ರಾದಿ ದೇವತೆಗಳನ್ನು ಪರದೇವತಾತ್ವೇನ ಭಜಿಸಬಾರದು. ಜ್ಞಾನೋಪದೇಶಕರಾದ ಗುರುತ್ವೇನ ಅವರ ಭಜನೆಯನ್ನು ಮಾಡಬೇಕು ಎಂದು ಅಭಿಪ್ರಾಯ.

**ತತ್ ತೇಷಾಂ ನಿರ್ಗುಣಾದೀನಾಂ ಪ್ರಾಪ್ತ್ಯೈ ಕರ್ಮಾದಿಕಂ ಚರತ್ ।**
**ಬುಧೋ ನಿರುಂಧ್ಯಾದ್ಧಿ ಮನೋ ವಿಷ್ಣಾವೇವ ನಿಯೋಜಯೇತ್ ॥ ೮೭೨ ॥**

**ಅರ್ಥ**— ತತ್= ಆದ್ದರಿಂದ, ತೇಷಾಂ= ಆ ನಿರ್ಗುಣಬ್ರಹ್ಮಾದಿಗಳ, ಪ್ರಾಪ್ತ್ಯೈ= ಪ್ರಾಪ್ತಿಗೋಸ್ಕರವಾಗಿ, ಕರ್ಮಾದಿಕಂ= ಶ್ರವಣ ಮನನಾದಿ ಕರ್ಮಗಳನ್ನು, ಚರತ್= ಆಚರಿಸುವ, ಮನಃ= ಮನಸ್ಸನ್ನು, ಬುಧಃ= ವಿವೇಕಿಯಾದವನು, ನಿರುಂಧ್ಯಾತ್= ನಿರೋಧಿಸಬೇಕು, ವಿಷ್ಣಾವೇವ= ವಿಷ್ಣುವಿನಲ್ಲಿಯೇ, ನಿಯೋಜಯೇತ್= ಇಡಬೇಕು.

**ಅನುವಾದ**— ಆದ್ದರಿಂದ ಆ ನಿರ್ಗುಣಬ್ರಹ್ಮನ ಪ್ರಾಪ್ತಿಗೋಸ್ಕರವಾಗಿ ಶ್ರವಣ-ಮನನಾದಿ ಕರ್ಮಗಳನ್ನು ವಿವೇಕಿಯಾದವನು ನಿರೋಧಿಸಿ ಆ ಮನಸ್ಸನ್ನು ವಿಷ್ಣುವಿನಲ್ಲಿಯೇ ಇಡಬೇಕು.

**ಭಾವವಿಲಾಸಿನೀ**— ತತ್ಕರ್ಮಸಂಕಲ್ಪವಿಕಲ್ಪಕಂ ಮನ ಇತ್ಯಸ್ಯಾರ್ಥಮಾಹ — **ತದಿತಿ** ॥ ತತ್ತಾಸ್ಮಾತ್ ತೇಷಾಂ ನಿರ್ಗುಣಾನಾಂ, ಕರ್ಮಾಣಿ ಪರದೇವತಾತ್ವೇನ ಶ್ರವಣಮನನಧ್ಯಾನ-ಯಜನಾದಿಕರ್ಮಾಣಿ । ತೇಷಾಂ ಕರ್ಮಣಾಂ ಸಂಕಲ್ಪವಿಕಲ್ಪಕಂ ಸಂಕಲ್ಪವಿಕಲ್ಪಂ ಚ ಕುರ್ವದಿತ್ಯಸ್ಯ ತಾತ್ಪರ್ಯಕಥನಂ ತೇಷಾಂ ನಿರ್ಗುಣಾದೀನಾಂ ಪ್ರಾಪ್ತ್ಯೈ ಕರ್ಮಾದಿಕಂ ಚರದಾಚರತ್ ಮನ ಇತಿ । ತಸ್ಮಾದಿತಿ ತು ತದಿತ್ಯಸ್ಯಾವೃತ್ತ್ಯಾಽಧ್ಯಾಹಾರೇಣ ವಾ ಉಕ್ತಂ ಯತಃ ನಿರ್ಗುಣಾದಿ-ವಿಷಯಕಮನೋನಿರೋಧಾತ್ ॥ ೮೭೨ ॥

**ವಿವರಣೆ**— ಆ ಶ್ಲೋಕದ ಉತ್ತರಾರ್ಧಕ್ಕೆ ಇಲ್ಲಿ ವ್ಯಾಖ್ಯಾನವನ್ನು ಮಾಡುತ್ತಾರೆ. ತತ್ಕರ್ಮ ಸಂಕಲ್ಪಕಂ ಎನ್ನುವ ಪದಕ್ಕೆ ನಿರ್ಗುಣಾದಿಗಳ ಪ್ರಾಪ್ತಿಗಾಗಿ ಶ್ರವಣ-ಮನನಾದಿಗಳನ್ನು ಮಾಡುವ ಎಂದು ಅರ್ಥ.

**ಮುಕುಂದಾದಚ್ಯುತಾಖ್ಯಾಚ್ಚ ತತಃ ಸ್ಯಾದಭಯಂ ಕಿಲ ।**

**ಅರ್ಥ–** ತತಃ= ಆದ್ದರಿಂದ, ಅಚ್ಯುತಾಖ್ಯಾತ್= ಅಚ್ಯುತ ಎಂಬ ಹೆಸರಿನ, ಮುಕುಂದಾತ್= ಮುಕುಂದನಿಂದ, ಅಭಯಂ= ಭಯರಾಹಿತ್ಯವು (ಭಯರಾಹಿತ್ಯವಾದ ಮೋಕ್ಷವು), ಸ್ಯಾತ್ ಕಿಲ= ಆಗುವುದಷ್ಟೆ.

**ಅನುವಾದ–** ಅಚ್ಯುತನೆಂಬ ಹೆಸರಿನ ಮುಕುಂದನಿಂದಲೇ ಭಯರಾಹಿತ್ಯರೂಪವಾದ ಮೋಕ್ಷವು ಉಂಟಾಗುವುದಷ್ಟೆ.

**ವಿವರಣೆ–** ಹಿಂದಿನ ಶ್ಲೋಕದಲ್ಲಿ 'ತತ್ಕರ್ಮ ಸಂಕಲ್ಪ ವಿಕಲ್ಪಕಂ ಮನಃ ಬುಧೋ ನಿರುಂಧ್ಯಾತ್' ಎಂಬ ಅಂಶಕ್ಕೆ ಅರ್ಥವನ್ನು ಮಾಡಿ ಇಲ್ಲಿ ಅಭಯಂ ತತಃ ಸ್ಯಾತ್ ಎಂಬ ಭಾಗವತ ಶ್ಲೋಕದ ಅಂಶಕ್ಕೆ ವ್ಯಾಖ್ಯಾನವನ್ನು ಮಾಡುತ್ತಾರೆ.

**ಅಸತಃ ಸತ್ತ್ವಶೂನ್ಯಸ್ಯ ನಿರ್ಗುಣಸ್ಯಾತ್ಮಭಾವನಾತ್ ॥ ೮೭೩ ॥**

**ಉದ್ವಿಗ್ನಬುದ್ಧೇಃ ಪಕ್ಷಿಶ್ವಾದ್ಯಾತ್ಮನಾ ಭೀರಭೂದ್ಧಿ ಯಾ ।**
**ವಿಶ್ವಾಂತಃಪಾತಿರುದ್ರಾದೇರ್ವಾ ಭೀರ್ವಿಶ್ವಸ್ವಭಾವತಃ ॥ ೮೭೪ ॥**

**ಸಾ ಯತ್ರಾಚ್ಯುತಪಾದಾಬ್ಜೋಪಾಸನಾಯಾಂ ನಿವರ್ತತೇ ।**
**ಸರ್ವಾತ್ಮನಾ ವಿಶ್ವಪದಮಿತ್ಥಂ ಪಂಚಾರ್ಥವದ್ ಧ್ರುವಂ ॥ ೮೭೫ ॥**

**ಅರ್ಥ–** ಅಸತಃ= ಸತ್ತ್ವಶೂನ್ಯಸ್ಯ= ಸತ್ತ್ವರಹಿತನಾದ, ನಿರ್ಗುಣಸ್ಯ= ನಿರ್ಗುಣಬ್ರಹ್ಮನನ್ನು, ಆತ್ಮಭಾವನಾತ್= ಪರಮಾತ್ಮನೆಂದು ಭಾವಿಸುವುದರಿಂದ, ಉದ್ವಿಗ್ನಬುದ್ಧೇಃ= ಉದ್ವಿಗ್ನಗೊಂಡ ಬುದ್ಧಿಯುಳ್ಳ ಪುರುಷನಿಗೆ, ವಿಶ್ವಾತ್ಮನಾ= ಪಕ್ಷಿಶ್ವಾದ್ಯಾತ್ಮನಾ= ಪಕ್ಷಿ ನಾಯಿ ಮೊದಲಾದ ಜನ್ಮಗಳ, ಯಾಭೀಃ= ಯಾವ ಭಯವು, ಅಭೂದ್ಧಿ= ಉಂಟಾಯಿತೋ, ಅಥವಾ, ವಿಶ್ವಾತ್ಮನಾ= ವಿಶ್ವಾಂತಪಾತಿಯಾದ ರುದ್ರಾದಿಗಳ ಉಪಾಸನೆಯಿಂದ ಯಾವ ಭಯವುಂಟಾಯಿತೋ ಅಥವಾ ವಿಶ್ವಸ್ವಭಾವತಃ= ಜನನ ಮರಣಾದಿಗ್ರಸ್ತ ಜಗತ್ತಿನ ಸ್ವಭಾವದಿಂದ ಯಾವ ಭಯವುಂಟಾಯಿತೋ, ಸಾ= ಆ ಭಯವು, ಯತ್ರ= ಯಾವ, ಅಚ್ಯುತಪಾದಾಬ್ಜೋಪಾಸನಾಯಾಂ= ಅಚ್ಯುತನ ಪಾದಕಮಲಗಳ ಉಪಾಸನೆಯಿಂದ, ವಿಶ್ವಾತ್ಮನಾ= ಸರ್ವಾತ್ಮನಾ= ಅಶೇಷವಾಗಿ, ನಿವರ್ತತೇ= ವಿನಾಶವನ್ನು ಹೊಂದುತ್ತದೆಯೋ (ಅಂತಹ ಅಚ್ಯುತನನ್ನು ಭಜಿಸಿ), ಇತ್ಥಂ= ಈ ರೀತಿಯಾಗಿ, ವಿಶ್ವಪದಂ= ವಿಶ್ವಪದವು, ಧ್ರುವಂ= ನಿಶ್ಚಯವಾಗಿ, ಪಂಚಾರ್ಥವತ್= ಐದು ಅರ್ಥಗಳನ್ನು ಉಳ್ಳದ್ದು.

**ಅನುವಾದ–** ತತ್ತ್ವರಹಿತನಾದ ಅಪ್ರಾಮಾಣಿಕನಾದ ನಿರ್ಗುಣಬ್ರಹ್ಮನನ್ನು ಪರಮಾತ್ಮನೆಂದು ಉಪಾಸನೆ ಮಾಡುವುದರಿಂದ ಉಂಟಾದ ಉದ್ವಿಗ್ನಬುದ್ಧಿಯುಳ್ಳ

ಮನುಷ್ಯನಿಗೆ ಯಾವ ಪಕ್ಷಿ, ನಾಯಿ ಹೀನಯೋನಿಪ್ರಾಪ್ತಿಯ ಭಯವುಂಟಾಯಿತೋ ಅಥವಾ ವಿಶ್ವಾಂತಪಾತಿಯಾದ ರುದ್ರಾದಿಗಳಿಗೆ ವೃಥಾಸುರರಿಂದ ಯಾವ ಭಯವುಂಟಾಯಿತೋ ಅಥವಾ ವಿಶ್ವದ ಸ್ವಭಾವವಾದ ಜನನ ಮರಣಗಳಿಂದ ಯಾವ ಭಯವು ಉಂಟಾಯಿತೋ ಆ ಭಯವು ಯಾವ ಅಚ್ಯುತನ ಪಾದಕಮಲದ ಉಪಾಸನೆಯಿಂದ ಸಂಪೂರ್ಣವಾಗಿ ನಾಶವಾಗುತ್ತದೆಯೋ ಅಂತಹ ಅಚ್ಯುತನನ್ನು ಭಜಿಸು. ಈ ರೀತಿಯಾಗಿ ವಿಶ್ವ ಪದಕ್ಕೆ ಐದು ಅರ್ಥಗಳಿವೆ.

**ಭಾವವಿಲಾಸಿನೀ–** ಮನ್ಯೇ ಕುತಶ್ಚಿದಿತಿ ಶ್ಲೋಕಸ್ಯಾರ್ಥಮಾಹ – **ಮುಕುಂದಾದಿತಿ** ॥ ಅಚ್ಯುತಾಖ್ಯಾತ್ತತೋ ಮುಕುಂದಾದಿತಿ ಸಂಬಂಧಃ । ಅಚ್ಯುತಸ್ಯ ಪಾದಾಂಬುಜೋಪಾಸನಮ್ ಅಕುತಶ್ಚಿದ್ಭಯಂ ಮನ್ಯ ಇತ್ಯಸ್ಯ ತಾತ್ಪರ್ಯ ಕಥನಮಿದಮ್ । ಅಸಚ್ಚಿದಾತ್ಮಭಾವಾದಿತ್ಯಸ್ಯಾರ್ಥಮಾಹ – **ಅಸತ ಇತಿ** ॥ ಸತ್ತ್ವಶೂನ್ಯಸ್ಯ ಅತ್ಯಂತಾಸತ ಇತ್ಯರ್ಥಃ ಸತ್ ಶಬ್ದ ಉತ್ತಮಂ ಬ್ರೂಯಾದಿತಿ ವಚನಾತ್ । ಸರ್ವೋತ್ತಮತ್ವಶೂನ್ಯ ಬ್ರಹ್ಮಾದೇಶ್ಚ । ಸ್ವಾತ್ಮಭಾವನಾತ್ ಪರಮಾತ್ಮತ್ವಭಾವನಾತ್ । ಉದ್ವಿಗ್ನಬುದ್ಧೇಃ ಪುರುಷಸ್ಯ ವಿಶ್ವಾತ್ಮನೇತ್ಯಸ್ಯಾರ್ಥಮಾಹ – **ಪಕ್ಷೀತಿ** ॥ ವಿಃಪಕ್ಷೀ । ಶ್ವಾ ಸಾರಮೇಯಃ । ಅಸ್ಯ ಚೋಪಲಕ್ಷಣತ್ವಾತ್ ವಿಶ್ವಾತ್ಮನೇತ್ಯಸ್ಯ ಪಕ್ಷಿಶ್ವಾದ್ಯಾತ್ಮನೇತ್ಯುಕ್ತಮ್ । ಅತ್ರ ಚ ವಿಶ್ವಪದಸ್ಯಾವೃತ್ತ್ಯಾ ಪಕ್ಷಿಶ್ವಾದಿರೂಪಂ ಯದ್ವಿಶ್ವಂ ಹೀನಯೋನ್ಯಾತ್ಮಕಂ ಯಜ್ಜಗದಿತ್ಯಪಿ ಗ್ರಾಹ್ಯಮ್ । ತದ್ರೂಪೇಣ ಯಾ ಭೀರಭೂತ್ ನಿರ್ಗುಣಭಾವನಯಾ ರುದ್ರಾದೀನಾಂ ಪರದೇವತಾಭಾವನಯಾ ಚ ಹೀನಯೋನೀಃ ಪ್ರಾಪ್ಯ ದುಃಖಾದಿ ಭಯಂ ಲೋಕೋಽನುಭವತಿ ಸಾ ಯತ್ರಾಚ್ಯುತಪಾದಾಬ್ಜೋಪಾಸನಾಯಾಂ ವಿಶ್ವಾತ್ಮನಾ ಸರ್ವಪ್ರಕಾರೇಣ ನಿವರ್ತತ ಇತಿ ಯೋಜನಾ ।

ವಿಶ್ವಾತ್ಮನಾ ಭೀರಿತ್ಯಸ್ಯಾರ್ಥಾಂತರಮಾಹ – **ವಿಶ್ವಾಂತಃ ಪಾತಿರುದ್ರಾದೇರಿತಿ** ॥ ವಿಶ್ವಾತ್ಮನಾ ಜನನಮರಣಾದಿಭಯಗ್ರಸ್ತ ಜಗತ್ಸ್ವಭಾವೇನ ಯಾ ಭೀಃ ಭಸ್ಮಾಸುರಾದಿತೋಽಭೂತ್ ತದಪಿ ಭಯಂ ಯತ್ರ ಮುಕ್ತಿಸಾಧನಾಚ್ಯುತ ಪಾದಾಬ್ಜೋಪಾಸನಾಯಾಂ ವಿಶ್ವಾತ್ಮನಾ ಸರ್ವಾತ್ಮನಾ ನಿವರ್ತತ ಇತ್ಯಪಿ ಯೋಜನಾ । ಇದಂ ಚೋಪಲಕ್ಷಣಮ್ । ಅಸತೋ ನಿರ್ಗುಣಸ್ಯ ಆತ್ಮಭಾವನಾತ್ ಜೀವತ್ವೇನ ಭಾವನಾತ್ ಪಕ್ಷಿಶ್ವಾದಿಜಗದಾತ್ಮನಾ ಯಾ ಭೀಃ ಸಾ ಚಾಚ್ಯುತಪಾದಾಬ್ಜೋಪಾಸನೇ ಕೃತೇ ಸತಿ ಮುಕ್ತಾತ್ತದ್ಭಕ್ತಾನ್ನಿವರ್ತತೇ ಅಚ್ಯುತಾನ್ನಿವರ್ತತ ಇತಿ ಕಿಂ ವಕ್ತವ್ಯಮಿತ್ಯಪಿ ಯೋಜನಾ ದ್ರಷ್ಟವ್ಯಾ । ಇದಂ ಚ ಯೋಜನಾದ್ವಯಂ ಜನನಮರಣಾದಿದೋಷಗ್ರಸ್ತತ್ವಾತ್ ಪರೈಃ ಪರದೈವಯೋಚ್ಯಮಾನಂ ರುದ್ರಬ್ರಹ್ಮಾದಿಕಂ ನಿರ್ಗುಣಂ ಚ ನ ಪರದೇವತೇತಿ ಸೂಚನಾರ್ಥಮ್ । ಉಕ್ತಮರ್ಥಂ ಸಂಗೃಹ್ಣಾತಿ – **ವಿಶ್ವಪದಮಿತಿ** ॥ ಇತ್ಥಂ ಪಂಚಾರ್ಥವತ್ ದ್ವಂದ್ವಸಮಾಸೇನ ಆವೃತ್ತ್ಯಾ ಚ ಅರ್ಥದ್ವಯವತ್ ಯಥಾಸ್ಥಿತ ಪದೇನಾರ್ಥತ್ರಯವದಿತ್ಯರ್ಥಃ ॥ ೮೭೩-೮೭೫ ॥

**ವಿವರಣೆ–** ಈಗ 'ಮನ್ಯೇ ಅಕುತಶ್ಚಿತ್ ಭಯಮಚ್ಯುತಸ್ಯ' ಎಂಬ ಶ್ಲೋಕಕ್ಕೆ (33) ವ್ಯಾಖ್ಯಾನವನ್ನು ಮಾಡುತ್ತಾರೆ. ವಿಶ್ವ ಶಬ್ದಕ್ಕೆ ವಿ ಎಂದರೆ ಪಕ್ಷಿ, ಶ್ವಾ ಎಂದರೆ ಸಾರಮೇಯ

(ನಾಯಿ) ಎಂದು ಒಂದು ಅರ್ಥ. ಹೀನ ಯೋನಿಗಳು ಎಂದು ಇನ್ನೊಂದು ಅರ್ಥ, ರುದ್ರಾದಿಗಳು ಎಂದು ಮೂರನೆಯ ಅರ್ಥ, ಜಗತ್ತು ಎಂದು ನಾಲ್ಕನೆಯ ಅರ್ಥ, ಸಂಪೂರ್ಣವಾಗಿ ಎಂದು ಐದನೆಯ ಅರ್ಥ. ಹೀಗೆ ವಿಶ್ವಪದಕ್ಕೆ ಐದು ಅರ್ಥಗಳಿವೆ ಎಂದು ಅಭಿಪ್ರಾಯ.

**ನೋ ಚೇತ್ ಸಾರ್ವಜನೀನೋಕ್ತಿತ್ಯಾಗೋ ನಿರ್ಹೇತುಕೋ ಭವೇತ್ ।**
**ವಾದೀಭಪಂಚವಕ್ತ್ರಾಭಮದೋ ವಿಶ್ವಪದಂ ತತಃ ॥ ೮೭೬ ॥**

**ಅರ್ಥ–** ನೋ ಚೇತ್= ವಿಶ್ವ ಶಬ್ದವು ಪಕ್ಷಿ ಸಾರಮೇಯಾದಿ ಬಹುವಿಧವಾದ ಜಗತ್ತಿನ ಸ್ಮಾರಕವಾಗದಿದ್ದರೆ, ಸಾರ್ವಜನೀನೋಕ್ತಿತ್ಯಾಗಃ= ಸರ್ವರಿಗೂ ಪ್ರಸಿದ್ಧವಾದ ಸರ್ವಾತ್ಮನಾ ಎಂಬ ಪದದ ತ್ಯಾಗವು, ನಿರ್ಹೇತುಕೋ ಭವೇತ್= ನಿರ್ನಿಮಿತ್ತವಾಗುತ್ತದೆ, ತತಃ= ಆದ್ದರಿಂದ, ಅದಃ ವಿಶ್ವಪದಂ= ಈ ವಿಶ್ವ ಪದವು, ವಾದೀಭಪಂಚವಕ್ತ್ರಾಭಂ= ವಾದಿಗಳೆಂಬ ಆನೆಗಳಿಗೆ ಸಿಂಹದಂತಿದೆ.

**ಅನುವಾದ–** ವಿಶ್ವಶಬ್ದವು ಪಶುಪಕ್ಷ್ಯಾದಿ ರೂಪವಾದ ಜಗತ್ತನ್ನು ಹೇಳದಿದ್ದರೆ ಸರ್ವಜನ ಪ್ರಸಿದ್ಧವಾದ ಸರ್ವಾತ್ಮನಾ ಎಂಬ ಪದವನ್ನು ಬಿಟ್ಟು ವಿಶ್ವಾತ್ಮನಾ ಎಂದು ಹೇಳುವುದು ನಿರ್ನಿಮಿತ್ತವಾಗುತ್ತದೆ. ಆದ್ದರಿಂದ ಈ ವಿಶ್ವಪದವು ವಾದಿಗಳೆಂಬ ಗಜಗಳಿಗೆ ಸಿಂಹದಂತಿದೆ.

**ಭಾವವಿಲಾಸಿನೀ–** ನೋ ಚೇತ್ ವಿಶ್ವಪದಂ ಪಕ್ಷಿವಿಶ್ವಾದಿನೀಚಜಗತ್ಸ್ಮಾರಕಂ ನೋ ಚೇತ್ । ಸಾರ್ವಜನೀನೋಕ್ತಿತ್ಯಾಗಃ ಸರ್ವಾತ್ಮನೇತ್ಯುಕ್ತಿತ್ಯಾಗಃ । ಯದ್ವಾ ಉಕ್ತವಿಧಾಯಾ ಅಯಮಧ್ಯಾಯೋ ನಿರ್ಗುಣಾದಿನಿರಾಕರಣಪರೋ ನೋ ಚೇತ್ ನಿರ್ಗುಣಾದೀನಾಮೇವ ಪ್ರತಿಪಾದಕಂ ಚೇದಿತಿ ಯಾವತ್ । ಸಾರ್ವಜನೀನೋಕ್ತಿತ್ಯಾಗಃ ಸರ್ವಜನಪ್ರಸಿದ್ಧಾಚ್ಯುತಾದಿ-ಪದತ್ಯಾಗಃ । ಉಕ್ತವಿಧಯಾ ಬಹ್ವರ್ಥತ್ವಾತ್ ವಿಶ್ವಪದಂ ಸ್ತೌತಿ ॥ **ವಾದೀಭೇತಿ** ॥ ೮೭೬ ॥

**ಅತ್ರ ಷಣ್ಮತಧರ್ಮಾಣಾಂ ಮಧ್ಯೇ ಮಧ್ವಮತಾಧ್ವನಾ ।**
**ಅಕುತಶ್ಚಿದ್ಭಯಂ ಮನ್ಯೇ ತದೇವೇತ್ಯನುಶಾಸ್ತಿ ತತ್ ॥ ೮೭೭ ॥**

**ಅರ್ಥ–** ಅತ್ರ= ಅತ್ರ ಎಂದರೆ, ಷಣ್ಮತಧರ್ಮಾಣಾಂ ಮಧ್ಯೇ= ಆರು ಮತದ ಧರ್ಮಗಳ ಮಧ್ಯದಲ್ಲಿ, ಮಧ್ವಮತಾಧ್ವನಾ= ಮಧ್ವಮತದ ಮಾರ್ಗದಿಂದ, ತದೇವ= ಅಚ್ಯುತ-ಪಾದಾರಾಧನೆಯೇ, ಅಕುತಶ್ಚಿದ್ಭಯಂ= ಭಯರಹಿತವಾದುದು ಎಂದು, ಮನ್ಯೇ= ತಿಳಿಯುತ್ತೇನೆ ಎಂದು ಆ ವಾಕ್ಯವು, ತತ್= ಆದ್ದರಿಂದ, ಅನುಶಾಸ್ತಿ= ಅನುಶಾಸನ ಮಾಡುತ್ತದೆ.

**ಅನುವಾದ–** ಪಾದಾಂಬುಜೋಪಾಸನಮತ್ರ ನಿತ್ಯಂ ಎಂಬಲ್ಲಿ ಅತ್ರ ಎಂದರೆ ಷಣ್ಮತ-ಧರ್ಮಗಳ ಮಧ್ಯದಲ್ಲಿ ಎಂದು ಅರ್ಥ. ಆದ್ದರಿಂದ ಆ ಶ್ಲೋಕವು ಷಣ್ಮತಧರ್ಮಗಳ ಮಧ್ಯದಲ್ಲಿ ಮಧ್ವಮತದ ಮಾರ್ಗದಿಂದ ಅಚ್ಯುತಪಾದಕಮಲವನ್ನು ಉಪಾಸನೆ ಮಾಡುವುದೇ ಭಯರಹಿತ ಮಾರ್ಗವೆಂದು ತಿಳಿಯುತ್ತೇನೆ ಎಂದು ಹೇಳಿ ಅಚ್ಯುತಪಾದೋಪಾಸನೆಯನ್ನೇ ವಿಧಾನ ಮಾಡುತ್ತದೆ.

**ಭಾವವಿಲಾಸಿನೀ–** ಅತ್ರ ನಿತ್ಯಧಾ ಇತ್ಯತ್ರ ವಿದ್ಯಮಾನಾತ್ರ್ರದಸ್ಯಾರ್ಥಮಾಹ - **ಅತ್ರೇತಿ** ॥ ಷಣ್ಮತಧರ್ಮಾಣಾಂ ಷಣ್ಣಾಂ ಸಿದ್ಧಾಂತಿನಾಮಭಿಮತಧರ್ಮಾಣಾಮ್ । ತದೇವ ಅಚ್ಯುತ-ಪದಾಂಬುಜೋಪಾಸನಮೇವ । ಅಸ್ಯ ಧರ್ಮಸ್ಯ ಮಧ್ವಮುನಿನೈವ ಪ್ರಪಂಚಿತತ್ವಾತ್ ಮಧ್ವ-ಮತಾಧ್ವನೇತ್ಯುಕ್ತವಮ್ । ತತ್ತಸ್ಮಾತ್ ಇತರೈಃ ಕ್ರಿಯಮಾಣಧರ್ಮಾಣಾಂ ತತ್ಕರ್ಮ-ಸಂಕಲ್ಪವಿಕಲ್ಪಕಮಿತಿ ಶ್ಲೋಕೇ ವಿನಿಂದಿತತ್ವಾತ್ ॥ ೮೭೭ ॥

**ವಿವರಣೆ–** ಇತರ ಧರ್ಮಗಳನ್ನು ಸತ್ಕರ್ಮಸಂಕಲ್ಪವಿಕಲ್ಪಕಂ ಮನಃ ತತೋ ನಿರುಂಧ್ಯಾತ್ ಎಂದು ಹಿಂದಿನ ಶ್ಲೋಕದಲ್ಲಿಯೇ ನಿಂದಿಸಿರುವುದರಿಂದ ಈ ಶ್ಲೋಕದಲ್ಲಿ ಮಧ್ವಮತದ ಮಾರ್ಗವನ್ನು ಅನುಸರಿಸಿ ಅಚ್ಯುತನ ಪಾದಕಮಲದ ಉಪಾಸನೆ ಮಾಡುವುದೇ ಶ್ರೇಷ್ಠವೆಂದು ವಿಧಾನ ಮಾಡುತ್ತದೆ ಎಂದು ಅಭಿಪ್ರಾಯ.

ನಿತ್ಯಮಿತ್ಯುಕ್ತಿತೋ ಮುಕ್ತೌ ಚೋಪಾಸ್ತಿಮನುಶಾಸ್ತಿ ಸಃ ।
ಪದಾಂಬುಜೋಕ್ತ್ಯಾ ಚಾಕಾರಂ ಸೌಂದರ್ಯಾದಿಗುಣಾನಪಿ ॥ ೮೭೮ ॥

**ಅರ್ಥ–** ಸಃ= ಜಾಯಂತೇಯರಾದ ಕವಿಗಳು, ನಿತ್ಯಮಿತಿ ಉಕ್ತಿತಃ= ಪಾದಾಂಬುಜೋಪಾಸನಮತ್ರ ನಿತ್ಯಂ ಎಂಬಲ್ಲಿ ನಿತ್ಯಂ ಎಂಬ ಪದದಿಂದ, ಮುಕ್ತೌ ಚ= ಮುಕ್ತಿಯಲ್ಲಿಯೂ ಸಹ, ಉಪಾಸ್ತಿಂ= ಉಪಾಸನೆಯನ್ನು, ಅನುಶಾಸ್ತಿ= ಅನುಶಾಸನವನ್ನು ಮಾಡುತ್ತಾರೆ, ಪಾದಾಂಬುಜೋಕ್ತ್ಯಾ= ಪಾದಾಂಬುಜ ಎಂದು ಹೇಳಿದ್ದರಿಂದ, ಆಕಾರಂ= ಆಕಾರವನ್ನೂ, ಸೌಂದರ್ಯಾದಿಗುಣಾನಪಿ= ಸೌಂದರ್ಯಾದಿ ಗುಣಗಳನ್ನೂ, ಅನುಶಾಸ್ತಿ= ಅನುಶಾಸನ ಮಾಡುತ್ತಾರೆ.

**ಅನುವಾದ–** ಜಾಯಂತೇಯರಾದ ಕವಿಗಳು ಪಾದಾಂಬುಜೋಪಾಸನಮತ್ರನಿತ್ಯಂ ಎಂಬಲ್ಲಿ ನಿತ್ಯಂ ಎನ್ನುವ ಪದದಿಂದ ಮೋಕ್ಷದಲ್ಲಿಯೂ ಉಪಾಸನೆಯನ್ನು ಅನುಶಾಸನ ಮಾಡುತ್ತಾರೆ. ಪಾದಾಂಬುಜ ಎಂಬ ಪದದಲ್ಲಿ ಪಾದಶಬ್ದದಿಂದ ಆಕಾರವನ್ನು, ಅಂಬುಜ ಶಬ್ದದಿಂದ ಸೌಂದರ್ಯಾದಿ ಗುಣಗಳನ್ನು ಅನುಶಾಸನ ಮಾಡುತ್ತಾರೆ.

**ಭಾವವಿಲಾಸಿನೀ–** ಏತಚ್ಛ್ಲೋಕಸ್ಥಪದೈಃ ಸಿದ್ಧಂ ಪ್ರಯೋಜನಾಂತರಮಪ್ಯಾಹ – **ನಿತ್ಯಮಿತಿ** ॥ ಸಃ ಉಪದೇಷ್ಟಾ ಕವಿನಾಮಕ ಋಷಿಃ ॥ ೮೭೮ ॥

**ಪ್ರಾಚೀನಪದ್ಯಂ ತದ್ರೀತ್ಯಾ ಸರ್ವಂ ನಿರ್ಣೇಯಮುತ್ತರಮ್ ।**
**ಪುಂಜಂ ಭಯಾನಾಂ ಭುಂಜಾನಂ ತಂ ಜಾನನ್ ಕೋ ಭಯಂ ಜಯೇತ್ ॥ ೮೭೯ ॥**

**ಅರ್ಥ–** ಯತ್= ಯಾವ, ಪ್ರಾಚೀನಪದ್ಯಂ= ಪ್ರಾಚೀನ ಪದ್ಯವಿದೆಯೋ, ತದ್ರೀತ್ಯಾ= ಅದಕ್ಕೆ ಅನುಸಾರವಾಗಿ, ಉತ್ತರಂ ಸರ್ವಂ= ಮುಂದಿನ ಪದ್ಯವೆಲ್ಲವೂ, ನಿರ್ಣೇಯಂ= ನಿರ್ಣಯಿಸಲ್ಪಡಬೇಕು, ಭಯಾನಾಂ= ಭಯಗಳ, ಪುಂಜಂ= ಸಮೂಹವನ್ನು, ಭುಂಜಾನಂ= ಅನುಭವಿಸುವ, ತಂ= ರುದ್ರಾದಿಗಳನ್ನು, ಜಾನನ್= ತಿಳಿಯುವವನು (ರುದ್ರಾದಿಗಳ ಜ್ಞಾನದಿಂದ), ಕಃ= ಯಾವನು, ಭಯಂ= ಭಯವನ್ನು, ಜಯೇತ್= ಜಯಿಸುತ್ತಾನೆ.

**ಅನುವಾದ–** ಪ್ರಾಚೀನ ಪದ್ಯಕ್ಕೆ ಅನುಸಾರವಾಗಿ ಮುಂದಿನ ಪದ್ಯದ ಅರ್ಥವೆಲ್ಲವನ್ನೂ ನಿರ್ಣಯಿಸಬೇಕು. ಭಯಗಳ ಸಮೂಹವನ್ನು ಅನುಭವಿಸುವ ವ್ಯಕ್ತಿಗಳನ್ನು ತಿಳಿಯುವುದರಿಂದ ಯಾವನು ಭಯವನ್ನು ದಾಟುತ್ತಾನೆ?

**ಭಾವವಿಲಾಸಿನೀ–** ತದ್ರೀತ್ಯೇತಿ ತಚ್ಛಬ್ದಬಲಾತ್ ಯತ್ಪ್ರಾಚೀನಪದ್ಯಮಿತಿ ಗ್ರಾಹ್ಯಮ್ । ಉತ್ತರಂ ಪದ್ಯಮ್ । ತಂ ನಿರ್ಗುಣಾದಿಪದಾರ್ಥಂ, ಭಯಭೋಕ್ತೃತ್ವಸ್ಯಪ್ರಾಗುಪಪಾದಿತ-ತ್ವಾದ್ಭಯಾನಾಂ ಪುಂಜಂ ಭುಂಜಾನಮಿತ್ಯುಕ್ತಮ್ । ಏತದ್ವಾಕ್ಯಬಲಾದೇವ ಪ್ರಾಗುಪಲಕ್ಷಣಯಾ ನಿರ್ಗುಣವಿಷಯೇ ಯೋಜನಾಂತರಂ ಕೃತಮ್ ॥ ೮೭೯ ॥

**ಯಂ ಭೀರ್ಬಿಭೇತಿ ತಂ ಭೀರುಃ ಸಂಭಜೇತ್ ಸ್ತಂಭಸಂಭವಮ್ ।**
**ಇತಿ ಪ್ರಾಚೀನಪದ್ಯಸ್ಯ ಹೃದಯಂ ಹೃದಯೋ ಹಿ ತೇ ॥ ೮೮೦ ॥**

**ಅರ್ಥ–** ಯಂ= ಯಾವ ಪರಮಾತ್ಮನ ಎದುರಿನಲ್ಲಿ, ಭೀಃ= ಭಯಕ್ಕೆ ಅಭಿಮಾನಿಯಾದ ದುರ್ಗಾದೇವಿಯು, ಬಿಭೇತಿ= ಹೆದರುತ್ತಾಳೆಯೋ, ತಂ= ಅಂತಹ, ಸ್ತಂಭಸಂಭವಂ= ಸ್ತಂಭದಿಂದ ಆವಿರ್ಭೂತನಾದ ನರಸಿಂಹನನ್ನು, ಭೀರುಃ= ಭಯಗ್ರಸ್ತನಾದವನು, ಸಂಭಜೇತ್= ಚೆನ್ನಾಗಿ ಭಜಿಸಬೇಕು, ಇತಿ= ಎಂಬ, ಪ್ರಾಚೀನಪದ್ಯಸ್ಯ= ಹಿಂದಿನ ಪದ್ಯದ, ಹೃದಯಂ= ಅಭಿಪ್ರಾಯವು, ತೇ= ನಿನ್ನ, ಹೃದಯಃ ಹಿ= ಎದೆಗೆ ನಾಟಿದ ಕಬ್ಬಿಣವಷ್ಟೆ.

**ಅನುವಾದ–** ದುರ್ಗಾದೇವಿಯೂ ಸಹ ಯಾವ ಪರಮಾತ್ಮನಿಗೆ ಹೆದರುತ್ತಾಳೆಯೋ ಅಂತಹ ಸ್ತಂಭದಿಂದ ಆವಿರ್ಭೂತನಾದ ನರಸಿಂಹನನ್ನು ಭಯಗ್ರಸ್ತನಾದವನು ಚೆನ್ನಾಗಿ ಭಜಿಸಬೇಕು ಎಂಬ ಹಿಂದಿನ ಶ್ಲೋಕದ (ಮನ್ಯೇ ಅಕುತಶ್ಚಿತ್ ಭಯಮಚ್ಯುತಸ್ಯ ಎಂಬ ಶ್ಲೋಕದ) ಅಭಿಪ್ರಾಯವೂ ಸಹ ನಿನ್ನ ಹೃದಯಕ್ಕೆ ನಾಟಿದ ಶಲ್ಯವಾಗಿದೆ.

**ಭಾವವಿಲಾಸಿನೀ**– ಭೀರಪಿ ಯಂ ಬಿಭೇತೀತಿ ವಚನಾತ್ ಯಂ ನಾರಾಯಣಂ ಪ್ರತಿ ಭೀರ್ಬಿಭೇತೀತ್ಯುಕ್ತಮ್ । ನರಸಿಂಹೇ ಪ್ರಹ್ಲಾದಾದಿಭಯಹಾರಿತ್ವಸ್ಯ ಪ್ರಸಿದ್ಧತ್ವಾತ್ ಸ್ತಂಭಸಂಭವಮಿತ್ಯುಕ್ತಮ್ । ತೇ ತವ ಹೃದಯಃ ಹೃದಃ ಅಯಃ ಸ್ಥಾನೀಯಮ್ ಅಭೇದ್ಯಮಿತ್ಯರ್ಥಃ ॥೮೮೦॥

**ವಿವರಣೆ**– ಹೃದಯಃ ಎಂಬಲ್ಲಿ ಹೃದಃ ಅಯಃ ಎಂದು ವಿಗ್ರಹವಾಕ್ಯ. ಹೃದಃ ಎಂಬುದು ಹೃತ್ ಶಬ್ದದ ಷಷ್ಠೀ ಏಕವಚನರೂಪ. ಹೃದಃ ಎಂದರೆ ಹೃದಯಕ್ಕೆ ಅಯಃ ಕಬ್ಬಿಣದ ಆಯುಧ ಎಂದು ಅರ್ಥ. ಆದ್ದರಿಂದ ಹೃದಯಃ ಎಂಬುದು ಸಮಸ್ತ ಪದ ಎಂದು ತಿಳಿಯಬೇಕು.

ಯಸ್ಮಾದುಪಾಸ್ತಿಮೇವಾಹ ಮುಕ್ತ್ಯೈ ಮುನಿಪರಂಪರಾ ।
ತಸ್ಮಾನ್ಮಿಥ್ಯೋಪಾಸ್ತಿವಾರ್ತಾ ಹೃತ್ಸ್ಥಾ ಗರ್ತೇಽಪತತ್ ತವ ॥ ೮೮೧ ॥

**ಅರ್ಥ**– ಯಸ್ಮಾತ್= ಯಾವ ಕಾರಣದಿಂದ, ಮುನಿಪರಂಪರಾ= ಕವಿ ಮೊದಲಾದ ಜ್ಞಾನಿಗಳ ಪರಂಪರೆಯು, ಮುಕ್ತ್ಯೈ= ಮುಕ್ತಿಗೋಸ್ಕರವಾಗಿ, ಉಪಾಸ್ತಿಮೇವ= ಉಪಾಸನೆಯನ್ನೇ, ಆಹ= ಹೇಳಿತೋ, ತಸ್ಮಾತ್= ಆ ಕಾರಣದಿಂದ, ತವ= ನಿನ್ನ, ಹೃತ್ಸ್ಥಾ= ಮನಸ್ಸಿನಲ್ಲಿರುವ, ಮಿಥ್ಯೋಪಾಸ್ತಿವಾರ್ತಾ= ಮಿಥ್ಯೋಪಾಸನೆ ಎಂಬ ವಾರ್ತೆಯು, ಗರ್ತೇ= ಹಳ್ಳದಲ್ಲಿ, ಅಪತತ್= ಬಿದ್ದಿತು.

**ಅನುವಾದ**– ಯಾವ ಕಾರಣದಿಂದ ಕವಿ ಮೊದಲಾದ ಜ್ಞಾನಿಗಳ ಪರಂಪರೆಯೇ ಮೋಕ್ಷಕ್ಕಾಗಿ ಉಪಾಸನೆಯನ್ನು ಹೇಳಿತೋ ಆ ಕಾರಣದಿಂದ ನಿನ್ನ ಮನಸ್ಸಿನಲ್ಲಿರುವ ಮಿಥ್ಯೋಪಾಸನೆಯ ಕಥೆಯು ಹಳ್ಳದಲ್ಲಿ ಬಿದ್ದಿತು.

**ಭಾವವಿಲಾಸಿನೀ**– ಅನೇನೈವ ಶ್ಲೋಕೇನ ಪ್ರಯೋಜನಾಂತರಮಪಿ ಸಿದ್ಧಮಿತ್ಯಾಹ – **ಯಸ್ಮಾದಿತಿ** ॥ ೮೮೧ ॥

**ವಿವರಣೆ**– ಅದ್ವೈತಿಗಳು ಉಪಾಸನೆಗೆ ವಿಷಯವಾದುದು ಮಿಥ್ಯಾ ಎಂದು ಹೇಳುತ್ತಾರೆ. ಆದರೆ ಉಪಾಸನೆಯ ಫಲವು ಸತ್ಯವಾದುದರಿಂದ ಅಂತಹ ಸತ್ಯವನ್ನು ಕುರಿತು ಮಿಥ್ಯಾರ್ಥದ ಉಪಾಸನೆಯು ಎಂದೂ ಕಾರಣವಲ್ಲ. ಹಾಗೆ ಅಂಗೀಕರಿಸಿದರೆ ಅದು ಎಲ್ಲ ಜ್ಞಾನಿಗಳ ಅಭಿಪ್ರಾಯಕ್ಕೆ ವಿರುದ್ಧವಾಗುತ್ತದೆ ಎಂದು ಅಭಿಪ್ರಾಯ.

ಏಕೈಕಸ್ಯಾಪಿ ಪಶುಪಕ್ಷ್ಯಾದಿಭಾವೇನ ದೇಹಿನಃ ।
ನಾನಾತ್ವಂ ಸಂಸೃತಾವೇವ ಮುಕ್ತಾವೇಕಪ್ರಕಾರತಾ ॥ ೮೮೨ ॥

**ಅರ್ಥ**– ಏಕೈಕಸ್ಯಾಪಿ ದೇಹಿನಃ= ಒಬ್ಬೊಬ್ಬ ಜೀವನಿಗೂ ಸಹ, ಪಶುಪಕ್ಷ್ಯಾದಿ ಭಾವೇನ= ಪಶುಪಕ್ಷ್ಯಾದಿ ರೂಪಗಳಿಂದ, ನಾನಾತ್ವಂ= ನಾನಾತ್ವವು, ಸಂಸೃತಾವೇವ= ಸಂಸಾರದಲ್ಲಿ ಮಾತ್ರ, ಮುಕ್ತೌ= ಮೋಕ್ಷದಲ್ಲಾದರೆ, ಏಕಪ್ರಕಾರತಾ= ಒಂದೇ ರೀತಿಯಲ್ಲಿ ಇರುತ್ತಾನೆ.

**ಅನುವಾದ–** ಒಬ್ಬೊಬ್ಬ ಜೀವನಿಗೂ ಪಶುಪಕ್ಷ್ಯಾದಿ ರೂಪಗಳಿಂದ ಅನೇಕತ್ವವು ಸಂಸಾರದಲ್ಲಿ ಮಾತ್ರ. ಮೋಕ್ಷದಲ್ಲಿ ಜೀವನು ಒಂದೇ ರೀತಿಯಲ್ಲಿ ಇರುತ್ತಾನೆ.

**ಭಾವವಿಲಾಸಿನೀ–** ಕಿಂಚ ಯಾವತ್ಸ್ಯಾದ್ಗುಣವೈಷಮ್ಯಂ ತಾವನ್ನಾನಾತ್ವಮಾತ್ಮನಃ । ನಾನಾತ್ಮಮಾತ್ಮನೋ ಯಾವತ್ತಾವದಸ್ಯಾಸ್ವತಂತ್ರತಾ । ಯಾವದಸ್ಯಾಸ್ವತಂತ್ರತ್ವಂ ತಾವದೀಶ್ವರತೋ ಭಯಮ್ । ಯ ಏತತ್ ಸಮುಪಾಸೀರಂಸ್ತೇ ಮುಹ್ಯಂತಿ ಶುಚಾರ್ಪಿತಾ ಇತಿ ಭಾಗವತವಾಕ್ಯೇ ಸಾರ್ಧಶ್ಲೋಕೋಕ್ತಸ್ಯ ಮುಕ್ತೌ ನಾನಾತ್ವಾಭಾವಾನ್ಯಾಧಿಪತಿತ್ವಾಭಾವಾದೇರುತ್ತರ-ಶ್ಲೋಕೋತ್ತರಾರ್ಧೇ ಸ್ಪಷ್ಟಂ ವಿನಿಂದಿತತ್ವೇನ ಪೂರ್ವಪಕ್ಷತಯಾ ಅಗ್ರಾಹ್ಯತ್ವಾನ್ಮುಕ್ತೌ ನಾನಾತ್ವಂ ನ ಸದ್ವಿತೀಯತ್ವಂ ನ ಅನ್ಯಾಧಿಪತಿಮತ್ತ್ವಂ ನೇತ್ಯಾದ್ಯರ್ಥಪ್ರತಿಪಾದಕತಯಾ ಪ್ರತೀತ ನಿರವಕಾಶಮುಕ್ತಿವಿಷಯವಾಕ್ಯಾನಾಮಪಿ ಸಂಸಾರ ಇವ ಪಶ್ವಾದಿಭಾವೇನ ನಾನಾತ್ವಸ್ಯ ದ್ವಿತೀಯಜನ್ಮವತ್ತ್ವೇನ ಸದ್ವಿತೀಯತ್ವಸ್ಯಾಸ್ವಾಭಾವಿಕಾನ್ಯಾಧಿಪತಿಮತ್ತ್ವೇನ ಅನ್ಯಾಧಿಪತಿಮತ್ತ್ವಸ್ಯ ಚಾಭಾವ ಏವಾರ್ಥೋऽರ್ಥೋ ವಕ್ತವ್ಯೋ ನ ತು ಯಥಾಶ್ರುತ ಏವಾರ್ಥಃ । ಏತದಪ್ಯುಪಲಕ್ಷಣಮ್ । ಮುಕ್ತಾವಕುತಶ್ಚಿದ್ಭಯಮಿತ್ಯಸ್ಯಾಪೀಶ್ವರಾದನ್ಯಸ್ಮಾದ್ಭಯಾಭಾವೋऽರ್ಥೋ ದ್ರಷ್ಟವ್ಯಃ ನ ತು ಯಥಾಶ್ರುತ ಐಕ್ಯಾರ್ಥ ಇತ್ಯಪಿ ಗ್ರಾಹ್ಯಮ್ । ಕಿಮು ವಕ್ತವ್ಯಮ್ ಉಕ್ತ ವಿಧಯಾ ಸಾವಕಾಶಸ್ಯ ಭಯಂ ದ್ವಿತೀಯಾಭಿನಿವೇಶತ ಇತ್ಯಾದಿವಾಕ್ಯಸ್ಯೇತಿ ಭಾವೇನಾಹ – **ಏಕೈಕಸ್ಯೇತಿ** ॥ ನಾನಾತ್ವ-ಮಿತ್ಯುಪಲಕ್ಷಣಮ್ । ದ್ವಿತೀಯ ಜನ್ಮವತ್ತ್ವೇನ ಸದ್ವಿತೀಯತ್ವಮಪಿ ದ್ರಷ್ಟವ್ಯಮ್ । ಮುಕ್ತೌ ತು ಏತದ್ರಾಹಿತ್ಯಮೇವ ನಾನಾತ್ವಸದ್ವಿತೀಯತ್ವಯೋರಭಾವಃ ॥ ೮೮೨ ॥

**ವಿವರಣೆ–** ಇನ್ನು 'ಯಾವತ್ ಸ್ಯಾದ್ಗುಣವೈಷಮ್ಯಂ ತಾವನ್ನಾನಾತ್ವಮಾತ್ಮನಃ । ನಾನಾತ್ವಮಾತ್ಮನೋ ಯಾವತ್ ತಾವದಸ್ಯಾಸ್ವತಂತ್ರತಾ । ಯಾವದಸ್ಯಾಸ್ವತಂತ್ರತ್ವಂ ತಾವದೀಶ್ವರತೋ ಭಯಂ । ಯ ಏತತ್ ಸಮುಪಾಸೀರನ್ ತೇ ಮುಹ್ಯಂತಿ ಶುಚಾರ್ಪಿತಾಃ।' ಎಂಬ ಏಕಾದಶಸ್ಕಂದದ ಶ್ಲೋಕಗಳನ್ನು ವಿಮರ್ಶೆ ಮಾಡುತ್ತಾರೆ. ಈ ಎರಡು ಶ್ಲೋಕಗಳಲ್ಲಿ ಮೊದಲಿನ ಒಂದೂವರೆ ಶ್ಲೋಕದಿಂದ ಕಂಡುಬರುವ ಮೋಕ್ಷದಲ್ಲಿ ನಾನಾತ್ವಾಭಾವ, ಅನ್ಯಾಧಿಪತಿತ್ವಾಭಾವ ಮೊದಲಾದ ಅರ್ಥಗಳನ್ನು ಕೊನೆಯ ಅರ್ಧಶ್ಲೋಕದಲ್ಲಿ ಸ್ಪಷ್ಟವಾಗಿ ನಿಂದಿಸುವುದರಿಂದ ಮೊದಲಿನ ಒಂದೂವರೆ ಶ್ಲೋಕದಲ್ಲಿ ಹೇಳಿದ ಪ್ರಮೇಯವು ಪೂರ್ವಪಕ್ಷವಾದುದರಿಂದ ಸ್ವೀಕಾರಾರ್ಹವಾಗುವುದಿಲ್ಲ. ಆದ ಕಾರಣದಿಂದ ಮೋಕ್ಷದಲ್ಲಿ ನಾನಾತ್ವವೂ ಇಲ್ಲ, ಸದ್ವಿತೀಯತ್ವವೂ ಇಲ್ಲ, ಅನ್ಯಾಧಿ-ಪತಿತ್ವವೂ ಇಲ್ಲ ಮುಂತಾದ ಅರ್ಥಗಳನ್ನು ಪ್ರತಿಪಾದನೆ ಮಾಡುವಂತೆ ತೋರುವ ನಿರವಕಾಶವಾದ ಮುಕ್ತಿವಿಷಯಕವಾದ ವಾಕ್ಯಗಳಿಗೂ ಸಹ ಸಾವಕಾಶತ್ವವನ್ನು ಕಲ್ಪಿಸಿ ಸಂಸಾರದಲ್ಲಿದ್ದಂತೆ ಪಶುಪಕ್ಷ್ಯಾದಿ ರೂಪಗಳಿಂದ ನಾನಾಭಾವವಿಲ್ಲ. ದ್ವಿತೀಯಜನ್ಮವಾದ ಸದ್ವಿತೀಯತ್ವವೂ ಇಲ್ಲ. ಸ್ವಾಭಾವಿಕ ಅಧಿಪತಿಗಳನ್ನು ಬಿಟ್ಟು ಬೇರೆ ಅಧಿಪತಿಗಳಿಲ್ಲ ಎಂದು ಅರ್ಥಾಂತರವನ್ನು ಹೇಳುತ್ತೇವೆಯೇ ಹೊರತು ಯಥಾಶ್ರುತವಾದ ಅರ್ಥವನ್ನು ಸ್ವೀಕರಿಸುವುದಿಲ್ಲ. ಇದನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. ಮೋಕ್ಷದಲ್ಲಿ ಯಾರ

ಭಯವೂ ಇಲ್ಲವೆಂದು ಹೇಳಿದರೂ ಈಶ್ವರನನ್ನು ಬಿಟ್ಟು ಬೇರೆ ಯಾರ ಭಯವೂ ಇಲ್ಲವೆಂದು ಅರ್ಥವನ್ನು ಮಾಡಬೇಕು, ಹೊರತಾಗಿ ನಾನಾತ್ವವು ಇಲ್ಲವೆಂದಾದರೆ ಐಕ್ಯವು ಇದೆ ಮುಂತಾದ ಅರ್ಥವನ್ನು ಮಾಡಬಾರದು. ಹೀಗೆ ನಿರವಕಾಶವಾಗಿ ತೋರುವ ವಾಕ್ಯಗಳಿಗೂ ಅರ್ಥಾಂತರವನ್ನು ಮಾಡುವಾಗ ಭಯಂದ್ವಿತೀಯಾಭಿನಿವೇಶತಃ ಎಂಬ ಸಾವಕಾಶ ವಾಕ್ಯಕ್ಕೆ ಅರ್ಥಾಂತರವನ್ನು ಮಾಡುವುದು ಸುತರಾಂ ಯುಕ್ತವಾಗುತ್ತದೆ ಎಂದು ಈ ವಾಕ್ಯಗಳ ಅಭಿಪ್ರಾಯವೆಂದು ರಾಜರು ತಿಳಿಸುತ್ತಾರೆ.

ರಾಜಾದಿತುಚ್ಛಮ್ಲೇಚ್ಛಾದೇರೀಶ್ವರಸ್ಯಾಪಿ ತಂತ್ರತಾ ।
ಸಂಸೃತೌ ಸ್ಯಾದ್ ವಿಮುಕ್ತೌ ತು ಸ್ವಭಾವೇಶ್ವರತಂತ್ರತಾ ।
ನಾಪರಸ್ಯ ತತೋ ಮುಕ್ತಿರೇವ ಪ್ರಾರ್ಥ್ಯಾ ವಿವೇಕಿಭಿಃ ॥ ೮೮೩ ॥

ಇತ್ಯಾಹ ಭಗವಾನ್ ವ್ಯಾಸೋ ಯಸ್ಮಾದ್ ಭಾಗವತೇ ಸ್ಫುಟಮ್ ।
ತತೋಽಪ್ಯಭವಮನ್ವಿಚ್ಛನ್ನುಪಾಸೀತಾಚ್ಯುತಂ ಪ್ರಭುಮ್ ॥ ೮೮೪ ॥

**ಅರ್ಥ–** ಸಂಸೃತೌ= ಸಂಸಾರದಲ್ಲಿ, ರಾಜಾದಿತುಚ್ಛಮ್ಲೇಚ್ಛಾದೇಃ= ಜೀವನು ತುಚ್ಛಮ್ಲೇಚಾದಿರಾಜಾದಿಗಳಿಗೂ, ಈಶ್ವರಸ್ಯಾಪಿ= ಮತ್ತು ಈಶ್ವರನಿಗೂ, ತಂತ್ರತಾ= ವಶನಾಗಿರುತ್ತಾನೆ, ವಿಮುಕ್ತೌ ತು= ಮೋಕ್ಷದಲ್ಲಾದರೆ, ಸ್ವಭಾವೇಶ್ವರತಂತ್ರತಾ= ಸ್ವಾಭಾವಿಕವಾದ ಈಶ್ವರ ವಶತ್ವವು ಇರುತ್ತದೆ, ಅಪರಸ್ಯ ನ= ಇನ್ನೊಬ್ಬ ನೀಚನನ್ನು ಕುರಿತು ಅಧೀನತ್ವವು ಇರುವುದಿಲ್ಲ, ತತಃ= ಆ ಕಾರಣದಿಂದ, ವಿವೇಕಿಭಿಃ= ವಿವೇಕಿಗಳಿಂದ, ಮುಕ್ತಿರೇವ= ಮೋಕ್ಷವೇ, ಪ್ರಾರ್ಥ್ಯಾ= ಪ್ರಾರ್ಥಿಸಲ್ಪಡಬೇಕು. ಇತಿ= ಎಂದು, ಭಗವಾನ್ ವ್ಯಾಸಃ= ವೇದವ್ಯಾಸದೇವರು, ಯಸ್ಮಾತ್= ಯಾವ ಕಾರಣದಿಂದ, ಭಾಗವತೇ= ಭಾಗವತ ಗ್ರಂಥದಲ್ಲಿ, ಸ್ಫುಟಂ= ಸ್ಪಷ್ಟವಾಗಿ, ಆಹ= ಹೇಳಿದರೋ, ತತೋಪಿ= ಆ ಕಾರಣದಿಂದಲೂ, ಅಭವಮನ್ವಿಚ್ಛನ್= ಮೋಕ್ಷವನ್ನು ಬಯಸುವವನು, ಪ್ರಭುಂ ಅಚ್ಯುತಂ= ಪ್ರಭುವಾದ ಅಚ್ಯುತನನ್ನು, ಉಪಾಸೀತ= ಉಪಾಸನೆಯನ್ನು ಮಾಡಬೇಕು.

**ಅನುವಾದ–** ಸಂಸಾರದಲ್ಲಿ ಜೀವನು ಈಶ್ವರನಿಗೂ ವಶನಾಗಿರುತ್ತಾನೆ, ತನಗಿಂತ ನೀಚರಿಗೂ ಮ್ಲೇಚ್ಛಾದಿರಾಜರುಗಳಿಗೂ ವಶನಾಗಿರುತ್ತಾನೆ. ಮೋಕ್ಷದಲ್ಲಿ ಮಾತ್ರ ಸ್ವಾಭಾವಿಕವಾದ ಈಶ್ವರವಶತ್ವವು ಮಾತ್ರ ಇರುತ್ತದೆ. ಜೀವನು ಇನ್ನೊಬ್ಬರಿಗೆ (ನೀಚರಿಗೆ) ವಶನಾಗಿರುವುದಿಲ್ಲ. ಆದ್ದರಿಂದ ವಿವೇಕಿಗಳಾದವರು ಮೋಕ್ಷವನ್ನೇ ಬಯಸಬೇಕು ಎಂದು ಯಾವ ಕಾರಣದಿಂದ ವೇದವ್ಯಾಸರು ಭಾಗವತದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆಯೋ ಆ ಕಾರಣದಿಂದಲೂ ಸಹ ಮೋಕ್ಷವನ್ನು ಬಯಸುವವನು ಪ್ರಭುವಾದ ಅಚ್ಯುತನನ್ನೇ ಉಪಾಸನೆ ಮಾಡಬೇಕು.

**ಭಾವವಿಲಾಸಿನೀ–** ರಾಜಾದಿತ್ವನೇನಾಸ್ವಾಭಾವಿಕಾಧಿಪತಿಮತ್ತ್ವಮಭಿಪ್ರೇತಮ್ । ತದಭಾವಶ್ಚ ಮುಕ್ತಾವನನ್ಯಾಧಿಪತಿತ್ವಮ್ । ಆನುಷಂಗಿಕತಯಾ ಸಿದ್ಧಂ ಪ್ರಯೋಜನಾಂತರಂ ಚಾಹ – ತತ ಇತಿ ॥ ತತಃ ನಾನಾಯೋನ್ಯಾದಿಸತ್ತ್ವೇನ ಸಂಸಾರಸ್ಯಾಸಾರತ್ವಾತ್ । ಪೂರ್ವಪಕ್ಷಸಿದ್ಧಾಂತಭಾವಸ್ಯ ಸ್ಪಷ್ಟತ್ವಾತ್ ಸ್ಫುಟತರಮಿತ್ಯುಕ್ತಮ್ ॥ ೮೮೩–೮೮೪ ॥

**ಧರ್ಮಾನ್ ಭಾಗವತಾನ್ ಪೃಷ್ಟಃ ಕವಿರ್ವಾದಿವಿವಾದತಃ ।**
**ಭಗವಂತಂ ಚ ತದ್ಧರ್ಮಂ ವಿವಿಚ್ಯೇತ್ಥಮವರ್ಣಯತ್ ॥ ೮೮೫ ॥**

**ಅರ್ಥ–** ಭಾಗವತಾನ್ ಧರ್ಮಾನ್ ಪೃಷ್ಟಃ= ಭಾಗವತ ಧರ್ಮಗಳ ಬಗ್ಗೆ ಪ್ರಶ್ನಿಸಲ್ಪಟ್ಟ, ಕವಿಃ= ಕವಿಗಳು, ವಾದಿವಿವಾದತಃ= ವಾದಿಗಳಲ್ಲಿ ವಿವಾದವಿರುವುದರಿಂದ, ಭಗವಂತಂ= ಭಗವಂತನನ್ನೂ, ತದ್ಧರ್ಮಂ ಚ= ಅವನ ಧರ್ಮಗಳನ್ನೂ, ವಿವಿಚ್ಯ= ಸ್ಪಷ್ಟಪಡಿಸಿ, ಇತ್ಥಂ= ಈ ರೀತಿಯಾಗಿ, ಅವರ್ಣಯತ್= ವರ್ಣಿಸಿದ್ದಾರೆ.

**ಅನುವಾದ–** ಭಾಗವತ ಧರ್ಮಗಳ ಬಗ್ಗೆ ಪ್ರಶ್ನಿಸಲ್ಪಟ್ಟ ಕವಿಗಳು ವಾದಿವಿಪ್ರತಿಪತ್ತಿ ಇರುವುದರಿಂದ ಭಗವಂತನನ್ನೂ ಮತ್ತು ಧರ್ಮವನ್ನೂ ಹೀಗೆ ಸ್ಪಷ್ಟವಾಗಿ ನಿರೂಪಿಸಿದ್ದಾರೆ.

**ಭಾವವಿಲಾಸಿನೀ–** ಶ್ಲೋಕಾರ್ಥಕಥನಮುಪಸಂಹರತಿ – ಧರ್ಮಾನಿತಿ ॥ ಭಾಗವತಾನ್ ಭಗವತ್ ಸಂಬಂಧಿನಃ । ಭಾಗವತಧರ್ಮಪರಿಜ್ಞಾನಾಯ ಭಗವತ್ ಜ್ಞಾನಮಪ್ಯಪೇಕ್ಷಿತಮಿತ್ಯತಃ ಭಗವಂತಂ ತದ್ಧರ್ಮಂ ಚೇತ್ಯುಕ್ತಮ್ ॥ ೮೮೫ ॥

**ವಿವರಣೆ–** ವಿದೇಹ ರಾಜನು ಜಾಯಂತೇಯರನ್ನು ಕುರಿತು 'ಧರ್ಮಾನ್ ಭಾಗವತಾನ್ ಬ್ರೂತ' ಎಂದು ಭಾಗವತ ಧರ್ಮಗಳನ್ನು ಉಪದೇಶಿಸಿ ಎಂದು ಕೇಳಿದ್ದಾನೆ. ಅದಕ್ಕೆ ಉತ್ತರ ರೂಪವಾಗಿ ಕವಿ ಮೊದಲಾದವರು ಉಪದೇಶ ಮಾಡುತ್ತಾರೆ. ಭಗವಂತನು ಯಾರು ಎಂಬ ವಿಷಯದಲ್ಲಿಯೂ, ಧರ್ಮವು ಯಾವುದು ಎಂಬ ವಿಷಯದಲ್ಲಿಯೂ ವಾದಿಗಳಲ್ಲಿ ವಿಪ್ರತಿಪತ್ತಿ ಇರುವುದರಿಂದ ಕವಿಯು ಭಗವಂತನೆಂದರೆ ವಿಷ್ಣುವೇ, ಧರ್ಮವೆಂದರೆ ಅವನ ಉಪಾಸನೆಯೇ ಎಂದು ಸ್ಪಷ್ಟವಾಗಿ ನಿರೂಪಿಸಿದ್ದಾರೆ ಎಂದು ಅಭಿಪ್ರಾಯ.

**ಅಚ್ಯುತೋ ಭಗವಾಂಸ್ತಸ್ಯೋಪಾಸ್ತಿರ್ಧರ್ಮೋ ಮಹಾನ್ ಕಿಲ ।**
**ಭಗವತ್ಯರ್ಪಣಂ ಚ ಸ್ಯಾತ್ ತದ್ಧರ್ಮೋಖಿಲಕರ್ಮಣಾಮ್ ॥ ೮೮೬ ॥**

**ಅರ್ಥ–** ಅಚ್ಯುತೋ ಭಗವಾನ್= ಅಚ್ಯುತನೇ ಭಗವಂತ, ತಸ್ಯ= ಅವನ, ಉಪಾಸ್ತಿಃ= ಉಪಾಸನೆಯೇ, ಮಹಾನ್ ಧರ್ಮಃ ಕಿಲ= ಶ್ರೇಷ್ಠವಾದ ಧರ್ಮವಷ್ಟೆ, ತತ್= ಆದ್ದರಿಂದ, ಅಖಿಲಕರ್ಮಣಾಂ= ಎಲ್ಲ ಕರ್ಮಗಳನ್ನು, ಭಗವತ್ಯರ್ಪಣಂ= ಭಗವಂತನಲ್ಲಿ ಸಮರ್ಪಿಸುವುದೂ ಸಹ, ಧರ್ಮಃ= ಧರ್ಮವಾಗುತ್ತದೆ.

ಪುಂಖಾದೌ ಚ ಸುವರ್ಣಖಚಿತಾಲಂಕಾರವಂತಂ ಚಾಪಂ ರಥಂ ಶರಾದಿಕಂ ಚ ಇಚ್ಛತಿ ಕರ್ತುಮಿಚ್ಛತಿ । ತತ್ರ ಮಾಂ ಪರಿಸ್ರವೇತಿ ತು ಪೂರ್ವವದೇವ ॥

೩) ನನು ಮುಕ್ತೌ ಕಾರ್ಮಾರಾದಯಃ ಕಥಂ ಸಂತೀತ್ಯತ ಆಹ – **ಕಾರುರಿತಿ** ॥ ಯತ್ರ ಮುಕ್ತೌ ಅಹಂ ಮುಕ್ತ್ಯನಂತರಮಪಿ ಕಾರುಃ ಕಾರುತ್ವಜಾತ್ಯಾಕ್ರಾಂತ ಏವಾಸ್ಮೀತಿ ತ್ವಷ್ಟುರ್ವಚನಮಿದಮ್ । ಭಿಷಕ್ ಅಶ್ವಿನ್ಯಾದಿದೇವಸಮೂಹೋ ಭಿಷಕ್ ವೈದ್ಯಜಾತ್ಯಾಕ್ರಾಂತ ಏವಾಸ್ತಿ । ಉಪಲಪ್ರಕ್ಷಿಣೀ ಲೀಲಾರ್ಥಂ ಪಟ್ಟಣೇ ಪಟ್ಟಣಾಲಂಕಾರೇಽಪಿ ಯುಕ್ತಪದಾರ್ಥಾನಾಮವಶ್ಯಮಪೇಕ್ಷಿತತ್ವಾಚ್ಛೋಪಲಕ್ಷೇಪಣೋಪಯುಕ್ತಯಂತ್ರವಿಶೇಷಃ । ನನಾ ಚಾಪವಿಶೇಷದಾರುತಂತ್ವಾದಿರೂಪೇಣ ನಾನಾಪ್ರಾಕಾರಾಽಸ್ತಿ । ಯತ್ರ ನಾನಾಧಿಯಃ ಜೀವಾನಾಂ ತತ್ರಾಪಿ ಪರಸ್ಪರಂ ಭಿನ್ನತ್ವಾದ್ಭಿನ್ನಬುದ್ಧಿಯುಕ್ತಾಃ ಜೀವೇಶ್ವರಭೇದೋ ಬುದ್ಧಿಮಂತೋ ವಾ । ವಸೂಯವಃ ವಸವಃ । ಪರವಸ್ತು ನಾರಾಯಣಂ ಸದಾ ಯುಂಜಂತೀತಿ ವಸೂಯವೋಮುಕ್ತಾ ವಾ ವಯಂ ಸರ್ವೇ ಅನುಗಾ ಇವ ಹರೇರನುಗಮನಶೀಲಾ ಇವಾತಸ್ಥಿಮ ಆವರ್ತೇಮಹಿ । ಮಧ್ಯೇ ಉಪವಿಷ್ಟಂ ನಾರಾಯಣಂ ಪರಿವಾರತಯಾ ಸೇವಮಾನಾನಾಂ ಸರ್ವದಾ ಅನುಗಮನಾಭಾವತ್ ಭೂಮಾವವತಾರಸಮಯೇಽಪಿ ತಸ್ಯಾನುಗಮನಾಭಾವಾದನುಗಾ ಇವೇತ್ಯುಕ್ತಮ್ । ಯಥಾ ಪ್ರಭೋರನುಗಂತಾರೋಽಪಿ ತದಾಜ್ಞಾಧಾರಿಣಃ ತಥಾ ವಯಮಪಿ ತದಾಜ್ಞಾಧಾರಿಣ ಇತ್ಯತ್ರ ತಾತ್ಪರ್ಯಮ್ । ತತ್ರ ಮಾಮಿತ್ಯಾದಿ ಪೂರ್ವವತ್ ॥

೪) ಯತ್ರ ಮುಕ್ತೌ ಅಶ್ವಃ ಸುಖಂ ಯಥಾ ಭವತಿ ತಥಾ ರಥಂ ವೋಹ್ವಾ ವೋಢಾ ಪ್ರಾಪಯಿತಾ । ಸ್ತ್ರೀಭಿರ್ವಾ ಯಾನೈರ್ವೇತಿ ವಚನಾತ್ । ಲಸದ್ವಿಮಾನಾವಲಿಭಿರ್ನಭಸ್ತಲಾಮಿತಿ ಭಾಗವತೋಕ್ತ್ಯಾ ಚ ಮುಕ್ತಾನಾಂ ರಥಸ್ಥತಯಾ ಗಮನಸದ್ಭಾವಾತ್ ರಥಸ್ಯ ಚಾಶ್ವೇನೈವ ನೇತವ್ಯತ್ವಾತ್ ಮುಕ್ತೋಽಶ್ವಃ ಮುಕ್ತಾನಾಂ ಇಂದ್ರಾದೀನಾಂ ರಥಂ ಆನಂದೋದ್ರೇಕೇಣೈವ ನಯತಿ । ದುಃಖಲೇಶಮಾತ್ರಮಪಿ ತಸ್ಯ ನಾಸ್ತೀತಿ ಭಾವೇನ ಸುಖಮಿತ್ಯುಕ್ತಮ್ । ಶೇಪಃ ಶೇಪೌ ಸ್ಥೂಲಾಂಡವಂತೌ ಅರ್ಶ ಆದಿಭ್ಯ ಇತಿ ಸೂತ್ರಾತ್ । ಜ್ಞಾನಾನಂದಮಯತ್ವೇನಾತಿಮಂಡಲತ್ವಾತ್‌ಫಕಾರಸ್ಯ ಪಕಾರಃ । ರೋಮಣ್ವಂತೌ ಸರ್ವಾಂಗೇಷು ರೋಮವಂತೌ । ಭೇದೌ ಭಿಂದತ ಇತಿ ವ್ಯತ್ಯಯಾ ಪರಸ್ಪರಂ ಶಿರಸ್ತಾಡನಂ ಕುರ್ವಂತೌ ಮೇಷೌ । ಉಪಮಂತ್ರಿಣಃ ಹರೇಃ ಸಮೀಪೇ ಸೇವಾಯೋಗ್ಯಪ್ರಧಾನಪುರುಷಸ್ಯ ಬ್ರಹ್ಮೇಂದ್ರಾದೇರ್ಮುಕ್ತಸಮೂಹಸ್ಯ ಹಸನಾಂ ಹಾಸಂ ಸುಖಂ ಸುಖೇನೈವ ವೋಢಾರೌ ಪ್ರಾಪಯಿತಾರೌ । ಯಥಾ ಸಂಸಾರೇ ಬ್ರಹ್ಮಸಭಾಯಾಮಿಂದ್ರಸಭಾಯಾಂ ಚ ಕದಾಚಿತ್ತಯೋಃ ಪರಿಹಾಸದಶಯಾಂ ತತ್ತಲ್ಲೋಕಸ್ಥೌ ಜ್ಞಾನಿಭೂತಮೇಷೌ ಯುದ್ಧಂ ಕುರುತಃ ತಥಾ ಮುಕ್ತಾವಪ್ಯಾನಂದೋದ್ರೇಕೇಣೈವ ಯುದ್ಧಂ ಕೃತ್ವಾ ತಯೋರ್ಹಾಸಂ ಜನಯತ ಇತಿ ಭಾವಃ । ಇತ್ ಇತ್ಥಂ ಮುಕ್ತಾವಪಿ ಕಾರುಭಿಷಗೋಷಧ್ಯಶ್ವಮೇಷಾದೀನಾಂ ಸ್ವಸ್ವಜಾತ್ಯುಚಿತಲೀಲಾವತ್ ಮಂಡೂಕಃ ವಾಃ ಉದಕಂ ಇಚ್ಛತಿ, ಯಾನಸ್ಥಾನಾಮಾಗಮನಸಮಯೇ ತೀರಸ್ಥೋ ಮಂಡೂಕಃ ಉದಕಂ ಪ್ರವೇಷ್ಟುಮಿಚ್ಛತೀತಿ ಭಾವಃ । ತತ್ರ ಮಾಮಿತ್ಯಾದಿ ಪೂರ್ವವತ್ ॥

೫) ಯತ್ರ ಮುಕ್ತೌ ಆತ್ಮನಿ ಬಲಂ ದಧಾನಃ ಮಹದ್ವೀರ್ಯಂ ಕರಿಷ್ಯನ್ ವೃತ್ರಹಾ ಇಂದ್ರಃ ಅಸ್ಯೇಂದ್ರಸ್ಯ ಮುಕ್ತೇರ್ಭಾವಿತ್ವಾತ್ ಕರಿಷ್ಯನ್ನಿತಿ ಭಾವಿಪ್ರಯೋಗಃ । ಶರ್ಯಣಾವತಿ, ಶೀರ್ಯತೇ ಸೋಮರಸೋऽನಯೇತಿ ವ್ಯುತ್ಪತ್ತ್ಯಾ ಶರ್ಯಣಾ ಸೋಮರಸಸಾಧಕ-ದಶಾಪಟೀ ತದ್ವತಿ ಪಾತ್ರೇ ಸ್ಥಿತಂ ಸೋಮಂ ಸೋಮರಸಂ ಮುಕ್ತೈರ್ಲೀಲಯಾ ಕ್ರಿಯಮಾಣಯಜ್ಞೇ ಪಿಬತು । ಪಾಸ್ಯತೀತಿ ಯಾವತ್ । ವ್ಯತ್ಯಯೋ ಬಹುಲಮಿತಿ ವಚನಾತ್ । ತತ್ರ ಮಾಮಿತ್ಯಾದಿಪೂರ್ವವತ್ ॥

೬) ದಿಶಾಂಪತೇ ಹೇ ಸೋಮ ಸೋಮಾಭಿಮಾನಿತ್ವಾತ್ ಸೋಮಪದವಾಚ್ಯ ಪವಮಾನ ! ಆರ್ಜೀಕಾತ್ ಸೋಮರಸಾರ್ಜಕಾತ್ ಋತ್ವಿಜಃ ರಸಸ್ರವಣಾರ್ಥಂ ಸೋಮಲತಾಂ ಪೇಷಯತಃ ಋತ್ವಿಜ ಇತ್ಯರ್ಥಃ । ಸುತಃ ಅಭಿಮನ್ಯಮಾನಲತಾದ್ವಾರಾ ಅಭಿಸ್ರವಣಮಭಿತಃ ಸ್ರವಣಂ ಪ್ರಾಪ್ತಃ । ಅತ ಏವ ಮೀಢ್ವಃ ರಸಸೇಚನಶೀಲಸ್ತ್ವಂ ಮುಕ್ತಾವಪಿ ಮಂದ-ವಾಯುರೂಪೇಣ ರಸಸೂಕ್ಷ್ಮಾಂಶಂ ಸಂಗೃಹ್ಯ ದಿಶಿ ದಿಶಿ ಸ್ಥಿತಮುಕ್ತಾನ್ ಪ್ರತಿ ಸೇಚನ-ಶೀಲೋ ವಾ । ಅತ ಏವ ದಿಶಾಂ ದಿಶಿ ದಿಶಿ ಸ್ಥಿತಮುಕ್ತಾನಾಂ ಪತ ಇತ್ಯುಕ್ತಮ್ । ಋತವಾಕೇನ ಯಥಾರ್ಥಜ್ಞಾನಸೂಕ್ತೇನ ಸತ್ಯೇನ ಜ್ಞಾನಪೂರ್ವಕಕರ್ಮಣಾ । ಋತಂ ಯಥಾರ್ಥವಿಜ್ಞಾನಂ ಸತ್ಯಂ ತತ್ಪೂರ್ವಿಕಾ ಕೃತಿರಿತಿ ವಚನಾತ್ । ಶ್ರದ್ಧಯಾ ತಪಸಾ ಚ ಸಹ ಆಸಮಂತಾತ್ ಪವಸ್ವ ಪವನಂ ಕುರು । ಪವನಂ ಕರಿಷ್ಯಸೀತಿ ಯಾವತ್ । ಮುಕ್ತಿಸ್ಥ-ಮಂದಾನಿಲಂ ಪ್ರೇರಯನ್ ಮುಕ್ತಸ್ಥಾನೇ ಸರ್ವತ್ರ ಮುಕ್ತಬ್ರಹ್ಮರೂಪೇಣ ಸಂಚರಿಷ್ಯತಿ । ಮುಕ್ತಾವಪ್ಯಂತಃ ಪ್ರಾಕಾರಾದ್ಬಹಿಃ ತತ್ರಸ್ಥ ಜೀವನ್ಮುಕ್ತಾನ್ ಆನಂದಯನ್ ವಾಯುರೂಪೇಣ ಯತ್ರ ಮುಕ್ತೌ ಸಂಚರತಿ ಸ ಏನಾನ್ ಬ್ರಹ್ಮ ಗಮಯತೀತಿ ಶ್ರುತೇಃ । ತತ್ರ ಮಾಮಿತ್ಯಾದಿ ಪೂರ್ವವತ್ ॥ ಪವಮಾನಸ್ಯ ಮಾಹಾತ್ಮ್ಯ ಕಥನಮಿದಮ್ ॥

೭) ಸೂರ್ಯಸ್ಯ ದುಹಿತಾ ಯಮುನಾ । ಪರ್ಜನ್ಯವೃದ್ಧಂ ಪರ್ಜನ್ಯಃ ವೃದ್ಧೋ ಯೇನೇತಿ ವ್ಯುತ್ಪತ್ತ್ಯಾ ಜಲದಾನೇನ ಪರ್ಜನ್ಯಾಭಿವೃದ್ಧಿಕರಂ ತಂ ಸಂಸಾರೇ ಸ್ವಪತಿತ್ವೇನ ವೃತಂ ವರುಣಮ್ । ಯತ್ರ ಮುಕ್ತೌ ಮಹಿಷಂ ಪತಿಮ್ । ಆ ಸಮ್ಯಕ್ ಅಭರತ್ ಬಿಭೃತವತೀ । ಗಂಧರ್ವಾಃ ಅರ್ವಾ-ಗಂಧರ್ವೋऽಶ್ವ ಇತ್ಯಭಿಧಾನಾತ್ ಸಂಸಾರೇ ವರುಣಾಧೀನತಯಾ ಸ್ಥಿತಾ ಯಾಗ-ಯೋಗ್ಯಾಶ್ವಾಃ ತಂ ವರುಣಂ ಯತ್ರ ಮುಕ್ತೌ ಪ್ರತ್ಯಗೃಹ್ಣನ್ ಸ್ವಾಮಿತ್ವೇನ ಗೃಹೀತವಂತಃ । ಮುಕ್ತಾವಪಿ ತದಧೀನತಯೈವ ಸ್ಥಿತಾ ಇತಿ ಭಾವಃ । ತಂ ಸಂಸಾರೇ ಸೋಮ-ರಸಾಭಿಮಾನಿವರುಣಮ್ । ಯತ್ರ ಮುಕ್ತೌ ಸೋಮೇ ಮುಕ್ತಸೋಮಲತಾಯಾಮ್ । ರಸಂ ರಸಸ್ವಾಮಿತ್ವಾದ್ರಸಶಬ್ದವಾಚ್ಯಂ ಆದಧುಃ ಕೃತವಂತಃ । ತತ್ರೇತ್ಯಾದಿ ಪೂರ್ವವತ್ ॥

೮) ಹೇ ಋತದ್ಯುಮ್ನ ಋತಂ ಯಥಾರ್ಥಜ್ಞಾನಮೇವ ದ್ಯುಮ್ನಂ ದ್ರವಿಣಂ ಯಸ್ಯ ತತ್ಸಂಬುದ್ಧಿಃ ಹೇ ಋತದುಮ್ನ । ಸತ್ಯಕರ್ಮನ್ ಸತ್ಯಾನಾಂ ಯಥಾರ್ಥಜ್ಞಾನಪೂರ್ವಕ-ಯಾಗಾದಿಕ್ರಿಯಾಣಾಂ ಕರ್ಮ ಯಸ್ಯ ತತ್ಸಂಬುದ್ಧಿಃ । ರಾಜನ್ ಮುಕ್ತಾನಾಮಧಿಪತೇ ! ಹೇ ಸೋಮ ಸೋಮಾಭಿಮಾನಿತ್ವಾತ್ ಸೋಮಪದವಾಚ್ಯ ವಾಯೋ ! ತ್ವಂ ಯತ್ರ

ಮುಕ್ತೌ । ಸೋಮ ಮುಕ್ತೌ ವಿದ್ಯಮಾನ ಚಿನ್ಮಯಸೋಮರಸಾಭಿಮಾನಿತ್ವಾತ್ ಸೋಮಪದವಾಚ್ಯ । ತ್ವಂ ಋತಂ ವದನ್ ಸತ್ಯಂ ವದನ್ ಶ್ರದ್ಧಾಂ ವದನ್ ಧಾತ್ರಾ ಬ್ರಹ್ಮರೂಪೇಣ ಪರಿಷ್ಕೃತಃ ಅಲಂಕೃತಸ್ತಿಷ್ಠಸಿ । ವಾಯೋಃ ಮುಕ್ತೌ ಬ್ರಹ್ಮರೂಪೇಣೈವಾವಸ್ಥಾನಸ್ಯ ಶಾಸ್ತ್ರಸಿದ್ಧತ್ವಾದಿದಮುಕ್ತಮ್ । ತತ್ರೇತ್ಯಾದಿ ಪೂರ್ವವತ್ ॥

೯) ಹೇ ಹರೇ ವಿಶೇಷ ಸನ್ನಿಧಾನವತ್ತ್ವಾದ್ಧರಿಶಬ್ದವಾಚ್ಯ ಪವಮಾನ ! ಉಗ್ರಸ್ಯ ಶತ್ರೂಣಾಂ ಭಯಂಕರಸ್ಯ । ಬೃಹತಃ ಅಧಿಕಾರಿಷು ಸರ್ವೋತ್ತಮಸ್ಯ ಯಸ್ಯ ತವ ಆಜ್ಞಯಾ ಸಂಸ್ರವಾಃ ಸಮ್ಯಕ್ ಪ್ರವಣಶೀಲಾ ನದ್ಯಃ ಸಂಸ್ರವಂತಿ ಸಮ್ಯಗ್ಗಚ್ಛಂತಿ । ರಸಾಃ ಮಧುರಾದಿರಸಾಃ ರಸಿನಃ ರಸವತಃ ಪದಾರ್ಥಾನ್ ಸಂಯಂತಿ ಪ್ರಾಪ್ನುವಂತಿ । ಸ ತ್ವಂ ಯತ್ರ ಮುಕ್ತೌ ಬ್ರಹ್ಮಣಾ ಬ್ರಹ್ಮರೂಪೇಣ ಪುನಾನಃ ಪಾವಯಂಸ್ತಿಷ್ಠಸಿ । ಸತ್ಯಂ ಇದಂ ವಚನಮಯಥಾರ್ಥಂ ನ । ತತ್ರೇತ್ಯಾದಿಪೂರ್ವವತ್ ॥

೧೦) ಹೇ ಪವಮಾನ ! ಯತ್ರ ಮುಕ್ತೌ ಛಂದಸ್ಯಾಂ ಛಂದಃ ಸಂಬಂಧಿನೀಂ ವಾಚಂ ವದನ್ ಬ್ರಹ್ಮಾ ಗ್ರಾವ್ಣಾ ಸೋಮಲತಾಪೇಷಣೋಪಯುಕ್ತಾಶ್ಮನಾ । ಸ್ರುತೇನ ಸೋಮೇನ ಸೋಮರಸೇನ ಆನಂದಂ ಸೋಮರಸಪಾತೃಣಾಮಿಂದ್ರಾದೀನಾಂ ಸ್ವರೂಪಾನಂದಂ ಜನಯನ್ ಪ್ರಾದುರ್ಭಾವಯನ್ । ಸೋಮೇ ಸೋಮಲತಾ ಪ್ರಧಾನತ್ವಾತ್ ಸೋಮಶಬ್ದವಾಚ್ಯೇ ಯಜ್ಞೇ ಮಹೀಯತೇ ಸರ್ವೈಃ ಪೂಜ್ಯತೇ ತತ್ರೇತ್ಯಾದಿಪೂರ್ವವತ್॥

೧೧) ಯತ್ರ ಮುಕ್ತೌ ಅಜಸ್ರಂ ಸರ್ವದಾ ಜ್ಯೋತಿಸ್ತಿಷ್ಠತಿ । ವೈಕುಂಠಲೋಕಪ್ರಕಾಶಸ್ಯ ಲಕ್ಷ್ಮೀ-ಸ್ವರೂಪತ್ವೇನಾನಾದ್ಯನಂತತ್ವದ್ಯೋತನಾಯಾಜಸ್ರಮಿತ್ಯುಕ್ತಮ್ । ಯಸ್ಮಿನ್ ಲೋಕೇ ವೈಕುಂಠಲೋಕೇ ಸ್ವಃ ಸುಖಂ ಹಿತಂ ನಿಹಿತಮ್ । ಹೇ ಪವಮಾನ ! ಅಮೃತೇ ನ ವಿದ್ಯತೇ ಮೃತಂ ಮರಣಂ ಯತ್ರೇತ್ಯಮೃತಶಬ್ದವಾಚ್ಯೇ । ಅಕ್ಷಿತೇ ಅನಾದ್ಯನಂತಕಾಲೇಽಪಿ ಕ್ಷಯ-ರಹಿತೇ । ತತ್ರತ್ಯಜನಾನಾಂ ಮರಣಾಭಾವದ್ಯೋತನಾಯಾದ್ಯಂ ವಿಶೇಷಣಮ್ । ಲೋಕಸ್ಯೈವ ಸ್ವರೂಪತೋ ನಾಶಾಭಾವದ್ಯೋತನಾಯ ದ್ವಿತೀಯಮಿತಿ ವಿವೇಕಃ। ತಸ್ಮಿನ್ ಲೋಕೇ । ಯದ್ಯಪೀದಂ ಲೋಕಪದಂ ಸಾಮಾನ್ಯಪದಮ್ ತಥಾಪಿ ಪರಿಶಿಷ್ಟೇ ವಿಷ್ಣೋರ್ಲೋಕ ಇತಿ ಸ್ಪಷ್ಟೋಕ್ತೇಃ ತತ್ರಾಪಿ ವೈಕುಂಠಸ್ಯೈವ ವಾಚಕಮ್ । ಮಾಂಧೇಹಿ ನಿಕ್ಷಿಪ । ತ್ವಂ ಚ ಇಂದ್ರಾಯ ಇಂದ್ರಮುದ್ದಿಶ್ಯ । ಪರಿಸ್ರವ ಅಸ್ಮಾದಾದಿಮುಕ್ತಾನಾದಾಯ ಪರಿತೋ ಗಚ್ಛ। ಮಾಂಧೇಹೀತಿ ಪೃಥಗುಕ್ತೇರಿಸ್ಮಿನ್ ವಾಕ್ಯೇ ಯಥಾಸ್ಥಿತ್ಯೆವ ಯೋಜನಾ ॥

೧೨) ಯತ್ರ ವೈಕುಂಠಲೋಕೇ ವೈವಸ್ವತಃ ಯಮಃ । ರಾಜಾ ಪ್ರಜಾರಂಜಕ ಏವ ನ ಭೀಷಕಃ । ತತ್ರತ್ಯಪ್ರಜಾನಾಂ ಮೃತ್ಯುಭಯರಹಿತ್ವಾದಿತಿ ಭಾವಃ। ಯತ್ರ ವೈಕುಂಠಲೋಕೇ ದಿವಃ ಸ್ವರ್ಗಸ್ಯ ಅವರೋಧನಂ ಅಂತಃಪುರಸ್ತ್ರೀಜನಃ ಅಸ್ತಿ । ಯತ್ರ ಯಹ್ವಂತೀಃ ಪರಿತೋ ಗಚ್ಛಂತ್ಯಃ । ಅಮೂಃ ಆಪಃ ಅಭಿಮಾನಿದೇವತಾಃ ಸಂತಿ ತತ್ರ ಮಾಂ ಅಮೃತಂ ಮುಕ್ತಂ ಕೃಧಿ ಕುರು । ತ್ವಂ ಚೇಂದ್ರಾಯ ಪರಿಸ್ರವ ॥

೧೩) ತ್ರಿನಾಕೇ ದುಃಖರಹಿತತ್ವಾನ್ನಾಕಶಬ್ದವಾಚ್ಯವೈಕುಂಠಾನಂತಾಸನ- ಶ್ವೇತದ್ವೀಪಾಖ್ಯ ಲೋಕತ್ರಯವತ್ವಾತ್ ತ್ರಿನಾಕಶಬ್ದವಾಚ್ಯೇ । ತ್ರಿದಿವೇ ತ್ರಯಃ ದಿವಃ ಸದಾ ಪ್ರಕಾಶಮಾನ ಸೂರ್ಯೇಂದ್ವಗ್ನ್ಯಾಖ್ಯಾಃ ಯತ್ರೇತಿ ವ್ಯುತ್ಪತ್ತ್ಯಾ ತ್ರಿದಿವಶಬ್ದವಾಚ್ಯೇ । ಯತ್ರ ಮುಕ್ತೌ ದಿವಃ ಜ್ಯೋತಿರೂಪವಮುಕ್ತಸಮೂಹಸ್ಯ ಅನುಕಾಮಮ್ ಇಚ್ಛಾನುಸಾರೇಣ ಚರಣಂ ಸಂಚರಣಮ್ ಅಸ್ತಿ । ಯತ್ರ ಮುಕ್ತೌ ಜ್ಯೋತಿಷ್ಮಂತಃಲೋಕಾಃ ತ್ರಿನಾಕಪದೇನ ಸೂಚಿತಾಃ ಸಂತಿ । ತತ್ರೇತ್ಯಾದಿ ಪೂರ್ವವತ್ ॥

೧೪) ಯತ್ರ ಮುಕ್ತೌ ಕಾಮಾಃ ಸ್ವಯೋಗ್ಯವಿಷಯೇಚ್ಛಾಃ ನಿಕಾಮಾಃ ನಿತರಾಂ ಕಾಮ್ಯಂತ ಇತಿ ನಿಕಾಮಾ ವಿಷಯಾಶ್ಚ ಸಂತಿ । ಅನ್ಯಥಾ ಸತ್ಯಸಂಕಲ್ಪತ್ವಾಭಾವ ಪ್ರಸಂಗಾತ್ । ಯತ್ರ ಮುಕ್ತೌ ಬ್ರಧ್ನಸ್ಯ ಸೂರ್ಯಸ್ಯ ವಿಷ್ಟಪಂ ಸ್ಥಾನಮ್ । ಯತ್ರ ಮುಕ್ತೌ ಸ್ವಧಾ ಚ ಸ್ವಧಾಶಬ್ದವಾಚ್ಯಪಿತೃಪತ್ನೀ ಚ ಶಬ್ದೇನ ಸ್ವಾಹಾ ಶಬ್ದವಾಚ್ಯಾಗ್ನಿಪತ್ನೀ ಚ । ತೃಪ್ತಿಶ್ಚಾಸ್ತಿ । ತತ್ರೇತ್ಯಾದಿ ಪೂರ್ವವತ್ ॥

೧೫) ಯತ್ರ ಮುಕ್ತೌ ಭಗವತೋ ಮಧ್ಯದಕ್ಷಿಣಪಕ್ಷವಾಮಪಕ್ಷಶಿರೋರೂಪಾಃ ತತ್ ಪ್ರತಿ-ಬಿಂಬಭೂತಜೀವಾನಾಂ ಪಂಚಾವಯವರೂಪಾಶ್ಚ । ಆನಂದಾಃ ಮೋದಾಃ ಮುದಃ ಪ್ರಮುದಶ್ಚ । ಆಪ್ತಾಃ ಭಗವತೋ ನಿರವಧಿಕಸಂಪೂರ್ಣಾಃ । ಅನ್ಯೇಷಾಂ ಯಥಾಯೋಗ್ಯಂ ಸಂಪೂರ್ಣಾಃ ಆಸತೇ । ಯತ್ರ ಕಾಮಸ್ಯ ಇಚ್ಛಾಯಾಃ ಕಾಮಾಃ ಕಾಮ್ಯಾಃ ವಿಷಯಾಶ್ಚ ಆಪ್ತಾಃ ಆಸತೇ । ಪೂರ್ವೋಕ್ತವಿಷಯನಿರಪೇಕ್ಷಸುಖಚತುಷ್ಟಯಾತ್ ಪಂಚಮಸ್ಯ ವಿಷಯಾಭಿ-ವ್ಯಂಗ್ಯಪ್ರಿಯನಾಮಕಸುಖಸ್ಯ ವ್ಯಂಜಕವಿಷಯಸಾಪೇಕ್ಷತಯಾ ವಿಜಾತೀಯತ್ವಾತ್ಪಾರ್ಥಕ್ಯ-ಕಥನಮ್ । ತತ್ರೇತ್ಯಾದಿಪೂರ್ವವತ್ ॥

೧೬) ಹೇ ಸೋಮ ಪವಮಾನ ! ಯಃ ಪರಮಾತ್ಮಾ ಇಂದೋಃ ಪವಮಾನಸ್ಯ ತೇ ತವ ಅನುಧಾಮಾನಿ ಅನುಕೂಲಸ್ಥಾನಾನಿ ಅಕ್ರಮೀತ್ ಆಕ್ರಮ್ಯ ತಸ್ಥೌ । ದೇಹೇಽಪಿ ಯತ್ರ ಪವನೋಽತ್ರೇತ್ಯಾದಿನೋಕ್ತಸ್ಯ ಯತ್ರ ಯತ್ರ ಮುಖ್ಯಪ್ರಾಣಸ್ತಿಷ್ಠತಿ ತತ್ರ ತತ್ರ ಹರಿರಪಿ ತಿಷ್ಠತೀತಿ ನಿಯಮಸ್ಯ ಪ್ರಾಮಾಣಿಕತ್ವಸೂಚನಾಯೇದಮುದಿತಮ್ । ಯಶ್ಚ ತೇ ಮನಃ ಅವಿಧ್ಯತ್ ಮನೋಂತಃ ಸರ್ವದಾ ತಿಷ್ಠತೀತ್ಯರ್ಥಃ । ತಂ ಸುಪ್ರಜಾಃ ಉತ್ತಮಜೀವಾಃ ಇತಿ ಮದುಕ್ತಪ್ರಕಾರೇಣ ಆಹುಃ । ನ ಕೇವಲಮಿದಂ ಮಹಿಮದ್ವಯಂ ಮಯ್ಯೈವ ಕಥ್ಯತೇ । ಕಿಂತು ಇಮಮೇವ ಮಹಿಮಾನಂ ಸರ್ವೇಽಪಿ ಸಜ್ಜನಾ ವದಂತೀತಿ ಭಾವಃ । ತಸ್ಮೈ ಇಂದ್ರಾಯ ಮಾಂ ಪರಿಸ್ರವ ॥

೧೭) ನನು ಸೋಮಸೂಕ್ತೇಽಸ್ಮಿನ್ ಕಥಂ ಮುಖ್ಯಪ್ರಾಣಸ್ಯ ಪ್ರಾರ್ಥನಮಿತ್ಯತಃ ಸ ಏವ ಮುಖ್ಯತಃ ಸೋಮಲತಾಭಿಮಾನಿತ್ವಾನ್ ಮುಖ್ಯಃ ಸೋಮಃ । ಚಂದ್ರಸ್ತ್ವವಾಂತರಾಭಿಮಾನಿ-ತ್ವಾದಮುಖ್ಯಸೋಮ ಇತಿ ಪ್ರತಿಪಾದಯನ್ ಸೋಮಯಾಗಾದಿನಿವೃತ್ತಿಕರ್ಮಸಾಧ್ಯಂ ಮೋಕ್ಷಂ ಮುಖ್ಯಪ್ರಾಣಂ ಪ್ರತಿ ಪ್ರಾರ್ಥಯತೇ ॥ ಋಷ ಇತಿ ॥ ಮಂತ್ರಕೃತಾಮ್ ಋಷ್ಯಾದೀನಾಂ ಸ್ತೋಮೈಃ ನಮಸ್ಯ ನಮಸೋ ಯೋಗ್ಯ ನಮಸ್ಕಾರ್ಯೇತ್ಯರ್ಥಃ । ಕಶ್ಯಪ ಕಾತ್ ಪರಮಾತ್ಮನಃ ಪ್ರಾಪ್ಯಸ್ಯ ಶಂಪದವಾಚ್ಯಸುಖಸ್ಯ ಯೋಗ್ಯಾಃ ಕಶ್ಯಾಃ ಮುಕ್ತಿ-

ಯೋಗ್ಯಾಃ । ತಾಂ ಪಾತೀತಿ ಕಶ್ಯಪಋಷೇ ಸರ್ವಜ್ಞ! ಪವಮಾನಪ್ರಾಯಪಾಠವಿರೋಧೇನ ಋಷ್ಯಂತರಸ್ಯಾತ್ರಾಗ್ರಾಹ್ಯತ್ವಾದುಕ್ತ ಏವಾರ್ಥಃ । ಗಿರಃ ವೇದಪುರಾಣದಿವಾಚಃ । ಉದ್ವರ್ಧಯನ್ ಅಪವ್ಯಾಖ್ಯಾಪ್ರತ್ಯಾಖ್ಯಾನೇನ ಯಥಾಸ್ಥಿತಾರ್ಥಕಥನೇನ ಚ ವರ್ಧಯನ್ ವೀರುಧಾಂ ಸೋಮಲತಾನಾಂ ಪತಿಃ ಮುಖ್ಯಸ್ವಾಮೀ ಯೋ ಭವಾನ್ ರಾಜಾನಂ ಚಂದ್ರಂ ಸೋಮಂ ಸೋಮಲತಾಯಾ ಅವಾಂತರಾಭಿಮಾನಿತ್ವಾತ್ ಸೋಮಪದವಾಚ್ಯಮ್ । ಜಜ್ಞೇ ಜನಯಾಮಾಸ । ಮುಖ್ಯಸೋಮಸ್ಯ ಮುಖ್ಯಪ್ರಾಣಸ್ಯ ಚಂದ್ರೇಪ್ಯಾವಿಷ್ಟರೂಪೇಣ ಸಹಜನನಮಸ್ತೀತಿ ಸೂಚನಾಯ ಜಜ್ಞ ಇತ್ಯುಕ್ತಮ್ । ಹೇ ಇಂದೋ ಸ ತ್ವಂ ಇಂದ್ರಾಯ ಮಾಂ ಪರಿಸ್ರವೇತಿ ಯೋಜನಾ ॥

೧೮) ಯತ್ರ ಮುಕ್ತೌ ದಿಶಃ ದಿಗಭಿಮಾನಿದೇವಾಃ ಸಪ್ತ ಸಂತಿ । ಕಲ್ಪೇ ಕಲ್ಪೇ ಮುಕ್ತಾಃ ಏಕಾದಶಸಂಖ್ಯಾಕಾಃ ನಾನಾಸೂರ್ಯಾಶ್ಚ ಸಂತಿ । ಹೋತಾರಃ ಅಗ್ನಿಷ್ಟೋಮಾದಿ ಪ್ರಧಾನಭೂತ ಸಪ್ತಕ್ರತುಷು ಹೋತಾರಃ ಸಪ್ತ ಸಂತಿ । ಆದಿತ್ಯಾಃ ಇಂದ್ರಸ್ಯೈವಾಜ್ಞಯಾ ಅದಿತ್ಯಾ ಪುತ್ರತ್ವೇನ ವೃತಾಃ ದೇವಾಃ ಸಪ್ತ ತೇಷು ಪ್ರಧಾನಕಾ ಇತಿ ವಚನಾತ್ ಮರುದ್ಗಣೇಷು ಪ್ರಧಾನಭೂತಾಃ ಪ್ರವಹಾದ್ಯಾಃ ಯೇ ಸಪ್ತ ಮರುತಶ್ಚ ಸಂತಿ । ಹೇ ಇಂದೋ ಸೋಮ ನಃ ಇಂದ್ರಾಯ ಪರಿಸ್ರವ । ತೇಭಿಃ ಸಹ ಅಭಿರಕ್ಷಃ ಅಸ್ಮಾನಪಿ ಭಗವತ್ ಸಮೀಪಂ ಪ್ರಾಪಯಿತ್ವಾ ತೇಷಾಂ ಪುಂಜೇ ಪ್ರವೇಶ್ಯ ರಕ್ಷೇತಿ ಭಾವಃ ॥

೧೯) ಹೇ ರಾಜನ್ ಸೋಮ ! ಯದ್ಯಸ್ಮಾತ್ತೇ ತವ ತ್ವಾಮುದ್ದಿಶ್ಯೇತ್ಯರ್ಥಃ । ಹವಿಃ ಶೃತಂ ಪಕ್ವಂ ಕೃತಮ್ । ತೇನ ಕಾರಣೇಣ ನಃ ಅಭಿರಕ್ಷ । ಅರಾತಿವಾ ಅರಾತಿಂ ಶತ್ರುಂ ವಾಯತಿ ಕಂಪಯತೀತಿ ಅರಾತಿ ವಾಃ । ವೋವಿಧೂನನೇ ಇತಿ ಸೂತ್ರಾತ್ ವಾಜನಂ ಕಂಪನಮ್ । ರಾತಿಂ ರಕ್ಷಣಂ ವಾಪಯತಿ ಪ್ರಾಪಯತೀತಿ ಅರಾತಿವಾ । ವಾ ಗತಿಗಂಧನಯೋರಿತಿ ಧಾತೋಃ । ಆಮಮತ್ ಆಮಂ ಚಕ್ರಕೃತತಾಪರಹಿತಂ ಪುರುಷಂ ಮಥ್ನಾತೀತಿ ಆಮಮತ್ । ಅತಪ್ತತನೂರ್ನತದಾವೋ ಅಶ್ನುತ ಇತಿ ಶ್ರುತೇಃ । ಯಃ ಪರಮಾತ್ಮಾ ನಃ ಅಸ್ಮಾನ್ ಮಾತಾರೀತ್ ಅತಾರೀತ್ । ಅತಿಕ್ರಮ್ಯ ಗತವಾನ್ । ಯಶ್ಚ ಪರಮಾತ್ಮಾ ನಃ ಅಸ್ಮಾಕಮ್ । ಮೋ ಮಾ ಕಿಂ ನ ಭವತಿ ಕಿಮ್ । ಭವತ್ಯೇವ ಅಸ್ಮಾಕಂ ಸ್ವಾಮೀತಿ ಯಾವತ್ । ಯಶ್ಚ ಪರಮಾತ್ಮಾ ನೋ ಅಸ್ಮಾಕಂ ಮತೇ ಕಿಂಚನ ಜಗತ್ ಮೋ ಮಾ ನ ಭವತಿ । ಸಕಲಜಗದ್ಭಿನ್ನ ಇತಿ ವಾ । ನೋ ಇತಿ ವತ್ ಮೋ ಇತ್ಯಪಿ ನಿಷೇಧಾರ್ಥಕಮವ್ಯಯಮಸ್ತಿ । ಅತಃ ಶ್ರುತಿರುಭಯಥಾಪ್ಯವದದಿತಿ ಜ್ಞಾತವ್ಯಮ್ । ಹೇ ಇಂದೋ ಪವಮಾನ ! ತಸ್ಮೈ ಇಂದ್ರಾಯ ನಃ ಪರಿಸ್ರವೇತಿ ಸಂಬಂಧಃ ॥

೨೦) ಯತ್ರ ವಿಷ್ಣೋರ್ಲೋಕೇ ತತ್ ವಿಷ್ಣ್ವಾಖ್ಯಂ ಪರಮಂ ಉತ್ತಮಂ ಪದಂ ಪದ್ಯತ ಇತಿ ವ್ಯುತ್ಪತ್ತ್ಯಾ ಸಕಲಮುಕ್ತಗಮ್ಯಂ ವಸ್ತು ಸುಕೃತಕರ್ಮಭಿಃ ಸುಷ್ಠುಕೃತಯಜ್ಞಾದಿಕರ್ಮಭಿಃ ದೇವೈಃ ಮಹೀಯತೇ । ಹೇ ಇಂದೋ ! ತತ್ರ ಮಾಮಮೃತಂ ಕೃಧಿ । ಇಂದ್ರಾಯ ಪರಿಸ್ರವ ॥ ಇಮಮೇವಾರ್ಥಂ ಗ್ರಂಥಗೌರವಭಯಾಲ್ಲೇಶತೋ ದರ್ಶಯಾಮೀತಿ ಭಾವೇನೋಕ್ತಮ್ ॥ ತಚ್ಚ ಕಿಂಚಿದ್ವಿವೃಣ್ಮಹ ಇತಿ ॥ ೯೪೨ ॥

**ವಿವರಣೆ–** ವಿಷ್ಣುಲೋಕರೂಪವಾದ ಮೋಕ್ಷಕ್ಕೆ ಮುಕ್ತನಾನಾಜಾತಿಯ ಜೀವರ ಆಧಾರತ್ವ ರೂಪ ಮಹಾತ್ಮ್ಯವನ್ನೂ, ಅಂತಹ ಮೋಕ್ಷವನ್ನು ದೊರಕಿಸಿಕೊಡುವ ಮುಖ್ಯಪ್ರಾಣನ ಮಹಾತ್ಮ್ಯವನ್ನೂ, ಮೋಕ್ಷದಲ್ಲಿ ಪ್ರಾಪ್ಯನಾದ ಭಗವಂತನ ಮಹಾತ್ಮ್ಯವನ್ನೂ ಕೂಡ ವಿಸ್ತಾರವಾಗಿ ಪ್ರತಿಪಾದನೆ ಮಾಡುವ ಮುಮುಕ್ಷುಗಳಾದ ದೇವತೆಗಳ ಮತ್ತು ಋಷಿಗಳ ಪ್ರಾರ್ಥನಾರೂಪವಾದ ಆ ಕಾರಣದಿಂದಲೇ ಇಂದಿಗೂ ಮುಮೂರ್ಷುಗಳ ಕಿವಿಯಲ್ಲಿ ಜಪಿಸಲ್ಪಡುವ ನಾನಾನಂ ಇತ್ಯಾದಿ ನಾಲ್ಕು ವರ್ಗಗಳಿಂದ ಕೂಡಿದ ಸೋಮಸೂಕ್ತದ ಅರ್ಥವನ್ನು ಹೇಳಲು ಮುಂದಿನ ಗ್ರಂಥಸಂದರ್ಭವು ಪ್ರವೃತ್ತವಾಗಿದೆ. ಆದರಲ್ಲಿ ಮಂದರಿಗೂ ಸುಲಭವಾಗಿ ಅರ್ಥವಾಗುವುದಕ್ಕೋಸ್ಕರ ವರ್ಗಗಳ ವಾಕ್ಯವನ್ನು ಉದ್ಧರಿಸಿ ಆದರ ಅರ್ಥವನ್ನು ನಿರೂಪಿಸುತ್ತೇವೆ ಎಂದು ಸುರೋತ್ತಮತೀರ್ಥರು ಪ್ರತಿಜ್ಞೆ ಮಾಡಿ ಅರ್ಥವನ್ನು ನಿರೂಪಿಸುತ್ತಾರೆ. ಅದನ್ನು ಅನುಸರಿಸಿ ಇಲ್ಲಿ ಯಥಾಮತಿ ಅನುವಾದವನ್ನು ಮಾಡಲಾಗಿದೆ. ಈ ಸೋಮಸೂಕ್ತವು ಒಂಭತ್ತನೆಯ ಮಂಡಲದ 112, 113 ಮತ್ತು 114ನೆಯ ಸೂಕ್ತಗಳಾಗಿದೆ. ಆದರಲ್ಲಿ ಮೊದಲನೆಯ ಮಂತ್ರ

'ನಾನಾನಂ ವಾ ಉ ನೋ ಧಿಯೋ ವಿವ್ರತಾನಿ ಜನಾನಾಂ । ತಕ್ಷಾರಿಷ್ಟಂ ರುತಂ ಭಿಷಗ್ಬ್ರಹ್ಮಾಸುನ್ವಂತಮಿಚ್ಛತಿ। ಇಂದ್ರಾಯೇಂದೋ ಪರಿಸ್ರವ ॥೧॥'

ಹೇ ಇಂದೋ= ಎಲೈ ಇಂದು ನಾಮಕ ಪವಮಾನನೇ ಯಾವ ವಿಷ್ಣುಲೋಕದಲ್ಲಿ ನಃ= ಜೀವರಾದ ನಮಗೆ, ಎಂದರೆ ನಮ್ಮ ಜಾತಿಯವರಾದ ನಮಗಿಂತಲೂ ಮೊದಲು ಮುಕ್ತರಾದ ನಾನಾವಿಧ ಜೀವರಿಗೆ, ಧಿಯಃ= ಬುದ್ಧಿಯ, ನಾನಾನಂ= ನಾನಾವಿಧವಾದ ಚೇಷ್ಟೆಗಳು, ಋಚಾಂತ್ವಃಪೋಷಮಾಸ್ತೇ ಎಂದು ಒಬ್ಬ ಜೀವನಿಗೆ ಋಗಧ್ಯಯನ ವ್ಯಾಪಾರ, ಸತತ್ರಪರ್ಯೇತಿ ಇತ್ಯಾದಿ ವಾಕ್ಯಕ್ಕೆ ಅನುಸಾರವಾಗಿ ಸಾಮಗಾನ, ಪುರಾಣ ಪಠನ, ಹರಿಧ್ಯಾನ, ಸರ್ವತ್ರ ಸಂಚಾರ ಮೊದಲಾದ ಚೇಷ್ಟೆಯು, ಅಸ್ತಿ= ಇದೆಯೋ, ಉ ವೈ= ಅದು ಪ್ರಸಿದ್ಧವಾದುದು. ಯಾವ ಮುಕ್ತಿಯಲ್ಲಿ ನಃ= ಜೀವರಾದ ನಮಗೆ, ವಿ ವ್ರತಾನಿ= ಆನಂದೋದ್ರೇಕದಿಂದ ಮಾಡಲ್ಪಡುವ ವಿಶಿಷ್ಟವಾದ ಯಜ್ಞದೀಕ್ಷಾದಿ ವ್ರತಗಳು ಇವೆಯೋ, ಉವೈ= ಅವು ಇದ್ದೇ ಇವೆ. ಈ ಅರ್ಥವು ಶ್ರುತಿಪುರಾಣಾದಿಗಳಲ್ಲಿ ಪ್ರಸಿದ್ಧವಾದುದೆಂದು ತೋರಿಸಲು, ಆದ್ದರಿಂದಲೇ ಅವಧಾರಣವನ್ನು ಹೇಳಲು ಉ ಮತ್ತು ವೈ ಎಂಬ ಎರಡು ಅವ್ಯಯಗಳಿವೆ. ಯಾವ ಮುಕ್ತಿಯಲ್ಲಿ ತಕ್ಷಾ= ಮುಕ್ತನಾದ ಬಡಗಿಯು, ರಿಷ್ಟಂ= ಮುಕ್ತಿಸ್ಥಾನದಲ್ಲಿ ಇರುವ ಚಿನ್ಮಯವಾದ ವೃಕ್ಷಗಳು ಮತ್ತು ಪಕ್ಷಿಗಳು ಇವುಗಳಿಂದ ಲೀಲೆಯಿಂದ ಕೆಳಗೆ ಬಿದ್ದ ಬಿದಿರು, ಬಾಣ ಮತ್ತು ರತ್ನಾದಿ ಖಂಡಗಳನ್ನು ಮುಕ್ತರ ಲೀಲೆಗೆ ಉಚಿತವಾದ ರತ್ನಮಯವಾದ ಬಿಲ್ಲುಗಳನ್ನು ಮಾಡಲು ಇಚ್ಛತಿ= ಇಚ್ಛಿಸುತ್ತಾನೋ, ಭಿಷಕ್= ಮುಕ್ತ ವೈದ್ಯನು ಆ ಬಿದ್ದ ಚೂರುಗಳನ್ನು ಅವುಗಳ ಮೊದಲಿನ ಸ್ಥಾನದಲ್ಲಿಯೇ ಸೇರಿಸಲು ಋತಂ= ಲೀಲೆಯಿಂದ ಮಾಡುವ ಸಂಧಾನಕಾರಕ

ಮಂತ್ರಸ್ವರವನ್ನು ಇಚ್ಛತಿ= ಇಚ್ಛಿಸುತ್ತಾನೆಯೋ ಆದ್ದರಿಂದಲೇ ಬಡಗಿ ಮತ್ತು ವೈದ್ಯರ ವ್ಯಾಪಾರವನ್ನು ಒಟ್ಟಿಗೆ ಹೇಳಿದ್ದಾರೆ. ಯಾವ ಮೋಕ್ಷದಲ್ಲಿ ಬ್ರಹ್ಮಾ= ಯಜ್ಞಶಾಲೆಯಲ್ಲಿರುವ ಬ್ರಹ್ಮನು ಸುನ್ವಂತಂ= ಸೋಮಾಭಿಷವವನ್ನು ಮಾಡುವ ಋತ್ವಿಜನನ್ನು ಇಚ್ಛತಿ= ಬಯಸುತ್ತಾನೆಯೋ, ಇಲ್ಲಿಯೂ ಸಹ ಪುನಃ ಲತೆಯನ್ನು ಪೋಷಿಸಲು ವೈದ್ಯನ ವ್ಯಾಪಾರವಿರುವುದರಿಂದ ದೇಹಲೀ ದೀಪ ನ್ಯಾಯದಿಂದ ವೈದ್ಯನ ವ್ಯಾಪಾರವನ್ನು ಎರಡು ಕಡೆಗಳಲ್ಲಿಯೂ ತೆಗೆದುಕೊಳ್ಳಬೇಕು. ತತ್ರ= ಅಂತಹ ಮುಕ್ತಿಸ್ಥಾನದಲ್ಲಿ ಇಂದ್ರಾಯ= ಪರಮೈಶ್ವರ್ಯಸಂಪನ್ನನಾದ ಆದ್ದರಿಂದಲೇ ಸಕಲ ಮುಕ್ತರಿಗೆ ಒಡೆಯನಾದ ಪರಮಾತ್ಮನಿಗಾಗಿ, ಎಂದರೆ ಪರಮಾತ್ಮನ ಸೇವೆಗಾಗಿ, ಮಾಂ= ನನ್ನನ್ನು ಪರಿಸ್ರವ= ಎಲ್ಲ ಕಡೆಗಳಿಂದಲೂ ಕರೆದುಕೊಂಡು ಹೋಗು ಎಂದು ಮಂತ್ರದ ಅರ್ಥ. ಅಲ್ಲಿಯೂ ಕೂಡ ಭಗವಂತನು ಮುಕ್ತರಿಗೆ ಸ್ವಾಮಿಯೇ ಹೊರತು ಮುಕ್ತಾಭಿನ್ನನಲ್ಲ ಎಂದು ಸೂಚಿಸಲು ಇಂದ್ರಪದಪ್ರಯೋಗವಿದೆ. ಇಂದ್ರಾಯ ಎಂಬ ಚತುರ್ಥಿ ವಿಭಕ್ತಿಯು ಅವರ ಸೇವೆಗಾಗಿಯೇ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗು, ಹೊರತು ಭೋಗಾರ್ಥವಾಗಿ ಅಲ್ಲ ಎಂದು ಸೂಚಿಸುತ್ತದೆ. ಕೇವಲ ನಿನ್ನ ಪ್ರೇರಣೆ ಮಾತ್ರದಿಂದ ನಾನು ಹೋಗಲು ಸಮರ್ಥನಲ್ಲ, ನೀನು ಕರೆದುಕೊಂಡು ಹೋದರೆ ಮಾತ್ರ ಹೋಗುತ್ತೇನೆ ಎಂದು ಸೂಚಿಸಲು ಪರಿಸ್ರವ ಎಂದು ಪವಮಾನನ ಕ್ರಿಯೆಯನ್ನೇ ವಿಧಾನ ಮಾಡುವ ವಾಕ್ಯಪ್ರಯೋಗವಿದೆ ಎಂದೂ ತಿಳಿಯಬೇಕು.

'ಜರತೀಭಿರೋಷಧೀಭಿಃ ಪರ್ಣೇಭಿಃ ಶಕುನಾನಾಂ । ಕಾರ್ಮಾರೋ
ಅಶ್ಮಭಿರ್ದ್ಯುಭಿರ್ಹಿರಣ್ಯವಂತಮಿಚ್ಛತಿ । ಇಂದ್ರಾಯೇಂದೋಪರಿಸ್ರವ ॥ ೨ ॥

ಹಿಂದೆ ಹೇಳಿದ ಮಂತ್ರದ ಉತ್ತರಾರ್ಧದ ಪ್ರಮೇಯವು ಅಪ್ರಸಿದ್ಧ-ವಾಗಿರುವುದರಿಂದ ಪುನಃ ಅದನ್ನು ಜರತೀಭಿಃ ಎಂಬ ಮಂತ್ರದಿಂದ ಸ್ಪಷ್ಟಪಡಿಸುತ್ತಾರೆ. ಯಾವ ಮೋಕ್ಷದಲ್ಲಿ ಜರತೀಭಿಃ= ಅನಾದಿ ಕಾಲದಿಂದ ಅನಂತ ಕಾಲದಲ್ಲಿಯೂ ಇರುವುದರಿಂದ ಬಹುಕಾಲ ಜೀವಿಸುವುದರಿಂದ ಹಳೆಯದಾದ, ಓಷಧೀಭಿಃ= ಫಲಪ್ರಾಕಾಂತವಾದ ಬಿದಿರು, ಶರ ಮೊದಲಾದವುಗಳಿಂದ, ಶಕುನಾನಾಂ= ಪಕ್ಷಿಗಳ, ಪರ್ಣೇಭಿಃ= ಗರಿಗಳಿಂದ, ದ್ಯುಭಿಃ= ಕಾಂತಿಯುಳ್ಳ, ಅಶ್ಮಭಿಃ= ರತ್ನಗಳಿಂದ, ಕಾರ್ಮಾರಃ= ಬಡಗಿಯು, ಹಿರಣ್ಯವಂತಂ= ಮಧ್ಯೆ ಮಧ್ಯೆ ಅಲಂಕಾರಕ್ಕಾಗಿ ಸುವರ್ಣ ಖಚಿತವಾದಂತಹ ಬಿಲ್ಲನ್ನು, ರಥವನ್ನು, ಬಾಣಗಳನ್ನು, ಇಚ್ಛತಿ= ಮಾಡಲು ಇಚ್ಛಿಸುತ್ತಾನೆಯೋ ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗು ಎಂದು ಹಿಂದಿನಂತೆ ಅನ್ವಯ.

'ಕಾರುರಹಂ ತತೋಭಿಷಗುಪಲಪ್ರಕ್ಷಿಣೀ ನನಾ । ನಾನಾಧಿಯೋ
ವಸೂಯವೋನುಗಾ ಇವ ತಸ್ಥಿಮೇಂದ್ರಾಯೇಂದೋ ಪರಿಸ್ರವ ॥ ೩ ॥'

ಮೋಕ್ಷದಲ್ಲಿ ಬಡಗಿ ಮೊದಲಾದವರು ಹೇಗೆ ಇರುತ್ತಾರೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಯಾವ ಮೋಕ್ಷದಲ್ಲಿ ಅಹಂ= ನಾನು, ಮುಕ್ತ್ಯನಂತರ ಮಪಿ= ಮುಕ್ತ್ಯನಂತರವೂ ಕೂಡ, ಕಾರುಃ= ಬಡಗಿಯ ಜಾತಿಯನ್ನು ಹೊಂದಿದವನೇ ಆಗಿದ್ದೇನೆ, ಎಂದು ಇದು ತ್ವಷ್ಟೃವಿನ ವಚನ, ಭಿಷಕ್= ಅಶ್ವಿನ್ಯಾದಿ ದೇವಸಮೂಹವು, ವೈದ್ಯಜಾತ್ಯಾಕ್ರಾಂತವಾಗಿಯೇ ಇದೆ. ಉಪಲಪ್ರಕ್ಷಿಣೀ= ಲೀಲಾರ್ಥವಾಗಿ ಅಪೇಕ್ಷಿತವಾದ ಪಟ್ಟಣದಲ್ಲಿ ಕಲ್ಲನ್ನು ಎಸೆಯುವ ಯಂತ್ರವು, ನನಾ= ನಾನಾ= ಬಿಲ್ಲು, ಮರ ಮತ್ತು ನೂಲುಗಳಿಂದ ಮಾಡಲ್ಪಟ್ಟಿದ್ದಾಗಿ ನಾನಾವಿಧವಾಗಿದೆಯೋ. ಯಾವ ಮೋಕ್ಷದಲ್ಲಿ ನಾನಾಧಿಯಃ= ಜೀವರಿಗೆ ಮೋಕ್ಷದಲ್ಲಿಯೂ ಭೇದವಿರುವುದರಿಂದ ನಾನಾ ಬುದ್ಧಿಯುಳ್ಳ ಅಥವಾ ಜೀವೇಶ್ವರಭೇದಜ್ಞಾನವುಳ್ಳ, ವಸೂಯವಃ= ವಸುಗಳು ಅಥವಾ ಪರವಸ್ತುವಾದ ನಾರಾಯಣನನ್ನು ಸದಾ ಸಂಬಂಧಿಸಿರುತ್ತಾರೆ ಎಂಬ ವ್ಯುತ್ಪತ್ತಿಯಿಂದ ಮುಕ್ತರಾದ ನಾವೆಲ್ಲರೂ, ಅನುಗಾ ಇವ= ಹರಿಯನ್ನು ಹಿಂಬಾಲಿಸುವ ಶೀಲವುಳ್ಳವರಾಗಿ, ತಸ್ಥಿಮ= ಇರುತ್ತೇವೆಯೋ. ಮಧ್ಯದಲ್ಲಿ ಕುಳಿತ ನಾರಾಯಣನ ಸುತ್ತಲೂ ಪರಿವಾರದ ರೀತಿಯಲ್ಲಿ ಪೂಜೆಯನ್ನು ಸ್ವೀಕರಿಸುವ ಸಮಯದಲ್ಲಿ ಅನುಗಮನವಿಲ್ಲದಿರುವುದರಿಂದಲೂ ಭೂಮಿಯಲ್ಲಿ ಅವತಾರ ಮಾಡಿದ ಸಮಯದಲ್ಲಿಯೂ ಸಹ ಯಾವಾಗಲೂ ಅನುಗಮನವಿಲ್ಲದಿರುವುದರಿಂದಲೂ ಅನುಗಾ ಇವ= ಅನುಗಮನ ಉಳ್ಳವರಂತೆ ಎಂದು ಹೇಳಲ್ಪಟ್ಟಿದೆ. ಹೇಗೆ ಪ್ರಭುವನ್ನು ಹಿಂಬಾಲಿಸಿ ಹೋಗುವವರು ಅವನ ಆಜ್ಞಾಧಾರಿಗಳಾದ ಸೇವಕರೋ ಹಾಗೆ ನಾವೂ ಸಹ ಹರಿಯ ಆಜ್ಞಾಧಾರಕರಾದ ಸೇವಕರು ಎಂದು ತಾತ್ಪರ್ಯ. ಉಳಿದ ಅರ್ಥವು ಮೊದಲಿನಂತೆಯೇ.

'ಅಶ್ವೋವೋಳ್ಹಾ ಸುಖಂ ರಥಂ ಹಸನಾಮುಪಮಂತ್ರಿಣಃ । ಶೇಪೋ ರೋಮಣ್ವಂತೌ ಭೇದೌ ವಾರಿನ್ಮಂಡೂಕ ಇಚ್ಛತೀಂದ್ರಾಯೇಂದೋ ಪರಿಸ್ರವ ॥ ೪ ॥'

ಯಾವ ಮೋಕ್ಷದಲ್ಲಿ ಅಶ್ವಃ= ಅಶ್ವವು, ಸುಖಂ= ಸುಖವು ಉಂಟಾಗುವಂತೆ, ರಥಂ= ರಥವನ್ನು, ವೋಳ್ಹಾ= ವೋಢಾ= ಎಳೆಯುತ್ತದೆಯೋ, ಸ್ತ್ರೀಭಿರ್ವಾಯಾನೈರ್ವಾ ಎಂಬ ಉಪನಿಷದ್ ವಾಕ್ಯದಿಂದ ಈ ವಾಕ್ಯವು ಸಂವಾದವನ್ನು ಹೊಂದುತ್ತದೆ, ಲಸದ್ವಿಮಾನಾವಲಿಭಿರ್ಮಹಾತ್ಮನಾಂ ಎಂಬ ಭಾಗವತ ವಚನದಿಂದಲೂ ಮುಕ್ತರಿಗೆ ರಥಾದಿಗಳಲ್ಲಿ ಕುಳಿತು ಗಮನವಿದೆ ಎಂದು ಸಿದ್ಧವಾಗುತ್ತದೆ. ರಥವು ಅಶ್ವದಿಂದಲೇ ಎಳೆಯಲ್ಪಡಬೇಕಾದುದರಿಂದ ಮುಕ್ತವಾದ ಅಶ್ವವು ಮುಕ್ತರಾದ ಇಂದ್ರಾದಿಗಳ ರಥವನ್ನು ಆನಂದೋದ್ರೇಕದಿಂದಲೇ ಎಳೆಯುತ್ತದೆ. ದುಃಖಲೇಶವೂ ಅಲ್ಲಿ ಇಲ್ಲ ಎಂದು ಸೂಚಿಸಲು ಸುಖಂ ಎಂದು ಕ್ರಿಯಾವಿಶೇಷಣವಾಗಿ ಪ್ರಯೋಗಿಸಲ್ಪಟ್ಟಿದೆ. ಶೇಪೌ= ಸ್ಥೂಲವಾದ ವೃಷಣಗಳನ್ನು ಹೊಂದಿರುವಂತಹ, ಜ್ಞಾನಾನಂದಮಯವಾದ್ದರಿಂದ ಅತಿವರ್ತುಲವಾದ್ದರಿಂದ ಫಕಾರಕ್ಕೆ ಪಕಾರವು ಬಂದಿದೆ. ರೋಮಣ್ವಂತೌ= ಎಲ್ಲ ಅವಯವಗಳಲ್ಲಿಯೂ ರೋಮವನ್ನು ಹೊಂದಿರುವ, ಭೇದೌ= ಪರಸ್ಪರ ಶಿರಸ್ತಾಡನವನ್ನು

ಮಾಡುವ ಟಗರುಗಳು ಉಪಮಂತ್ರಿಣಃ ಹರಿಯ ಸಮೀಪದಲ್ಲಿ ಸೇವೆಯನ್ನು ಮಾಡುವ ಬ್ರಹ್ಮೇಂದ್ರಾದಿ ಮುಕ್ತಸಮೂಹಕ್ಕೆ, ಹಸನಾಂ= ಹಾಸಂ= ಮಂದಹಾಸವನ್ನು, ಸುಖಂ= ಸುಖವಾಗಿಯೇ, ವೋಢಾರೌ= ಉಂಟು ಮಾಡುತ್ತವೆಯೋ. ಹೇಗೆ ಸಂಸಾರದಲ್ಲಿ ಬ್ರಹ್ಮಸಭೆಯಲ್ಲಿಯೂ ಮತ್ತು ಇಂದ್ರ ಸಭೆಯಲ್ಲಿಯೂ ಒಮ್ಮೊಮ್ಮೆ ವಿನೋದ ಸಂದರ್ಭದಲ್ಲಿ ಆ ಲೋಕದಲ್ಲಿರುವ ಜ್ಞಾನಿಗಳು ಮೇಷಾದಿ ರೂಪವನ್ನು ಧರಿಸಿ ಯುದ್ಧವನ್ನು ಮಾಡುತ್ತಾರೆಯೋ ಹಾಗೆಯೇ ಮೋಕ್ಷದಲ್ಲಿಯೂ ಆನಂದೋದ್ರೇಕದಿಂದಲೇ ಯುದ್ಧವನ್ನು ಮಾಡಿ ಬ್ರಹ್ಮಾದಿ ಸಮೂಹಕ್ಕೆ ಮಂದಹಾಸವನ್ನು ಉಂಟು ಮಾಡುತ್ತವೆ ಎಂದು ಅಭಿಪ್ರಾಯ. ಇತ್= ಇತ್ಥಂ= ಈ ರೀತಿಯಾಗಿ ಮೋಕ್ಷದಲ್ಲಿಯೂ ಸಹ ಬಡಗಿ, ವೈದ್ಯ, ಓಷಧಿಗಳು, ಅಶ್ವ, ಮೇಷ ಮೊದಲಾದವುಗಳಿಗೆ ತಮ್ಮ ತಮ್ಮ ಜಾತಿಗೆ ಯೋಗ್ಯವಾದ ಲೀಲೆ ಇರುವಂತೆ ಮಂಡೂಕಃ ಮಂಡೂಕವು, ವಾಃ ಉದಕವನ್ನು, ಇಚ್ಛತಿ= ಬಯಸುತ್ತದೆಯೋ, ರಥಗಳು ಹತ್ತಿರ ಬಂದಾಗ ತೀರದಲ್ಲಿರುವ ಮಂಡೂಕಗಳು ನೀರನ್ನು ಪ್ರವೇಶಿಸಲು ಇಚ್ಛಿಸುತ್ತವೆ ಎಂದು ಅಭಿಪ್ರಾಯ. ಉಳಿದ ಮಂತ್ರಭಾಗಕ್ಕೆ ಹಿಂದಿನಂತೆಯೇ ಅರ್ಥ.

ಶರ್ಯಣಾವತಿ ಸೋಮಮಿಂದ್ರಃ ಪಿಬತು ವೃತ್ರಹಾ । ಬಲಂ ದಧಾನ ಆತ್ಮನಿ
ಕರಿಷ್ಯನ್ ವೀರ್ಯಂ ಮಹದಿಂದ್ರಾಯೇಂದೋ ಪರಿಸ್ರವ ॥ ೫ ॥'

ಯಾವ ಮೋಕ್ಷದಲ್ಲಿ ಆತ್ಮನಿ= ತನ್ನಲ್ಲಿ ಬಲಂ ದಧಾನಃ ಬಲವನ್ನು ಹೊಂದುವವನಾಗಿ, ಮಹದ್ವೀರ್ಯಂ= ಮಹಾಸಾಮರ್ಥ್ಯವನ್ನು ಕರಿಷ್ಯನ್= ಪಡೆಯುವವನಾಗಿ, ವೃತ್ರಹಾ ಇಂದ್ರಃ ವೃತ್ರಸಂಹಾರಕನಾದ ಇಂದ್ರನು, ಈ ಇಂದ್ರನಿಗೆ ಮುಕ್ತಿಯು ಮುಂದೆ ಆಗಬೇಕಾಗಿರುವುದರಿಂದ ಕರಿಷ್ಯನ್ ಎಂದು ಭವಿಷ್ಯತ್ಕಾಲಪ್ರಯೋಗವಿದೆ, ಶರ್ಯಣಾವತಿ= ಶರ್ಯಣಾ ಎಂದರೆ ಸೋಮರಸವನ್ನು ಶೋಧಿಸುವ ವಸ್ತ್ರ, ಅದನ್ನು ಹೊಂದಿದ ಪಾತ್ರೆಯಲ್ಲಿರುವ ಸೋಮಂ= ಸೋಮರಸವನ್ನು, ಮುಕ್ತರು ಲೀಲೆಯಿಂದ ಮಾಡುವ ಯಜ್ಞದಲ್ಲಿ ಪಿಬತು= ಕುಡಿಯುವನೋ, ವ್ಯತ್ಯಯೋ ಬಹುಲಂ ಎಂಬ ವಚನದಿಂದ ಪಾಸ್ಯತಿ ಎಂಬ ಲುಟ್ ಪ್ರಯೋಗಕ್ಕೆ ಬದಲಾಗಿ ಪಿಬತು ಎಂಬ ಲೋಟ್ ಪ್ರಯೋಗವಿದೆ. ಉಳಿದ ಅರ್ಥ ಮೊದಲಿನಂತೆಯೇ.

'ಆಪವಸ್ವ ದಿಶಾಂಪತ ಆರ್ಜೀಕಾತ್ ಸೋಮ ಮೀಢ್ವಃ । ಋತವಾಕೇನ ಸತ್ಯೇನ
ಶ್ರದ್ಧಯಾ ತಪಸಾ ಸುತ ಇಂದ್ರಾಯೇಂದೋ ಪರಿಸ್ರವ ॥ ೬ ॥'

ದಿಶಾಂ ಪತೇ= ಎಲೈ ಸೋಮನೇ, ಸೋಮ= ಸೋಮಾಭಿಮಾನಿಯಾದುದರಿಂದ ಸೋಮಪದವಾಚ್ಯನಾದ ಪವಮಾನನೇ, ಆರ್ಜೀಕಾತ್= ಸೋಮರಸವನ್ನು ಸಂಪಾದಿಸುವ ಋತ್ವಿಜನಿಂದ ಎಂದರೆ ಸೋಮರಸವನ್ನು ಪಡೆಯುವ ಸಲುವಾಗಿ ಸೋಮಲತೆಯನ್ನು ಅರೆಯುವ ಋತ್ವಿಜನಿಂದ ಎಂದು ಅರ್ಥ, ಸುತಃ ಸೋಮರಸದ

ಅಭಿಶ್ರವಣವನ್ನು ಹೊಂದಿದವನಾಗಿ ಆಕಾರಣದಿಂದಲೇ ಮೀಢ್ವ= ರಸಸೇಚನ ಶೀಲನಾದ ನೀನು ಮೋಕ್ಷದಲ್ಲಿಯೂ ಮಂದವಾಯು ರೂಪದಿಂದ ರಸದ ಸೂಕ್ಷ್ಮಾಂಶವನ್ನು ಸಂಗ್ರಹಿಸಿ ದಿಕ್ಕು ದಿಕ್ಕುಗಳಲ್ಲಿರುವ ಮುಕ್ತರನ್ನು ಅದರಿಂದ ಚಿಮುಕಿಸುವ ಸ್ವಭಾವವುಳ್ಳವನು ಎಂದು ಅರ್ಥವನ್ನು ಮಾಡಬಹುದು. ಆದ್ದರಿಂದಲೇ ದಿಶಾಂ ಪತೇ= ದಿಕ್ಕು ದಿಕ್ಕುಗಳಲ್ಲಿರುವ ಮುಕ್ತರಿಗೆ ಒಡೆಯನೇ ಎಂದು ಹೇಳಲ್ಪಟ್ಟಿದೆ, ಋತವಾಕ್ಯೇನ= ಯಥಾರ್ಥಜ್ಞಾನಸೂಕ್ತದಿಂದ, ಸತ್ಯೇನ= ಜ್ಞಾನಪೂರ್ವಕ ಕರ್ಮದಿಂದ, ಏಕೆಂದರೆ 'ಋತಂ ಯಥಾರ್ಥವಿಜ್ಞಾನಂ ಸತ್ಯಂ ತತ್ಪೂರ್ವಿಕಾಕೃತಿಃ' ಎಂಬ ಪ್ರಮಾಣ ವಚನವಿದೆ. ಶ್ರದ್ಧಯಾ= ಶ್ರದ್ಧೆಯಿಂದಲೂ, ತಪಸಾ= ಮತ್ತು ತಪಸ್ಸಿನಿಂದಲೂ, ಆಪವಸ್ವ= ಪವಿತ್ರನನ್ನಾಗಿ ಮಾಡುತ್ತೀಯೆ ಎಂದು ಅರ್ಥ. ಮೋಕ್ಷದಲ್ಲಿರುವ ಮಂದ ಮಾರುತವನ್ನು ಪ್ರೇರಿಸುತ್ತಾ ಮೋಕ್ಷಸ್ಥಾನದಲ್ಲಿ ಎಲ್ಲ ಕಡೆಗಳಲ್ಲಿಯೂ ಮುಕ್ತಬ್ರಹ್ಮರೂಪದಿಂದ ಸಂಚರಿಸುವಿ. ಮೋಕ್ಷದಲ್ಲಿಯೂ ಕೂಡ ಒಳಗಿನ ಪ್ರಾಕಾರದಿಂದ ಹೊರಗೂ ಇರುವ ಜೀವನ್ಮುಕ್ತರನ್ನು ಸಂತೋಷ ಪಡಿಸುತ್ತಾ ವಾಯುರೂಪದಿಂದ ಸಂಚರಿಸುವಿ ಅಂತಹ ನೀನು ನನ್ನನ್ನು ಹರಿಯ ಬಳಿಗೆ ಕರೆದುಕೊಂಡು ಹೋಗು ಎಂದು ಹಿಂದಿನಂತೆ ಅನ್ವಯ. ಈ ಮಂತ್ರವು ಪವಮಾನನ ಮಾಹಾತ್ಮ್ಯವನ್ನು ಹೇಳುತ್ತದೆ.

'ಪರ್ಜನ್ಯವೃದ್ಧಂ ಮಹಿಷಂ ತಂ ಸೂರ್ಯಸ್ಯ ದುಹಿತಾ ಭರತ್ । ತಂ ಗಂಧರ್ವಾಃ ಪ್ರತ್ಯಗೃಭ್ಣನ್ ತಂ ಸೋಮೇ ರಸಮಾದಧುರಿಂದ್ರಾಯೇಂದೋ ಪರಿಸ್ರವ ॥ ೭ ॥'

ಸೂರ್ಯಸ್ಯ ದುಹಿತಾ= ಯಮುನೆಯು, ಪರ್ಜನ್ಯವೃದ್ಧಂ= ಪರ್ಜನ್ಯನು ಯಾರಿಂದ ಜಲದಾನದಿಂದ ವೃದ್ಧನಾಗುತ್ತಾನೆಯೋ ಅಂತಹ ಪರ್ಜನ್ಯನಿಗೆ ಅಭಿವೃದ್ಧಿಯನ್ನು ಉಂಟು ಮಾಡುವಂತಹ, ತಂ= ಸಂಸಾರದಲ್ಲಿ ತನ್ನ ಪತಿಯಾಗಿ ಸ್ವೀಕರಿಸಿದ ವರುಣನನ್ನು, ಯಾವ ಮೋಕ್ಷದಲ್ಲಿ ಮಹಿಷಂ= ಪತಿಯಾದ ಅವನನ್ನು, ಆ ಭರತ್= ಚೆನ್ನಾಗಿ ಭರಿಸಿದಳೋ, ಗಂಧರ್ವಾಃ= 'ಅರ್ವಾ ಗಂಧರ್ವೋಽಶ್ವಃ' ಎಂಬ ಕೋಶವಿರುವುದರಿಂದ,, ಸಂಸಾರದಲ್ಲಿ ವರುಣನ ಅಧೀನದಲ್ಲಿದ್ದ ಯಾಗಯೋಗ್ಯವಾದ ಯಾವ ಅಶ್ವಗಳು ತಂ= ಆ ವರುಣನನ್ನು, ಪ್ರತ್ಯಗೃಭ್ಣನ್= ಸ್ವಾಮಿಯಾಗಿ ಸ್ವೀಕರಿಸಿದವೋ, ಆ ಅಶ್ವಗಳು, ಮೋಕ್ಷದಲ್ಲಿಯೂ ವರುಣನಿಗೆ ಅಧೀನವಾಗಿಯೇ ಇರುತ್ತವೆ ಎಂದು ಅಭಿಪ್ರಾಯ. ತಂ= ಸಂಸಾರದಲ್ಲಿ ಸೋಮರಸಾಭಿಮಾನಿಯಾದ ವರುಣನನ್ನು ಯಾವ ಮೋಕ್ಷದಲ್ಲಿ ಸೋಮೇ= ಮುಕ್ತಸೋಮಲತೆಯಲ್ಲಿ, ರಸಂ= ರಸಸ್ವಾಮಿಯಾದುದರಿಂದ ರಸಶಬ್ದವಾಚ್ಯನಾದ ಅವನನ್ನು, ಆದಧುಃ= ಆದಾನ ಮಾಡಿದರೋ ಅಂತಹ ಮೋಕ್ಷದಲ್ಲಿ ಎಂದು ಹಿಂದಿನಂತೆ ಅನ್ವಯ.

'ಋತಂ ವದನ್ ಋತದ್ಯುಮ್ನ ಸತ್ಯಂ ವದನ್ ಸತ್ಯಕರ್ಮನ್ । ಶ್ರದ್ಧಾಂ ವದನ್ ಸೋಮ ರಾಜನ್ ಧಾತ್ರಾ ಸೋಮ ಪರಿಷ್ಕೃತ ಇಂದ್ರಾಯೇಂದೋ ಪರಿಸ್ರವ ॥೮॥'

ಹೇ ಋತದ್ಯುಮ್ನ= ಎಲೈ ಯಥಾರ್ಥಜ್ಞಾನವನ್ನೇ ದ್ರವ್ಯವಾಗಿ ಉಳ್ಳವನೇ, ಸತ್ಯಕರ್ಮನ್= ಯಥಾರ್ಥಜ್ಞಾನಪೂರ್ವಕವಾದ ಯಾಗಾದಿಕರ್ಮಗಳನ್ನು ಹೊಂದಿದವನೇ, ರಾಜನ್= ಮುಕ್ತರಿಗೆ ಒಡೆಯನಾದವನೇ, ಹೇ ಸೋಮ= ಎಲೈ ಸೋಮನೇ= ಸೋಮಾಭಿಮಾನಿಯಾದುದರಿಂದ ಸೋಮಪದವಾಚ್ಯನಾದ ವಾಯುದೇವನೇ, ತ್ವಂ= ನೀನು ಯಾವ ಮೋಕ್ಷದಲ್ಲಿ, ಸೋಮ= ಮೋಕ್ಷದಲ್ಲಿರುವ ಸೋಮರಸಾಭಿಮಾನಿಯಾದ ಕಾರಣದಿಂದ ಸೋಮಪದವಾಚ್ಯನಾದವನು, ತ್ವಂ= ನೀನು, ಋತಂ ವದನ್= ಯಥಾರ್ಥಜ್ಞಾನವನ್ನು ಉಪದೇಶಿಸುತ್ತಾ, ಸತ್ಯಂ ವದನ್= ಯಥಾರ್ಥಜ್ಞಾನಪೂರ್ವವಾದ ಕರ್ಮವನ್ನು ಉಪದೇಶಿಸುತ್ತಾ, ಶ್ರದ್ಧಾಂ ವದನ್= ಶ್ರದ್ಧೆಯನ್ನು ಉಪದೇಶಿಸುತ್ತಾ, ಧಾತ್ರಾ= ಬ್ರಹ್ಮರೂಪದಿಂದ, ಪರಿಷ್ಕೃತಃ= ಅಲಂಕೃತನಾಗಿ ಇರುತ್ತೀಯೆ, ವಾಯುವು ಮೋಕ್ಷದಲ್ಲಿ ಬ್ರಹ್ಮರೂಪದಲ್ಲಿಯೇ ಇರುವುದು ಶಾಸ್ತ್ರ ಸಿದ್ಧವಾದ್ದರಿಂದ ಹೀಗೆ ಹೇಳಲ್ಪಟ್ಟಿದೆ. ಉಳಿದ ಮಂತ್ರದ ಅರ್ಥ ಹಿಂದಿನಂತೆಯೇ.

'ಸತ್ಯಮುಗ್ರಸ್ಯ ಬೃಹತಃ ಸಂಸ್ರವಂತಿ ಸಂಸ್ರವಾಃ । ಸಂಯಂತಿರಸಿನೋ ರಸಾಃ
ಪುನಾನೋ ಬ್ರಹ್ಮಣಾ ಹರ ಇಂದ್ರಾಯೇಂದೋ ಪರಿಸ್ರವ ॥೯॥'

ಹೇ ಹರೇ= ಹರಿಯ ವಿಶೇಷ ಸನ್ನಿಧಾನವಿರುವುದರಿಂದ ಹರಿಶಬ್ದವಾಚ್ಯನಾದ ಎಲೈ ಪವಮಾನನೇ, ಉಗ್ರಸ್ಯ= ಶತ್ರುಗಳಿಗೆ ಭಯಂಕರನಾದ, ಬೃಹತಃ= ಅಧಿಕಾರಿ ವರ್ಗದಲ್ಲಿ ಸರ್ವೋತ್ತಮನಾದ, ಯಾವ ನಿನ್ನ ಆಜ್ಞೆಯಿಂದ, ಸಂಸ್ರವಾಃ= ಚೆನ್ನಾಗಿ ಹರಿಯುವ ಸ್ವಭಾವವುಳ್ಳ ನದಿಗಳು, ಸಂಸ್ರವಂತಿ= ಚೆನ್ನಾಗಿ ಹರಿಯುತ್ತವೆಯೋ, ರಸಾಃ= ಮಧುರಾದಿ ರಸಗಳು, ರಸಿನಃ= ರಸವುಳ್ಳ ಪದಾರ್ಥಗಳನ್ನು (ರಸವಿರಬೇಕಾದ ಪದಾರ್ಥಗಳನ್ನು), ಸಂಯಂತಿ= ಚೆನ್ನಾಗಿ ಹೋಗಿ ಸೇರುತ್ತವೆಯೋ. ಅಂತಹ ನೀನು ಯಾವ ಮೋಕ್ಷದಲ್ಲಿ ಬ್ರಹ್ಮಣಾ= ಬ್ರಹ್ಮರೂಪದಿಂದ ಪುನಾನಃ= ಪವಿತ್ರೀಕರಿಸುವನಾಗಿ ಇರುತ್ತೀಯೋ. ಸತ್ಯಂ= ಈ ವಚನವು ಸತ್ಯವಾದುದು. ಉಳಿದ ಅರ್ಥಗಳು ಹಿಂದಿನಂತೆಯೇ.

'ಯತ್ರ ಬ್ರಹ್ಮಾಪವಮಾನ ಛಂದಸ್ಯಾಂ ವಾಚಂ ವದನ್ ।ಗ್ರಾವ್ಣಾ ಸೋಮೇ
ಮಹೀಯತೇ ಸೋಮೇನಾನಂದಂ ಜನಯನ್ಇಂದ್ರಾಯೇಂದೋ ಪರಿಸ್ರವ ॥೧೦॥'

ಎಲೈ ಪವಮಾನನೇ, ಯಾವ ಮೋಕ್ಷದಲ್ಲಿ, ಛಂದಸ್ಯಾಂ= ವೇದ ಸಂಬಂಧಿಯಾದ, ವಾಚಂ ವದನ್= ಮಾತುಗಳನ್ನು ನುಡಿಯುತ್ತಾ, ಬ್ರಹ್ಮಾ= ಬ್ರಹ್ಮನು, ಗ್ರಾವ್ಣಾ= ಸೋಮಲತೆಯನ್ನು ಅರೆಯುವ ಕಲ್ಲಿನಿಂದ ಹರಿದು ಬಂದ, ಸೋಮೇನ, ಸೋಮರಸದಿಂದ, ಆನಂದಂ ಜನಯನ್= ಸೋಮರಸವನ್ನು ಪಾನ ಮಾಡುವ ಇಂದ್ರಾದಿಗಳಿಗೆ ಸ್ವರೂಪಾನಂದವನ್ನು ಅಭಿವ್ಯಕ್ತಿಗೊಳಿಸುತ್ತಾ, ಸೋಮೇ= ಸೋಮ ಲತೆಯೇ ಪ್ರಧಾನವಾದ ಕಾರಣದಿಂದ ಸೋಮಶಬ್ದವಾಚ್ಯವಾದ ಯಜ್ಞದಲ್ಲಿ ಮಹೀಯತೇ= ಎಲ್ಲರಿಂದಲೂ ಪೂಜಿಸಲ್ಪಡುತ್ತಾನೆಯೋ ಅಲ್ಲಿ ನನ್ನನ್ನು ಎಂದು ಹಿಂದಿನಂತೆಯೇ ಅರ್ಥ.

**ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಂ । ತಸ್ಮಿನ್ ಮಾಂ ಧೇಹಿ ಪವಮಾನಾಮೃತೇ ಲೋಕೇ ಅಕ್ಷಿತ ಇಂದ್ರಾಯೇಂದೋ ಪರಿಸ್ರವ ॥೧೧ ॥**

ಯತ್ರ= ಯಾವ ಮೋಕ್ಷದಲ್ಲಿ, ಅಜಸ್ರಂ= ಸರ್ವದಾ, ಜ್ಯೋತಿಃ= ಜ್ಯೋತಿಯು ಇರುತ್ತದೆಯೋ, ವೈಕುಂಠಲೋಕಪ್ರಕಾಶವು ಲಕ್ಷ್ಮೀಸ್ವರೂಪವಾದುದರಿಂದ, ಅನಾದ್ಯನಂತ ಕಾಲದಲ್ಲಿ ಇರುತ್ತದೆ ಎಂದು ಅಜಸ್ರಂ ಎಂದು ಹೇಳಲಾಗಿದೆ, ಯಸ್ಮಿನ್ ಲೋಕೇ= ಯಾವ ವೈಕುಂಠಲೋಕದಲ್ಲಿ, ಸ್ವಃ= ಸುಖವು, ಹಿತಂ= ವಿಹಿತವಾಗಿದೆಯೋ, ಹೇ ಪವಮಾನ= ಎಲೈ ಪವಮಾನನೇ, ಅಮೃತೇ= ಮರಣ ರಹಿತವಾದುದರಿಂದ ಅಮೃತಶಬ್ದವಾಚ್ಯವಾದ, ಅಕ್ಷಿತೇ= ಅನಾದ್ಯನಂತಕಾಲದಲ್ಲಿ ಕ್ಷಯರಹಿತವಾದ, ತಸ್ಮಿನ್= ಆ ವೈಕುಂಠಲೋಕದಲ್ಲಿ, ಯದ್ಯಪಿ ಲೋಕಶಬ್ದವು ಸಾಮಾನ್ಯ ಶಬ್ದ. ಆದರೂ ಪರಿಶಿಷ್ಟದಲ್ಲಿ (ಖಿಲದಲ್ಲಿ) ವಿಷ್ಣೋರ್ಲೋಕೇ ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಲೋಕ ಶಬ್ದವು ವೈಕುಂಠ ಲೋಕವಾಚಕವಾಗಿದೆ, ಮಾಂ= ನನ್ನನ್ನು, ಧೇಹಿ= ಇಡು. ತ್ವಂ ಚ= ನೀನೂ ಸಹ, ಇಂದ್ರಾಯ= ಇಂದ್ರಶಬ್ದವಾಚ್ಯವಾದ ನಾರಾಯಣನನ್ನು ಕುರಿತು, ಪರಿಸ್ರವ= ನಮ್ಮಂತಹ ಮುಕ್ತರನ್ನು ಕರೆದುಕೊಂಡು ಎಲ್ಲ ಕಡೆಯಿಂದಲೂ ಹೋಗು. ಇಲ್ಲಿ ಮಾಂ ಧೇಹಿ ಎಂದು ಪ್ರತ್ಯೇಕವಾಗಿ ಹೇಳಿರುವುದರಿಂದ ಬೇರೆ ಅಧ್ಯಾಹಾರವಿಲ್ಲದೆ ಯಥಾಶ್ರುತವಾದ ಯೋಜನೆಯನ್ನೇ ಮಾಡಬೇಕು.

ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ । ಯತ್ರಾಮೂರ್ಯ ಹ್ವತೀರಾಪಃ ತತ್ರ ಮಾಮಮೃತಂ ಕೃಧಿ ಇಂದ್ರಾಯೇಂದೋ ಪರಿಸ್ರವ ॥ ೧೨ ॥

ಯತ್ರ= ಯಾವ ವೈಕುಂಠ ಲೋಕದಲ್ಲಿ, ವೈವಸ್ವತಃ= ಯಮನು, ರಾಜಾ= ಅಲ್ಲಿ ಮರಣವಿಲ್ಲದ ಕಾರಣ ರಂಜಕನೇ ಹೊರತು ಭೀಷಕನಲ್ಲವೋ, ಯತ್ರ= ಯಾವ ವೈಕುಂಠ ಲೋಕದಲ್ಲಿ, ದಿವಃ= ಸ್ವರ್ಗದ, ಅವರೋಧನಂ= ಅಂತಃಪುರ ಸ್ತ್ರೀ ಸಮೂಹವು ಇದೆಯೋ, ಯತ್ರ= ಯಾವ ವೈಕುಂಠ ಲೋಕದಲ್ಲಿ, ಯಹ್ವತೀಃ= ಯಹ್ವಂತೀಃ= ಸುತ್ತಲೂ ಚಲಿಸುವ, ಅಮೂಃ ಆಪಃ= ಈ ಜಲಾಭಿಮಾನಿ ದೇವತೆಗಳು ಇದ್ದಾರೆಯೋ, ತತ್ರ= ಅಲ್ಲಿ, ಮಾಂ= ನನ್ನನ್ನು, ಅಮೃತಂ= ಮುಕ್ತನನ್ನಾಗಿ, ಕೃಧಿ= ಮಾಡು. ನೀನೂ ಸಹ ನಾರಾಯಣನ ಪ್ರೀತಿಯನ್ನು ಉದ್ದೇಶಿಸಿ ಎಲ್ಲ ಕಡೆಗಳಲ್ಲಿಯೂ ಸಂಚರಿಸು.

ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ । ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾಮಮೃತಂ ಕೃಧಿ ಇಂದ್ರಾಯೇಂದೋ ಪರಿಸ್ರವ ॥ ೧೩ ॥

ತ್ರಿನಾಕೇ= ದುಃಖರಹಿತವಾದುದರಿಂದ ನಾಕಶಬ್ದವಾಚ್ಯವಾದ, ತ್ರಿದಿವೇ= ಸದಾ ಪ್ರಕಾಶಮಾನರಾದ ಸೂರ್ಯಚಂದ್ರ ಅಗ್ನಿಗಳನ್ನು ಉಳ್ಳ ವೈಕುಂಠಾದಿ ಲೋಕತ್ರಯದಲ್ಲಿ, ದಿವಃ= ಪ್ರಕಾಶರೂಪರಾದ ಮುಕ್ತ ಸಮೂಹದ, ಅನುಕಾಮಂ= ಇಚ್ಛೆಗೆ ಅನುಸಾರವಾಗಿ,

ಚರಣಂ= ಸಂಚಾರವು ಇದೆಯೋ, ಯತ್ರ= ಯಾವ ಮುಕ್ತಿಯಲ್ಲಿ, ಜ್ಯೋತಿಷ್ ಮಂತಃ ಲೋಕಾಃ ತ್ರಿನಾಕಪದದಿಂದ ಸೂಚಿತವಾದ ಪ್ರಕಾಶಮಾನವಾದ ವೈಕುಂಠಾದಿ ಲೋಕತ್ರಯವಿದೆಯೋ ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಇತ್ಯಾದಿ ಹಿಂದಿನಂತೆಯೇ ಯೋಜನೆ.

ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ । ಸ್ವಧಾ ಚ ಯತ್ರ ತೃಪ್ತಿಶ್ಚ
ತತ್ರ ಮಾಮಮೃತಂ ಕೃಧಿ ಇಂದ್ರಾಯೇಂದೋ ಪರಿಸ್ರವ ॥ ೧೪ ॥

ಯತ್ರ= ಯಾವ ಮೋಕ್ಷದಲ್ಲಿ, ಕಾಮಾಃ ತಮಗೆ ಯೋಗ್ಯವಾದ ವಿಷಯದ ಇಚ್ಛೆಗಳೂ, ನಿಕಾಮಾಃ ಬಹಳವಾಗಿ ಬಯಸಲ್ಪಡುವ ಆ ಇಚ್ಛೆಯ ವಿಷಯಗಳೂ ಇವೆಯೋ, ಇಲ್ಲದಿದ್ದರೆ ಮೋಕ್ಷದಲ್ಲಿ ಸತ್ಯಸಂಕಲ್ಪತ್ವವೇ ಕೂಡುವುದಿಲ್ಲ, ಯತ್ರ= ಯಾವ ಮೋಕ್ಷದಲ್ಲಿ, ಬ್ರಧ್ನಸ್ಯ= ಸೂರ್ಯನ, ವಿಷ್ಟಪಂ= ಸ್ಥಾನವು ಇದೆಯೋ, ಯತ್ರ= ಯಾವ ಮೋಕ್ಷದಲ್ಲಿ, ಸ್ವಧಾಚ= ಸ್ವಧಾಶಬ್ದವಾಚ್ಯಳಾದ ಪಿತೃಪತ್ನಿಯೂ ಮತ್ತು ಚ ಶಬ್ದವಾಚ್ಯಳಾದ ಅಗ್ನಿಪತ್ನಿಯಾದ ಸ್ವಾಹಾದೇವಿಯೂ, ತೃಪ್ತಿಶ್ಚ= ತೃಪ್ತಿಯು (ತೃಪ್ತಿಗೆ ಅಭಿಮಾನಿ ದೇವತೆಯು ಇದ್ದಾರೆಯೋ) ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಇತ್ಯಾದಿ ಹಿಂದಿನಂತೆಯೇ ಅನ್ವಯ.

ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ । ಕಾಮಸ್ಯ ಯತ್ರಾಪ್ತಾಃ
ಕಾಮಾಃ ತತ್ರ ಮಾಮಮೃತಂ ಕೃಧಿ ಇಂದ್ರಾಯೇಂದೋ ಪರಿಸ್ರವ ॥ ೧೫ ॥

ಯತ್ರ= ಯಾವ ಮೋಕ್ಷದಲ್ಲಿ, ಭಗವಂತನ ದೇಹಮಧ್ಯಭಾಗ, ದಕ್ಷಿಣ ಪಕ್ಷ, ವಾಮಪಕ್ಷ ಮತ್ತು ಶಿರೋರೂಪವಾದ ಮತ್ತು ಪ್ರತಿಬಿಂಬರಾದ ಜೀವರಿಗೂ ಪಂಚಾವಯವರೂಪಗಳಾದ ಆನಂದಾಃ ಆನಂದಗಳು, ಮೋದಾಃ ಮೋದಗಳು, ಮುದಾಃ ಸುಖವು ಸುಖಗಳು, ಪ್ರಮುದಃ ವಿಶೇಷವಾದ ಸುಖಗಳು, ಆಪ್ತಾಃ ಭಗವಂತನಲ್ಲಿ ನಿರವಧಿಕಸಂಪೂರ್ಣವಾಗಿ ಜೀವರಲ್ಲಿ ಯಥಾಯೋಗ್ಯವಾಗಿ ಪೂರ್ಣವಾಗಿ ಆಸತೇ= ಇರುತ್ತವೆಯೋ, ಯತ್ರ= ಯಾವ ಮೋಕ್ಷದಲ್ಲಿ, ಕಾಮಸ್ಯ= ಇಚ್ಛೆಯ, ಕಾಮಾಃ ವಿಷಯಗಳು, ಆಪ್ತಾಃ ಪ್ರಾಪ್ತವಾಗುತ್ತವೆಯೋ, ಆನಂದ, ಮೋದ, ಮುದ, ಪ್ರಮುದ ಈ ನಾಲ್ಕು ಸುಖಗಳು ವಿಷಯನಿರಪೇಕ್ಷವಾದ ಸುಖಗಳು. ಐದನೆಯದು ವಿಷಯಾಭಿವ್ಯಂಗ್ಯವಾದ ಪ್ರಿಯನಾಮಕವಾದ ಸುಖ. ಅದು ವಿಷಯ ಸಾಪೇಕ್ಷವಾದುದರಿಂದ ಅದನ್ನು ಕಾಮಸ್ಯ ಯತ್ರಾಪ್ತಾಃ ಕಾಮಾಃ ಎಂದು ಪ್ರತ್ಯೇಕವಾಗಿ ಹೇಳಿದ್ದಾರೆ. ಉಳಿದ ಮಂತ್ರಭಾಗಕ್ಕೆ ಮೊದಲಿನಂತೆಯೇ ಯೋಜನೆ.

ಯ ಇಂದೋಃ ಪವಮಾನಸ್ಯಾನುಧಾಮಾನ್ಯಕ್ರಮೀತ್ । ತಮಾಹುಃ ಸುಪ್ರಜಾ
ಇತಿ ಯಸ್ತೇ ಸೋಮವಿಧನ್ಮನ ಇಂದ್ರಾಯೇಂದೋ ಪರಿಸ್ರವ ॥ ೧೬ ॥

ಸೋಮಪವಮಾನः ಎಲೈ ಸೋಮಪವಮಾನನೇ, ಯः ಯಾವ ಪರಮಾತ್ಮನು, ಇಂದೋः ಪವಮಾನನಾದ, ತೇ= ನಿನ್ನ, ಅನುಧಾಮಾನಿ= ಅನುಕೂಲ ಸ್ಥಾನಗಳನ್ನು, ಆಕ್ರಮೀತ್= ಆಕ್ರಮಿಸಿದ್ದಾನೆಯೋ, ದೇಹೇಪಿ ಯತ್ರ ಪವನೋಸ್ತಿ ಇತ್ಯಾದಿಗಳಲ್ಲಿ ಹೇಳಿದಂತೆ ಎಲ್ಲಲ್ಲಿ ಮುಖ್ಯಪ್ರಾಣನಿದ್ದಾನೆಯೋ ಅಲ್ಲೆಲ್ಲಾ ಹರಿ ಇದ್ದಾನೆಂಬ ನಿಯಮವು ಪ್ರಾಮಾಣಿಕವಾಗಿದೆ ಎಂದು ಸೂಚಿಸಲು ಹೀಗೆ ಹೇಳಲ್ಪಟ್ಟಿದೆ, ಯಶ್ಚः ಯಾವ ಪರಮಾತ್ಮನು, ತೇ ಮನः ನಿನ್ನ ಮನಸ್ಸನ್ನು, ಅವಿಧತ್= ಅವಿಧ್ಯತ್= ಪ್ರವೇಶಿಸಿ ಸರ್ವದಾ ಇದ್ದಾನೆಯೋ, ತಂ= ಆ ಪರಮಾತ್ಮನನ್ನು ಸುಪ್ರಜಾः ಉತ್ತಮ ಜೀವರು, ಇತಿ= ನಾನು ಹೇಳಿದ ಪ್ರಕಾರದಿಂದ, ಆಹುः ಹೇಳುತ್ತಾರೆ. ಈ ಎರಡು ಮಹಿಮೆಗಳನ್ನು ನಾನು ಒಬ್ಬನೇ ಹೇಳುವುದಲ್ಲ ಸರ್ವಸಜ್ಜನರು ಹೇಳುತ್ತಾರೆ ಎಂದು ಅಭಿಪ್ರಾಯ. ಉಳಿದ ಮಂತ್ರದ ಅರ್ಥವು ಮೊದಲಿನಂತೆಯೇ.

**ಋಷೇ ಮಂತ್ರಕೃತಾಂ ಸ್ತೋಮೈಃ ಕಶ್ಯಪೋದ್ವರ್ಧಯನ್ ಗಿರಃ ।**
**ಸೋಮಂ ನಮಸ್ಯ ರಾಜಾನಂ ಯೋಜಜ್ಞೇವೀರುಧಾಂಪತಿರಿಂದ್ರಾಯೇಂದೋ**
**ಪರಿಸ್ರವ ॥ ೧೭ ॥**

ಈ ಸೂಕ್ತದಲ್ಲಿ ಮುಖ್ಯಪ್ರಾಣನ ಪ್ರಾರ್ಥನೆಯು ಹೇಗೆ ಕೂಡುತ್ತದೆ ಎಂಬ ಪ್ರಶ್ನೆಗೆ ಮುಖ್ಯಪ್ರಾಣನೇ ಸೋಮಲತೆಗೆ ಮುಖ್ಯಾಭಿಮಾನಿಯಾದುದರಿಂದ ಮುಖ್ಯವಾಗಿ ಸೋಮಪದವಾಚ್ಯನಾದವನು. ಚಂದ್ರನು ಸೋಮಲತೆಗೆ ಅವಾಂತರಾಭಿಮಾನಿ ಯಾದುದರಿಂದ ಅಮುಖ್ಯವಾಗಿ ಸೋಮಶಬ್ದವಾಚ್ಯನಾದವನು ಎಂದು ಪ್ರತಿಪಾದಿಸುತ್ತಾ ಮುಖ್ಯಪ್ರಾಣನನ್ನು ಕುರಿತು ಸೋಮಯಾಗಾದಿ ನಿವೃತ್ತಕರ್ಮಸಾಧ್ಯವಾದ ಮೋಕ್ಷವನ್ನು ಈ ಮಂತ್ರದಲ್ಲಿ ಮಂತ್ರದ್ರಷ್ಟ್ರವಾದ ಋಷಿಯು ಪ್ರಾರ್ಥಿಸುತ್ತಾನೆ. ಮಂತ್ರಕೃತಾಂ= ಋಷ್ಯಾದಿಗಳ, ಸ್ತೋಮೈः ಸ್ತೋತ್ರಗಳಿಂದ, ನಮಸ್ಯ= ನಮಸ್ಕಾರಕ್ಕೆ ಅರ್ಹನಾದ ಮುಖ್ಯಪ್ರಾಣನೇ, ಕಶ್ಯಪः ಕ ಆ ಪರಮಾತ್ಮನಿಂದ ಪ್ರಾಪ್ಯವಾದ, ಶ ಸುಖಕ್ಕೆ ಯ ಯೋಗ್ಯವಾದ ಮುಕ್ತಿಯೋಗ್ಯರು ಕಶ್ಯರು ಅವರನ್ನು ಪಾಲಿಸುವುದರಿಂದ ಕಶ್ಯಪಶಬ್ದವಾಚ್ಯನಾದವನೇ, ಋಷೇ= ಸರ್ವಜ್ಞನಾದವನೇ, ಪವಮಾನ ಶಬ್ದ ಪ್ರಾಯಪಾಠವಿರುವುದರಿಂದ ಬೇರೆ ಋಷಿಯನ್ನು ಇಲ್ಲಿ ತೆಗೆದುಕೊಳ್ಳಬಾರದು. ಆದ್ದರಿಂದ ಸರ್ವಜ್ಞನೆಂದೇ ಅರ್ಥ. ಗಿರः ವೇದ ಪುರಾಣಾದಿ ವಾಕ್ಯಗಳನ್ನು, ಉದ್ವರ್ಧಯನ್= ಅಪವ್ಯಾಖ್ಯಾನಗಳನ್ನು ನಿರಾಕರಿಸಿ ಸರಿಯಾದ ಅರ್ಥವನ್ನು ಹೇಳುವುದರಿಂದ ಅವುಗಳನ್ನು ಪೋಷಿಸುವವನಾಗಿ, ವೀರುಧಾಂ= ಸೋಮ ಲತೆಗಳ, ಪತಿः ಮುಖ್ಯಸ್ವಾಮಿಯಾದ ನೀನು, ಸೋಮಂ= ಸೋಮಲತೆಗೆ ಅವಾಂತರಾಭಿಮಾನಿಯಾದ ಸೋಮಪದವಾಚ್ಯನಾದ, ರಾಜಾನಂ= ಚಂದ್ರನನ್ನು, ಜಜ್ಞೇ= ಉತ್ಪಾದಿಸಿದ್ದೀಯೆ. ಮುಖ್ಯಸೋಮನಾದ ಮುಖ್ಯಪ್ರಾಣನು ಚಂದ್ರನಲ್ಲೂ ಆವಿಷ್ಟನಾಗಿ ಚಂದ್ರನ ಜನನವಾದಾಗ ತಾನೂ ಜನಿಸುತ್ತಾನೆ ಎಂದು ಸೂಚಿಸಲು ಜಜ್ಞೇ

ಎಂದು ಅಣಿಜಂತ ಪ್ರಯೋಗವನ್ನು ಮಾಡಿದ್ದಾರೆ. ಉಳಿದ ಮಂತ್ರದ ಅರ್ಥವು ಮೊದಲಿನಂತೆಯೇ.

ಸಪ್ತ ದಿಶೋ ನಾನಾ ಸೂರ್ಯಾಃ ಸಪ್ತ ಹೋತಾರ ಋತ್ವಿಜಃ ।
ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿರಕ್ಷ ನ
ಇಂದ್ರಾಯೇಂದೋ ಪರಿಸ್ರವ ॥ ೧೮ ॥

ಯತ್ರ= ಯಾವ ಮೋಕ್ಷದಲ್ಲಿ, ದಿಶಃ= ದಿಗಭಿಮಾನಿ ದೇವತೆಗಳು, ಸಪ್ತ= ಸಪ್ತ ಸಂಖ್ಯೆಯಲ್ಲಿ ಇದ್ದಾರೆಯೋ ಮತ್ತು, ನಾನಾಸೂರ್ಯಾಃ= ಬೇರೆ ಬೇರೆ ಕಲ್ಪದಲ್ಲಿ ಮುಕ್ತರಾದ ಏಕಾದಶಸಂಖ್ಯಾಕರಾದ ಸೂರ್ಯರು ಇದ್ದಾರೆಯೋ, ಹೋತಾರಃ= ಅಗ್ನಿಷ್ಟೋಮಾದಿರೂಪವಾದ ಪ್ರಧಾನಸಪ್ತಕ್ರತುಗಳ ಹೋತೃಗಳು, ಸಪ್ತ= ಏಳು ಸಂಖ್ಯೆಯಲ್ಲಿ ಇದ್ದಾರೆಯೋ, ಆದಿತ್ಯಾಃ= ಇಂದ್ರನ ಆಜ್ಞೆಯಿಂದಲೇ ಅದಿತಿಯು ಪುತ್ರತ್ವೇನ ಸ್ವೀಕರಿಸಿದ, ದೇವಾಃ= ದೇವತೆಗಳು, ಸಪ್ತ= ಸಪ್ತ ಸಂಖ್ಯೆಯಲ್ಲಿ ಇದ್ದಾರೆಯೋ, ಸಪ್ತ ಕೇಷು ಪ್ರಧಾನಕಾಃ ಎಂಬ ವಚನದಂತೆ ಮರುದ್ಗಣದಲ್ಲಿ ಸೇರಿದ ಪ್ರಧಾನರಾದ ಪ್ರವಹಾದಿ ಸಪ್ತ ಹೋತೃಗಳು ಎಲ್ಲಿ ಇದ್ದಾರೆಯೋ, ಹೇ ಇಂದೋಸೋಮಃ= ಎಲೈ ಸೋಮ ಪವಮಾನನೇ, ನಃ= ನಮ್ಮನ್ನು, ಇಂದ್ರಾಯ= ಪರಮೇಶ್ವರನ ಕಡೆಗೆ, ಪರಿಸ್ರವ= ತೆಗೆದುಕೊಂಡು ಹೋಗು. ತೇಭಿಃ ಸಃ= ಅವರ ಜೊತೆಯಲ್ಲಿ, ಅಭಿರಕ್ಷ= ನಮ್ಮನ್ನೂ ರಕ್ಷಿಸು. ನಮ್ಮನ್ನೂ ಸಹ ಭಗವಂತನ ಸಮೀಪಕ್ಕೆ ಕರೆದುಕೊಂಡು ಹೋಗಿ ಅವರ ಸಮೂಹದಲ್ಲಿಟ್ಟು ರಕ್ಷಿಸು ಎಂದು ಅಭಿಪ್ರಾಯ.

ಯತ್ತೇ ರಾಜನ್ ಶೃತಂ ಹವಿಸ್ತೇನ ಸೋಮಾಭಿರಕ್ಷ ನಃ ।
ಅರಾತೀವಾ ಮಾನಸ್ತಾರೀನ್ಮೋ ಚ ನಃ ಕಿಂಚನಾಮಮ-
ದಿಂದ್ರಾಯೇಂದೋ ಪರಿಸ್ರವ ॥ ೧೯ ॥

ಹೇ ರಾಜನ್ ಸೋಮಃ= ಎಲೈ ರಾಜನಾದ ಪವಮಾನನೇ, ಯತ್= ಯಾವ ಕಾರಣದಿಂದ, ತೇ= ನಿನ್ನ, ನಿನ್ನನ್ನು ಉದ್ದೇಶಿಸಿ, ಹವಿಃ= ಹವಿಸ್ಸು, ಶೃತಂ= ಪಾಕ ಮಾಡಲ್ಪಟ್ಟಿದೆಯೋ, ತೇನ= ಆ ಕಾರಣದಿಂದ, ನಃ= ನಮ್ಮನ್ನು, ಅಭಿರಕ್ಷ= ರಕ್ಷಿಸು, ಅರಾತೀವಾಃ= ಅರಾತೀ ಎಂದರೆ ಶತ್ರುವನ್ನು, ವಾಯತಿ ಎಂದರೆ ನಡುಗಿಸುತ್ತಾನೆ ಎಂಬ ಕಾರಣದಿಂದ ಶತ್ರುಗಳನ್ನು ನಡುಗಿಸುವ ಪವಮಾನನೇ, ವೋ ವಿಧೂನನೇ ಎಂಬ ಸೂತ್ರದಿಂದ, ವಾಜನಂ ಎಂದರೆ ಕಂಪನ ಎಂದು ಅರ್ಥ (ವೋ ವಿಧೂನನೇ ಎಂಬ ಧಾತುವಿನಿಂದ ವಾನ ಎಂದರೆ ಕಂಪನ ಎಂದು ಅರ್ಥ?) ಅಥವಾ ಅರಾತಿಂ= ರಕ್ಷಣೆಯನ್ನು, ಪ್ರಾಪಯತಿ= ಉಂಟುಮಾಡುತ್ತಾನೆ ಎಂದು, ಅರಾತಿವಾ ಎಂದಾಗುತ್ತದೆ. ಈಗ ಈ ಶಬ್ದವು ವಾ ಗತಿಗಂಧಯೋಃ ಎಂಬ ಧಾತುವಿನಿಂದ ನಿಷ್ಪನ್ನವಾಗುತ್ತದೆ. ಆಮಮತ್= ಆಮಮ್ ತಪ್ತಸುದರ್ಶನ ತಾಪರಹಿತನಾದ ಪುರುಷನನ್ನು, ಮಥ್ನಾತಿ=

ಮಥಿಸುತ್ತಾನೆ ಎಂಬ ಕಾರಣದಿಂದ ಆಮಮತ್ ತಪ್ತಮುದ್ರಾರಹಿತನಾದವನನ್ನು ಪೀಡಿಸುವವನು ಎಂದು ಅರ್ಥ, ಅತಪ್ತತನೂರ್ನತದಾಮೋ ಅಶ್ನುತೇ ಎಂಬ ಶ್ರುತಿಯು ಇದನ್ನು ಪುಷ್ಟೀಕರಿಸುತ್ತದೆ. ಯಃ= ಯಾವ ಪರಮಾತ್ಮನು, ಮಾತಾರೀತ್= ನಮ್ಮನ್ನು ಅತಿಕ್ರಮಿಸಿ ಹೋಗದಿರಲಿ, ಆ ಪರಮಾತ್ಮನು, ನಃ= ನಮ್ಮನ್ನು ಕುರಿತು, ಮೋ ಕಿಂ= ಇಲ್ಲವೇನು? ನಮ್ಮನ್ನು ಕುರಿತು ಸ್ವಾಮಿಯಾಗಿ ಇದ್ದೇ ಇದ್ದಾನೆ ಎಂದು ಅಭಿಪ್ರಾಯ. ಅಥವಾ ಯಶ್ಚಃ ಯಾವ ಪರಮಾತ್ಮನು, ನಃ= ನಮ್ಮ ಮತದಲ್ಲಿ, ಕಿಂಚನ= ಸ್ವಲ್ಪವಾದ ಜಗತ್ತೂ, ಮೋ= ಆಗುವುದಿಲ್ಲ ಪರಮಾತ್ಮನು ಸಕಲ ಜಗದ್‌ಭಿನ್ನನೆಂದು ಅಭಿಪ್ರಾಯ. ನೋ ಎಂಬಂತೆ ಮೋ ಎಂಬುದೂ ನಿಷೇಧಾರ್ಥವಾದ ಅವ್ಯಯ. ಆದ್ದರಿಂದ ಶ್ರುತಿಯು ಮಾ ಎಂದೂ ಮೋ ಎಂದೂ ಎರಡು ರೀತಿಯ ಪ್ರಯೋಗವನ್ನೂ ಮಾಡುತ್ತದೆ. ಉಳಿದ ಮಂತ್ರದ ಅರ್ಥವು ಮೊದಲಿನಂತೆಯೇ.

ಯತ್ರ ತತ್ ಪರಮಂಪದಂ ವಿಷ್ಣೋರ್ಲೋಕೇ ಮಹೀಯತೇ ।
ದೇವೈಃ ಸುಕೃತಕರ್ಮಭಿಃ ತತ್ರ ಮಾಮಮೃತಂ ಕೃಧಿ
ಇಂದ್ರಾಯೇಂದೋ ಪರಿಸ್ರವ ॥ ೨೦ ॥ (ಖಿಲ)

ಯತ್ರ= ಯಾವ ವಿಷ್ಣುಲೋಕದಲ್ಲಿ, ತತ್= ವಿಷ್ಣು ಎಂಬ ಹೆಸರಿನ, ಪರಮಂ= ಉತ್ತಮವಾದ, ಪದಂ= ಸಕಲ ಮುಕ್ತಗಮ್ಯವಾದ ವಸ್ತುವು, ಸುಕೃತ ಕರ್ಮಭಿಃ ಚೆನ್ನಾಗಿ ಯಜ್ಞಗಳನ್ನು ಮಾಡಿದ ದೇವತೆಗಳಿಂದ, ಮಹೀಯತೇ= ಪೂಜಿಸಲ್ಪಡುತ್ತದೆಯೋ, ಹೇ ಇಂದೋ= ಎಲೈ ಪವಮಾನನೇ, ತತ್ರ= ಅಲ್ಲಿ, ಮಾಂ= ನನ್ನನ್ನು, ಅಮೃತಂ ಕೃಧಿ= ಮುಕ್ತನನ್ನಾಗಿ ಮಾಡು, ಇಂದ್ರಾಯ= ಪರಮೇಶ್ವರನಾದ ಅವನನ್ನು ಉದ್ದೇಶಿಸಿ, ಪರಿಸ್ರವ= ನನ್ನನ್ನು ಕರೆದುಕೊಂಡು ಹೋಗು.

ಜರತೀಭಿಃ ಕಾರುರಹಮಶ್ವೋ ವೋಢೇತಿ ವಾಕ್ ತ್ರಯಂ ।
ವಕ್ತಿ ವೈಕುಂಠಮಾಹಾತ್ಮ್ಯಂ ತಚ್ಚ ಕಿಂಚಿದ್ ವಿವೃಣ್ಮಹೇ ॥ ೯೪೨ ॥

**ಅರ್ಥ–** ಜರತೀಭಿಃ= ಜರತೀಭಿಃ ಎಂಬ, ಕಾರುರಹಂ= ಕಾರುರಹಂ ಎಂಬ, ಅಶ್ವೋವೋಢಾ= ಅಶ್ವವೋಢಾ ಎಂಬ, ಇತಿ= ಈ ರೀತಿಯಾದ, ವಾಕ್ ತ್ರಯಂ= ಮೂರು ಮಂತ್ರಗಳು, ವೈಕುಂಠಮಹಾತ್ಮ್ಯಂ= ವೈಕುಂಠಲೋಕದ ಮಹಿಮೆಯನ್ನು, ವಕ್ತಿ= ಹೇಳುತ್ತದೆ, ತಚ್ಚ= ಅದನ್ನು, ಕಿಂಚಿತ್= ಸ್ವಲ್ಪ, ವಿವೃಣ್ಮಹೇ= ವಿವರಿಸುತ್ತೇವೆ.

**ಅನುವಾದ–** ಜರತೀಭಿಃ ಇತ್ಯಾದಿ ಮಂತ್ರವು ಕಾರುರಹಂ ಇತ್ಯಾದಿ ಮಂತ್ರವು, ಅಶ್ವೋವೋಢಾ ಇತ್ಯಾದಿ ಮಂತ್ರವು ವೈಕುಂಠಲೋಕದ ಮಹಿಮೆಯನ್ನು ಹೇಳುತ್ತದೆ. ಅದನ್ನು ಸ್ವಲ್ಪ ವಿವರಿಸುತ್ತೇವೆ.

**ಕಾರ್ಮಾರಃ ಕಾರುಜಾತೀಯೋ ಯತ್ರ ಮುಕ್ತೌ ಹರೇಃ ಪುರಿ ।**
**ಜರತೀಭಿಃ ಪ್ರವೃದ್ಧಾಭಿರೋಷಧೀಭಿಶ್ಚಿದಾತ್ಮಭಿಃ ॥ ೯೪೩ ॥**

**ವಂಶಾದಿಭಿರ್ಧ್ವಜಂ ಚಾಪಂ ಬಾಣವೇಣುರಥಾದಿಕಮ್ ।**
**ಕ್ರೀಡಾಯೈ ರಚಿತಂ ದಿವ್ಯಂ ಶಾಕುನಾನಾಂ ಪತತ್ರಿಣಾಮ್ ॥ ೯೪೪ ॥**

**ಪರ್ಣೈಃ ಪತ್ರೈಃ ಶಿಖಂಡಾದ್ಯೈರ್ದ್ಯುಭಿರ್ದ್ಯೋತನಕಾರಿಭಿಃ ।**
**ಅಶ್ಮಭಿಶ್ಚಿತ್ರರತ್ನೈಶ್ಚ ಚಿತ್ರಿತಂ ಪುನರಿಚ್ಛತಿ ।**
**ಹಿರಣ್ಯವಂತಂ ಕರ್ತುಂ ಚ ತತ್ರ ಮಾಮಮೃತಂ ಕೃಧಿ ॥ ೯೪೫ ॥**

**ಪ್ರಾಯಪಾಠಬಲಾದತ್ರಾಪ್ಯೇತದ್ವಾಕ್ಯಂ ಕಿಲೋಹ್ಯತೇ ।**
**ಪರಿಸ್ರವ ಸ್ರಾವಯೇಂದೋ ತತ್ರ ಮಾಮಿತಿ ವಾ ಭವೇತ್ ॥ ೯೪೬ ॥**

**ಅರ್ಥ–** ಕಾರ್ಮಾರಃ= ಕಾರುಜಾತೀಯಃ= ಬಡಗಿಯ ಜಾತಿಗೆ ಸೇರಿದ (ತ್ವಷ್ಟ್ರವು), ಯತ್ರ= ಮೋಕ್ಷದಲ್ಲಿ ಹರಿಯ ಪಟ್ಟಣದಲ್ಲಿ, ಜರತೀಭಿಃ= ಚೆನ್ನಾಗಿ ಅಭಿವೃದ್ಧವಾದ, ಚಿದಾತ್ಮಭಿಃ= ಜ್ಞಾನಾತ್ಮಕವಾದ, ಓಷಧೀಭಿಃ= ಓಷಧಿಗಳಿಂದ= ವಂಶ ಮೊದಲಾದವುಗಳಿಂದ (ಬಿದಿರು ಮೊದಲಾದವುಗಳಿಂದ), ಕ್ರೀಡಾಯೈ= ಕ್ರೀಡೆಗೋಸ್ಕರವಾಗಿ, ರಚಿತಂ= ರಚಿತವಾದ, ಧ್ವಜಂ= ಧ್ವಜವನ್ನು, ಚಾಪಂ= ಬಾಣವನ್ನು ಮತ್ತು, ವೇಣುರಥಾದಿಕಂ= ವೇಣುರಥಾದಿಗಳನ್ನು, ಶಕುನಾನಾಂ= ಪಕ್ಷಿಗಳ, ಪತತ್ರಿಣಾಂ= ರೆಕ್ಕೆಗಳ, ಪರ್ಣೈಃ= ಗರಿಗಳಿಂದ, ದ್ಯುಭಿಃ= ಪ್ರಕಾಶಿಸುವ, ಅಶ್ಮಭಿಃ= ವಿಚಿತ್ರ ರತ್ನಗಳಿಂದ, ಚಿತ್ರಿತಂ= ಅಲಂಕೃತವಾದುದನ್ನು, ಪುನಃ= ಮತ್ತೆ, ಹಿರಣ್ಯವಂತಂ= ಚಿನ್ನದಿಂದ ಕೂಡಿದುದನ್ನಾಗಿ, ಕರ್ತುಂ= ಮಾಡಲು, ಇಚ್ಛತಿ= ಇಚ್ಛಿಸುತ್ತಾನೆಯೋ, ತತ್ರ= ಅಲ್ಲಿ, ಮಾಂ= ನನ್ನನ್ನು, ಅಮೃತಂ ಕೃಧಿ= ಮುಕ್ತನನ್ನಾಗಿ ಮಾಡು, ಪ್ರಾಯಪಾಠಬಲಾತ್= ಪ್ರಾಯಪಾಠದ ಬಲದಿಂದ, ಅತ್ರಾಪಿ= ಈ ಮಂತ್ರದಲ್ಲಿಯೂ, ಏತದ್ವಾಕ್ಯಂ= ತತ್ರಮಾಂ ಅಮೃತಂ ಕೃಧಿ ಎಂಬ ವಾಕ್ಯವು, ಊಹ್ಯತೇ= ಊಹಿಸಲ್ಪಡುತ್ತದೆ ಅಥವಾ, ಇಂದೋ= ಎಲೈ ಪವಮಾನನೇ, ತತ್ರ= ಅಲ್ಲಿ, ಮಾಂ= ನನ್ನನ್ನು, ಪರಿಸ್ರವ= ಕರೆದುಕೊಂಡು ಹೋಗು, ಇತಿವಾ= ಎಂದಾಗಲೀ, ಭವೇತ್= ಊಹಿಸಲ್ಪಡುತ್ತದೆ.

**ಅನುವಾದ–** ಕಾರ್ಮಾರ ಎಂದರೆ ಬಡಗಿಯ ಜಾತಿಯವನು ಎಂದು ಅರ್ಥ. ಯಾವ ಮೋಕ್ಷರೂಪವಾದ ಹರಿಯ ಪಟ್ಟಣದಲ್ಲಿ ಚೆನ್ನಾಗಿ ಬೆಳೆದ ಚಿದಾತ್ಮಕವಾದ ವಂಶಾದಿ ಓಷಧಿಗಳಿಂದ ಕ್ರೀಡೆಗಾಗಿಯೇ ರಚಿತವಾದ ದಿವ್ಯವಾದ ಧ್ವಜ, ಚಾಪ, ಬಾಣ, ವೇಣು, ರಥಾದಿಗಳನ್ನು ಪಕ್ಷಿಗಳ ರೆಕ್ಕೆಗಳ ಗರಿಯಿಂದ ಮತ್ತು ಹೊಳೆಯುವ ನಾನಾವಿಧವಾದ ರತ್ನಗಳಿಂದ ಅಲಂಕೃತವಾದವುಗಳನ್ನು ಪುನಃ ತ್ವಷ್ಟ್ರವು ಚಿನ್ನದಿಂದ

ಅಲಂಕಾರ ಮಾಡಲು ಇಚ್ಛಿಸುತ್ತಾನೋ ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ತತ್ರಮಾಂ ಅಮೃತಂ ಕೃಧಿ ಎಂಬ ವಾಕ್ಯವು ಇಲ್ಲಿ ಇಲ್ಲದಿದ್ದರೂ ಈ ಪ್ರಕರಣದಲ್ಲಿ ಅನೇಕ ಬಾರಿ ಹೇಳಲ್ಪಟ್ಟಿರುವುದರಿಂದ ಇಲ್ಲೂ ಅದನ್ನು ಊಹಿಸಬೇಕು ಅಥವಾ ಇಲ್ಲಿಯೇ ಇರುವ ಇಂದ್ರಾಯೇಂದೋ ಪರಿಸ್ರವ= ಎಲೈ ಪವಮಾನನೇ ಅಂತಹ ಪರಮೇಶ್ವರನ ಬಳಿಗೆ ನನ್ನನ್ನು ಕರೆದುಕೊಂಡು ಹೋಗು ಎಂದಾಗಲೀ ಅನ್ವಯವನ್ನು ಹೇಳಬೇಕು.

ಯತ್ರ ಕಾರುರಹಂ ತ್ವಷ್ಟಾ ಯತ್ರಾಸ್ತೇ ಜಾತಿತೋ ಭಿಷಕ್ ।
ಯತ್ರೋಪಲಕ್ಷೇಪಣೀ ಚ ನನಾ ನಾನಾವಿಧಃ ಕಿಲ ॥ ೬೪೭ ॥

ನಾನಾಧಿಯಸ್ತಾರತಮ್ಯಬುದ್ಧಯೋ ವಸವೋಽಖಿಲಾಃ ।
ವಿಚಿತ್ರವಸುಯುಕ್ತಾ ವಾ ಮುಕ್ತಾಃ ಸರ್ವೇಽನುಗಾ ಇವ ॥ ೬೪೮ ॥

ವಯಂ ತಸ್ಥಿಮ ಕೃಷ್ಣಸ್ಯ ತತ್ರ ಮಾಮಮೃತಂ ಕೃಧಿ ।
ಅವತಾರೇಽನುಗಮನಾಭಾವಾತ್ ಸರ್ವೇಽನುಗಾ ಇವ ॥ ೬೪೯ ॥

**ಅರ್ಥ–** ಯತ್ರ= ಯಾವ ವಿಷ್ಣುಲೋಕದಲ್ಲಿ, ಕಾರುರಹಂ= ಬಡಗಿಯಾದ ತ್ವಷ್ಟ್ರುವಾದ ನಾನು ಇದ್ದೇನೆಯೋ, ಯತ್ರ= ಎಲ್ಲಿ, ಜಾತಿತಃ= ಜಾತಿಯಿಂದ, ಭಿಷಕ್= ವೈದ್ಯನಾದವನು, ಆಸ್ತೆ= ಇದ್ದಾನೆಯೋ, ಯತ್ರ= ಎಲ್ಲಿ, ಉಪಲಕ್ಷೇಪಣೀ= ಕಲ್ಲುಗಳನ್ನು ಎಸೆಯುವ, ನನಾ ನಾನಾವಿಧಃ= ನಾನಾವಿಧವಾದ, ಕಿಲ= ಸಾಮಗ್ರಿಗಳು ಪ್ರಸಿದ್ಧವಾಗಿವೆಯೋ, ನಾನಾಧಿಯಃ= ತಾರತಮ್ಯಬುದ್ಧಿಯುಳ್ಳ, ವಸೂಯವಃ= ಎಲ್ಲ ವಸುಗಳು ಅಥವಾ ವಿಚಿತ್ರ ಧನದಿಂದ ಕೂಡಿದ ಮುಕ್ತರು, ಸರ್ವೇ= ಎಲ್ಲರೂ, ಅನುಗಾ ಇವ= ಅನುಚರರಂತೆ ಇರುತ್ತಾರೆಯೋ, ವಯಂ= ನಾವು, ತಸ್ಥಿಮ= ಇರುತ್ತೇವೆಯೋ, ಕೃಷ್ಣಸ್ಯ= ಕೃಷ್ಣನ, ತತ್ರ= ಆ ಪಟ್ಟಣದಲ್ಲಿ, ಮಾಂ= ನನ್ನನ್ನು, ಅಮೃತಂ ಕೃಧಿ= ಮುಕ್ತನನ್ನಾಗಿ ಮಾಡು, ಅವತಾರೇ= ಅವತಾರ ಕಾಲದಲ್ಲಿ, ಅನುಗಮನಾಭಾವಾತ್= ಅನುಗಮನವು ಇಲ್ಲದಿರುವುದರಿಂದ, ಸರ್ವೇ= ಎಲ್ಲರೂ, ಅನುಗಾ ಇವ= ಅನುಗಮನ ಉಳ್ಳವರಂತೆ ಎಂದು ಹೇಳಲಾಗಿದೆ.

**ಅನುವಾದ–** ಎಲ್ಲಿ ಬಡಗಿಯಾದ ತ್ವಷ್ಟ್ರುವಾದ ನಾನು ಇರುತ್ತೇನೆಯೋ ಎಲ್ಲಿ ಜಾತಿಯಿಂದ ವೈದ್ಯರಾದ ಅಶ್ವಿನ್ಯಾದಿ ದೇವತೆಗಳು ಇರುತ್ತಾರೆಯೋ, ಎಲ್ಲಿ ವಿಹಾರಾರ್ಥವಾಗಿ ಕಲ್ಲುಗ್ಗಳನ್ನು ಎಸೆಯುವ ನಾನಾ ಸಾಧನಗಳು ಇರುತ್ತವೆಯೋ, ಎಲ್ಲಿ ತಾರತಮ್ಯಬುದ್ಧಿಯನ್ನು ಹೊಂದಿದ ಅನೇಕ ವಸುಗಳು ಇರುತ್ತಾರೆಯೋ ಅಥವಾ ಎಲ್ಲಿ ವಿಚಿತ್ರೈಶ್ವರ್ಯದಿಂದ ಕೂಡಿದ ಮುಕ್ತರು ಇರುತ್ತಾರೆಯೋ ಅಲ್ಲಿ ನಾವೆಲ್ಲರೂ ಅನುಚರರಂತೆ ಇರುತ್ತೇವೆ. ಕೃಷ್ಣನ ಅಂತಹ ಪಟ್ಟಣದಲ್ಲಿ ನನ್ನನ್ನು

ಮುಕ್ತನನ್ನಾಗಿ ಮಾಡು. ಅವತಾರದಲ್ಲಿ ಅನುಗಮನವಿಲ್ಲದಿರುವುದರಿಂದ ಎಲ್ಲರೂ ಅನುಗಮನ ಉಳ್ಳವರಂತೆ ಎಂದು ಹೇಳಲಾಗಿದೆ.

**ಭಾವವಿಲಾಸಿನೀ–** ತದ್ವಾಕ್ಯಂ ತತ್ರ ಮಾಮಮೃತಂ ಕೃಧೀತಿ ವಾಕ್ಯಮ್ । ಯಥಾಸ್ಥಿತ ಪದಯೋಜನಾಪಿ ಘಟತ ಇತ್ಯಾಹ – **ಪರಿಸ್ರವೇತಿ** ॥ ೯೪೩-೯೫೦ ॥

ಯತ್ರ ವಿಷ್ಣೋಃ ಸಮೀಪಸ್ಥಸಾಮಂತಸ್ಯ ಪ್ರಧಾನಿನಃ ।
ಉಪಮಂತ್ರಿಪದೋಕ್ತಸ್ಯ ಮುಕ್ತಶಕ್ರಾದಿರೂಪಿಣಃ ॥ ೯೫೦ ॥

ರಥಂ ಜ್ಞಾನಾನಂದಮಯಮಶ್ವೋ ಮುಕ್ತತುರಂಗಮಃ ।
ಸುಖಂ ಸುಖೇನೈವ ವೋಢಾ ಪರ್ಯಕ್ ಪ್ರಾಪಯಿತಾ ಕಿಲ ॥ ೯೫೧ ॥

ರೋಮಣ್ವಂತೌ ರೋಮವಂತೌ ಮೇಷೌ ಜ್ಞಾನಶರೀರಿಣೌ ।
ತೌ ಭೇದೌ ಪುರತಸ್ತಸ್ಯ ಮಿಥಸ್ತಾಡನಕಾರಿಣೌ ॥ ೯೫೨ ॥

ಸುಖಂ ಸುಖೇನೈವ ದುಃಖಂ ವೈರಾದ್ಯಂ ತು ನ ಕಿಂಚನ ।
ಮುಕ್ತತ್ವಾತ್ ತಸ್ಯ ಶೇಪೋಽಂಡಂ ಮಹತ್ಸುಖಮಯಂ ಸದಾ ॥ ೯೫೩ ॥

ಹಂಸಾನಾಂ ಮಂತ್ರಿಣಸ್ತಸ್ಯ ವೋಢಾರೌ ಯತ್ರ ಲೀಲಯಾ ।
ಯದ್ಭಿಂತ ಇತಿ ಭೇದೌ ಚ ಸ್ಯಾತಾಂ ಭೇದನಕಾರಿಣೌ ॥ ೯೫೪ ॥

ಯದಿತ್ಥಂ ಯತ್ರ ಮಂಡೂಕಾ ವಾಃ ಸರೋವರವಾರಿ ಚ ।
ಇಚ್ಛಂತಿ ಚಿತ್ಸುಖಾಕಾರಾಸ್ತತ್ರ ಮಾಮಮೃತಂ ಕೃಧಿ ।
ಜಾತ್ಯೇಕವಚನಂ ಚೇದಮೇಕಭೇಕಂ ಸರಃ ಕ್ವ ತತ್ ॥ ೯೫೫ ॥

**ಅರ್ಥ–** ಯತ್ರ= ಎಲ್ಲಿ, ಉಪಮಂತ್ರಿಪದೋಕ್ತಸ್ಯ= ಮಂತ್ರದಲ್ಲಿ ಉಪಮಂತ್ರಿ ಪದದಿಂದ ಹೇಳಲ್ಪಟ್ಟ, ವಿಷ್ಣೋಃ ಸಮೀಪಸ್ಥಸಾಮಂತಸ್ಯ= ವಿಷ್ಣುವಿನ ಸಮೀಪದಲ್ಲೇ ಇರುವ ಸಾಮಂತನಿಗೆ, ಪ್ರಧಾನಿನಃ= ಪ್ರಧಾನಿಯಾದ, ಮುಕ್ತಶಕ್ರಾದಿರೂಪಿಣಃ= ಮುಕ್ತನಾದ ಇಂದ್ರನ, ಜ್ಞಾನಾನಂದಮಯಂ= ಜ್ಞಾನಾನಂದಮಯವಾದ, ರಥಂ= ರಥವನ್ನು, ಅಶ್ವಃ= ಮುಕ್ತತುರಂಗಮವು, ಸುಖಂ= ಸುಖೇನೈವ= ಸುಖವಾಗಿಯೇ, ವೋಢಾ= ಪರ್ಯಕ್ ಪ್ರಾಪಯಿತಾ ಕಿಲ= ಎಲ್ಲ ಕಡೆಗಳಿಗೂ ಕರೆದುಕೊಂಡು ಹೋಗುವುದಷ್ಟೆ, ರೋಮಣ್ವಂತೌ= ರೋಮವಂತೌ= ರೋಮದಿಂದ ಕೂಡಿದ, ಮೇಷೌ= ಜ್ಞಾನಶರೀರವುಳ್ಳ ಟಗರುಗಳು, ತೌ= ಭೇದಕಗಳಾದ ಅವೆರಡು, ಪುರತಃ ತಸ್ಯ ಮಿಥಸ್ತಾಡನಕಾರಿಣೌ= ಇಂದ್ರನ ಎದುರಿಗೆ ಲೀಲೆಯಿಂದ ಪರಸ್ಪರ ಜಗಳ ಆಡುವುಗಳಾಗಿ ಇರುತ್ತವೆಯೋ, ಸುಖಂ= ಸುಖದಿಂದಲೇ

ಹೊರತು, ವೈರಾದ್ಯಂ ದುಃಖಂ= ವೈರ ಮೊದಲಾದ ದುಃಖಗಳು, ಕಿಂಚನ ನ= ಯಾವುದೂ ಇಲ್ಲ, ಮುಕ್ತತ್ವಾತ್= ಮುಕ್ತವಾಗಿರುವುದರಿಂದ, ತಸ್ಯ= ಆ ಎರಡು ಟಗರಿನ, ಶೇಪಃ= ಅಂಡಂ= ಅಂಡವು, ಸದಾ= ಯಾವಾಗಲೂ, ಮಹತ್ಸುಖಮಯಂ= ಮಹಾಸುಖ ಪೂರ್ಣವಾದುದು.

ಹಂಸಾನಾಂ= ಪರಿಶುದ್ಧರಾದ ತನ್ನ ಉತ್ತಮರಿಗೆ, ಮಂತ್ರಿಣಃ= ಮಂತ್ರಿಯಾದ, ತಸ್ಯ= ಆ ಶಕ್ರನನ್ನು, ಯತ್ರ= ಎಲ್ಲಿ, ಲೀಲಯಾ= ಲೀಲೆಯಿಂದಲೇ, ವೋಢಾರೌ= ಕರೆದುಕೊಂಡು ಹೋಗುತ್ತವೆಯೋ, ಯತ್= ಎಲ್ಲಿ, ಭಿಂತಃ= ಭೇದಿಸುತ್ತವೆ ಎಂದು (ಇದು ಕ್ರಿಯಾಪದ), ಭೇದೌ= ಭೇದ ಎಂದರೆ, ಭೇದನಕಾರಿಣೌ= ಭೇದನವನ್ನು= ತಾಡನವನ್ನು ಮಾಡುವವುಗಳು ಎಂದು, ಸ್ಯಾತಾಂ= ಅರ್ಥವಾಗುತ್ತವೆ.

ಯತ್= ಯಾವುದು, ಇತ್ಥಂ= ಈ ರೀತಿಯಾಗಿದೆಯೋ, ಯತ್ರ= ಎಲ್ಲಿ, ಚಿತ್ಸುಖಾಕಾರಾಃ= ಚಿತ್ಸುಖಾಕಾರವಾದ, ಮಂಡೂಕಾಃ= ಕಪ್ಪೆಗಳು, ವಾಃ= ಸರೋವರದ ನೀರನ್ನು, ಇಚ್ಛಂತಿ= ಇಚ್ಛಿಸುತ್ತವೆಯೋ, ತತ್ರ= ಅಲ್ಲಿ, ಮಾಂ= ನನ್ನನ್ನು, ಅಮೃತಂ ಕೃಧಿ= ಮುಕ್ತನನ್ನಾಗಿ ಮಾಡು, ಇದಂ= ಮಂಡೂಕವೆಂಬುದು ಜಾತ್ಯೇಕವಚನಂ= ಜಾತ್ಯೇಕವಚನವಾಗಿದೆ, ಏಕಭೇಕಂ= ಒಂದೇ ಮಂಡೂಕವುಳ್ಳ, ತತ್ ಸರಃ= ಆ ಸರೋವರವು, ಕ್ವ= ಎಲ್ಲಿದೆ?

**ಅನುವಾದ–** ಎಲ್ಲಿ ವಿಷ್ಣುವಿನ ಸಮೀಪದಲ್ಲಿರುವ ಸಾಮಂತರಿಗೆ ಪ್ರಧಾನಿಯಾದ್ದರಿಂದ ಉಪಮಂತ್ರಿ ಪದೋಕ್ತರಾದ ಮುಕ್ತಶಕ್ರಾದಿಗಳ ಜ್ಞಾನಾನಂದಮಯವಾದ ರಥವನ್ನು ಮುಕ್ತತುರಂಗವು ಸುಖದಿಂದಲೇ ಎಲ್ಲ ಕಡೆಗಳಿಗೂ ಕರೆದುಕೊಂಡು ಹೋಗುತ್ತದೆಯೋ, ಎಲ್ಲಿ ಬಹಳ ರೋಮಗಳಿಂದ ಕೂಡಿದ ಜ್ಞಾನಶರೀರಗಳಾದ ಎರಡು ಟಗರುಗಳು ಇಂದ್ರನ ಎದುರಿಗೆ ಲೀಲೆಯಿಂದ ಪರಸ್ಪರ ಶಿರಸ್ತಾಡನವನ್ನು ಮಾಡುತ್ತವೋ, ಅವು ಆನಂದದಿಂದಲೇ ಹಾಗೆ ಮಾಡುತ್ತವೆ. ಏಕೆಂದರೆ ಮುಕ್ತವಾಗಿರುವುದರಿಂದ ಅಲ್ಲಿ ವೈರಾದಿ ದುಃಖಗಳು ಇಲ್ಲ. ಆ ಎರಡು ಮೇಷಗಳ ಅಂಡವು ಸುಖಮಯವಾಗಿ ಬೃಹತ್ತಾಗಿದೆ. ಹಂಸರಿಗೆ ಎಂದರೆ ಶ್ರೇಷ್ಠರಿಗೆ ಮಂತ್ರಿಯಾದ ಅವನನ್ನು ಅಂತಹ ಮೇಷಗಳು ಎಲ್ಲಿ ಲೀಲೆಯಿಂದ ಕರೆದುಕೊಂಡು ಹೋಗುತ್ತವೆಯೋ, ಭಿಂತಃ ಇತಿ ಭೇದೌ ಎಂಬ ವ್ಯುತ್ಪತ್ತಿಯಿಂದ ಭೇದೌ ಎಂದರೆ ಭೇದನವನ್ನು ಮಾಡುವಂತಹವು ಎಂದು ಅರ್ಥವಾಗುತ್ತದೆ, ಮತ್ತು ಎಲ್ಲಿ ಈ ರೀತಿಯಾಗಿ ಜ್ಞಾನಾನಂದಮಯವಾದ ಕಪ್ಪೆಗಳು ಸರೋವರದ ನೀರನ್ನು ಬಯಸುತ್ತವೆಯೋ, ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಮಂತ್ರದಲ್ಲಿರುವ ಮಂಡೂಕಃ ಎಂಬ ಶಬ್ದವು ಜಾತ್ಯೇಕವಚನಾಂತವಾಗಿದೆ. ಒಂದೇ ಮಂಡೂಕವಿರುವ ಸರೋವರವು ಎಲ್ಲಿರುತ್ತದೆ?

**ಭಾವವಿಲಾಸಿನೀ–** ಜ್ಞಾನಾನಂದಪ್ರಧಾನಂ ದರ್ಶನೀಯಂ ಸುಖಕರಂ ಚೇತ್ಯರ್ಥಃ ॥ ೯೫೧ ॥

ತಸ್ಯ ಮೇಷದ್ವಯಸ್ಯ ॥ ೯೫೨ ॥

ಮಹಚ್ಛ್ರೇಯಃ ಅಖಂಡಸುಖಂ ಸುಖಮಯಮಿತಿ ಪ್ರಾಚೀನ ಸುಖಪದಾವೃತ್ತ್ಯಾ ಅರ್ಥಾಂತರಕಥನಮ್ । ಅಸ್ಮಿನ್ ಪಕ್ಷೇ ಶೇಷಃ ಪದಸ್ಯ ಯಥಾಸ್ಥಿತವಿಭಕ್ತಿರೇವೇತಿ ಗುಣಃ ॥ ೯೫೩- ೯೫೪ ॥ ಯದ್ ಯಸ್ಮಾತ್ ॥ ೯೫೫ ॥

ಏವಂ ನಾನಾವಿಧಾ ಮುಕ್ತಾ ಯತ್ರ ತತ್ರಾಮೃತಂ ಕೃಧಿ । ಇತ್ಯುಕ್ತ್ವಾ ತದ್ಗಜೀವಾನಾಂ ಮುಕ್ತತ್ವಂ ಸುತರಾಮಭೂತ್ ॥ ೯೫೬ ॥

**ಅರ್ಥ–** ಏವಂ= ಈ ರೀತಿಯಾಗಿ, ನಾನಾವಿಧಾ ಮುಕ್ತಾಃ= ನಾನಾವಿಧವಾದ ಮುಕ್ತರು, ಯತ್ರ= ಎಲ್ಲಿ ಇರುತ್ತಾರೆಯೋ, ತತ್ರ= ಅಲ್ಲಿ, ಅಮೃತಂ ಕೃಧಿ= ನನ್ನನ್ನು ಮುಕ್ತನನ್ನಾಗಿ ಮಾಡು, ಇತ್ಯುಕ್ತ್ವಾ= ಎಂಬ ವಚನದಿಂದ, ತದ್ಗಜೀವಾನಾಂ= ಅಲ್ಲಿರುವ ಜೀವರಿಗೆ, ಮುಕ್ತತ್ವಂ= ಮುಕ್ತತ್ವವು, ಸುತರಾಮಭೂತ್= ಸ್ಪಷ್ಟವಾಗಿಯೇ ಸಿದ್ಧವಾಯಿತು.

**ಅನುವಾದ–** ಹೀಗೆ ನಾನಾವಿಧವಾದ ಮುಕ್ತರು ಎಲ್ಲಿರುತ್ತಾರೆಯೋ ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು ಎಂದು ಹೇಳಿದುದರಿಂದ ಅಲ್ಲಿರುವ ಜೀವರು ಮುಕ್ತರೆಂದು ಸ್ಪಷ್ಟವಾಗಿ ಸಿದ್ಧವಾಯಿತು.

**ಭಾವವಿಲಾಸಿನೀ–** ತದ್ಗಜೀವಾನಾಂ ಲೋಕಸ್ಥಮಂಡೂಕಾದಿಜೀವಾನಾಮ್ ॥ ೯೫೬ ॥

ತದುತ್ತರರ್ಚಾಂ ಚರ್ಚಾ ಚ ಕಿಂಚಿತ್ಕಿಂಚಿದ್ ವಿವಿಚ್ಯತೇ ।
ಅಮೃತೇ ಅಕ್ಷಿತೇ ಯತ್ರ ಲೋಕೇ ಸುಕೃತಕರ್ಮಭಿಃ ।
ಸುಷ್ಠುಚೀರ್ಣನಿವೃತ್ತಾಖ್ಯಮುಕ್ತಿಸಾಧನಕರ್ಮಭಿಃ ॥ ೯೫೭ ॥

ದೇವೈರ್ಮಹೀಯತೇ ವಿಷ್ಣೋಃ ಪರಮಂ ತತ್ ಪದಂ ಸದಾ ।
ತತ್ರಾಮೃತಂ ಮಾಂ ಕೃಧೀಂದೋ ಪವಮಾನೇಷ್ಟದಾಯಕ ॥ ೯೫೮ ॥

ಇಂದ್ರಾಯ ಪರಮೈಶ್ವರ್ಯಸಂಪನ್ನಾಯ ಪರಿಸ್ರವ ।
ಪರಿತಃ ಸ್ರಾವಯೇಂದ್ರಂ ತಮುದ್ದಿಶ್ಯ ಪ್ರಾಪಯಾಶು ಮಾಂ ॥ ೯೫೯ ॥

ಣಿಚೋಂತರ್ನೀತತಾ ತಸ್ಯ ಸಹಪ್ರಾಪ್ತಿವಿವಕ್ಷಯಾ ।
ಇತ್ಯರ್ಥಾನಾಂ ಮುಮೂರ್ಷೂಣಾಂ ಕರ್ಣೇದ್ಯಾಪಿ ಜಪಂತಿ ಯಾಮ್
॥ ೯೬೦ ॥

**ಅರ್ಥ—** ತದುತ್ತರರ್ಚಾಂ= ಅದರ ಅನಂತರದ ಋಕ್‌ಗಳ, ಚರ್ಚಾ= ಚರ್ಚೆಯು, ಕಿಂಚಿತ್‌ಕಿಂಚಿತ್= ಸ್ವಲ್ಪಸ್ವಲ್ಪವೇ, ವಿವಿಚ್ಯತೇ= ಮಾಡಲ್ಪಡುತ್ತದೆ, ಅಮೃತೇ= ಮರಣರಹಿತವಾದ, ಅಕ್ಷಿತೇ= ಕ್ಷಯರಹಿತವಾದ, ಯತ್ರ ಲೋಕೇ= ಯಾವ ಲೋಕದಲ್ಲಿ, ಸುಕೃತಕರ್ಮಭಿಃ= ಸ್ವನುಷ್ಠಿತೈರ್ನಿವೃತ್ತಾಖ್ಯಮುಕ್ತಿಸಾಧಕಕರ್ಮಭಿಃ= ಮುಕ್ತಿಸಾಧನ ನಿವೃತ್ತ ಕರ್ಮಗಳನ್ನು ಚೆನ್ನಾಗಿ ಮಾಡಿದಂತಹ, ದೇವೈಃ= ದೇವತೆಗಳಿಂದ, ವಿಷ್ಣೋಃ= ವಿಷ್ಣುವಿನ, ತತ್ಪರಮಂ ಪದಂ= ಆ ಶ್ರೇಷ್ಠವಾದ ಸ್ಥಾನವು, ಸದಾ= ಯಾವಾಗಲೂ, ಮಹೀಯತೇ= ಪೂಜಿಸಲ್ಪಡುತ್ತದೆಯೋ, ತತ್ರ= ಅಲ್ಲಿ, ಮಾಂ= ನನ್ನನ್ನು, ಅಮೃತಂ= ಮುಕ್ತನನ್ನಾಗಿ, ಕೃಧಿ= ಮಾಡು, ಇಂದೋ= ಇಷ್ಟದಾಯಕ ಪವಮಾನ= ಇಷ್ಟದಾಯಕನಾದ ಪವಮಾನನೇ, ಇಂದ್ರಾಯ= ಪರಮೈಶ್ವರ್ಯಸಂಪನ್ನನಾದ ನಾರಾಯಣನನ್ನು ಕುರಿತು, ಪರಿಸ್ರವ= ಪರಿತಃ ಸ್ರಾವಯ= ಆ ಇಂದ್ರನನ್ನು ಉದ್ದೇಶಿಸಿ ಬೇಗ ನನ್ನನ್ನು ಕರೆದುಕೊಂಡು ಹೋಗು, ಣಿಚಃ= ಣಿಚ್ ಪ್ರತ್ಯಯಕ್ಕೆ, ಅಂತರ್ಣೀತತಾ= ಅಂತರ್ಣೀತತ್ವವು, ತಸ್ಯ= ಆ ಪವಮಾನನ, ಸಹಪ್ರಾಪ್ತಿ ವಿವಕ್ಷಯಾ= ಜೊತೆಯಲ್ಲೇ ಭಗವತ್ಪ್ರಾಪ್ತಿಯ ವಿವಕ್ಷೆಯಿಂದ. ಇತ್ಯರ್ಥಾನಾಂ= ಇಂತಹ ಅರ್ಥವುಳ್ಳ, ಯಾನ್= ಯಾವ ಮಂತ್ರಗಳನ್ನು, ಅದ್ಯಾಪಿ= ಈಗಲೂ ಸಹ, ಮುಮೂರ್ಷೂಣಾಂ= ಮರಣಕ್ಕೆ ಸನ್ನಿಹಿತರಾದವರ, ಕರ್ಣೇ= ಕಿವಿಗಳಲ್ಲಿ, ಜಪಂತಿ= ಜಪಿಸುತ್ತಾರೆ.

**ಅನುವಾದ—** ಅಲ್ಲಿಂದ ಮುಂದಿನ ಮಂತ್ರಗಳ ಚರ್ಚೆಯನ್ನು ಸ್ವಲ್ಪ ಸ್ವಲ್ಪವಾಗಿ ಮಾಡುತ್ತೇವೆ. ಮರಣರಹಿತವಾದ ಮತ್ತು ನಾಶರಹಿತವಾದ ಯಾವ ಲೋಕದಲ್ಲಿ ಸುಕೃತ ಕರ್ಮಭಿಃ ಎಂದರೆ ಮೋಕ್ಷಸಾಧನ ನಿವೃತ್ತಕರ್ಮವನ್ನು ಚೆನ್ನಾಗಿ ಅನುಷ್ಠಾನ ಮಾಡಿದ ದೇವತೆಗಳಿಂದ ಯಾವ ವಿಷ್ಣುವಿನ ಶ್ರೇಷ್ಠವಾದ ಸ್ಥಾನವು ಪೂಜಿಸಲ್ಪಡುತ್ತದೆಯೋ ಅಂತಹ ಲೋಕದಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಎಲೈ ಇಷ್ಟದಾಯಕನಾದ್ದರಿಂದ ಇಂದು ಎಂದು ಕರೆಯಲ್ಪಡುವ ಪವಮಾನನೇ ಇಂದ್ರಾಯ ಎಂದರೆ ಪರಮೈಶ್ವರ್ಯ ಸಂಪನ್ನನಾದ ನಾರಾಯಣನ ಬಳಿಗೆ ನನ್ನನ್ನು ಬೇಗ ಕರೆದುಕೊಂಡು ಹೋಗು. ಸ್ರಾವಯ ಎನ್ನುವ ಅರ್ಥದಲ್ಲಿ ಅಂತರ್ಣೀತ ಣಿಚ್‌ನ ಪ್ರಯೋಗವಾದ ಸ್ರವ ಎಂಬ ಪ್ರಯೋಗವು ಮುಖ್ಯಪ್ರಾಣನ ಜೊತೆಯಲ್ಲಿಯೇ ಜೀವನು ಪರಮಾತ್ಮನನ್ನು ಹೊಂದುತ್ತಾನೆ ಎಂದು ಸೂಚಿಸುತ್ತದೆ. ಇಂತಹ ಅರ್ಥವುಳ್ಳ ಮಂತ್ರಗಳನ್ನು ಈಗಲೂ ಸಹ ಮುಮೂರ್ಷುಗಳ ಕಿವಿಯಲ್ಲಿ ಜಪಿಸುತ್ತಾರೆ.

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧಿ ॥ ೯೬೧ ॥**

**ಇತಿ ಶ್ರುತೇಃ ಶಿರಃಪಾಣಿದ್ವಯಮಧ್ಯಾಂಘ್ರಿರೂಪಿಣಃ ।**
**ಪ್ರಿಯಮೋದಪ್ರಮೋದಾನಂದಮುದಾಖ್ಯಾಃ ಸದಾಸತೇ ॥ ೯೬೨ ॥**

**ಅರ್ಥ–** ಇತಿ= ಈ ರೀತಿಯಾಗಿ, ಶ್ರುತೇಃ= ಶ್ರುತಿ ಇರುವುದರಿಂದ, ಶಿರಃಪಾಣಿದ್ವಯಮಧ್ಯಾಂಘ್ರಿ ರೂಪಿಣಃ= ಶಿರಸ್ಸು, ಎರಡು ಪಾಣಿಗಳು, ಮಧ್ಯಭಾಗ ಮತ್ತು ಪಾದರೂಪವಾದ, ಪ್ರಿಯಮೋದಪ್ರಮೋದಾನಂದಮುದಾಖ್ಯಾಃ= ಪ್ರಿಯ ಮೋದ ಪ್ರಮೋದ ಆನಂದ ಮತ್ತು ಮುತ್ ಎಂಬ ಹೆಸರುಳ್ಳ ಅವಯವಗಳು, ಸದಾ= ಯಾವಾಗಲೂ, ಆಸತೇ= ಇರುತ್ತವೆ.

**ಅನುವಾದ– ಯತ್ರಾನಂದಾಶ್ಚ ಮೋದಾಶ್ಚ ಎಂಬ ಶ್ರುತಿ ಇರುವುದರಿಂದ ಪ್ರಿಯ ಮೋದ ಪ್ರಮೋದ ಆನಂದ ಮತ್ತು ಮುತ್ ರೂಪವಾದ ಶಿರಸ್ಸು, ಪಾಣಿದ್ವಯ, ಮಧ್ಯದೇಹ ಮತ್ತು ಅಂಘ್ರಿ ರೂಪವಾದ ಅವಯವಗಳು ಯಾವಾಗಲೂ ಇರುತ್ತವೆ.**

**ಕಾಮಾಪ್ತಿವ್ಯಕ್ತತತ್ಸೌಖ್ಯಂ ಯತಸ್ತೇಷಾಂ ಮನಃಪ್ರಿಯಮ್ ॥ ೯೬೩ ॥**

**ಅರ್ಥ–** ಕಾಮಾಪ್ತಿವ್ಯಕ್ತತತ್ಸೌಖ್ಯಂ= ಕಾಮ್ಯಪದಾರ್ಥದ ಪ್ರಾಪ್ತಿಯಿಂದ ಅಭಿವ್ಯಕ್ತವಾದ ಆ ಸುಖವು, ಯತಃ= ಯಾವ ಕಾರಣದಿಂದ, ತೇಷಾಂ= ಆ ಮುಕ್ತರಿಗೆ, ಮನಃಪ್ರಿಯಂ= ಮನಸ್ಸಿಗೆ ಪ್ರಿಯವಾಗಿರುತ್ತದೆಯೋ (ಆ ಕಾರಣದಿಂದ ಅದು ಪ್ರಿಯವೆಂದು ಕರೆಯಲ್ಪಡುತ್ತದೆ).

**ಅನುವಾದ– ಕಾಮ್ಯಪದಾರ್ಥಗಳ ಭೋಗದಿಂದ ಅಭಿವ್ಯಕ್ತವಾದ ಸ್ವರೂಪಸುಖವು ಮುಕ್ತರಿಗೆ ಮನಃಪ್ರಿಯವಾಗಿರುವುದರಿಂದ ಅದು ಪ್ರಿಯವೆಂದು ಕರೆಯಲ್ಪಡುತ್ತದೆ.**

**ಆನಂದಮಯರೂಪಸ್ಯ ಹರೇಃ ಸಾರೂಪ್ಯಮೀಯುಷಃ ।**
**ಮುಕ್ತಾಂಶ್ಚ ತಾದೃಶಾಕಾರಾನ್ ಸರ್ವಾನ್ ಶಂಸತಿ ಸಾ ಶ್ರುತಿಃ ॥ ೯೬೪ ॥**

**ಪ್ರತ್ಯೇಕಂ ಬಹುತಾಂ ಯಸ್ಮಾದಾನಂದಾದೇಶ್ಚ ಸಾ ಜಗೌ ।**
**ಏವಂ ಚ ತತ್ಸರೂಪಾಣಾಂ ಮುಕ್ತಾನಾಮಾಕೃತೇರ್ಬಲಾತ್ ॥ ೯೬೫ ॥**

**ಅರ್ಥ–** ಸಾ ಶ್ರುತಿಃ= ಆ ಶ್ರುತಿಯು, ಆನಂದಮಯರೂಪಸ್ಯ= ಆನಂದಮಯರೂಪನಾದ, ಹರೇಃ= ಹರಿಯ, ಸಾರೂಪ್ಯಂ= ಸಾರೂಪ್ಯವನ್ನು, ಈಯುಷಃ= ಹೊಂದುವಂತಹ, ಸರ್ವಾನ್ ಮುಕ್ತಾಂಶ್ಚ= ಎಲ್ಲ ಮುಕ್ತರನ್ನೂ, ತಾದೃಶಾಕಾರಾನ್= ಅಂತಹ ಆಕಾರವುಳ್ಳವರೆಂದು, ಶಂಸತಿ= ಹೊಗಳುತ್ತದೆ. ಸಾ= ಆ ಶ್ರುತಿಯು, ಆನಂದಾದೇಃ= ಆನಂದ ಮೊದಲಾದವುಗಳಿಗೆ, ಪ್ರತ್ಯೇಕಂ= ಪ್ರತ್ಯೇಕವಾಗಿ, ಯಸ್ಮಾತ್= ಯಾವ ಕಾರಣದಿಂದ,

ಬಹುತಾಂ= ಬಹುತ್ವವನ್ನು, ಜಗೌ= ಹೇಳಿತೋ, ಏವಂ ಚ= ಆದ್ದರಿಂದ, ತತ್ಸರೂಪಾಣಾಂ= ಪರಮಾತ್ಮ ಸರೂಪರಾದ, ಮುಕ್ತಾನಾಮ್= ಮುಕ್ತರಿಗೂ, ಆಕೃತೇರ್ಬಲಾತ್= ಪರಮಾತ್ಮನ ಆಕಾರಕ್ಕೆ ಸದೃಶವಾದ ಆಕಾರವಿರುವುದರಿಂದ ಅದರ ಬಲದಿಂದ (ಪಂಚಾನಂದರೂಪತ್ವವನ್ನು ಹೇಳಿತು).

**ಅನುವಾದ–** ಆನಂದಮಯರೂಪನಾದ ಹರಿಯ ಸಾರೂಪ್ಯವನ್ನು ಹೊಂದುವ ಎಲ್ಲ ಮುಕ್ತರನ್ನು ಆ ಶ್ರುತಿಯು ಹರಿಯ ಆಕಾರಕ್ಕೆ ಸದೃಶವಾದ ಆಕಾರವುಳ್ಳವರೆಂದು ಪ್ರಶಂಸಿಸುತ್ತದೆ. ಯಾವ ಕಾರಣದಿಂದ ಆ ಶ್ರುತಿಯು ಆನಂದಾದಿಗಳಿಗೆ ಪ್ರತ್ಯೇಕವಾಗಿ ಬಹುತ್ವವನ್ನು ಹೇಳಿತೋ ಆ ಕಾರಣದಿಂದ ಹರಿಯ ಸರೂಪನಾದ ಮುಕ್ತರಿಗೂ ಸಹ ಅಂತಹ ಆಕೃತಿಯ ಬಲದಿಂದ ಪಂಚಾನಂದರೂಪತ್ವವನ್ನೇ ಹೇಳಿತು.

**ಭಾವವಿಲಾಸಿನೀ–** ಕಾಮಾಪ್ತಿವ್ಯಕ್ತಂ, ತತ್ಸೌಖ್ಯಂ ತೇಷಾಂ ಮುಕ್ತಾನಾಂ ಪ್ರಿಯಾಖ್ಯಂ ಸೌಖ್ಯಂ ಯತಸ್ತೇಷಾಂ ಮನಃ ಪ್ರಿಯಂ ಅತಸ್ತಥೋಚ್ಯತೇ ॥ ೯೬೩–೯೬೪ ॥

ಬಹುತಾಂ ಆನಂದಾಶ್ಚ ಮೋದಾಶ್ಚೇತ್ಯಾದಿನಾ ಬಹುತಾಮ್ । ಏವಮ್ ಆನಂದಾದೀನಾಂ ಬಾಹುಲ್ಯೋಕ್ತಿಬಲೇನ ಮುಕ್ತಾನಾಮಪ್ಯತ್ರ ಗ್ರಾಹ್ಯತ್ವಾತ್ ತತ್‌ಸರೂಪಾಣಾಂ ತಸ್ಯ ವಿಷ್ಣೋಃ ಸಮಾನರೂಪಾಣಾಮ್ । ಆಕೃತೇಃ ಬಲಾತ್ ಯುಕ್ತಿಬಲಾತ್ । ಪಂಚಾನಂದರೂಪತಾಂ ಜಗಾವಿತಿ ಪೂರ್ವೇಣಾನ್ವಯಃ ॥ ೯೬೫ ॥

ಆನಂದಮಯಪಾದಸ್ಯ ಬ್ರಹ್ಮ ಪುಚ್ಛಮಿತಿ ಶ್ರುತಿಃ ।
ಪೂರ್ಣಮುದ್ರೂಪತಾಮೇವ ಪ್ರಾಹ ಪೂರ್ವಸಮಾಖ್ಯಯಾ ॥ ೯೬೬ ॥

ಪ್ರಿಯಾದಿಪೂರ್ಣತಾಂ ತತ್ತಚ್ಛ್ರುತಿರೇತತ್ಸಮಾಖ್ಯಯಾ ।
ಶಂಸತೀತ್ಯೇವ ಸಿದ್ಧೋಽರ್ಥೋ ನೋಚೇತ್ ವ್ಯರ್ಥಾಽತ್ರ ತತ್ಕಥಾ
॥ ೯೬೭॥

**ಅರ್ಥ–** ಆನಂದಮಯಪಾದಸ್ಯ= ಆನಂದಮಯನ ಪಾದಕ್ಕೆ, ಬ್ರಹ್ಮಪುಚ್ಛಂ ಇತಿ ಶ್ರುತಿಃ= ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ಶ್ರುತಿಯು, ಪೂರ್ವಸಮಾಖ್ಯಯಾ= ಯತ್ರಾನಂದಾಶ್ಚ ಮೋದಾಶ್ಚ ಎಂಬ ಪೂರ್ವಶ್ರುತಿಯ ಸಮಾಖ್ಯೆಯಿಂದ, ಪೂರ್ಣಮುದ್ರೂಪತಾಮೇವ= ಪೂರ್ಣಮುದ್ರೂಪತ್ವವನ್ನೇ, ಆಹ= ಹೇಳಿತು, ತತ್ತಚ್ಛ್ರುತಿಃ= ತಸ್ಯ ಪ್ರಿಯಮೇವಃ ಶಿರಃ ಇತ್ಯಾದಿ ಶ್ರುತಿಯು, ಏತತ್ಸಮಾಖ್ಯಯಾ= ಬ್ರಹ್ಮಪುಚ್ಛಂ ಎಂಬ ಶ್ರುತಿಯ ಸಮಾಖ್ಯೆಯಿಂದ, ಪ್ರಿಯಾದಿಪೂರ್ಣತಾಂ= ಪ್ರಿಯಾದಿಪೂರ್ಣತ್ವವನ್ನೇ, ಶಂಸತಿ ಇತಿ= ಪ್ರಶಂಸಿಸುತ್ತದೆ ಎಂಬ, ಅರ್ಥಃ ಏವ ಸಿದ್ಧಃ= ಅರ್ಥವೇ ಸಿದ್ಧವಾಗುತ್ತದೆ, ನೋಚೇತ್= ಇಲ್ಲದಿದ್ದರೆ, ಅತ್ರ=

ಯತ್ರಾನಂದಾಶ್ಚ ಎಂಬ ಶ್ರುತಿಯಲ್ಲಿ, ತತ್ಕಥಾ= ಮುದ್ರೂಪವಾದ ಸುಖವನ್ನು ಹೇಳುವುದು, ವ್ಯರ್ಥಾ= ವ್ಯರ್ಥವಾಗುತ್ತದೆ.

**ಅನುವಾದ–** ಆನಂದಮಯ ಪಾದಕ್ಕೆ ಬ್ರಹ್ಮಪುಚ್ಛವೆಂಬ ಶ್ರುತಿಯು ಪೂರ್ಣ ಮುದ್ರೂಪತ್ವವನ್ನೇ ಋಗ್ವೇದದ ಸಮಾಖ್ಯೆಯಿಂದ ಹೇಳುತ್ತದೆ. ತಸ್ಯಪ್ರಿಯಮೇವ ಶಿರಃ ಇತ್ಯಾದಿ ಶ್ರುತಿಯು ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ಶ್ರುತಿಯ ಸಮಾಖ್ಯೆಯಿಂದ ಪ್ರಿಯಾದಿಗಳಿಗೆ ಪೂರ್ಣತ್ವವನ್ನು ಹೇಳುತ್ತದೆ ಎಂಬ ಅರ್ಥವೇ ಸಿದ್ಧವಾಗುತ್ತದೆ. ಇಲ್ಲದಿದ್ದರೆ ಯತ್ರಾನಂದಾಶ್ಚ ಎಂಬ ಮಂತ್ರದಲ್ಲಿ ಮುದಃ ಎಂದು ಮುದ್ರೂಪವಾದ ಆನಂದವನ್ನು ಹೇಳುವುದು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಪೂರ್ಣಮುದ್ರೂಪತಾಂ ಸಂಪೂರ್ಣಮುದಾಖ್ಯಾನಂದವಿಶೇಷ ರೂಪತಾಮ್ । ಪೂರ್ವಸಮಾಖ್ಯಯಾ ಯಜುರ್ವೇದಾತ್ ಪೂರ್ವಂ ವಿದ್ಯಮಾನ ಋಗ್ವೇದಸ್ಥಿತದ್ವಾಕ್ಯಸಮಾಖ್ಯಯಾ । ತಸ್ಮಿನ್ನೇವ ಪೂರ್ವೋಕ್ತ ಮೋದಾದಿ ಸುಖಸಮಾಖ್ಯಾಯಾ ವಾ ॥ ೯೬೬ ॥

ತತ್ತಚ್ಛ್ರುತಿಃ ತಸ್ಯ ಪ್ರಿಯಮೇವ ಶಿರ ಇತ್ಯಾದಿಶ್ರುತಿಃ । ಏತತ್ಸಮಾಖ್ಯಯಾ ಬ್ರಹ್ಮ ಪುಚ್ಛಮಿತಿ ಶ್ರುತಿಸಮಾಖ್ಯಯಾ ಶಿರಃಪಾಣ್ಯಾದೀನಾಂ ಸುಖರೂಪತ್ವಕಥನಾತ್ ಪಾದಸ್ಯಾಪಿಮುದಾಖ್ಯ ಸುಖರೂಪತ್ವಸಿದ್ಧಿಃ । ಪಾದಸ್ಯ ಬ್ರಹ್ಮಪದೇನ ಪೂರ್ಣತ್ವಕಥನಾತ್ ಶಿರಃಪಾಣ್ಯಾದೀನಾಮಪಿ ಪೂರ್ಣತ್ವಸಿದ್ಧಿಃ । ಅನ್ಯಥೈಕರೂಪಸ್ಥ ಪಂಚಾವಯವಾನಾಂ ವೈರೂಪ್ಯಪ್ರಸಂಗ ಇತಿ ಭಾವಃ । ಅತ್ರ ಮುಕ್ತಪ್ರಕರಣೇ । ತತ್ಕಥಾ ಮುದಾಖ್ಯಸುಖಕಥಾ ॥ ೯೬೭ ॥

**ವಿವರಣೆ–** ಆನಂದಮಯನ ಪಾದಕ್ಕೆ ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂದು ಶ್ರುತಿಯು ಪೂರ್ಣತ್ವವನ್ನು ಹೇಳಿದೆ. 'ಯತ್ರಾನಂದಾಶ್ಚ' ಎಂಬ ಶ್ರುತಿಯ ಸಮಾಖ್ಯೆಯಿಂದ ಅದು ಮುತ್ ರೂಪವೆಂದು ತಿಳಿಯುವುದರಿಂದ ಪಾದವು ಪೂರ್ಣ ಮುದ್ರೂಪವೆಂದು ತಿಳಿಯುತ್ತದೆ. ಪಾದವು ಪೂರ್ಣವಾದ ಮೇಲೆ ಶಿರಆದಿಗಳು ಪೂರ್ಣವಾಗಬೇಕು. ಇಲ್ಲದಿದ್ದರೆ ಆಕಾರಕ್ಕೆ ವೈರೂಪ್ಯ ಉಂಟಾಗುತ್ತದೆ. ಆದ್ದರಿಂದ ಪ್ರಿಯಾದಿ ರೂಪವಾದ ಶಿರ ಆದಿ ಅವಯವಗಳು ಪೂರ್ಣವಾದವುಗಳು ಎಂದೇ ಅರ್ಥ. ಆದ್ದರಿಂದ ಋಗ್ವೇದ, ಯಜುರ್ವೇದ ಇವೆರಡರ ಪರಸ್ಪರ ಸಮಾಖ್ಯೆಯಿಂದ ಬ್ರಹ್ಮನ ಶಿರಆದಿಪಂಚ ಅವಯವಗಳು ಪ್ರಿಯಾದಿ ಪಂಚಸುಖರೂಪವಾಗಿವೆ ಎಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಯತ್ಸ್ವಾಕೃತ್ಯಾ ಮುಕುಂದಸ್ಯ ಮುಕ್ತಾ ನಿರ್ಣನ್ ಪುರಾಕೃತಿಮ್ ।
ತತ್ತೀರ್ಣಸರಿತೋಪ್ಯೇತೇ ತಾರಕಂ ನ ವಿಸಸ್ಮರುಃ ॥ ೯೬೮ ॥

**ಅರ್ಥ–** ಯತ್= ಯಾವ ಕಾರಣದಿಂದ, ಮುಕ್ತಾಃ= ಮುಕ್ತರು, ಸ್ವಾಕೃತ್ಯಾ= ತಮ್ಮ ಆಕೃತಿಯಿಂದ, ಮುಕುಂದಸ್ಯ ಆಕೃತಿಂ= ಮುಕುಂದನ ಆಕೃತಿಯನ್ನು, ಪುರಾ= ಸಂಸಾರಾವಸ್ಥೆಯಲ್ಲಿ, ನಿರ್ಣನ್= ನಿರ್ಣಯಿಸಿದರೋ, ತತ್= ಆ ಕಾರಣದಿಂದ, ಏತೇ= ಮುಕ್ತರು, ತೀರ್ಣಸರಿತೋಽಪಿ= ಸಂಸಾರ ಸಾಗರವನ್ನು ದಾಟಿದರೂ, ತಾರಕಂ= ಸಂಸಾರ ತಾರಕನಾದ ನಾರಾಯಣನನ್ನು, ನ ವಿಸಸ್ಮರುಃ= ಮರೆಯಲಿಲ್ಲ.

**ಅನುವಾದ– ಯಾವ ಕಾರಣದಿಂದ ಮುಕ್ತರು ಸಂಸಾರಾವಸ್ಥೆಯಲ್ಲಿ ತಮ್ಮ ಆಕೃತಿಯಿಂದ ಮುಕುಂದನ ಆಕೃತಿಯನ್ನು ನಿರ್ಣಯಿಸಿದರೋ ಆ ಕಾರಣದಿಂದ ಈ ಮುಕ್ತರು ಸಂಸಾರ ಸಾಗರವನ್ನು ದಾಟಿದರೂ ತಾರಕನಾದ ನಾರಾಯಣನನ್ನು (ನಾರಾಯಣನ ಆಕೃತಿಯನ್ನು) ಮರೆಯಲಿಲ್ಲ.**

**ಯತ್ರ ಬ್ರಹ್ಮಾ ಚ ಮುಕ್ತೋಽಸ್ತಿ ಯತ್ರ ಬ್ರಧ್ನಸ್ಯ ವಿಷ್ಟಪಂ ।**
**ಮುಕ್ತಸೂರ್ಯಸ್ಯ ಸದನಂ ಯತ್ರ ವೈವಸ್ವತೋ ಯಮಃ ॥ ೯೬೯ ॥**

**ಮುಕ್ತಃ ಸನ್ ರಂಜನಾತ್ ತೇಷಾಂ ರಾಜಾ ನ ತು ಭಯಂಕರಃ ।**
**ದಿವೋವರೋಧನಂ ಯತ್ರ ಸ್ವರ್ಗಾಂತಃಪುರಯೋಷಿತಃ ॥ ೯೭೦ ॥**

**ಮುಕ್ತಾಃ ಸತ್ಯಃ ಸ್ವರ್ಗಿಭಿಸ್ತೈರ್ಮುಕ್ತೈಃ ಸಹ ಕಿಲಾಸತೇ ।**
**ಮುಕ್ತಬ್ರಹ್ಮಾದಿದೇವಾನಾಮಾಸ್ಥಾನೀ ಕಿಲ ಸಾ ಪುರೀ ॥ ೯೭೧ ॥**

**ಅರ್ಥ–** ಯತ್ರ= ಎಲ್ಲಿ, ಮುಕ್ತಃ ಬ್ರಹ್ಮಾ ಚ ಅಸ್ತಿ= ಮುಕ್ತಬ್ರಹ್ಮನು ಇದ್ದಾನೆಯೋ, ಯತ್ರ= ಎಲ್ಲಿ, ಬ್ರಧ್ನಸ್ಯ= ಮುಕ್ತಸೂರ್ಯಸ್ಯ= ಮುಕ್ತಸೂರ್ಯನ, ವಿಷ್ಟಪಂ= ಸದನಂ= ಮನೆಯು ಇದೆಯೋ, ಯತ್ರ= ಎಲ್ಲಿ, ವೈವಸ್ವತಃ= ಯಮನು, ಮುಕ್ತಃಸನ್= ಮುಕ್ತನಾಗಿ, ತೇಷಾಂ= ಮುಕ್ತರನ್ನು, ರಂಜನಾತ್= ರಂಜಿಸುವುದರಿಂದ, ರಾಜಾ= ರಾಜನೆನಿಸಿದ್ದಾನೋ, ತು= ಆದರೆ, ಭಯಂಕರಃ ನ= ಭಯಂಕರವಾಗಿರುವುದರಿಂದಲ್ಲವೋ, ಯತ್ರ= ಎಲ್ಲಿ, ದಿವೋವರೋಧನಂ= ಸ್ವರ್ಗಾಂತಪುರಯೋಷಿತಃ= ಸ್ವರ್ಗದ ಅಂತಃಪುರ ಸ್ತ್ರೀಯರು, ಮುಕ್ತಾಃ ಸತ್ಯಃ= ಮುಕ್ತರಾಗಿ, ಸ್ವರ್ಗಿಭಿಃ= ಸ್ವರ್ಗವಾಸಿಗಳಾದ, ತೈರ್ಮುಕ್ತೈಃ ಸಹ= ಆ ಮುಕ್ತರ ಜೊತೆಯಲ್ಲಿ ಆಸತೇ= ಇರುತ್ತಾರೆಯೋ, ಅಂತಹ, ಮುಕ್ತಬ್ರಹ್ಮಾದಿದೇವಾನಾಂ= ಮುಕ್ತಬ್ರಹ್ಮಾದಿ ದೇವತೆಗಳಗಿಗೆ, ಆಸ್ಥಾನೀ= ಆಶ್ರಯವಾದುದು, ಸಾ ಪುರೀ ಕಿಲ= ಆ ಪಟ್ಟಣವಷ್ಟೆ.

**ಅನುವಾದ– ಎಲ್ಲಿ ಮುಕ್ತಬ್ರಹ್ಮನು ಇದ್ದಾನೆಯೋ, ಎಲ್ಲಿ ಮುಕ್ತಸೂರ್ಯನು ಇದ್ದಾನೆಯೋ, ಎಲ್ಲಿ ವೈವಸ್ವತನಾದ ಯಮನು ಭಯಂಕರನಾಗಿಲ್ಲದೆ ಮುಕ್ತರನ್ನು ರಂಜಿಸುವುದರಿಂದ ರಾಜನೆನಿಸಿಕೊಂಡು ಇದ್ದಾನೆಯೋ, ಎಲ್ಲಿ ಸ್ವರ್ಗದ**

ಅಂತಃಪುರಸ್ತ್ರೀಯರು ಮುಕ್ತರಾದ ದೇವತೆಗಳ ಜೊತೆಯಲ್ಲಿ ಇರುತ್ತಾರೆಯೋ, ಅಂತಹ ಮುಕ್ತಬ್ರಹ್ಮಾದಿ ದೇವತೆಗಳಿಗೆ ಆ ಪುರಿಯು ಆಶ್ರಯವಾದುದಷ್ಟೆ?

**ಭಾವವಿಲಾಸಿನೀ–** ಯದ್ಯಸ್ಮಾತ್ ಏತೇ ಮುಕ್ತಾಃ । ತಾರಕಂ ನಾರಾಯಣಮ್ ॥೯೬೮-೯೭೦॥

ನಿತ್ಯಂ ಯತ್ರ ಕಿಲ ಜ್ಯೋತಿಃ ಕಿಂ ವಾಚ್ಯಾ ತಸ್ಯ ನಿತ್ಯತಾ ।
ನಿರ್ದುಃಖತ್ರಿಪುರೀರೂಪಾ ಸಾಪಿ ನಾಕಾಭಿಧಾ ಕಿಲ ॥ ೯೭೨ ॥

ಇತೋಽನ್ಯಾ ಯದಿ ಮುಕ್ತಿಃ ಸ್ಯಾತ್ ಸೈವ ಪ್ರಾರ್ಥ್ಯಾ ಮುಮುಕ್ಷುಭಿಃ ।
ಪ್ರತ್ಯೃಚಂ ಪ್ರಾರ್ಥ್ಯಮಾನೇಯಂ ಮಹಾಮುಕ್ತಿರ್ನ ಸಂಶಯಃ ॥ ೯೭೩ ॥

**ಅರ್ಥ–** ಯತ್ರ= ಎಲ್ಲಿ, ಜ್ಯೋತಿಃ= ಪ್ರಕಾಶವೂ ನಿತ್ಯಂ= ನಿತ್ಯವಾಗಿದೆಯೋ, ತಸ್ಯ= ಆ ಪುರಿಯ, ನಿತ್ಯತಾ= ನಿತ್ಯತ್ವವು, ವಾಚ್ಯಾಕಿಂ= ಪ್ರತ್ಯೇಕವಾಗಿ ಹೇಳಲ್ಪಡಬೇಕೇನು? ನಿರ್ದುಃಖ ತ್ರಿಪುರೀ ರೂಪಾ= ದುಃಖರಹಿತವಾದ ವೈಕುಂಠಾದಿ ತ್ರಿಪುರರೂಪವಾದ, ಸಾಪಿ= ಆ ಸ್ಥಾನವೂ, ನಾಕಾಭಿಧಾ ಕಿಲ= ನಾಕವೆಂದು ಕರೆಯಲ್ಪಡುವುದಷ್ಟೆ? ಯದಿ= ಒಂದು ಪಕ್ಷ, ಇತೋನ್ಯಾ= ಇದಕ್ಕಿಂತ ಭಿನ್ನವಾದ, ಮುಕ್ತಿಃ ಸ್ಯಾತ್= ಮುಕ್ತಿಯು ಇದ್ದರೆ, ಸೈವ= ಅದೇ, ಮುಮುಕ್ಷುಭಿಃ= ಮುಮುಕ್ಷುಗಳಿಂದ, ಪ್ರಾರ್ಥ್ಯಾ= ಪ್ರಾರ್ಥಿಸಲ್ಪಡಬೇಕಾಗಿದ್ದಿತು. ಪ್ರತ್ಯೃಚಂ= ಪ್ರತಿಯೊಂದು ಮಂತ್ರದಲ್ಲಿಯೂ, ಪ್ರಾರ್ಥ್ಯಮಾನಾ= ಪ್ರಾರ್ಥಿಸಲ್ಪಡುವ, ಇಯಂ= ಈ ಮುಕ್ತಿಯೇ ಮಹಾಮುಕ್ತಿಃ= ಮಹಾಮುಕ್ತಿಯು, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ.

**ಅನುವಾದ–** ಎಲ್ಲ ಪ್ರಕಾಶವೂ ನಿತ್ಯವಾಗಿದೆಯೋ ಆ ಲೋಕದ ನಿತ್ಯತ್ವವನ್ನು ಪ್ರತ್ಯೇಕವಾಗಿ ಹೇಳಬೇಕೇ? ದುಃಖರಹಿತವಾದ ಪಟ್ಟಣಗಳಾದ ವೈಕುಂಠ, ಶ್ವೇತದ್ವೀಪ ಮತ್ತು ಅನಂತಾಸನಗಳೂ ನಾಕವೆಂದು ಕರೆಯಲ್ಪಡುವುದಷ್ಟೆ? ಒಂದು ಪಕ್ಷ ಇದಕ್ಕಿಂತ ಭಿನ್ನವಾದ ಮುಕ್ತಿ ಇದ್ದಿದ್ದರೆ ಮುಮುಕ್ಷುಗಳು ಅದನ್ನೇ ಪ್ರಾರ್ಥಿಸಬೇಕಾಗಿದ್ದಿತು. ಆದ್ದರಿಂದ ಪ್ರತಿಯೊಂದು ಮಂತ್ರದಲ್ಲಿಯೂ ಪ್ರಾರ್ಥಿಸಲ್ಪಡುವ ಈ ಮುಕ್ತಿಯೇ ಮಹಾಮುಕ್ತಿ ಎಂಬುದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ಯತ್ರ ಜ್ಯೋತಿರಜಸ್ರಮಿತ್ಯಸ್ಯಾರ್ಥಕಥನಮ್ ॥ ನಿತ್ಯಂ ಯತ್ರ ಕಿಲೇತಿ ॥ ತ್ರಿನಾಕಪದಸ್ಯಾರ್ಥಕಥನಮ್ ॥ ನಿರ್ದುಃಖತ್ರಿಪುರೀರೂಪೇತಿ ॥ ೯೭೨ ॥

**ವಿವರಣೆ–** ಕ ಎಂದರೆ ಸುಖ. ಅಕ ಎಂದರೆ ಸುಖವಿರುದ್ಧವಾದ ದುಃಖ ಎಂದು ಅರ್ಥ. ನ ಅಕ ಎಂದರೆ ಎಲ್ಲಿ ದುಃಖವು ಸರ್ವಥಾ ಇಲ್ಲವೋ ಅಂತಹ ಸ್ಥಾನವೆಂದೂ ಅರ್ಥವಾಗುತ್ತದೆ. ನ ಅಕಂ ಯತ್ರ ಎಂಬ ವಿಗ್ರಹಕ್ಕೆ ಅನುಸಾರವಾಗಿ ನಾಕಂ ಎಂಬ

ಶಬ್ದವು ನಿಷ್ಪನ್ನವಾಗುತ್ತದೆ. ಆದ್ದರಿಂದ ನಾಕ ಎಂದರೆ ದುಃಖರಹಿತವಾದ ವೈಕುಂಠಾದಿ ಲೋಕತ್ರಯಗಳು ಎಂದು ಅರ್ಥವಾಗುತ್ತದೆ.

ಏವಂ ಚ ಪವಮಾನಸ್ಯ ಗುರುತ್ವೇ ಮುಕ್ತಿಮೀಯುಷಾಂ ।
ಬಹುತ್ವೇ ವಿಷ್ಣುಸೇವಿತ್ವೇ ತಲ್ಲೋಕಸ್ಯ ಕ್ಷಯೋಜ್ಝಿತೌ ॥ ೯೭೪ ॥

ತತ್ಪ್ರಾಪ್ತೇರ್ಮುಖ್ಯಮೋಕ್ಷತ್ವೇ ತತ್ರ ಜಾತ್ಯಪರಿಕ್ಷಯೇ ।
ಭೇದಸ್ಯ ಪರಮಾರ್ಥತ್ವೇ ತದ್ಗಾನಾಂ ಮೃತಿವರ್ಜನೇ ॥ ೯೭೫ ॥

ವಿಷ್ಣೋಃ ಪರಮದೈವತ್ವೇ ತದನ್ಯಬ್ರಹ್ಮವರ್ಜನೇ ।
ನಿಃಶಂಕೋ ಭವ ದುರ್ಮಾರ್ಗಂ ತ್ಯಜ ಭಕ್ತ್ಯಾ ಭಜ ಪ್ರಭುಮ್ ।
ಯದ್ ವಾಗ್ ನಿರವಕಾಶೇಯಂ ತದ್ ದೋಗ್ಧ್ಯಖಿಲಮೀಪ್ಸಿತಮ್
॥ ೯೭೬ ॥

**ಅರ್ಥ–** ಏವಂ ಚ= ಆದ್ದರಿಂದ, ಪವಮಾನಸ್ಯ= ವಾಯುದೇವರ, ಗುರುತ್ವೇ= ಗುರುತ್ವ ವಿಷಯದಲ್ಲಿ, ಮುಕ್ತಿಮೀಯುಷಾಂ ಬಹುತ್ವೇ= ಮುಕ್ತಿಯನ್ನು ಪಡೆಯುವವರ ಬಹುತ್ವದಲ್ಲಿ, ವಿಷ್ಣುಸೇವಿತ್ವೇ= ಮುಕ್ತರ ವಿಷ್ಣುದಾಸತ್ವ ವಿಷಯದಲ್ಲಿ, ತಲ್ಲೋಕಸ್ಯ ಕ್ಷಯೋಜ್ಝಿತೌ= ವಿಷ್ಣುಲೋಕದ ನಾಶರಹಿತತ್ವ ವಿಷಯದಲ್ಲಿ, ತತ್ಪ್ರಾಪ್ತೇಃ ಮುಖ್ಯಮೋಕ್ಷತ್ವೇ= ವಿಷ್ಣುಪ್ರಾಪ್ತಿಯೇ ವಿಷ್ಣುಮೋಕ್ಷ ಎಂಬ ವಿಷಯದಲ್ಲಿ, ತತ್ರಜಾತ್ಯಪರಿಕ್ಷಯೇ= ಅಲ್ಲಿ ಜಾತಿಯ ನಾಶವಿಲ್ಲ ಎಂಬ ವಿಷಯದಲ್ಲಿ, ಭೇದಸ್ಯ ಪರಮಾರ್ಥತ್ವೇ= ಭೇದವು ಪರಮಾರ್ಥ ಎಂಬ ವಿಷಯದಲ್ಲಿ, ತದ್ಗಾನಾಂ ಮೃತಿವರ್ಜನೇ= ಮೋಕ್ಷದಲ್ಲಿ ಇರುವವರಿಗೆ ಮೃತಿಯಿಲ್ಲ ಎಂಬ ವಿಷಯದಲ್ಲಿ, ವಿಷ್ಣೋಃ ಪರಮದೈವತ್ವೇ= ವಿಷ್ಣುವು ಸರ್ವೋತ್ತಮ ದೇವನೆಂಬ ವಿಷಯದಲ್ಲಿ, ತದನ್ಯಬ್ರಹ್ಮವರ್ಜನೇ= ವಿಷ್ಣುವಿನಿಗಿಂತ ಭಿನ್ನನಾದ ಇನ್ನೊಬ್ಬ ಬ್ರಹ್ಮನಿಲ್ಲ ಎಂಬ ವಿಷಯದಲ್ಲಿ, ನಿಶ್ಶಂಕೋಭವ= ಸಂಶಯಗಳನ್ನು ತ್ಯಜಿಸು, ದುರ್ಮಾರ್ಗಂ ತ್ಯಜ= ದುರ್ಮಾಗವನ್ನು ಪರಿತ್ಯಜಿಸು, ಭಕ್ತ್ಯಾ= ಭಕ್ತಿಯಿಂದ, ಪ್ರಭುಂ= ಸ್ವಾಮಿಯಾದ ವಿಷ್ಣುವನ್ನು, ಭಜ= ಭಜಿಸು. ಯತ್= ಏಕೆಂದರೆ, ನಿರವಕಾಶಾ ಇಯಂ ವಾಕ್= ಈ ನಿರವಕಾಶವಾದ ವಾಕ್ಯವು, ಈಪ್ಸಿತಂ ಅಖಿಲಂ= ಅಭೀಷ್ಟವಾದ ಎಲ್ಲವನ್ನೂ (ಎಲ್ಲ ಪ್ರಮೇಯವನ್ನು), ದೋಗ್ಧಿ= ಕೊಡುತ್ತದೆ.

**ಅನುವಾದ–** ಆದ್ದರಿಂದ ವಾಯುದೇವರ ಗುರುತ್ವವಿಷಯದಲ್ಲಿ ಮುಕ್ತಿಯನ್ನು ಪಡೆಯುವವರ ಬಹುತ್ವ ಮತ್ತು ಹರಿದಾಸತ್ವ ವಿಷಯದಲ್ಲಿ ವಿಷ್ಣುಲೋಕಕ್ಕೆ ಕ್ಷಯವಿಲ್ಲವೆಂಬ ವಿಷಯದಲ್ಲಿ, ವಿಷ್ಣುಪ್ರಾಪ್ತಿಯೇ ಮುಖ್ಯಮೋಕ್ಷವೆಂಬ ವಿಷಯದಲ್ಲಿ, ಮೋಕ್ಷದಲ್ಲಿ ಜಾತ್ಯಾದಿಗಳು ನಾಶವಾಗುವುದಿಲ್ಲ ಎಂಬ

ವಿಷಯದಲ್ಲಿ, ಭೇದವು ಪರಮಾರ್ಥ ಎಂಬ ವಿಷಯದಲ್ಲಿ, ವಿಷ್ಣುಲೋಕದಲ್ಲಿರುವವರಿಗೆ ಮರಣವಿಲ್ಲ ಎಂಬ ವಿಷಯದಲ್ಲಿ, ವಿಷ್ಣುವು ಪರದೇವತೆ ಎಂಬ ವಿಷಯದಲ್ಲಿ, ವಿಷ್ಣುವಿನಿಗಿಂತ ಭಿನ್ನನಾದ ಬ್ರಹ್ಮನು ಇಲ್ಲ ಎಂಬ ವಿಷಯದಲ್ಲಿ ಸಂಶಯವನ್ನು ತೊರೆದು ದುರ್ಮಾರ್ಗವನ್ನು ಪರಿತ್ಯಜಿಸಿ ಭಕ್ತಿಯಿಂದ ಸ್ವಾಮಿಯಾದ ವಿಷ್ಣುವನ್ನು ಭಜಿಸು. ಏಕೆಂದರೆ, ಈ ನಿರವಕಾಶ ವಾಕ್ಯಸಮೂಹವು ಅಭೀಷ್ಟವಾದ ಎಲ್ಲ ಪ್ರಮೇಯಗಳನ್ನು ಸಾಧಿಸಿಕೊಡುತ್ತದೆ.

**ಭಾವವಿಲಾಸಿನೀ–** ಇತಃ ಏತದ್ವರ್ಗಚತುಷ್ಟಯೋಕ್ತ ಭಗವಲ್ಲೋಕಾತ್ ॥ ೯೭೩-೯೭೬ ॥

ಅತಃ ಶುಭಗುಣಾಂಭೋಧಿಃ ಶುದ್ಧಃ ಸರ್ವವಿಲಕ್ಷಣಃ ।
ಸತ್ಯವಿಶ್ವಾಶ್ರಯೋ ಮುಕ್ತಾಮುಕ್ತೇಶೋ ಜಯತಿ ಪ್ರಭುಃ ॥ ೯೭೭ ॥

**ಅರ್ಥ–** ಅತಃ= ಆದ್ದರಿಂದ, ಶುಭಗುಣಾಂಭೋಧಿಃ= ಶುಭಗುಣಗಳ ಸಮುದ್ರದಂತಿರುವವನೂ, ಶುದ್ಧಃ= ದೋಷದೂರನೂ, ಸರ್ವವಿಲಕ್ಷಣಃ= ಸರ್ವಜಡಚೇತನಭಿನ್ನನೂ, ಸತ್ಯವಿಶ್ವಾಶ್ರಯಃ= ಸತ್ಯವಾದ ಜಗತ್ತಿಗೆ ಆಶ್ರಯನಾದವನೂ, ಮುಕ್ತಾಮುಕ್ತೇಶಃ= ಮುಕ್ತಾಮುಕ್ತರಿಗೆ ಒಡೆಯನೂ ಆದ, ಪ್ರಭುಃ= ಪ್ರಭುವಾದ ನಾರಾಯಣನು, ಜಯತಿ= ಉತ್ಕೃಷ್ಟನಾಗಿದ್ದಾನೆ.

**ಅನುವಾದ–** ಆದ್ದರಿಂದ ಶುಭಗುಣಾಂಬೋಧಿಯೂ ಶುದ್ಧನೂ ಸರ್ವವಿಲಕ್ಷಣನೂ, ಸತ್ಯಜಗದಾಶ್ರಯನೂ, ಮುಕ್ತಾಮುಕ್ತನಿಯಾಮಕನೂ ಆದ ಪ್ರಭುವಾದ ವಿಷ್ಣುವು ಉತ್ಕೃಷ್ಟನಾಗಿದ್ದಾನೆ.

**ಭಾವವಿಲಾಸಿನೀ–** ಸೌರಭಪಂಚಕಾರ್ಥಮನೂದ್ಯ ಭಗವಂತಂ ಸ್ತುವನ್ ವಸ್ತುನಿರ್ದೇಶಾಖ್ಯ ಮಂಗಲೇನ ಗ್ರಂಥಮುಪಸಂಹರತಿ ॥ **ಅತ ಇತಿ** ॥ ೯೭೭ ॥

**ವಿವರಣೆ–** ಐದು ಸೌರಭಗಳ ಅರ್ಥವನ್ನು ಸಂಗ್ರಹಿಸಿ ವಸ್ತುನಿರ್ದೇಶರೂಪವಾದ ಮಂಗಳದಿಂದ ಇಲ್ಲಿ ವಾದಿರಾಜರು ಗ್ರಂಥವನ್ನು ಉಪಸಂಹಾರ ಮಾಡುತ್ತಿದ್ದಾರೆ.

ವಿತ್ತೈರಿಕ್ತೋಽಪಿ ಜಾತ್ಯುಚ್ಚೋ ನಾತ್ಯಲ್ಪಮುಪಸರ್ಪತಿ ।
ಸುಕ್ಷೀಣರ್ಕ್ಷೇಶರಕ್ಷಾ ಸ್ಯಾದರ್ಕೋದರ್ಕಶ್ರಿಯೈವ ಹಿ ॥ ೯೭೮ ॥

**ಅರ್ಥ–** ಜಾತ್ಯುಚ್ಚಃ= ಜಾತಿಯಿಂದಲೇ ಶ್ರೇಷ್ಠನಾದವನು ಎಂದರೆ ಉತ್ತಮ ಜೀವನಾದವನು, ರಿಕ್ತೈಃ ರಿಕ್ತೋಽಪಿ= ಧನದಿಂದ ಶೂನ್ಯನಾದರೂ, ಅತ್ಯಲ್ಪಂ= ಅಲ್ಪನಾದ ಲೌಕಿಕ ರಾಜಾದಿಗಳನ್ನು, ನೋಪಸರ್ಪತಿ= ಸಮೀಪಿಸುವುದಿಲ್ಲ. ಸುಕ್ಷೀಣರ್ಕ್ಷೇಶರಕ್ಷಾ= ಅತ್ಯಂತ ಕ್ಷೀಣನಾದ ನಕ್ಷತ್ರೇಶನಾದ ಚಂದ್ರನ ರಕ್ಷಣೆಯು, ಅರ್ಕೋದರ್ಕಶ್ರಿಯೈವ= ಸೂರ್ಯನ ಸಮೃದ್ಧವಾದ ಕಾಂತಿಯಿಂದಲೇ, ಸ್ಯಾತ್ ಹಿ= ಆಗುವುದಷ್ಟೆ.

**ಅನುವಾದ–** ಉತ್ತಮ ಜೀವನಾದವನು ಧನರಹಿತನಾದರೂ ಅಲ್ಪರಾದ ರಾಜಾದಿಗಳ ಬಳಿಗೆ ಹೋಗುವುದಿಲ್ಲ. ಚಂದ್ರನು ಎಲ್ಲ ಕಲೆಗಳನ್ನೂ ಕಳೆದುಕೊಂಡರೂ ಅವನ ರಕ್ಷಣೆಯು ಸೂರ್ಯನ ಪ್ರಚುರವಾದ ಪ್ರಭೆಯಿಂದಲೇ ಆಗುವುದಷ್ಟೆ?

**ಭಾವವಿಲಾಸಿನೀ–** ವಿಪತ್ತೌ ತತ್ಪರಿಹಾರಾಯ ಸಂಪತ್ತೌ ತದ್ದಾತುರವಿಸ್ಮರಣಾಯ ಸಂಪತ್ಸ್ಥೈರ್ಯಾಯ ಚ ಹರಿಭಕ್ತೇನ ಸರ್ವೋತ್ತಮೋ ಹರಿರೇವ ಪ್ರಾರ್ಥ್ಯೋ ನಾನ್ಯ ಇತ್ಯತ್ರ ದೃಷ್ಟಾಂತಮಾಹ – **ರಿಕ್ತೈರಿತಿ** ॥ ರಿಕ್ತಃ ಶೂನ್ಯಃ । ಜಾತ್ಯುಚ್ಚಃ ಜಾತ್ಯಾ ಶ್ರೇಷ್ಠಃ । ಉತ್ತಮಜೀವ ಇತ್ಯರ್ಥಃ । ಅತ್ಯಲ್ಪಂ ಲೌಕಿಕರಾಜಾದಿಕಮ್ । ಋಕ್ಷೇಶಃ ನಕ್ಷತ್ರಾಧಿಪತಿಶ್ಚಂದ್ರಃ । ಸುಕ್ಷೀಣಶ್ಚಾಸೌ ಋಕ್ಷೇಶಶ್ಚ ತಸ್ಯ ರಕ್ಷಾ ಸುಕ್ಷೀಣರ್ಕ್ಷೇಶರಕ್ಷಾ । ಕ್ಷೀಣಪಂಚದಶಕಲಶ್ಚಂದ್ರೋಽಮಾವಾಸ್ಯಾಯಾಂ ಸೂರ್ಯಮೇತ್ಯ ತತ ಏಕಾಂ ಸುಷುಮ್ನಾಖ್ಯಾಂತೇಜಃಕಲಾಂ ಸಂಗೃಹ್ಯ ಪ್ರತಿಪತ್ತಿಥಿಮಾರಭ್ಯಾ- ಭಿವೃದ್ಧೋ ಭವತೀತಿ ಪೌರಾಣಿಕೀ ಪ್ರಥಾ । ಏವಂ ಸೋಮವಂಶೋತ್ಪನ್ನಕ್ಷತ್ರಿಯ- ಕುಲಾಗ್ರೇಸರತಯಾ ಉಚ್ಚೇನ ಚಂದ್ರೇಣ ಸೂರ್ಯವಂಶಾಧಿಪತಿತ್ವೇನೋಚ್ಚಸ್ಯ ಸೂರ್ಯಸ್ಯೈವ ಪ್ರಾರ್ಥನಾದ್ಭಗವದ್ಭಕ್ತತ್ವೇನೋತ್ತಮೋ ಜೀವಃ ಸ್ವಸಂಕಟೇಽಪಿ ಭಗವಂತಮೇವಾಶ್ರಯೇನ್ನ ತ್ವನ್ಯಮಿತಿ ಭಾವಃ ॥ ೯೭೮ ॥

**ವಿವರಣೆ–** ಹದಿನೈದು ಕಲೆಗಳನ್ನು ಕಳೆದುಕೊಂಡು ಚಂದ್ರನು ಅಮಾವಾಸ್ಯೆಯ ದಿನ ಸೂರ್ಯನನ್ನು ಸಮೀಪಿಸಿ ಅವನಿಂದ ಸುಷುಮ್ನಾ ಎಂಬ ಒಂದು ತೇಜಸ್ಸಿನ ಕಲೆಯನ್ನು ಸ್ವೀಕರಿಸಿ ಪ್ರತಿಪತ್ ತಿಥಿಯಿಂದ ಪೂರ್ಣಿಮೆಯವರೆಗೆ ಅಭಿವೃದ್ಧಿ ಹೊಂದುತ್ತಾನೆ ಎಂದು ಪೌರಾಣಿಕ ಕಥೆಯಿದೆ. ಹಾಗೆಯೇ, ಸೋಮವಂಶದಿಂದ ಜನಿಸಿದ ಕ್ಷತ್ರಿಯಕುಲಕ್ಕೆ ಅಗ್ರೇಸರನಾದ ಚಂದ್ರನು ಸೂರ್ಯವಂಶದ ಅಧಿಪತಿಯಾದ ಉಚ್ಚನಾದ ಸೂರ್ಯನ ಬಳಿಗೇ ಹೋಗಿ ಪ್ರಾರ್ಥಿಸುತ್ತಾನೆ. ಹಾಗೆಯೇ ಉತ್ತಮ ಜೀವನು ತನಗೆ ಸಂಕಟ ಬಂದರೂ ಭಗವಂತನನ್ನೇ ಆಶ್ರಯಿಸುತ್ತಾನೆ, ಇನ್ನೊಬ್ಬನನ್ನಲ್ಲ ಎಂದು ಅಭಿಪ್ರಾಯ.

**ತತ್ಸಂಪತ್ತೌ ವಿಪತ್ತೌ ಚ ಗತಿಃ ಶ್ರೀಪತಿರೇವ ನಃ ।**
**ಯೋ ಬ್ರಹ್ಮರುದ್ರವೀಂದ್ರೇಂದ್ರಚಂದ್ರಾದೀನಾಮಧೀಶ್ವರಃ ॥ ೯೭೯ ॥**

**ಅರ್ಥ–** ತತ್= ಆದ್ದರಿಂದ, ಯಃ= ಯಾವ, ಶ್ರೀಪತಿಃ= ಲಕ್ಷ್ಮೀಪತಿಯು, ಬ್ರಹ್ಮರುದ್ರವೀಂದೇಂದ್ರಚಂದ್ರಾದಿನಾಂ= ಬ್ರಹ್ಮ, ರುದ್ರ, ಇಂದ್ರ, ಗರುಡ, ಚಂದ್ರಾದಿಗಳಿಗೆ, ಅಧೀಶ್ವರಃ= ಅಧೀಶ್ವರನಾಗಿದ್ದಾನೆಯೋ, ಅಂತಹ, ಶ್ರೀಪತಿರೇವ= ಲಕ್ಷ್ಮೀಪತಿಯೇ, ನಃ= ನಮಗೆ, ಸಂಪತ್ತೌ= ಸಂಪತ್ತಿನಲ್ಲಿಯೂ, ವಿಪತ್ತೌ ಚ= ಮತ್ತು ವಿಪತ್ತಿನಲ್ಲಿಯೂ, ಗತಿಃ= ಗತಿಯಾದವನು.

**ಅನುವಾದ–** ಯಾವ ಶ್ರೀಪತಿಯು ಬ್ರಹ್ಮರುದ್ರಗರುಡ ಇಂದ್ರಚಂದ್ರಾದಿಗಳಿಗೆ ಅಧಿಪತಿಯಾಗಿದ್ದಾನೆಯೋ ಅವನೇ ನಮಗೂ ಸಹ ಸಂಪತ್ತಿನಲ್ಲಿಯೂ ಮತ್ತು ವಿಪತ್ತಿನಲ್ಲಿಯೂ ಗತಿಯಾಗಿದ್ದಾನೆ.

ತಥಾಹಿ ಋಕ್ (೧-೧೪೦-೬)-

'ಭೂಷನ್ ನ ಯೋಽಧಿ ಬಭ್ರೂಷು ನಮ್ನತೇ ವೃಷೇವ ಪತ್ನೀರಭ್ಯೇತಿ ರೋರುವತ್ ।
ಓಜಾಯಮಾನಸ್ತನ್ವಶ್ಚ ಶುಂಭತೇ ಭೀಮೋ ನ ಶೃಂಗಾ ದವಿಧಾವ ದುರ್ಗೃಭಿಃ ॥' ಇತಿ

ತಥಾಹಿ ನ್ಯಾಯರತ್ನಾವಲೀ (೨-೨೩)-

'ಸುಂದೋಪಸುಂದೌ ಹಂತುಂ ಪ್ರಾಗ್ಬ್ರಹ್ಮಾ ಚಕ್ರೇ ತಿಲೋತ್ತಮಾಮ್ ।
ಭಾವಿಬ್ರಹ್ಮಾ ತ್ವಿಮೌ ಹಂತುಂ ಚಕ್ರೇ ಯುಕ್ತಿತಿಲೋತ್ತಮಾಮ್ ॥' ಇತಿ॥

'ಸೋಮಾಶ್ರಯಾದ್ಯಥಾ ರುದ್ರೇಽಪ್ಯುಮಾಕಾಂತೋ ಗತವ್ಯಥಃ ।', ಇತಿ
ವೃಂದಾವನಾಖ್ಯಾನಮ್ । (೧೪-೮೨)

ತಥಾಹಿ ಬೃಹತ್ಸಂಹಿತಾಯಾಂ ಚತುರ್ಮುಖವಚನಮ್ -

'ದೇವಸ್ಯಾಸ್ಯೇತಿ ವಚನಂ ರುದ್ರಾದ್ಯೈಶ್ವರ್ಯಕಾರಣಮ್ ।
ಬ್ರವೀತಿ ವಾದಿರಜಾಂ ತಂ ಸಂಶಯಂ ತ್ಯಜತಾಮರಾಃ ॥' ಇತಿ ॥

ತಥಾಹಿ ಋಕ್ (೭-೪೦-೫)-

'ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ ॥
ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್ ॥'ಇತಿ॥

॥೨೬॥

'ಪಂಚಾಸ್ಯವಾಕ್ಯಸಂದಿಷ್ಟಂ ಪುರಾಣಂ ಪಂಚಲಕ್ಷಣಮ್ ।', ಇತಿ ವೃಂದಾವನಾಖ್ಯಾನಮ್
(೧೬-೨೫)

ತಥಾಹಿ ಋಕ್ (೯-೮೯-೩) -

'ಸಿಂಹಂ ನಸಂತ ಮಧ್ವೋ ಅಯಾಸಂ ಹರಿಮರುಷಂ ದಿವೋ ಅಸ್ಯ ಪತಿಮ್ ॥
ಶೂರೋ ಯುತ್ಸು ಪ್ರಥಮಃ ಪೃಚ್ಛತೇ ಗಾ ಅಸ್ಯ ಚಕ್ಷಸಾ ಪರಿ ಪಾತ್ಯುಕ್ಷಾ ॥' ಇತಿ ॥॥೨೭॥

'ನಿತ್ಯಂ ಬ್ರಾಹ್ಮಣಸಂಬಂಧಿ ಸತ್ಯಂ ವಾಕ್ಯಂ ಮಯೋದಿತಮ್ ।' ಇತಿ
ವೃಂದಾವನಾಖ್ಯಾನಮ್
(೧೬-೩೬)

ತಥಾಹಿ ಗೋಪಥಬ್ರಾಹ್ಮಣಮ್ (೧-೨೫) -
'ತಸ್ಮಾದ್ ಬ್ರಾಹ್ಮಣವಚನಮಾದರ್ತವ್ಯಮ್ - ಯಥಾ ಲಾತವ್ಯೋ ಗೋತ್ರೋ, ಬ್ರಹ್ಮಣಃ ಪುತ್ರೋ, ಗಾಯತ್ರಂ ಛಂದಃ, ಶುಕ್ಲೋ ವರ್ಣಃ, ಪುಂಸೋ ವತ್ಸೋ, ರುದ್ರೋ ದೇವತಾ, ಓಂಕಾರೋ ವೇದಾನಾಮ್ ॥' ಇತಿ ॥ ॥೨೮॥

'ಮಾರಿಷಂ ಮಾಂ ವಿಜಾನಥ।', ಇತಿ ವೃಂದಾವನಾಖ್ಯಾನಮ್ (೧೬-೯೪)
ತಥಾಹಿ ಶತಪಥಬ್ರಾಹ್ಮಣಮ್ (೮-೭-೩-೧೦) -
'ತದಸಾವಾದಿತ್ಯ ಇಮಾನ್ ಲೋಕಾನ್ ಸೂತ್ರೇ ಸಮಾವಯತೇ ತದ್ ಯತ್ ತತ್ ಸೂತ್ರಂ ಸ ವಾಯುಃ ॥' ಇತಿ ॥ 'ಪ್ರಾಣೋ ವೈ ಮಾರಿಷಃ ॥' ಇತಿ ಚ ಶ್ರುತಿಃ ॥।೨೯।

'ಅಂಹೋಮುಗ್ವಚನಂ ಮಮ।', ಇತಿ ವೃಂದಾವನಾಖ್ಯಾನಮ್ (೧೭-೯೬)
ತಥಾಹಿ ಋಕ್ (೨-೨೩-೫) -
'ನ ತಮಂಹೋ ನ ದುರಿತಂ ಕುತಶ್ಚನ ನಾರಾತಯಸ್ತಿತಿರುರ್ನ ದ್ವಯಾವಿನಃ।
ವಿಶ್ವಾ ಇದಸ್ಮಾದ್ ಧ್ವರಸೋ ವಿ ಬಾಧಸೇ ಯಂ ಸುಗೋಪಾ ರಕ್ಷಸಿ ಬ್ರಹ್ಮಣಸ್ಪತೇ ॥'ಇತಿ॥ ॥೩೦॥

'ಅಸ್ತು ಶ್ರೌಷಡಿತಿ ಪ್ರೋಕ್ತಾ।', ಇತಿ ವೃಂದಾವನಾಖ್ಯಾನಮ್ (೧೮-೧೪)
ತಥಾಹಿ ಋಕ್ (೧-೧೩೯-೧) -
'ಅಸ್ತು ಶ್ರೌಷಟ್ ಪುರೋ ಅಗ್ನಿಂ ಧಿಯಾ ದಧ ಆ ನು ತಚ್ಛರ್ಧೋ ದಿವ್ಯಂ ವೃಣೀಮಹ ಇಂದ್ರವಾಯೂ ವೃಣೀಮಹೇ।
ಯದ್ಧ ಕ್ರಾಣಾ ವಿವಸ್ವತಿ ನಾಭಾ ಸಂದಾಯಿ ನವ್ಯಸೀ।
ಅಧ ಪ್ರ ಸೂ ನ ಉಪ ಯಂತು ಧೀತಯೋ ದೇವಾಂ ಅಚ್ಛಾ ನ ಧೀತಯಃ ॥ ಇತಿ ॥।೩೧॥

'ಬರ್ಹಿಃ ಸಮಾ ಇತಿ ಶ್ರುತ್ಯಾ ಚಾಂಹೋನಾಶಂ ಕರಿಷ್ಯತು।, ಇತಿ ವೃಂದಾವನಾಖ್ಯಾನಮ್ (೧೯-೪೭)

ತಥಾಹಿ ಋಕ್ (೧೦-೧೨೪-೩) -

'ಬಹ್ವೀಃ ಸಮಾ ಅಕರಮಂತರಸ್ಮಿನ್ನಿಂದ್ರಂ ವೃಣಾನಃ ಪಿತರಂ ಜಹಾಮಿ।

ಅಗ್ನಿಃ ಸೋಮೋ ವರುಣಸ್ತೇ ಚ್ಯವಂತೇ ಪರ್ಯಾವರ್ದ್ರಾಷ್ಟ್ರಂ ತದವಾಮ್ಯಾಯನ್

॥ಇತಿ॥ ॥೩೨॥

'ವಕ್ಷ್ಯೇ ಸ್ವಪ್ನೇಽಥವಾ ಸ್ವಪ್ನೋಽಪ್ಯಹಂ ತ್ವಿಹ ದಿವಾಽಪ್ಯಹೋ।', ಇತಿ ವೃಂದಾವನಾಖ್ಯಾನಮ್ । (೨೦-೬೦)

ತಥಾಹಿ ಶತಪಥಬ್ರಾಹ್ಮಣಮ್ (೧೦-೫-೨-೧೪)-

'ಏಷ ಉ ಏವ ಪ್ರಾಣಃ। ಏಷ ಹೀಮಾಃ ಸರ್ವಾಃ ಪ್ರಜಾಃ ಪ್ರಣಯತಿ,

ತಸ್ಯೈತೇ ಪ್ರಾಣಾಃ ಸ್ವಾಃ ಸ ಯದಾ ಸ್ವಪಿತ್ಯಥೈನಮೇತೇ ಪ್ರಾಣಾಃ

ಸ್ವಾ ಅಪಿಯಂತಿ ತಸ್ಮಾತ್ ಸ್ವಾಪ್ಯಯಃ, ಸ್ವಾಪ್ಯಯೋ ಹ ವೈ

ತಂ ಸ್ವಪ್ನ ಇತ್ಯಾಚಕ್ಷತೇ ಪರೋಕ್ಷಮ್ ॥' ಇತಿ ॥ ॥೩೩॥

'ತಾದೃಶಂ ಶಂಖಮಾದಾಯ।', ಇತಿ ವೃಂದಾವನಾಖ್ಯಾನಮ್ (೨೦-೬೭)

ತಥಾ ಹಿ ಋಕ್‌ಮಂತ್ರೌ (೧-೧೫೪-೫, ೯-೬೬-೨೦) -

'ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ।

ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ॥' ಇತಿ॥

'ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ। ತಮೀಮಹೇ ಮಹಾಗಯಮ್

॥' ಇತಿ ಚ ॥ ॥೩೪॥

'ಬ್ರಾಹ್ಮಣೇ ಸ್ವಪ್ನಮದ್ರಾಕ್ಷೀತ್ ಕರ್ಣೇ ಯಕ್ಷೀ ಚ ಕಶ್ಚನ।', ಇತಿ ವೃಂದಾವನಾಖ್ಯಾನಮ್ (೨೧-೪೪)

ತಥಾಹಿ ಋಙ್ಮಂತ್ರೌ (೭-೮೮-೬, ೧೦-೮೬-೪) -

'ಯ ಆಪಿರ್ನಿತ್ಯೋ ವರುಣ ಪ್ರಿಯಃ ಸನ್ ತ್ವಾಮಾಗಾಂಸಿ ಕೃಣವತ್ ಸಖಾ ತೇ।

ಮಾ ತ ಏನಸ್ವಂತೋ ಯಕ್ಷಿನ್ ಭುಜೇಮ ಯಂಧಿ ಷ್ಮಾ ವಿಪ್ರಃ ಸ್ತುವತೇ ವರೂಥಮ್ ॥'

ಇತಿ॥

'ಯಮಿಮಂ ತ್ವಂ ವೃಷಾಕಪಿಂ ಪ್ರಿಯಮಿಂದ್ರಾಭಿರಕ್ಷಸಿ।
ಶ್ವಾನ್ವಸ್ಯ ಜಂಭಿಷದಪಿ ಕರ್ಣೇ ವರಾಹಯುರ್ವಿಶ್ವಸ್ಮಾದಿಂದ್ರ ಉತ್ತರಃ॥' ಇತಿ ಚ ॥॥೩೫॥

'ಮನ್ಮ ಮನ್ಮ ವಯಂ ಸರ್ವೇಽಪ್ಯೇವಮೇವ ನ ಸಂಶಯಃ।', ಇತಿ
ವೃಂದಾವನಾಖ್ಯಾನಮ್
(೨೧-೬೬)
ತಥಾಹಿ ಋಕ್ (೧-೧೨೯-೬) -
'ಪ್ರ ತದ್ ವೋಚೇಯಂ ಭಾವ್ಯಾಯೇಂದವೇ ಹವ್ಯೋ ನ ಯ ಇಷವಾನ್ ಮನ್ಮ ರೇಜತಿ
ರಕ್ಷೋಹಾ ಮನ್ಮ ರೇಜತಿ।
ಸ್ವಯಂ ಸೋ ಅಸ್ಮದಾ ನಿದೋ ವಧೈರಜೇತ ದುರ್ಮತಿಮ್।
ಅವ ಸ್ರವೇದಘಶಂಸೋಽವತರಮವ ಕ್ಷುದ್ರಮಿವ ಸ್ರವೇತ್॥' ಇತಿ॥ ॥೩೬॥

॥ ಓಂ ॥

## ॥ ಶ್ರೀವಾದಿರಾಜತೀರ್ಥಾನಾಮ್ಮೃಜುತ್ವೇ ಶ್ರೀ ಋಕ್‌ಸಂಹಿತಾವಚನಾನಿ ॥

'ಸಹೋರೂಪಸ್ಯ ದೇವಸ್ಯ ಲಾತವ್ಯಸ್ಯ ಬಲಾತ್ಮಕಮ್।
ಮೂಲರೂಪಂ ಜ್ಞಾನತತಂ ಜಗದ್ಭರಣಗಂ ಯತಃ॥ ॥ ೧ ॥

ಜಾತಂ ತೇನಾತ್ಮನಾ ಸರ್ವಚೇಷ್ಟಕೇನ ಮಹಾತ್ಮನಾ।
ರೂಪತ್ರಯಾವತಾರಾಯ ನಿಹಿತಂ ಹರಿಣಾ ಸ್ವಯಮ್॥ ॥ ೨ ॥

ಅಂಡಾದ್ ಬಹಿಃ ಸ್ಥಿತಂ ಮೂಲಂ ಸತ್ಯಲೋಕಸ್ಥಿತಂ ಮಹತ್।
ಗೃಹೀತ್ವಾರುಗ್ಮಿಣೀಪತ್ರಂ ಕೃಷ್ಣಾಂತಿಕಮುಪಾಗತಮ್॥ ॥ ೩ ॥

ವಾದಿರಾಜಾಭಿಧಂ ಚೇತಿ ಮೂಲಭೇದವಿವರ್ಜಿತಮ್।
ತತ್ರ ಪ್ರಥಮಕಂ ರೂಪಂ ವಿಶ್ವರೂಪಾಂತಿಕಸ್ಥಿತಮ್॥ ॥ ೪ ॥

ಸಾಧಕಂ ವಿಷ್ಣುಕಾರ್ಯಾಣಾಂ ಶಿಷ್ಯಸನ್ತತಿದಾಯಕಮ್।
ಅಮೃತಸ್ರಾವಿಣೀರ್ವಾಚಃ ಪಂಚರಾತ್ರಾದಿನಾಮಿಕಾಃ॥ ॥ ೫ ॥

ಋತರೂಪಸ್ಯ ವಿಷ್ಣೋರ್ಹಿ ಔತ್ಕರ್ಷಪ್ರತಿಪಾದಿಕಾಃ।
ಅನಯಂತ ಸ್ವಶಿಷ್ಯೇಷು ದ್ವಿತೀಯಂ ಪೃಕ್ಷನಾಮಕಮ್॥ ॥ ೬ ॥

ಮಗಧಾದಿಮಹಾಸೇನಾದುರ್ಮಾನಕ್ಷಯಕಾರಕಮ್।
ಕೃಷ್ಣದತ್ತವಿಚಿತ್ರಾನ್ನಭೋಕ್ತೃತತ್ಕ್ರಿಯಮುತ್ತಮಮ್॥ ॥ ೭ ॥

ಋಗಾದ್ಯಾ ಇತಿಹಾಸಶ್ಚ ಪುರಾಣಂ ಪಂಚರಾತ್ರಕಮ್।
ಪ್ರೋಕ್ತಾಃ ಸಪ್ತಶಿವಾಸ್ತಾಶ್ಚ ಮಾತರಸ್ತತ್ರ ಸಂಸ್ಥಿತಮ್॥ ॥ ೮ ॥

ತದ್ವಿಚಾರಪರಂ ಪ್ರೋಕ್ತಂ ಜ್ಞಾನದೋಗ್ಧೃ ತೃತೀಯಕಮ್।
ತಾತ್ವವ್ಯಸ್ಯ ಋಜೋಸ್ತಸ್ಯ ದಶಪ್ರಮತಿನಾಮಕಮ್॥ ॥ ೯ ॥

ವಾದಿನಾಂ ಜ್ಞಾನದಾನೈಕಶೀಲಾನಾಂ ರಾಜನಂ ಯತಃ।
ವೇತಿ ಜ್ಞಾನಂ ಸಮುದ್ದಿಷ್ಟಂ ದೇತಿ ದಾನಮುದಾಹೃತಮ್॥ ॥ ೧೦ ॥

ಪ್ರೋಕ್ತಃ ಶೀಲ ಇಕಾರೇಣ ರಾಜನಂ ರಾಜಶಬ್ದಿತಮ್।
ವಾದಿರಾಜಾಭಿಧಂ ರೂಪಂ ದಶಪ್ರಮತಿಶಬ್ದಿತಮ್॥ ॥ ೧೧ ॥

ಪೂರ್ಣಜ್ಞಾನಂ ವಿನಾ ಪ್ರೋಕ್ತರಾಜನಂ ತು ಕಥಂ ಭವೇತ್।
ದಶೇತಿ ಪೂರ್ಣಮುದ್ದಿಷ್ಟಂ ಜ್ಞಾನಂ ಪ್ರಮತಿರೀರಿತಮ್॥ ॥ ೧೨ ॥

ಯೋಽಷಣೋಽಜನಯಂತ್ಯೈತದ್ ವಾದಿರಾಜಾಭಿಧಂ ವಪುಃ।
ತಸ್ಮಾದೇವ ಜ್ಞಾನರೂಪಾನ್ಮಹಿಷಸ್ಯ ಹರೇರ್ಗುಣಾನ್॥ ॥ ೧೩ ॥

ಪಾಲನಾದ್ ವರಣೀಯತ್ವಾದ್ ವರ್ಪ ಇತ್ಯಭಿಶಬ್ದಿತಾನ್।
ರುದ್ರಾದ್ಯಾಃ ಸೂರಯಶ್ಚಾನ್ಯೇ ಜ್ಞಾತವಂತಃ ಸುಖೇನ ತು॥ ॥ ೧೪ ॥

ಪ್ರಕೃಷ್ಟಜ್ಞಾನರೂಪೋ ಯೋ ಭಾವಿಮಧ್ವಃ ಪ್ರಕೀರ್ತಿತಃ।
ಮಧುಶಾಸ್ತ್ರಂ ಮಧ್ವಶಾಸ್ತ್ರಂ ಸಮ್ಯಗ್ವೇತ್ತಾ ಗುರುಃ ಸದಾ॥ ॥ ೧೫ ॥

ಪ್ರಮಾಣರೂಪವೇದಾದೌ ಗತಿಮಾನ್ ಗೂಹಿತಂ ಹರಿಮ್।
ಆ ಸಮಂತಾತ್ ಪತಿತ್ವೇ ತು ಮಥ್ನಾತ್ಯಾನ್ನಾಯಶಾಸ್ತ್ರತಃ॥ ॥ ೧೬ ॥

ರೂಪತ್ರಯಂ ಪ್ರೇರ್ಯತೇ ಯತ್ ಪಿತ್ರಾ ಸ್ವಸ್ಯ ಪರಾತ್ಮನಾ।
ಪ್ರಶ್ನರೂಪಾಂಸ್ಪೃಣಾದೀನ್ ಸ ದಂತೇಷ್ವಾರೋಪ್ಯ ಜಕ್ಷತಿ॥ ॥ ೧೭ ॥

ಲಾತವ್ಯಾಚಾರ್ಯವರ್ಯಸ್ಯ ಯಸ್ಯ ರೂಪತ್ರಿಕಂ ಹ್ಯಭೌ।
ರಮಾನಾರಾಯಣೌ ಸಾಕ್ಷಾದಿನ್ವತಸ್ತತ್ಕೃಪಾಶುಚಃ॥ ॥ ೧೮ ॥

ಆಭ್ಯಾಮೇವಾವರಃ ಪ್ರೋಕ್ತಸ್ತಯೋರಾಜ್ಞಾನುಸಾರತಃ।
ಉದರಂ ಪ್ರಾವಿಶನ್ಮಾತುಸ್ತನ್ನಿಮಿತ್ತವಿಕರ್ಮ ನೋ॥ ॥ ೧೯ ॥

ಶ್ರೀಮನ್ಮಧ್ವಾಚಾರ್ಯದೇಹಂ ಗರ್ಭಸ್ಥಂಚ ವಿಶತ್ಯಸೌ।
ತದಾಗಮನಪರ್ಯಂತಂ ತತ್ರ ಸ್ಥಿತ್ವಾ ತು ಗಚ್ಛತಿ॥ ॥ ೨೦ ॥

ಮಾತೃಪ್ರವಿಷ್ಟೋಽಪಿ ಶುಚಿರ್ಗರ್ಭಪೀಡಾವಿವರ್ಜಿತಃ।
ವಿಶೇಷೇಣಾಭಿವೃದ್ಧೋಽಭೂದ್ ಋಗಾದ್ಯಾ ಸ್ವಾರುಹತ್ ಕ್ರಮಾತ್॥ ॥ ೨೧ ॥

ಸನಾತನಾಸು ವಾಚ್ಯಾಸು ನೂತನಾಸ್ವವರಾಸು ಚ।
ಪಂಚರಾತ್ರಪುರಾಣೇತಿಹಾಸಾಖ್ಯಾಸು ನಿಧಾವತೇ॥ ॥ ೨೨ ॥

ಇತಿ ಸೂಕ್ತಗತಂ ರೂಪತ್ರಯಮೇತನ್ಮಹಾತ್ಮನಃ।
ಯೋ ವೇದ ವೇದವಿತ್ ಸ ಸ್ಯಾತ್ ತತ್ತ್ವವಿತ್ ತತ್ಪ್ರಸಾದತಃ॥' ಇತಿ॥

॥ ಶ್ರೀ ॥

## ॥ ಶ್ರೀವಾದಿರಾಜತೀರ್ಥಾನಾಮೃಜುತ್ವೇ ಪುರಾಣವಚನಾನಿ॥

### ತಥಾ ಹಿ ಬ್ರಹ್ಮವೈವರ್ತೇ ಚತುರ್ಮುಖವಚನಮ್ -

'ವ್ಯಾಸಸೇವಾರತೋ ನಿತ್ಯಂ ವಾದಿರಾಜೋ ಋಜುರ್ಯತಿಃ।
ದುರ್ವಾದಾನ್ ಪರಿಮಥ್ಯಾಶು ಮತ್ಪದಂ ಯಾತುಮರ್ಹತಿ।
ಸ್ಥಾಪಯಿಷ್ಯತಿ ಮಚ್ಛಾಸ್ತ್ರಂ ತೇನ ಕ್ಷೇಮೋ ಭವೇದ್ಧಿ ವಃ॥' ಇತಿ॥

### ತಥಾ ಹಿ ಪಾದ್ಮಪುರಾಣಮ್ -

'ಜ್ಞಾನಿ ಮಧ್ವೋ ಮಾತರಿಶ್ವಾಗುಹಾಸಂತಂ ಜಗತ್ಪತಿಮ್ ।
ಹನುಮದ್ಭೀಮಮಧ್ವಾಖ್ಯಾಸ್ತ್ರಯೋ ವಾಯುಸುತಾ ಇಮೇ ॥

ತಂ ಮಧ್ವಂ ಮಾರುತಂ ಸರ್ವೇ ಪರಿವಾರತಯಾ ಸದಾ ।
ಸಂಸೇವಿತುಂ ಸುರಾ ಭೂಮಾವವತೀರ್ಣಾ ಇತಿ ಶ್ರುತಮ್ ॥

ತೇ ತು ತಚ್ಛಿಷ್ಯತಾಮಾಪ್ಯ ತನ್ಮತಂ ತು ವ್ಯಘೋಷಯನ್ ।
ಯೇಷು ಮುಖ್ಯೌ ವಿಷ್ಣುತೀರ್ಥಪದ್ಮನಾಭಾಖ್ಯಯೋಗಿನೌ ॥

ಅತ್ಯಕ್ತದೇಹಸ್ತತ್ರಾದ್ಯಸ್ತನ್ಮತಂ ವರ್ತಯಿಷ್ಯತಿ ।
ತತ್ಪೂರ್ವಮಸ್ಯ ವಂಶೇ ತು ಋಜುಸ್ತ್ವೋ ಹಿ ಸುರೇಶ್ವರಃ ॥
ವಾದಿರಾಜೋ ಯತಿರ್ಭೂತ್ವಾ ಚೈತದ್ವಿಸ್ತಾರಯಿಷ್ಯತಿ ॥' ಇತಿ ॥

### ತಥಾ ಹಿ ಸ್ಕಾಂದಪುರಾಣಮ್ -

'ವಿಶುದ್ಧಪಾಜಕಕ್ಷೇತ್ರೇ ಹ್ಯನಂತೇಶ್ವರಪೂಜಕಃ ।
ಭವಿಷ್ಯತಿ ವಿಶುದ್ಧಾತ್ಮಾ ಬ್ರಾಹ್ಮಣೋ ವ್ರತನಿಷ್ಠಿತಃ ॥

ವೇದವತ್ಯಾಖ್ಯಭಾರ್ಯಾಯಾಂ ತಸ್ಮಾಜ್ಜಾತೋ ಜಗತ್ಪತಿಃ ।
ಯದುಪುತ್ರ್ಯಾಂ ಯಥಾ ಭೀಮಃ ಸಂಜಾತಃ ಸ್ಪರ್ಶಮಾತ್ರತಃ ॥

ಅಜ್ಞದೃಷ್ಟ್ಯಾ ಶರೀರಂ ತು ಜಾತವದ್ ದೃಶ್ಯತೇ ಬಹಿಃ ।
ದ್ವಿಷೋಡಶೀಲಕ್ಷಣಕಂ ಶರೀರಂ ಚ ತದೇವ ಹಿ ॥

ಲಾತವ್ಯಸ್ಯ ಋಜೋಸ್ತಸ್ಯ ಕ್ಲೃಪ್ತಂ ಪ್ರತಿಯುಗೇಯುಗೇ ।
ವಾಯೋಃ ಪ್ರವೇಶಪರ್ಯಂತಮತ್ರ ಸ್ಥಿತ್ವಾಥ ಗಚ್ಛತಿ ॥

ಇದಂ ಶರೀರಂ ಸಂಪ್ರಾಪ್ಯ ಲಾತವ್ಯೋ ವಾಯುತಾಮಿಯಾತ್ ।
ತತಃ ಕಾಲಾಂತರೇ ಸೋಽಪಿ ವಾದಿರಾಜೋ ಭವಿಷ್ಯತಿ ॥

ರಜೋಽಧಿಕೇನ ಸತ್ತ್ವೇನ ನಿರ್ಮಿತಂ ತಚ್ಛರೀರಕಮ್ ।
ಶುಕ್ಲಾದಿಭಿಃ ಪ್ರಜಾತಂ ತು ಕದಾಽಪಿ ನ ಭವಿಷ್ಯತಿ ॥' ಇತಿ ॥

**ತಥಾ ಹಿ ವಾಮನಪುರಾಣಮ್ -**

'ಅಪರೋಕ್ಷವಿಶೇಷೇಣ ಸಂಯುತಾ ಬ್ರಹ್ಮಪೂರ್ವಕಾಃ।
ಕಲ್ಪ್ಯಂತಾ ಋಜವಃ ಪ್ರೋಕ್ತಾಃ ಪ್ರಾರಬ್ಧಫಲಭೋಗಿನಃ॥

ಬ್ರಹ್ಮಣೋ ನಾವತಾರೋಽಸ್ತಿ ಶತಮಧ್ಯೇ ಪರಾಜ್ಞಯಾ।
ವಾಯುಮಾರಭ್ಯ ಕಲ್ಪ್ಯಂತಾ ಜನಿಮಂತೋಽತ್ರ ಭಾರತೇ॥

ಹನುಮದ್ಭೀಮಮಧ್ವಾಖ್ಯರೂಪೋ ವಾಯುರ್ಭವಿಷ್ಯತಿ।
ಸ್ವಯಂವರಸಮುದ್ಯೋಗೋ ರುಗ್ಮಿಣೀಪತ್ರಮಾದರಾತ್॥

ಕೃಷ್ಣಾಜ್ಞಯಾದಾದ್ ಗೃಹೀತ್ವಾ ಯೋ ಹ್ಯತಃ ಪುರಗತೋ ದ್ವಿಜಃ।
ಸರ್ವಾದೃಷ್ಟಪ್ರದೈವಾಯಂ ಋಜುರ್ಲಾತವ್ಯನಾಮಕಃ॥

ವಾಯುಸ್ಥಾನಸಮಾರೋಹಯೋಗ್ಯೋಽಯಂ ಯತಿರೂಪವಾನ್।
ಆಕಲ್ಪಂ ಬ್ರಹ್ಮಣಃ ಕೃಷ್ಣಪ್ರಸಾದಸ್ಯೈಕಭಾಜನಮ್॥

ಕೃಷ್ಣಾರ್ಚಕೋ ಯತಿರ್ಭೂತ್ವಾ ವಾದಿರಾಜೋ ವದಿಷ್ಯತಿ।
ಶ್ರೀರುಗ್ಮಿಣೀಶವಿಜಯಂ ಕಲೌ ಕೃಷ್ಣಪ್ರಸಾದನಾತ್॥' ಇತಿ॥

**ತಥಾ ಹಿ ಸತ್ತತ್ತ್ವವಚನಮ್ -**

'ಮನ್ಯುರಿಂದ್ರೋ ಮನುಃ ಸೋಮೋ ಭಾವಿಮಧ್ವಃ ಸುರೇಶ್ವರಃ॥
ಲಾತವ್ಯೋ ವಾದಿರಾಜೋಽಸೌ ಕುವಿದಂಗಶ್ರುತೌ ಶ್ರುತಃ॥' ಇತಿ॥

ತಥಾ ಹಿ ಋಕ್ (೭-೯೧-೧)-

'ಕುವಿದಂಗಃ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್॥
ತೇ ವಾಯವೇ ಮನವೇ ಬಾಧಿತಾಯಾಽವಾಸಯನ್ನುಷಸಂ ಸೂರ್ಯೇಣ॥' ಇತಿ॥

**ತಥಾ ಹಿ ಪ್ರಕಾಶಸಂಹಿತಾವಚನಮ್ -**

'ಯಥಾ ದೇವೌ ಬ್ರಹ್ಮವಾಯೂ ಅನ್ನಪ್ರಾಣಾಭಿಮಾನಿನೌ।
ಲಾತವ್ಯಸ್ತು ತಥಾ ನಿತ್ಯಂ ವರ್ತತೇ ಜೀವಸಾಧಕಃ॥' ಇತಿ॥

॥ ಓಂ ॥

॥ ಶ್ರೀ ವಾದಿರಾಜಗುರುಭ್ಯೋ ನಮಃ॥

# ಪರಿಶಿಷ್ಟ - ೨

॥ ಶ್ರೀ ವಾದಿರಾಜಗುರುಭ್ಯೋ ನಮಃ ॥

## ಫಲಸೌರಭ ಮತ್ತು ಋಜುತ್ವಚಿಂತನೆ

ಭಗವಾನ್ ವೇದವ್ಯಾಸರಿಂದ ನಿರ್ಮಿತ ಬ್ರಹ್ಮಸೂತ್ರಗಳು ಸಕಲಶ್ರುತಿಗಳ ಅರ್ಥವನ್ನು ನಿರ್ಣೈಸುವ ಶಾಸ್ತ್ರವು ಇಂತಹ ಬ್ರಹ್ಮಸೂತ್ರಗಳಲ್ಲಿ ಫಲಾಧ್ಯಾಯದಲ್ಲಿ ಮೋಕ್ಷನಿರೂಪಣೆ ಮಾಡಿದ್ದಾರೆ.

ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾದ ವಿಷ್ಣುಸರ್ವೋತ್ತಮತ್ವ, ಗುಣಪೂರ್ಣತ್ವ, ನಿರ್ದೋಷತ್ವ, ಜಗತ್‌ಸತ್ಯತ್ವ, ಭೇದಸತ್ಯತ್ವಾದಿಗಳನ್ನೇ ನಾಲ್ಕುಸೌರಭಗಳಲ್ಲಿ ಶ್ರುತಿಗೆ ಸಮ್ಮತವಾಗಿ ಸದ್ಯುಕ್ತಿಗಳಿಂದ ಮನಮುಟ್ಟುವಂತೆ ಶ್ರೀರಾಜರು ಪ್ರತಿಪಾದಿಸಿದ್ದಾರೆ. ಕಡೆಯದಾಗಿ ನಾಲ್ಕುಸೌರಭಗಳಿಂದ ಸಿದ್ಧವಾದ ಪ್ರಮೇಯವನ್ನು ಉಪಾಸಿಸುವವರಿಗೆ ಎಂತಹ ಅಮೋಘ ಫಲ ಎಂಬುದನ್ನು ನಾನಾಯುಕ್ತಿಗಳಿಂದ ಈ ಸೌರಭದಲ್ಲಿ ತಿಳಿಸಿದ್ದಾರೆ.

ಲೋಕದಲ್ಲಿ ಎಲ್ಲರೂ ಬಯಸುವಂತಹದ್ದು ದುಃಖಸಂಬಂಧವಿಲ್ಲದ ಶಾಶ್ವತಸುಖ. ಇದನ್ನೇ ಮೋಕ್ಷವೆಂದು ಕರೆಯುತ್ತಾರೆ. ಎಲ್ಲ ಮತಗಳೂ ತಮ್ಮ ತಮ್ಮ ಶಾಸ್ತ್ರಕ್ಕೆ ಮೋಕ್ಷವೇ ಫಲವೆಂದು ಉದ್ಘೋಷಿಸಿದರೂ ಮೋಕ್ಷದ ಸ್ವರೂಪವನ್ನು ನಾನಾ ಬಗೆಯಾಗಿ ವರ್ಣಿಸುತ್ತಾರೆ. ನಿತ್ಯಸುಖವೆಂದು ಕೆಲವರು, ಸುಖ ಒಪ್ಪಿದರೆ ದುಃಖವನ್ನೂ ಒಪ್ಪಬೇಕಾಗುತ್ತದೆ. ಆದ್ದರಿಂದ ಸುಖ-ದುಃಖರಹಿತವಾದ ಅವಸ್ಥೆ ಎಂದು ಕೆಲವರು, ಪರಬ್ರಹ್ಮನಲ್ಲಿ ಜೀವ ಐಕ್ಯಗೊಳ್ಳುವುದೇ ಮೋಕ್ಷ; ಅದಾದರೋ ನಿರ್ಗುಣ-ನಿರಾಕಾರ-ನಿಷ್ಕ್ರಿಯ ಅವಸ್ಥೆ ಎಂದು ಕೆಲವರು, ಸತತ ಊರ್ಧ್ವಗಮನವೇ ಮೋಕ್ಷ ಎಂದು ಕೆಲವರು (ಜೈನರು), ಹೀಗೆ ನಾನಾವಿಧದ

ಅವಸ್ಥೆಗಳನ್ನು ಹೇಳಿದ್ದಾರೆ. ಆದರೇ ಎಲ್ಲರಿಂದಲೂ ಅಪೇಕ್ಷಿತವಾದ ನಿತ್ಯಸುಖ ಯಾವ ಶಾಸ್ತ್ರ(ಮತ)ದಿಂದ ಬರುತ್ತದೆ ಎಂಬುದೇ ಮುಖ್ಯಪ್ರಶ್ನೆ.

ಎಲ್ಲ ಮತಗಳ ಪ್ರಕ್ರಿಯೆಗಳನ್ನು ಕೂಲಂಕುಷವಾಗಿ ವಿಚಾರಿಸಿದಾಗ ಶ್ರುತಿ, ಸ್ಮೃತಿ, ಸೂತ್ರ, ಪುರಾಣಗಳಿಗೆ ಸಮ್ಮತವೂ, ಅನುಭವಕ್ಕೆ ಹತ್ತಿರವಾಗುವಂತಹ, ಉಪಾಸನೆಗೆ ಎಟುಕುವಂತಹ ಮತ-ಮಧ್ವಮತವೇ ಎಂಬುದನ್ನು ಈ ಫಲಸೌರಭದಲ್ಲಿ ಚೆನ್ನಾಗಿ ವಿಮರ್ಶಿಸಿದ್ದಾರೆ.

ಸರ್ವರಿಂದ ಅಪೇಕ್ಷಿತ ನಿತ್ಯಸುಖವೆಂಬುದು ಜಗತ್‌ಕರ್ತನಾದ, ಸರ್ವೋತ್ತಮನಾದ ವಿಷ್ಣುವನ್ನು, ಅವನ ಶ್ರುತ್ಯುಕ್ತವಾದ ಮಹಿಮೆಯನ್ನು ತಿಳಿದು, ವಿಷ್ಣುವಿನಿಂದ, ಇತರ ಜೀವ-ಜಡರಾಶಿಗಳಿಂದ ಅತ್ಯಂತ ಭಿನ್ನನೂ, ಅಸ್ವತಂತ್ರನೂ, ಆದ ಜೀವನು ಯಥಾಯೋಗ್ಯ ಜ್ಞಾನೋಪಾಸನೆಯಿಂದಲೇ, ಭಗವತ್ ಪ್ರಸಾದದಿಂದಲೇ ಮೋಕ್ಷವೆಂಬುದು ಶ್ರುತಿ, ಸೂತ್ರೋಕ್ತ ಸಿದ್ಧಾಂತವು. ಅನ್ಯ ಸಾಧನಗಳಿಂದ ಎಂದೂ ಸಾಧ್ಯವಿಲ್ಲ.

ಆದರೆ ಮಾಯಾವಾದಿಗಳು 'ಆತ್ಮಜ್ಞಾನಾಮೃತಸಾಧನಂ' ಎಂದು ಒಪ್ಪಿದರೂ ಆ ಆತ್ಮಜ್ಞಾನವು ಪ್ರಮಾಣಗಳಿಂದ ತಿಳಿದುಬರುವಂತಹದ್ದಲ್ಲ (ವೇದ್ಯವಲ್ಲ). ಪ್ರಮಾಣಗಳು ಆತ್ಮನ ಬಗ್ಗೆ ಇರುವ ವಿಪರೀತಜ್ಞಾನವನ್ನು ಹೋಗಲಾಡಿಸುತ್ತದೆ. ಶ್ರವಣದಿಂದಲೇ ಬ್ರಹ್ಮಸಾಕ್ಷಾತ್ಕಾರವು, ಮನನ ನಿಧಿಧ್ಯಾಸನಗಳು ಜ್ಞಾನೋತ್ತರ ಸಾಧನೆಗಳು. ಆತ್ಮವೊಂದೇ ಸತ್ಯ. ಅದು ನಿರ್ವಿಶೇಷ ವಸ್ತು, ಅಖಂಡ, ಪ್ರಪಂಚವೆಲ್ಲ ಭ್ರಮದಿಂದ ಇದ್ದಂತೆ ತೋರುತ್ತದೆ, ಸಗುಣಬ್ರಹ್ಮೋಪಾಸನೆಯನ್ನು ಒಪ್ಪಿದರೂ ಅದೆಲ್ಲ ವ್ಯಾವಹಾರಿಕ ಮಾತ್ರ. ಮುಖ್ಯವಾದದ್ದು ನಿರ್ಗುಣೋಪಾಸನೆಯೇ ಪರಮಮೋಕ್ಷ, ಅವಿದ್ಯೆಯನ್ನು ಹೊಡೆದೋಡಿಸುವುದೇ ಜ್ಞಾನ, ಅವಿದ್ಯೆ ದೂರವಾದರೆ ಉಳಿಯುವುದು ಅದ್ವಿತೀಯ ವಸ್ತುವೊಂದೇ. ಅದೇ ಮುಕ್ತಿ. ಸುಖವೂ ಇಲ್ಲ, ದುಃಖವೂ ಇಲ್ಲ. ನಿರ್ಗುಣ ಅವಸ್ಥೆ.

ಇನ್ನು ಕೆಲವರು ವಿಷ್ಣುವನ್ನು ಸರ್ವೋತ್ತಮನೆಂದು ಒಪ್ಪಿದರೂ, ಭಗವಂತನಿಗೂ ಜೀವನಿಗೂ ಮುಕ್ತಿಯಲ್ಲಿ ಶೇಷ-ಶೇಷಿ (ಅಂಶ-ಅಂಶಿ) ಭಾವ

ಒಪ್ಪಿ, ಮುಕ್ತಿಯಲ್ಲಿ ಎಲ್ಲರೂ ಸಮಾನ ಆನಂದವುಳ್ಳವರು. ಭಗವಂತನನ್ನು ಶರಣಾಗುವುದೇ ಪ್ರಪತ್ತಿ. ಅದರಿಂದಲೇ ಮೋಕ್ಷವೆನ್ನುವರು.

ಜ್ಞಾನಪ್ರಭಾವದಿಂದಲೇ ಅಜ್ಞಾನನಿವೃತ್ತಿಯಾಗುತ್ತದೆ ಅದಕ್ಕೆ ಭಗವಂತನ ಪ್ರಸಾದದ ಅವಶ್ಯಕತೆ ಇಲ್ಲ ಎನ್ನುವ ವಾದವನ್ನು ರಾಜರು ನಿರಾಕರಿಸುತ್ತಾ, ಅಜ್ಞಾನ ಆವೃತಮನಸ್ಸು ಬ್ರಹ್ಮನನ್ನು ನೋಡಲು ತಡೆಯುತ್ತದೆ. ಹಾಗಿಲ್ಲದೆ ಹೋಗಿದ್ದರೆ, ಕೇವಲ ಶ್ರವಣದಿಂದಲೇ ಬ್ರಹ್ಮಸಾಕ್ಷಾತ್ಕಾರವಾಗುವುದಾದರೆ ಮನಸ್ಸಿಗೆ ಯಾವಾಗಲೂ ಬ್ರಹ್ಮದರ್ಶನ ಏಕೆ ಆಗುತ್ತಿಲ್ಲ? ''ಮನಸೈವೇನಂ ಪಶ್ಯತಿ'' ಎಂದು ಶ್ರುತಿ ಇದೆ. ಮನಸ್ಸು ಬ್ರಹ್ಮನನ್ನು ನೋಡಲು ಅಜ್ಞಾನ ಪ್ರತಿಬಂಧಕ. ಅದರ ನಿವೃತ್ತಿಗೆ ಶ್ರವಣ, ಮನನ, ನಿದಿಧ್ಯಾಸನ ಅವಶ್ಯಕ. ಅವೆಲ್ಲ ಅಜ್ಞಾನನಿವೃತ್ತಿಯ ಅಂಗಗಳು. **'ಪ್ರತಿಬಂಧನಿರುದ್ಧಂ ಹಿ ಮನೋ ದ್ರಷ್ಟುಂ ನ ಶಕ್ಯತೇ' 'ಶ್ರವಣಂ ಮನನಂ ಚೈವ ಧ್ಯಾನಂ ಚೇತಿ ಕ್ರಮಾತ್ ತ್ರಯಂ । ಪ್ರಧಾನಾಂಗಂ ಹಿ ಮನಸೋ ದ್ರಷ್ಟವ್ಯೇ ಪರಮಾತ್ಮನಿ ॥'** ಶ್ರವಣ, ಮನನ, ಧ್ಯಾನದಿಂದ (ಅಪರೋಕ್ಷಜ್ಞಾನದಿಂದ) ತೃಪ್ತನಾದ ಹರಿ ಅಜ್ಞಾನ ಅಪಸರಣ ಮಾಡಿ ತನ್ನನ್ನು ತೋರಿಸಿಕೊಳ್ಳುತ್ತಾನೆ. ಇದೇ ಅಪರೋಕ್ಷವು. ಭಾಗವತದಲ್ಲೂ **'ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ । ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರವ್ಯಯಃ'** ಈ ರೀತಿ ಮುಚುಕುಂದನಿಗೆ ದೇವತೆಗಳೇ ಮೋಕ್ಷಹೊರತಾದ ವರ ಕೇಳು, ಮೋಕ್ಷಬೇಕಾದರೆ ವಿಷ್ಣುವೇ ದಾತನು ಎಂದು ವಿಧಿಸಿದ್ದಾರೆ.

**'ಮುಕ್ತಾಗ್ರಂಥಿದ್ವಯಂ ಸಮ್ಯಂಗ್ಮೋಚಯೇನ್ಮುಕ್ತಚೇತನಾತ್'** ಎಂಬುದಾಗಿ ಮುಕ್ತಿಯಲ್ಲಿ ಜೀವಾಚ್ಛಾದಿಕ, ಪರಮಾಚ್ಛಾದಿಕ ಆವರಣವನ್ನು ಬಿಡುಗಡೆಗೊಳಿಸಿ, ಅಭಿಮಾನಕಾರಣವಾದ ಲಿಂಗಶರೀರ ಬಿಡಿಸಿದಾಗಲೇ ಜೀವರ ಸ್ವರೂಪಾನಂದದ ಆವಿರ್ಭಾವ, ಯಥೇಚ್ಛ ಭಗವಂತನ ದರ್ಶನವೆಂದು ಹೇಳಿದೆ.

ಪರವಾದಿಯಾದ ನೀನು ಕೇವಲ ಶ್ರವಣದಿಂದಲೇ ಬ್ರಹ್ಮದರ್ಶನ ಸಾಧ್ಯವಾದರೆ ಶುಕಾದಿಗಳು ಏಕೆ ಇನ್ನೂ ಜೀವನ್ಮುಕ್ತಾವಸ್ಥೆಯಲ್ಲಿ ಇದ್ದಾರೆ? ಇದಕ್ಕೆ ಉತ್ತರಿಸು. ಲೋಕದಲ್ಲೂ ಅನ್ನವನ್ನು ನೋಡಿದರೆ ಸುಖವಾಗುವುದಿಲ್ಲ, ತಿಂದಾಗ

ಮಾತ್ರ ತೃಪ್ತಿ ಎಂಬ ಸರ್ವಾನುಭವ ಉಕ್ತಿಯಿಂದ ಪ್ರತಿವಾದವನ್ನು ನಿರಾಕರಿಸುತ್ತಾರೆ. ಹಾಗಿಲ್ಲದೆ ಹೋದರೆ ಶ್ರೀಕೃಷ್ಣನು ಅರ್ಜುನನಿಗೆ '**ದಿವ್ಯಂ ದಧಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ**' ಎಂಬುದಾಗಿ ಅರ್ಜುನನಿಗೆ ದಿವ್ಯಚಕ್ಷುಸ್ಸಿನಿಂದ ನನ್ನನ್ನು ನೋಡು ಎಂದಿದ್ದಾನೆ. ರುದ್ರದೇವರಿಗೆ ದಕ್ಷನನ್ನು (ದಕ್ಷಪ್ರಜಾಪತಿ ಯಜ್ಞದಲ್ಲಿ) ಸಂಹರಿಸಲು ಆಗದಿದ್ದಾಗ, ಭಗವಂತನ ಯಜ್ಞದಲ್ಲಿ ದಕ್ಷನು ಪಶುವೆಂದು ಚಿಂತಿಸಿ ಸಮರ್ಪಿಸಿದರು. ನಂತರ ಶಿರಸ್ಸನ್ನು ತೆಗೆಯಲು ಸಮರ್ಥರಾದರು ಎಂದಿದೆ.

ಆದ್ದರಿಂದ '**ಶ್ರುತ್ವೈವ ಮೋಕ್ಷಮಾಪ್ನೋತಿ**' ಎಂಬ ಶ್ರುತಿಗೆ ಅವಿದ್ಯೆ ನಿವೃತ್ತಿಗೆ ಶ್ರವಣಾದಿಗಳು ಕಾರಣವೆಂದು ಅರ್ಥವೇ ಹೊರತು ಕೇವಲ ಶ್ರವಣಮೋಕ್ಷಪ್ರದವಲ್ಲ. ಅದಕ್ಕೋಸ್ಕರವೇ ಶ್ರುತಿಯು '**ಯಮೈವೇಷ ವೃಣತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ**' ಎಂಬುದಾಗಿ ಅವನ (ಹರಿಯ) ಪ್ರಸಾದಬಲವೇ ಪ್ರಧಾನಕಾರಣ ಎಂಬುದಾಗಿ ಹೇಳುತ್ತಿದೆ. ವಿವೃಣುತೇ ತನೂಂ ಸ್ವಾಂ ಎಂಬ ಪದದಿಂದ '**ತನುಬಲಾತ್ ಸಿದ್ಧಂ ಸಾಕಾರಸ್ಯೈವ ದರ್ಶನಂ**' ಶಿರಃಪಾಣ್ಯಾದಿ ಆಕಾರಸಹಿತ ದರ್ಶನವೇ ಹೊರತು ಪರವಾದಿ ಹೇಳುವಂತೆ ನಿರಾಕಾರ ವಸ್ತುವಿನ ನಿರ್ವಿಕಲ್ಪಕ ದರ್ಶನವಲ್ಲ.

ಚೈದ್ಯನ ದೃಷ್ಟಾಂತದಿಂದ ದ್ವೇಷದಿಂದಲೂ ಮೋಕ್ಷವಾಗಬಹುದಲ್ಲ ಎಂದರೆ ಸೂತ್ರಕಾರರೇ '**ಓಂ ವಿದ್ಯೈವ ತು ನಿರ್ಧಾರಣಾತ್ ಓಂ**' ಭಗವಂತನ ಜ್ಞಾನರೂಪ ಭಕ್ತಿಯಿಂದಲೇ ಮೋಕ್ಷ ಹೊರತು ದ್ವೇಷಬುದ್ಧಿಯಿಂದಲ್ಲ. ಹಾಗಿದ್ದರೆ 'ಭಗವನ್ನಿಂದಯಾ ವೇನೋ ದ್ವಿಜೈಸ್ತಮಸಿ ಪಾತಿತಃ' ಎಂದು ಶುಕಾಚಾರ್ಯರು ಏಕೆ ಹೇಳಿದ್ದಾರೆ? ಆದರಿಂದ ಭಗವಂತನ ಜ್ಞಾನದಿಂದಲೇ ಮೋಕ್ಷ ಹೊರತು ದ್ವೇಷದಿಂದಲ್ಲ.

ಇನ್ನು 'ಪರಾಂತಕಾಲೇ ಪರಿಮುಚ್ಯಂತಿ ಸರ್ವೇ' ಎಂಬುದರಿಂದ ೨೪ ತತ್ತ್ವಗಳ ಲಯ ಹೇಳಿದರೂ, ಪರವಾದಿ ಹೇಳುವಂತೆ ನಿಃಶೇಷ ವಸ್ತುನಾಶವಲ್ಲ. ಕೇವಲ ಸ್ಥೂಲತ್ವವನ್ನು ಕಳೆದುಕೊಂಡು ತನ್ನ ಮೂಲರೂಪದಲ್ಲಿ ಸೂಕ್ಷ್ಮದಿಂದ ಸೇರುವುದು ಅಷ್ಟೆ. ಲೋಕದಲ್ಲೂ ವಸ್ತು ಸುಟ್ಟರೆ ಬೂದಿ ಉಳಿದೇ

ಉಳಿಯುತ್ತದೆ.ನಿಃಶೇಷ ವಸ್ತುನಾಶವಿಲ್ಲ. ಇದು ಎಲ್ಲರ ಅನುಭವ, ತದ್ವತ್ ಲಯದಲ್ಲೂ ಕೂಡ.

**'ತತೋ ವೈಕುಂಠಮಗಮತ್ ಭಾಸ್ವರಂ ತಮಸಃ ಪರಂ । ಯತ್ರ ನಾರಾಯಣಃ ಸಾಕ್ಷಾತ್ ನ್ಯಾಸಿನಾಂ ಪರಮಾಗತಿಃ । ಶಾಂತಾನಾಂ ನ್ಯಸ್ತದಂಡಾನಾಂ ಯತೋ ನಾವರ್ತತೇ ಯತಿಃ । ಇತಿ ಭಾಗವತೇ ವೈಕುಂಠಾಖ್ಯ ಭಗವತಃ ಪುರೀ, ಪುನರಾವೃತ್ತಿತಃ ಶೂನ್ಯಾಗತಿಶ್ಚ ಪರಮೋಚ್ಯತೇ॥'** ಎಂಬುದಾಗಿ ಸ್ಪಷ್ಟವಾಗಿ ವಿಷ್ಣುಲೋಕವೇ ಮೋಕ್ಷ, ಕೃಷ್ಣಚರಣಪ್ರಾಪ್ತಿಯೇ ಪುನರಾವೃತ್ತಿಯಿಲ್ಲದ ಸ್ಥಾನವೆಂದೂ ಭಾಗವತಾದಿ ಗ್ರಂಥಗಳಲ್ಲಿ ಹೇಳಿದೆ. ಇದಕ್ಕಿಂತಲೂ ಭಿನ್ನವಾದ ಪರಮಮೋಕ್ಷವೆಂಬುದು ಎಲ್ಲೂ ಉಕ್ತವಾಗಿಲ್ಲ. **'ಅನಂತಾಸನವೈಕುಂಠ-ಶ್ವೇತದ್ವೀಪಾಭಿದಾಃ ತ್ರಯಃ । ಜ್ಯೋತಿಷ್ಮಂತೋ ಯತ್ರ ಲೋಕಾಸ್ತತ್ರ ಮಾಮಮೃತಂ ಕೃಧಿ'** ಎಂಬುದಾಗಿ ಶ್ರುತಿಯೇ ನಿತ್ಯಪ್ರಕಾಶವುಳ್ಳ ಅನಂತಾಸನ, ವೈಕುಂಠ, ಶ್ವೇತದ್ವೀಪವೆಂಬ ವಿಷ್ಣುಲೋಕಗಳೇ ಪರಮಮೋಕ್ಷವೆಂದೂ ಹೇಳುತ್ತಿದೆ.

**'ಭೇಜೇ ಖಗೇಂದ್ರಧ್ವಜಪಾದಮೂಲಂ'** ಎಂದು ಹೇಳಿ ಸೇವ್ಯ-ಸೇವ್ಯಕಭಾವ ವೈಕುಂಠದಲ್ಲೂ ಉಂಟೆಂದೂ, ಜೀವರುಗಳ ಭೇದವೂ, ಖಗೇಂದ್ರ ಶಬ್ದದಿಂದ ತಾರತಮ್ಯವೂ, ಖಗಾದಿ ಜೀವರಾಶಿಗಳು ಇರುವುದೆಂದೂ, ಪಾದಶಬ್ದದಿಂದ ಸಾಕಾರನೆಂಬುದನ್ನೂ, ಗರುಡಧ್ವಜ ಎಂಬ ಪದದಿಂದ ರಥವನ್ನು ಹೇಳಿ ಭೋಗಸಾಧನಗಳಿರುವುದೆಂದೂ, ಶ್ರೀಹರಿ ಸುಖಪೂರ್ಣನೆಂದೂ ಸಿದ್ಧವಾಗುತ್ತದೆ. ಶುದ್ಧಪ್ರಕೃತ್ಯಂಶ ಆಭರಣಗಳು ಹರೀಚ್ಛೆಯಿಂದ ಲಿಂಗಭಂಗ ಹೊಂದಿದ ಮುಕ್ತರಿಗೆ ಉಂಟು. ಸಾಲೋಕ್ಯ, ಸಾರೂಪ್ಯ, ಸಾಯುಜ್ಯ ಭೇದದಿಂದ ಆನಂದತಾರತಮ್ಯವೂ ತಿಳಿಯುತ್ತದೆ.

**'ಪುಮಾನ್ ವಿರಿಂಚತಾಮೇತಿ ಮಾಮೇವೈತಿ ತತಃ ಪರಂ'** ಪುರುಷ ಶಬ್ದವಾಚ್ಯನಾದ ಋಜುವೇ ಬ್ರಹ್ಮತ್ವವನ್ನು ಹೊಂದಿ ನಂತರ ನನ್ನನ್ನೇ ಸೇರುತ್ತಾನೆ, ಮತ್ತೆ ಪುನರಾವೃತ್ತಿ ಇಲ್ಲ. ಹೇಗೆ 'ಧಾತಾ ಯಥಾ ಪೂರ್ವಮಕಲ್ಪಯತ್' ಎಂಬುದಾಗಿ ಪ್ರತಿಕಲ್ಪದಲ್ಲೂ ಬ್ರಹ್ಮನು ಹಿಂದಿನಂತೆಯೇ ಸೃಷ್ಟಿ ಮಾಡುತ್ತಾನೆ. ಇಲ್ಲಿ

ಋಜುಗಳಿಗೆ 'ಪುರುಷ' ಶಬ್ದವಾಚ್ಯತ್ವವನ್ನು ಹೇಳಿದ್ದಾರೆ. ಪುರುಷಶಬ್ದವಾಚ್ಯತ್ವ ಇರುವುದರಿಂದಲೇ (ರಾಜರಿಗೆ) ಆಖ್ಯಾನದಲ್ಲಿ ಪ್ರತೀ ಅಧ್ಯಾಯದ ಅಂತ್ಯದಲ್ಲಿ **'ಸಮಂ ಸಹಸ್ರಶೀರ್ಷಸ್ಯ ಸೂಕ್ತಸ್ಯ ಪುರುಷಾತ್ ಕೃತಂ'** ಎಂದು ಋಜುಗಳಿಂದ ರಚಿತವಾದದ್ದು, ವೇದಗಳಂತೆ ನಿರ್ದುಷ್ಟವಾಕ್ಯಗಳು ನನ್ನಿಂದ ರಚಿತವಾದ ಕೃತಿಗಳು ಎಂಬುದನ್ನು ಸೂಚಿಸಿದ್ದಾರೆ.

**'ಪವಮಾನಃ ಪ್ರಜಾಪತಿಃ' 'ಮಾರುತಸ್ಯ ವೇಧಸಃ'** ಎಂಬ ವಾಕ್ಯಗಳಿಂದ ವಾಯುವೇ ಬ್ರಹ್ಮಪದವಿಯನ್ನು ಹೊಂದುವನು ಎಂಬುದಾಗಿ ಭಾವಿಬ್ರಹ್ಮತ್ವವು ಶ್ರುತಿಯಲ್ಲೇ ವಾಯುದೇವರಿಗೆ ಸಿದ್ಧವಾಗಿದೆ (ಜೀವರಾಶಿಗಳಲ್ಲಿ ಅತಿಹೆಚ್ಚಿನ ಆನಂದ). **'ಸೈಷಾನಂದಸ್ಯ ಮೀಮಾಂಸಾ ಭವತಿ'** ಎಂದು ಶ್ರುತಿಗಳು ಆನಂದ ತಾರತಮ್ಯವನ್ನು ಸ್ಪಷ್ಟವಾಗಿ ಹೇಳುತ್ತಿದೆ. ಆನಂದತಾರತಮ್ಯಕ್ಕೆ ಕಾರಣಸಾಧನ ವೈಚಿತ್ರ್ಯ. **'ಯತಃ ಸಾಧನವೈಚಿತ್ರ್ಯಂ ದೇವಷ್ಯಾದಿಷು ದೃಶ್ಯತೇ'** ದೇವತೆಗಳು, ಋಷಿಗಳು, ಮನುಷ್ಯರುಗಳಲ್ಲಿ ಸಾಧನೆಯಲ್ಲಿ ವೈಚಿತ್ರ್ಯ ಇರುವುದರಿಂದ (ಹೆಚ್ಚು ಕಡಿಮೆ) ಫಲರೂಪ ಆನಂದವೂ ವ್ಯತ್ಯಾಸವಾಗಿದೆ. ಸಾಧನತಾರತಮ್ಯಕ್ಕೆ ಅನುಗುಣವಾಗಿ ಆನಂದವೆಂಬುದು ತಾರತಮ್ಯವಿಲ್ಲದಿದ್ದರೆ ಮಹಾಪ್ರಯತ್ನಗಳ ಹಾನಿಯೂ, ಯತ್ನವಿಲ್ಲದವನಿಗೆ ಫಲವೂ ಬಂದು ಮಹಾದೋಷ ಉಂಟಾಗುತ್ತದೆ ಒಂದೊಮ್ಮೆ ಆನಂದತಾರತಮ್ಯವಿಲ್ಲದಿದ್ದರೆ ಮಹಾಪ್ರಯತ್ನಗಳ ಹಾನಿಯೂ, ಯತ್ನವಿಲ್ಲದವನಿಗೆ ಫಲವೂ ಬಂದು ಮಹಾದೋಷ ಉಂಟಾಗುತ್ತದೆ. ಒಂದೊಮ್ಮೆ ಆನಂದತಾರತಮ್ಯವಿಲ್ಲದಿದ್ದರೆ ಆನಂದಮೀಮಾಂಸೆಯೇ (ಶ್ರುತಿಯೇ) ವ್ಯರ್ಥವಾಗಬೇಕಾದೀತು!

ದ್ವಿತೀಯವಸ್ತುವೇ ಇಲ್ಲ ಅದ್ವೈತವೇ ಎಂಬ ವಾದವನ್ನು ಲೋಕನ್ಯಾಯದಿಂದ ನಿರಾಕರಿಸುತ್ತಾರೆ. ಲೋಕದಲ್ಲಿ ಒಬ್ಬ ಗುರುವಿಗೆ ಶಿಷ್ಯನೇ ಇಲ್ಲದಿದ್ದರೆ ದುಃಖವೂ, ಶಿಷ್ಯನಿಗೆ ಗುರುವೂ ಇಲ್ಲದಿದ್ದರೆ ದುಃಖವೂ ಕಂಡಿದೆ. ಹಾಗೆ ಇಲ್ಲಿ ಧನಕನಕಾದಿ ಸಂಪತ್ತಿದ್ದರೂ ಇನ್ನೂ ಅಧಿಕಸುಖಕ್ಕೋಸ್ಕರ ಯಜ್ಞಾದಿಗಳನ್ನು ಮಾಡುತ್ತಾರೆ. ಇನ್ನು ಒಬ್ಬ ಸ್ತ್ರೀ (ಹೆಂಡತಿ) ನಷ್ಟವಾದರೆ ಇನ್ನೊಬ್ಬ ಸ್ತ್ರೀಯನ್ನು

ಪುರುಷ ಬಯಸುತ್ತಾನೆ. ಮನೆಬಿದ್ದುಹೋದರೆ ಹೊಸಮನೆ ಕಟ್ಟಿಕೊಳ್ಳುತ್ತಾನೆ. ಲಕ್ಷ್ಮಿಯನ್ನು ತೊಡೆಯಲ್ಲಿ ಕೂಡಿಸಿಕೊಂಡು ನಾರಾಯಣನೂ, ಅರ್ಧನಾರೀಶ್ವರನಾಗಿ ಶಿವನೂ ಇದ್ದಾನೆ. ಮುಕ್ತರೂ ಸಹ ಮಿತ್ರರಿಂದ ಕೂಡಿ ಸಂತೋಷದಿಂದ ವಿಹರಿಸುತ್ತಾರೆ. ಹೀಗೆ ಇನ್ನೊಂದು ವಸ್ತುವೇ ಬೇಡ ಎನ್ನುವ ಅನುಭವವೇ ಯಾರಿಗೂ ಇಲ್ಲ. ಎಲ್ಲರೂ ದ್ವೈತಭಾವವನ್ನೇ ಅಪೇಕ್ಷಿಸುತ್ತಾರೆ. ಹೀಗಿರಬೇಕಾದರೆ ದ್ವೈತಭಾವವನ್ನು ಯಾವ ಶ್ರುತಿಯೂ ನಿರಾಕರಿಸುವುದಿಲ್ಲ. ಅದ್ವಿತೀಯ ಅವಸ್ಥೆಯನ್ನು ಮೋಕ್ಷವೆಂದು ಕರೆಯಲಿಕ್ಕೂ ಆಗುವುದಿಲ್ಲ.

**'ಸರ್ವಂ ಆತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ ಕೇನ ಕಂ ಜಿಘ್ರೇತ್... ಕೇನ ವಿಜಾನೀಯಾತ್'** ಇತ್ಯಾದಿ ಶ್ರುತಿಗಳು ಪರವಾದಿ ಹೇಳುವಂತೆ ಅದ್ವಿತೀಯತ್ವವನ್ನು ಹೇಳುವುದಿಲ್ಲ. ಬದಲಾಗಿ ದ್ವೈತಭಾವವನ್ನೇ ಹೇಳುತ್ತಿದೆ. ಏಕೆಂದರೆ ಲೋಕದಲ್ಲಿ ಒಬ್ಬ ಯೋಗಿ (ಸಮಾಧಿಯಲ್ಲಿ ಧ್ಯಾನಾಸಕ್ತನಾದವನು) ಭೇರೀ ತಾಡನ ಶಬ್ದ ಅವನ ಪಕ್ಕದಲ್ಲಿದ್ದರೂ ಕೇಳುವುದಿಲ್ಲ. ಅವನ ಇಂದ್ರಿಯಗಳು ಬಾಹ್ಯವಿಷಯದಲ್ಲಿ ಸ್ತಬ್ಧವಾಗಿರುತ್ತದೆ. ಹೀಗೆ ಪರಮಾತ್ಮನಲ್ಲೇ ಆಸಕ್ತನಾಗಿರುವವನಿಗೆ ಬೇರೆ ಯಾವ ವಸ್ತುವೂ ಬೇಡ. ಹಾಗೇ ಲೋಕದಲ್ಲೂ ಒಬ್ಬ ಬಾಣ ತಯಾರಿಸುವವನು ಸಾಣೆ ಹಿಡಿಯಬೇಕಾದರೇ ರಾಜನೇ ಬಂದು ಪಕ್ಕದಲ್ಲಿದ್ದರೂ ಗಮನಿಸುವುದಿಲ್ಲ. ಒಬ್ಬ ನರ್ತಕಿ ಕುಂಭವನ್ನು ತಲೆಯ ಮೇಲೆ ಇಟ್ಟುಕೊಂಡು ನರ್ತಿಸುವಾಗ ಪ್ರೇಕ್ಷಕರನ್ನು ಗಮನಿಸುವುದಿಲ್ಲ, ಪಗಡೆ ಆಟದಲ್ಲಿ ಅತ್ಯಾಸಕ್ತನು ತಾಯಿಯ ಮರಣವಾರ್ತೆ ಬಂದರೂ ಲಕ್ಷ್ಯಕೊಡುವುದಿಲ್ಲ. ತುಚ್ಛವಾದ ವಿಷಯದಲ್ಲೇ ಇಷ್ಟು ಆಸಕ್ತಿ ಇರಬೇಕಾದರೆ ಸರ್ವಸುಖವನ್ನು ನೀಡುವ ಸರ್ವೋತ್ತಮ ವಸ್ತುವಿನಲ್ಲಿ ಆಸಕ್ತನಾದವನು ಎಷ್ಟು ಏಕಾಗ್ರಚಿತ್ತನಾಗಿರಬೇಡ? ಅವನು ಏನು ತಾನೇ ಬಯಸುತ್ತಾನೆ? ಅಂತಹ ಸ್ಥಿತಿಯನ್ನೇ ಮುಕ್ತಿಯಲ್ಲಿ ಶ್ರುತಿಗಳು ವರ್ಣಿಸುತ್ತಿವೆಯೇ ವಿನಾ ದ್ವೈತಭಾವವನ್ನು ನಿರಾಕರಿಸುತ್ತಿಲ್ಲ. ದ್ವೈತಭಾವ ನಿರಾಕರಿಸುವುದಾದರೆ ಅದನ್ನು ಪುರುಷಾರ್ಥ ಎಂದು ಯಾರು ಕರೆಯುತ್ತಾರೆ? 'ಸೋಶ್ನುತೇ ಸರ್ವಾನ್ ಕಾಮಾನ್' ಎಂಬ ಶ್ರುತಿಯು ವ್ಯರ್ಥವಾಗಬೇಕಾಗುತ್ತದೆ.

ಇನ್ನು ಲೋಕನ್ಯಾಯದಂತೆ ನೋಡಿದರೂ ಬ್ರಹ್ಮೈಕ್ಯ ಕೂಡುವುದಿಲ್ಲ. ಒಬ್ಬ ರಾಜ ತನ್ನ ಪ್ರಜೆಗಳನ್ನು ತನ್ನ ಸಮರನ್ನಾಗಿ ಮಾಡಿಕೊಳ್ಳಲು ಇಚ್ಛಿಸುವುದಿಲ್ಲ. ರಾಜ ಎಷ್ಟೇ ಪ್ರೀತಿ ತೋರಿಸಿದರೂ ತನ್ನ ಹೆಂಡತಿಯನ್ನು ಇನ್ನೊಬ್ಬರಿಗೆ ಕೊಡುವುದಿಲ್ಲ. ನಿಜವಾದ ಭೃತ್ಯರೂ ರಾಜಾಸನ (ಸಿಂಹಾಸನ), ರಾಜವಾಹನ, ರಾಜಪತ್ನಿಯನ್ನಾಗಲಿ ಎಂದೂ ಬಯಸಕೂಡದು. ಹಾಗೆ ಮುಕ್ತರು ಎಂದಿಗೂ ಅಸತ್‌ಕಾಮನೆಗಳನ್ನು ಮಾಡುವುದಿಲ್ಲ. ಹರಿಯೂ ಸಾರೂಪ್ಯಮೋಕ್ಷಕೊಟ್ಟರೂ ಶ್ರೀವತ್ಸ, ಕೌಸ್ತುಭಾದಿಗಳನ್ನು ಕೊಡುವುದಿಲ್ಲ. 'ಸಂಕಲ್ಪಮಾತ್ರಾತ್ ಸಕಲೋಪಿ ಸ ಸ್ಯಾತ್' ಎಂಬುದಾಗಿ ಮುಕ್ತರ ಇಚ್ಛೆಗೆ ಪ್ರತಿಬಂಧಕವಿಲ್ಲದಿದ್ದರೂ, ಸೂತ್ರಕಾರರು **'ಓಂ ಜಗದ್‌ವ್ಯಾಪಾರವರ್ಜಂ ಓಂ'** ಎಂದು ಹೇಳಿರುವುದರಿಂದ ಮುಕ್ತಿಯಲ್ಲೂ ಕೇವಲ ಭಗವನ್ನಿಷ್ಠ ಅಸಾಧಾರಣ ಧರ್ಮಗಳು ಎಂದೆಂದೂ ಜೀವರಿಗೆ ಬರುವುದಿಲ್ಲ. ವಿಷ್ಣುವಿನಿಂದ ಅತ್ಯಂತ ಭಿನ್ನರಾಗಿ, ಭಿನ್ನ ಭಿನ್ನ ಧರ್ಮವುಳ್ಳವರಾಗಿಯೇ ಇರುತ್ತಾರೆ ಸಾಮ್ಯವನ್ನು ಅವರು ಹೊಂದುವುದಿಲ್ಲ.

ಸಾಯುಜ್ಯಮುಕ್ತಿಯೂ ಐಕ್ಯವಲ್ಲ. ಯುಜಿರ್ ಯೋಗೇ ಎಂಬ ಧಾತುವಿದೆ, ಐಕ್ಯವೆಂಬ ಅರ್ಥ ವ್ಯಾಕರಣಕ್ಕೂ ಸಮ್ಮತವಲ್ಲ. ಇನ್ನು ಶ್ರುತಿಯು 'ಅಮೃತಸ್ಯೈಷ ಸೇತುಃ' ಎಂದು ಮುಕ್ತರಿಗೂ ಆಧಾರವನ್ನಾಗಿ ಹೇಳುತ್ತಿದೆ. (ಮುಕ್ತಾನಾಂ ಪರಮಾಗತಿಃ). ಆದ್ದರಿಂದ 'ಅತಃ ಸರ್ವಗುಣೈಃ ವಿಷ್ಣುಃ ಮುಕ್ತಂ ಕುರ್ಯಾತ್ ಕಥಂ ಸಮಂ? ತತೋಪಿ ನೈಕ್ಯಂ ಸಾಮ್ಯಂ ತಂ ಕಿಂಚಿತ್ ಸಾಮ್ಯಮಿತೀರಿತಂ'. ಕೇವಲ ಶುದ್ಧತ್ವ. ದುಃಖರಾಹಿತ್ಯತ್ವ, ನಿತ್ಯಸುಖತ್ವ, ನಿತ್ಯತ್ವ, ಚೇತನತ್ವಗಳಲ್ಲಿ ಕಿಂಚಿತ್ ಸಾದೃಶ್ಯವೇ ಹೊರತು ಸರ್ವಸಾಮ್ಯವೆಂಬುದು ಎಂದಿಗೂ ಇಲ್ಲ.

'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಸ್ತು ತದನುಜ್ಞಯಾ' ಎಂಬಂತೆ ವಾಯುದೇವರೇ ಮೋಕ್ಷವನ್ನು ಕೊಡಿಸುವವರು. ಮೋಕ್ಷವನ್ನು ಕೊಡಿಸುವ ಆ ವಾಯುವೇ ಜ್ಞಾನಪ್ರಸರಣಕ್ಕಾಗಿ 'ಮಧ್ವ'ರೂಪರಾಗಿ ಅವತರಿಸುವರೆಂದು ಸ್ಪಷ್ಟವಾಗಿ ಋಗ್ವೇದದ ಷಷ್ಠ-ಸಪ್ತಮ ಅಷ್ಟಕಗಳಲ್ಲಿ ಏಳು ಅಧ್ಯಾಯಗಳಲ್ಲಿ 'ಪವಮಾನ' ಮಂಡಲವೆಂದು ಖ್ಯಾತವಾಗಿ ವಾಯುದೇವರನ್ನೇ ಹೊಗಳುತ್ತಿದೆ.

'ಸ ಪೂರ್ವ್ಯಃ ಪವತೇ ಯಂ ದಿವಸ್ಪರಿ ಶ್ಯೇನೋ ಯಥಾಯದಿಷಿತಸ್ತರೋ ರಜಃ । ಸ ಮಧ್ವ ಆಯುವತೇ ವಿವಿಜಾನಃ ಇತ್ಯಶಾನೋರಸ್ತು ಮನಸಾ ಹ್ಯಭಿಭೃಷಾ' ಇತ್ಯಾದಿ ವಾಕ್ಯಗಳಲ್ಲಿ ವಿವಿಜಾನಃ ಎಂಬ ಪದದಿಂದ 'ವಿಜೃಪೃಥಗ್‌ಭಾವೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿ ವೇವಿಜಾನಃ ಪಂಚಭೇದವನ್ನು ಚೆನ್ನಾಗಿ ಸ್ಥಾಪಿಸಿದರು. 'ಆಯುವತೇ' ಎಂಬ ಪದದಿಂದ 'ಯು ಮಿಶ್ರಣಾಮಿಶ್ರಣಯೋಃ' ಎಂಬ ಧಾತ್ವರ್ಥದಿಂದ ಅವೈಷ್ಣವರಿಂದ ಎಂದೂ ಸಖ್ಯವಿಲ್ಲ, ವೈಷ್ಣವರನ್ನು 'ಕೃಶಾನೋರಸನಶೀಲಃ' ಲಯಕಾಲದಲ್ಲಿ ಅಗ್ನಿ(ತೇಜೋ) ಆವರಣವನ್ನು ನುಂಗಿ ಸಂಹಾರಮಾಡುವವನೂ ಉಗ್ರರಿಗೆ (ದುಃಶಾಸನಾದಿಗಳಿಗೆ) ಭಯಂಕರ ರೂಪವುಳ್ಳವನೂ 'ಪೂರ್ವಾಸೋಗುರುತಾಂ ಗತಾ'= ಅನಾದಿ ಗುರುವೂ, ಉಪಾರಾಸಃ= ಮೋಕ್ಷೋಪಯೋಗಿ ಲಿಂಗದೇಹಭಂಗಪಡಿಸುವವನೂ (ವಿರಜಾ ನದಿ ಸ್ನಾನಮಾಡುವುದರಿಂದ) ಇಂದವಶ್ಚ= ಇಷ್ಟದಾನಶೀಲನೂ (ಸಜ್ಜನರಿಗೆ) ಜ್ಞಾನಗೋಮತೇ= ಜ್ಞಾನಕಿರಣಗಳಿಂದ ಪ್ರಕಾಶಿಸುವವನೂ ಎಂದಿದೆ.

ಪವಮಾನನೇ ಸೋಮಶಬ್ದವಾಚ್ಯನೂ, 'ಸೋಮಃ ಪವತೇ' ಎಂಬುದಾಗಿ ಪವಿತ್ರೀಕರಿಸುವವನೂ, ಸೋಮನೆಂದೇ ಹೇಳಿದೆ. 'ಪ್ರಸೇನಾನೀ ಶೂರೋ ಅಗ್ರೇ ರಥಾನಾಂ.... ಸೋಮೋ ವಸ್ತ್ರಾಭರಸಾನಿ ಧತ್ತೇ' ಎಂಬುದಾಗಿ 'ಪ್ರಸೇನಾನಿ' ಎಂಬ ಪದದಿಂದ ಭೀಮ, ಹನುಮಂತರ ಸೇನಾನಾಯಕತ್ವವನ್ನೂ, ಭೀಮಸೋಮವಂಶದವನಾದ್ದರಿಂದ 'ಸೋಮ'ನೆಂದೂ ಕರೆದಿದೆ. ಅಗ್ರೇ ರಥಾನಾಂ ಸೇನಾನೀ= ಯುದ್ಧದಲ್ಲಿ ವೈರಿಗಳ ಎದುರಿನಲ್ಲಿ ಭೀಮ ನಿರ್ಭಯನಾಗಿ ಹೋಗುವುದನ್ನು ಕಂಡು ಸೇನೆಯು ಹರ್ಷಪಡುತ್ತಿತ್ತು ಎಂಬ ಭಾರತೋಕ್ತ ಜ್ಞಾನವನ್ನು ಹುಟ್ಟಿಸುತ್ತಾನೆ. 'ಜನಿತೋಥ ವಿಷ್ಣೋ ಯಸ್ತಾ ವಿಜಾನಾತ್ ಸ ಪಿತುಃ ಪಿತಾ' ಇತ್ಯಾದಿ ವಾಕ್ಯಗಳಿಂದ ವಿಪ್ರರಲ್ಲಿ ಭಗವಂತನ ಜ್ಞಾನವನ್ನು ಹುಟ್ಟಿಸುತ್ತಾನಾದ್ದರಿಂದ ವಿಷ್ಣುವಿಗೂ ತಂದೆಯಂತೆ ಇದ್ದಾರೆ. ಏಕೆಂದರೆ 'ಜನಿತಾ ಚೋಪನೇತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ । ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ' ಎಂಬ ಪ್ರಮಾಣದಂತೆ ಭಯದಿಂದ ರಕ್ಷಿಸುವವನೇ ತಂದೆ. ಮಿಥ್ಯಾಜ್ಞಾನದಿಂದ ಭಯಗೊಂಡವರಿಗೆ ಸತ್‌ಜ್ಞಾನವನ್ನು ಕೊಟ್ಟು

ರಕ್ಷಿಸಿದರು. ನೀಚರಿಂದ ಹೇಳಲ್ಪಡುವ ವಿಷ್ಣುವಿನ ಐಕ್ಯ ಹಾಗು ಗುಣಶೂನ್ಯತ್ವ ನಿರಾಕರಿಸಿ ಜಗತ್‌ಸತ್ಯತ್ವ, ಗುಣಪೂರ್ಣತ್ವವನ್ನು ಸಮರ್ಥಿಸಿದ್ದರಿಂದ ವಿಷ್ಣುಜನಕನೇ ತಂದೆಯೇ ಆಗಿದ್ದಾರೆ. (ಗುರ್ವರ್ಥ ದೀಪಿಕೆಯಲ್ಲಿ ಮೇಲ್ಕಂಡ ಶ್ರುತಿಯನ್ನು, ಸೋಮ ಶಬ್ದದ ಅರ್ಥವನ್ನೂ ವಿಸ್ತಾರವಾಗಿ ಚರ್ಚಿಸಿದ್ದಾರೆ).

**'ವಿದ್ವಾನ್ ಮಧ್ವಃ ಉಜ್ಜಭಾರಾದೃಶೇಕಂ'** ಎಂಬ ಶ್ರುತಿಯು ಸ್ಪಷ್ಟವಾಗಿ ನಾಲ್ಕುವೇದಗಳನ್ನು ಭಾರತ, ರಾಮಾಯಣ, ಪಂಚರಾತ್ರವೆಂಬ ಮೂಲಶಾಸ್ತ್ರಗಳನ್ನು ಉಪದೇಶದಿಂದ ಉದ್ಧರಿಸಿದವರೆಂದೂ, **'ವಿಷ್ಟಂಭೋದರುಣೋದಿವ'** ಎಂಬುದರಿಂದ ಪೃಥಿವ್ಯಾದಿ ಲೋಕಧಾರಕರೆಂದೂ, **'ಹಸ್ತೇಸ್ಯಾತ್'** ಎಂಬುದರಿಂದ ಸರ್ವಲೋಕವೂ ಇವರ ಹಸ್ತವಶದಲ್ಲಿದೆ ಎಂದಿದೆ ಶ್ರುತಿ.

**'ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಂ'** ಯಾವ (ತಪ್ತ) ಸುದರ್ಶನಚಕ್ರದಿಂದ ಗುರುಗಳಾದ ಮಧ್ವರು ತಪ್ತಾಂಕನದಿಂದ ಸಜ್ಜನರನ್ನು ಪವಿತ್ರೀಕರಿಸುವರೋ ಅಂತಹ ಗುರುಗಳು ನನ್ನನ್ನೂ ಪುನೀತರನ್ನಾಗಿ ಮಾಡಲಿ ಎಂದು ಶ್ರುತಿಹೊಗಳುತ್ತಿದೆ (ದೃಷ್ವಾರ ಋಷಿಯ ಪ್ರಾರ್ಥನೆ). ವಾಯುದೇವರ ಹಸ್ತಾಂಕವನ್ನು ದೇವತೆಗಳು, ಋಷಿಗಳೂ ಬಯಸುತ್ತಾರೆ. ಮಾನವರು ಪ್ರಾರ್ಥಿಸುವುದು ಅತಿಶಯವೇನು? 'ಪಾವಮಾನ್ಯಃ' ಎಂಬ ಬಹುವಚನದಿಂದ ಪ್ರತಿಕಲ್ಪದಲ್ಲಿ ಅನೇಕಸಾರಿ ಮಧ್ವಾವತಾರವಾಗುವುದೆಂದು ತಿಳಿಸಿದೆ. ಬಲಕಾರ್ಯಕ್ಕಾಗಿ ಸಾವಿರಾರು ರೂಪಗಳು ಅವತರಿಸಿದರೂ ಜ್ಞಾನಕಾರ್ಯಕ್ಕಾಗಿ (ವಿಶೇಷವಾಗಿ) ಅವತರಿಸುವ ರೂಪ 'ಮಧ್ವ'ರೂಪವು. 'ಪಾವಮಾನೀ ತನುಶ್ಚೇಯಃ ಸ್ಯಾದಾಚಾರಸ್ವರೂಪಿಣೀ । ಯಸ್ಯ ವೈಷ್ಣವಧರ್ಮಸ್ಯ ಸರ್ವತ್ರಾಪಿ ಪ್ರವರ್ತಿಕಾ' 'ವ್ಯಾಸಕೈಂಕರ್ಯಧುರ್ಯೋ ಚ ಮಾಧ್ವೀ ಭವಿತುಮರ್ಹಸಿ' ಯಾವ ಜಗದ್ಗುರುತ್ವರೂಪದಿಂದ ಕೂಡಿದ ಈ ಮಧ್ವರೂಪವೇ ಅದ್ಯಾಪಿ ವ್ಯಾಸಸೇವಾ ನಿರತವಾಗಿ ದೊಡ್ಡಬದರಿಯಲ್ಲಿರುವುದು. ಕೇವಲ ತಾವಿದ್ದಾಗ ಚಕ್ರಾಂಕನ ಮಾಡುತ್ತಿದ್ದರಷ್ಟೇ ಅಲ್ಲ, ಇಂದೂ ಕೂಡ 'ಸ ಏವ ಧಾರಯೇತ್ ವಾಯುರನ್ಯತ್ರ ಗುರುಷು ಸ್ಥಿತಃ' ಯೋಗ್ಯರಾದ ಸರ್ವಜ್ಞಪೀಠದಲ್ಲಿ (ಗುರುಸ್ಥಾನದಲ್ಲಿ) ಇದ್ದು

ಎಲ್ಲರಿಗೂ ತಪ್ತಾಂಕನ ಮಾಡುವರು ಮಧ್ವರೇ ಆಗಿದ್ದಾರೆ 'ಮಧ್ವಾಖ್ಯ' ಗುರುರೂಪೇಣ. **'ಪೂಯಮಾನಃ ಸ ಪಾವಯನ್ ಧಾರಯೇತಾನಿ ರೂಪಾಣಿ ಮಧ್ವಸ್ಯೈವ ಬಹೂನಿ ತತ್'** ಯೋಗ್ಯರಾದ ಸಕಲ ಮಾಧ್ವಯತಿ (ಗುರುಸ್ಥಾನ) ಗಳಲ್ಲೂ ಎಲ್ಲ ಕಾಲಕ್ಕೆ ಸನ್ನಿಧಾನದಿಂದ ವೈಷ್ಣವತ್ವವನ್ನು ಸದಾಕಾಲ ಜಾಗೃತಗೊಳಿಸುತ್ತಿರುತ್ತಾರೆ. ಸತ್‌ಸಂಪ್ರದಾಯನಿಷ್ಠ ಸಕಲ ಮಾಧ್ವಗುರುಗಳಲ್ಲೂ ಮಧ್ವರ ಚಿಂತನೆ ಅವಶ್ಯಕ ಎಂಬ ಉದಾತ್ತ ಭಾವನೆಯನ್ನು ಸಕಲ ಮಾಧ್ವರ ಭಾವೈಕ್ಯವೂ ಹೇಗಿರಬೇಕೆಂಬುದನ್ನೂ ರಾಜರು ಸೂಚಿಸಿ ಎಚ್ಚರಿಸಿದ್ದಾರೆ. ಈ ದೃಷ್ಟಿಯಿಂದಲೂ ಮಧ್ವರೂಪಗಳು ಬಹುರೂಪವೇ ಆಯಿತು. ಆದಕ್ಕೇ ಶ್ರುತಿ ಬಹುವಚನ (ಪಾವಮಾನ್ಯಃ) ಪ್ರಯೋಗ ಮಾಡಿದೆ ಎನ್ನುತ್ತಾರೆ ವಾದಿರಾಜರು.

## ಋಜುಗಳು ಮತ್ತು ಋಜುಪತ್ನಿಯರ ಚಿಂತನೆ :

ಪವಮಾನ ಸೂಕ್ತದಲ್ಲಿ **'ದೇವೈರ್ದೇವೀ ಸಮಾಹಿತಾಃ'** ಎಂದು ಹೇಳಲ್ಪಟ್ಟು ಸರ್ವ ಋಕ್ಕುಗಳಿಂದ ವಾಯುಸಹಿತ ಭಾರತೀದೇವಿಯರೂ ಅಭಿಮಾನಿಗಳು, ಪ್ರತಿಪಾದ್ಯರೂ ಆಗಿದ್ದಾರೆ. **'ದೇವ್ಯಶ್ಚ ಸಂತಿ ಭಾರತ್ಯಾಮೂರ್ತಯೋ ವಾಯುಮೂರ್ತಯಃ । ಮಾನಿನ್ಯಃ ಪ್ರತಿಪಾದ್ಯಶ್ಚ ತತಸ್ತತ್ ಪ್ರತಿಪಾದಿತಾಃ ।'** ಎಂದು ಯಜ್ಞಾದಿಗಳಲ್ಲಿ ಪತ್ನಿಯನ್ನು ಆಹ್ವಾನಿಸಿದರೆ ಹೇಗೆ ಪತ್ನಿಯೂ ಜೊತೆಯಲ್ಲಿಯೇ ಬರುವರೋ ಹಾಗೇ ಪವಮಾನಸೂಕ್ತದಂತೆ ವಾಯುದೇವರು ಸಪತ್ನೀಕರಾಗಿ ಬರುವರು. ಹೀಗೆ ಋಗ್‌ಮಂತ್ರಗಳು ಋಜುಪತ್ನಿಯರನ್ನೇ ಪ್ರತಿಪಾದಿಸುತ್ತವೆ ಎಂದಮೇಲೆ ಲಾತವ್ಯಾಖ್ಯ ಋಜುವನ್ನೂ ಪ್ರತಿಪಾದಿಸುತ್ತದೆ ಎನ್ನುವುದರಲ್ಲಿ ವಿವಾದವೇನು? **'ಬ್ರಹ್ಮಾಸರಸ್ವತೀ ವಾಯುರಿತ್ಯಾದ್ಯುಕ್ತ್ವಾ ಏತೇ ಸಮಾ ವ್ಯಾಪ್ತೌ ಬ್ರಹ್ಮೇಶೌ ಗುಣತೋ ಅಧಿಕೌ'** ಎಂಬ ಬೃಹದ್‌ಭಾಷ್ಯದಂತೆ ಸರಸ್ವತಿಗಿಂತಲೂ ಗುಣಾಧಿಕರೆಂದು ವಾಯುದೇವರಿಗೆ (ಋಜುಗಳಿಗೆ) ಹೇಳಿದೆ. **'ಶಕ್ರಾಂತಾ ದೇವತಾಃ ಮತಾಃ'** ಎಂಬ ಋಗ್‌ಭಾಷ್ಯದಂತೆ ಇಂದ್ರದೇವರಿಗೆ ಸಕಲವೇದ (ಉತ್ತಮರನ್ನು ಬಿಟ್ಟು) ಪ್ರತಿಪಾದ್ಯತ್ವ ಹೇಳಿರುವಾಗ 'ಋಜು' ಪ್ರತಿಪಾದ್ಯವೆಂದು ಕೇಳಬೇಕೇ? ಆದುದರಿಂದಲೇ ಜಮಖಂಡಿ ಆಚಾರ್ಯರು

ಬಳಿತ್ಥಾದಿಸೂಕ್ತಗಳಿಗೆ ಲಾತವ್ಯರ ವಾದಿರಾಜರ ಪರವಾಗಿ ಅರ್ಥವನ್ನು ಪ್ರತಿಪಾದಿಸಿದ್ದು ಶಾಸ್ತ್ರಸಮ್ಮತವಾಗಿರುತ್ತದೆ.

ಆಚಾರ್ಯರು ಬೃಹದಾರಣ್ಯಕದಲ್ಲಿ **'ಪವಮಾನಾಃ ಇತಿ ಪ್ರೋಕ್ತಾಃ ಮುಖ್ಯವಾಯತ್ವ ಯೋಗಿನಃ'** ಏಷ ಉದ್ಗಾತೇತಿ ವಾಯುತ್ವಯೋಗ್ಯಃ ಎಂದು ತಿಳಿಸಿದ್ದಾರೆ. ಇನ್ನು ರಾಜರೇ ತಮ್ಮ ಗ್ರಂಥಗಳಲ್ಲಿ ತ್ರಿವಿಕ್ರಮಪಂಡಿತಾಚಾರ್ಯರ ವಾಯುಸ್ತುತಿಯನ್ನು ಉದಾಹರಿಸಿ **'ವಾಯುಸ್ತುತಿರತಿರ್ನಿತ್ಯಂ'** ಎಂಬುದಾಗಿ ಹೇಳಿಕೊಂಡಿರುವುದನ್ನು ನೋಡಿ ಪಂಡಿತಾಚಾರ್ಯರ ಸ್ತೋತ್ರದ ಉಪಾಸನೆ ಮಾಡುವವರು ಋಜು ಹೇಗೆ? ಎಂಬ ಪ್ರಶ್ನೆ ಕೇಳುತ್ತಾರೆ. ಇದಕ್ಕೆ ಉತ್ತರವೋ ಎಂಬಂತೆ ರಾಜರು **'ಯದ್ವಾಯೋಃ ಪವಮಾನಸ್ಯ ಪೂಯಮನಾಭಿದಸ್ಯ ಚ । ಸೂಕ್ತಸ್ಥರ್ಚಾಂ ಇಯಂ ಚರ್ಚಾ ತದ್ವಾಯುಸ್ತುತಿರೇವ ನಃ'** ವಾಯುಸ್ತುತೌ ಚ **ಮಧ್ವಾಖ್ಯಾ ಸಕೃದೇವ ಪ್ರಕಾಶಿತಾ । ಅಸಕೃನ್ಮಧ್ವ ಸನ್ನಾಮ್ನೀ ಸೇಯಂ ವಾಯೋ ಮಹಾಸ್ತುತಿಃ ॥'** ಎಂಬುದಾಗಿ ಒಮ್ಮೆ 'ಮಧ್ವ' ಪ್ರಯೋಗಿಸಿದ್ದೇ ವಾಯುಸ್ತುತಿಯಾದರೆ ಅನೇಕ ಕಡೆಗಳಲ್ಲಿ (ಬಹುವಾರ) ಮಧ್ವಶಬ್ದಪ್ರಯೋಗದ ಪವಮಾನ ಮಂಡಲವು ಮಹಾವಾಯುಸ್ತುತಿಯಲ್ಲದೇ ಏನು? ಅದೇ (ಮಂಡಲವೇ) ನಮಗೆ ವಾಯುಸ್ತುತಿ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇದರಿಂದ ರಾಜರು ಶ್ರುತ್ಯುಕ್ತ ವಾಯುಸ್ತುತಿಯನ್ನು ವ್ಯಾಖ್ಯಾನಿಸುವವರೆಂದೂ, ಆ ವಾಯುವಿನಲ್ಲಾದರೂ **'ಉಚಿತಂ ತೇನ ವಾಯುಶ್ಚ ವಾಯುಗೋ ಹರಿರೇವ ಚ'** ಎಂಬುದಾಗಿ ಸದಾಸ್ಥಿತನಾದ ಹರಿಯೇ ವಾಯುಶಬ್ದವಾಚ್ಯನು– ಅವನನ್ನೇ ಚಿಂತಿಸುವವರೆಂದೂ ಹೇಳಿದ್ದಾರೆ. ಇದರಿಂದ ಅವರ ಗ್ರಂಥಗಳಲ್ಲಿ 'ವಾಯುಸ್ತುತಿ' ಪರಶ್ಲೋಕಗಳೆಲ್ಲವೂ **'ಹರಿ'** ಪರವಾಗಿಯೂ ತಿಳಿಯಬಹುದಾಗಿದೆ.

**'ಇದಂತೇ ಪಾತ್ರಂ'** ಎಂಬ ಶ್ರುತಿ ಹರಿಯಿಂದ ಪೂರ್ಣಸನ್ನಿಧಾನದಿಂದ ಕೂಡಿದ ವಾಯುದೇವರೇ ಸಕಲದೇವತೆಗಳಿಂದ ಉಪಾಸಿಸಲ್ಪಡುವವರೂ, ಸಕಲ ದೇವತೆಗಳಿಗೆ ಜ್ಞಾನಬೋಧಕರೂ ಆಗಿದ್ದಾರೆ ಎಂದಿದೆ. 'ಆಹಾವ' ನಾಮಕರಾಗಿ (ಜ್ಞಾನಾರ್ಹರಲ್ಲಿ ಉಪದೇಶಿಸುವ) ವಾಯುದೇವರಿಂದ ಉಪದಿಷ್ಟಜ್ಞಾನವೇ

ಮೋಕ್ಷಕ್ಕೆ ಕಾರಣವೆಂದು ಶ್ರುತಿಯೇ ಹೇಳುತ್ತಿದೆ. ಅಂತಹ ಗುರುಗಳ (ಜಗದ್ಗುರು) ಸಿದ್ಧಾಂತ ನಮಗೆ ಒದಗಿ ಬಂದಿರುವುದು ಜನ್ಮಾಂತರದ ಸುಕೃತವೇ ಸರಿ.

**'ತದಸ್ಯ ಪ್ರಿಯಮಭಿ ಪಾಥೋ ಅಸ್ಯಾಂ ನರೋ ಯತ್ರ ದೇವಯವೋ ಮದಂತಿ । ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ'** ಎಂಬ ಶ್ರುತಿ ಮಧ್ವರು ಯಾವಾಗಲೂ ಹರಿಪಾದೋದಕದಲ್ಲೇ ಅತ್ಯಂತ ಉತ್ಸಾಹವುಳ್ಳವರೆಂದೂ, ಭಗವಂತನಿಗೆ ಅತಿಪ್ರೀತಿಪಾತ್ರರಾಗಿದ್ದಾರೆ (ತ್ರಿವಿಕ್ರಮನಿಗೆ). ಈ ಮಂತ್ರವು ಹರಿಪಾದೋದಕ ಸೇವೆಯ ಮಂತ್ರವಾಗಿದ್ದು, ಮಧ್ವರ ಸ್ಮರಣೆ ಹರಿಸಂಬಂಧ ಕರ್ಮಗಳಲ್ಲಿ ಅತಿ ಅವಶ್ಯಕವು, ಹರಿಪ್ರೀತಿಕರವೆಂದೂ ಸೂಚಿಸಿದೆ. ಶ್ರೀಹರಿಗೆ ಅತಿಪ್ರೀತಿಯಿರಲು ಕಾರಣ **'ಕಸ್ಮಿನ್ ವಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ ಸ್ಥಿತೇ ಪ್ರತಿಷ್ಠಾಸ್ಯಾಮೀತಿ ಸ ಪ್ರಾಣಮಸೃಜತ'** ಎಂಬ ಶ್ರುತಿಯಲ್ಲಿ ಜೀವನನ್ನು ಪ್ರತಿ ದೇಹದಿಂದ ಕೊಂಡೊಯ್ಯುವರು, ಅನ್ಯದೇಹಗಳಲ್ಲಿ ಸ್ಥಾಪಿಸುವವರೂ ವಾಯುದೇವರೇ. ಅವರ ಜೊತೆಯೇ ಭಗವಂತನೂ ವಾಯುವಿದ್ದಲ್ಲಿ ಇರುತ್ತಾನೆ. ಇಂತಹ ಪ್ರೀತಿಪಾತ್ರನಾದ ಪ್ರಾಣನನ್ನು ಸೃಜಿಸಿದನು ಎಂದು ವರ್ಣಿಸಲ್ಪಟ್ಟಿದೆ. **'ಧರ್ಮನಿರ್ಣಯ ಭೂಮಿತ್ವಾತ್ ಬಂಧುತ್ವಾಚ್ಚ ಮಹಾಪ್ರಭೋ'** ಧರ್ಮಾಧರ್ಮ ನಿರ್ಣಯಗಳೂ ವಾಯುದೇವರಿಂದಲೇ ಆದ್ದರಿಂದಲೂ ಎಲ್ಲರಿಗೂ ಬಂಧುಗಳು.

ಇಂತಹ ವೇದೋಕ್ತ ಮಹಿಮೆವುಳ್ಳವರಾದ್ದರಿಂದಲೇ ವೈಷ್ಣವ ಭಾಸ್ಯವು (ಮಧ್ವಸಿದ್ಧಾಂತ) ದೇವಮೂಲವುಳ್ಳದ್ದಾಗಿದೆ. ಆದರೆ ಬೇರೆ ಎಲ್ಲಾ ಮತಗಳು ಬ್ರಹ್ಮ, ಶಿವಾದಿಗಳಲ್ಲಿ ಆಸಕ್ತರಾಗಿ ಜಗನ್ಮಿಥ್ಯಾತ್ವ, ಶೂನ್ಯತ್ವ, ನಿರ್ಗುಣತ್ವಾದಿಗಳನ್ನು ಪ್ರತಿಪಾದಿಸಿ ಹರಿಯ ಅಸ್ತಿತ್ವವನ್ನೇ ಅಲ್ಲಗಳೆದವರು ದಾನವರಲ್ಲದೇ ಬೇರೆ ಯಾರಾಗಿರಲು ಸಾಧ್ಯ. ಏಕೆಂದರೆ 'ಅಯಾದವೀಂ ಕ್ಷ್ಮಾಂ ಕರಿಷ್ಯೇ' ಎಂದ ಸಾಲ್ವನು (ಜಗದ್ಧಾರಕನಾದ) ಕೃಷ್ಣನನ್ನೇ ನುಂಗಿದ ಬಕನು ದೈತ್ಯನೆಂದೇ ಭಾಗವತ ಹೇಳಿದೆ.

★ ★ ★

## ಮೂರುಕೋಟಿರೂಪಗಳ ವಾಯುದೇವರು :

ಬಳಿತ್ಥಾಸೂಕ್ತದ ಅರ್ಥವಿವರಣೆಯೇ ಈ ನನ್ನ ಯುಕ್ತಿಮಲ್ಲಿಕೆ ಎಂದಿದ್ದಾರೆ ರಾಜರು. **'ವರ್ಗಾರ್ಥಸ್ತು ಉದಿತಃ ಪೂರ್ವೈರ್ಮದ್ಗೀತಸ್ತದ್ಯುಕ್ತಿಮಲ್ಲಿಕಾ'** ರಾಮಾವತಾರದಲ್ಲಿ ಹನುಮಂತನು ಮೂರುಕೋಟಿರೂಪವುಳ್ಳವನಾದರೆ ವಾಯುದೇವರ ರೂಪಗಳು 'ಪದ್ಮತ್ರಯಯುತಾನಿ' ಮೂರುಲಕ್ಷ ಕೋಟಿರೂಪಗಳು ಎಂದಿದ್ದಾರೆ ರಾಜರು. ಇಷ್ಟು ಕರಾರುವಕ್ಕಾಗಿ ಹೇಳಬೇಕಾದರೆ ಋಜುಗಳಲ್ಲದೇ ಮತ್ತೊಬ್ಬರಿಗೆ ಸಾಧ್ಯವೇ? ರಾಜರು ವಾಯುಪರವಾದ ಸಾವಿರಾರು ವಾಕ್ಯಗಳು ಪುರಾಣಗಳಲ್ಲಿವೆ ಎಂದು ಹೇಳಬೇಕಾದರೆ ವೇದವ್ಯಾಸರಿಂದ ರಚಿತ ೩೦೦ ಕೋಟಿ ಗ್ರಂಥಗಳನ್ನು ನೋಡಿದ ಸರ್ವಜ್ಞರಲ್ಲದೇ ಮತ್ತೇನು? ಆದ್ದರಿಂದ ಮಧ್ವರ ಮತವೇ ಶ್ರುತಿ, ಸ್ಮೃತಿ, ಸೂತ್ರ, ಯುಕ್ತಿ ಸಮ್ಮತವೂ, ಮೋಕ್ಷಪ್ರದವೂ, ಪರಮಮಂಗಲಕರವಾದದ್ದು ಎಂದು ಹೇಳಿ ಗ್ರಂಥವನ್ನು ಉಪಸಂಹರಿಸಿರುತ್ತಾರೆ.

## ಶ್ರೀಹರಿಗೆ ಸ್ವತಂತ್ರಕರ್ತೃತ್ವದ ಸಮರ್ಥನೆ :

**'ಹಿತಂ ನ ಜಾನಾಮ್ಯಹಿತಂ ನ ಜಾನೇ ನಾಕರ್ತುಮೀಶೋ ನ ಚ ಕರ್ತುಮೀಶಂ। ಯಥಾನಟಾನ್ನಾಟಕದಾರುಯಂತ್ರಂ ತಥಾ ಹರೇಃ ಪ್ರೇರಣಯೈವ ವರ್ತೇ ।'** ರಾಜರು ಹಿತಾಹಿತ ತಿಳಿಯದ ನಾನು ದಾರುಯಂತ್ರದ ಗೊಂಬೆಯಂತೆ, ಹರಿ ಪ್ರೇರಣೆಯಿಂದ ವರ್ತಿಸುವವನೆಂದಿದ್ದಾರೆ. ಅಂದರೆ ಸೂತ್ರದಲ್ಲಿ ಹೇಳಿದಂತೆ **'ಹಿತಾಕರಣಾದಿ ದೋಷ ಪ್ರಸಕ್ತಿ'**ಯಂತೆ ಸರ್ವಥಾ ಜೀವರಿಗೆ ಎಳ್ಳಷ್ಟೂ ಸ್ವತಂತ್ರಕರ್ತೃವಿಲ್ಲವೆಂಬುದನ್ನು ಜ್ಞಾಪಿಸುತ್ತಾರೆ ಎನ್ನುತ್ತಾರೆ ಸುರೋತ್ತಮರು. ಅಸ್ವತಂತ್ರನೆಂಬುದಕ್ಕೆ ರಾಜಬಂಧನದಲ್ಲಿರುವ ದಾಸನಂತೆ ಎಂದು ದೃಷ್ಟಾಂತ ಕೊಟ್ಟಿದ್ದಾರೆ. ಋಜುಗಳು ಸರ್ವಾವಸ್ಥೆಯಲ್ಲೂ ಹರಿಸಂಕಲ್ಪದಂತೆ ನಡೆವರೇ ಹೊರತು ಎಂದೂ ತಮ್ಮ ಇಚ್ಛೆಯಂತೆ ನಡೆಯುವವರಲ್ಲ ಎಂಬ ಸೂಕ್ಷ್ಮ ಋಜುಧರ್ಮವನ್ನೂ **'ಹರೇ ಪ್ರೇರಣಯೈವ ವರ್ತೇ'** ಎಂಬ ಪದದಿಂದ ಸೂಚಿಸಿದ್ದಾರೆ. ಹಾಗಾದರೆ ಮುಂದೆ ಬ್ರಹ್ಮಪದವಿಯಲ್ಲಿ ಸಕಲವನ್ನೂ ಸೃಷ್ಟಿಸಿ

'ಸೃಷ್ಟಿಕರ್ತ'ರೆಂದು ಪ್ರಸಿದ್ಧಿಯಾಗುತ್ತಾರಲ್ಲ ಎಂದರೆ ಅದಕ್ಕೂ **'ಹರಿಸ್ತುಕರ್ತಾ ಸರ್ವಸ್ಯ ಭರ್ತಾ ಹರ್ತಾ ತ್ರಿಶಕ್ತಿಧೃಕ್'** ಮುಖ್ಯಕರ್ತಾ ಹರಿಯೇ ಎಂದು ಹೇಳಿ, ಪ್ರಭು ಶ್ರೀರಾಮನಿಗೆ ಹೇಗೆ ಸಕಲ ದೇವತೆಗಳೂ ವಾನರರಾಗಿ ಸೇವಿಸಿದರೋ, ಶ್ರೀಕೃಷ್ಣನಿಗೆ ಭೃತ್ಯರಾಗಿ ಧರ್ಮರಾಜಾದಿಗಳು ದಾಸಾನುದಾಸರಾದರೋ ತದ್ವತ್ ಎಲ್ಲರೂ ದಾಸಾನುದಾಸರೇ. ಅಂದಮೇಲೆ ವಿಷ್ಣುವೇ ಸರ್ವೋತ್ತಮ, ಸರ್ವಜ್ಞ, ಭೂತ, ಭವಿಷ್ಯತ್, ವರ್ತಮಾನ ಎಲ್ಲರೂ ಅವನಿಂದಲೇ ನಿಯಮ್ಯ. ಅದರಿಂದ ಸರ್ವಾಭೀಷ್ಟಕ್ಕಾಗಿ ಅವನನ್ನೇ ಕುರಿತು ಪೂಜೆ, ಸ್ತೋತ್ರ, ನಮನ ಮಾಡಬೇಕು. ಅವನೇ ಸರ್ವರಿಗೂ ಗತಿಪ್ರದನೆಂದು ತಿಳಿಸಿದ್ದಾರೆ. **'ನಿಶ್ಶಂಕೋ ಭವ ದುರ್ವಾಗ್ಗರ್ವಂ ತ್ಯಜ ಭಕ್ತ್ಯಾ ಭಜ ಪ್ರಭುಂ'** ಎಂಬುದಾಗಿ ನಿಶ್ಶಂಕವಾಗಿ, ಅಹಂಕಾರದ ದುರ್ವಾದಿ ಮಾತನ್ನು ತ್ಯಜಿಸಿ, ನಿಷ್ಕಾಮನಾಗಿ ಭಕ್ತಿಯಿಂದ ಹರಿಯನ್ನು ಸೇವಿಸುವುದೇ ಸರಿಯಾದ ಮಾರ್ಗವೆನ್ನುತ್ತಾರೆ.

ಗ್ರಂಥದ ಅಂತ್ಯದಲ್ಲಿ **'ವಿತ್ತೈಃ ರಿಕ್ತೋಽಪಿ ಜಾತ್ವಚ್ಯೋ ನಾತ್ಯಲ್ಪಮುಪಸರ್ಪತಿ..... ತತಃ ಸಂಪತ್ತೌ ಚ ಗತಿಃ ಶ್ರೀಪತಿರೇವ ನಃ । ನಾನ್ಯಂ ಭಜಾಮಿ ನಸ್ತೌಮಿ ನಾನುಯಾಮಿ ಕದಾಚನ । ಹರಿಂ ಚ ಹರಿಪತ್ನೀಂ ಚ ಸುರಾದೀಂಶ್ಚ ಗುರೂನ್ ವಿನಾ । ಭಕ್ತಿಸ್ಯಾತ್ ತ್ವಯಿ ಗೋವಿಂದ... ಸದಾ ಭವ'** ಶ್ರೇಷ್ಠಬ್ರಾಹ್ಮಣನಾಗಿ ಧನಹೀನನಾದರೂ ರಾಜಾದಿಗಳನ್ನು ಆಶ್ರಯಿಸುವುದಿಲ್ಲ. ಚಂದ್ರ ಕ್ಷೀಣನಾದರೂ ಯಾರನ್ನೂ ಬೇಡದೆ ಸೂರ್ಯನಿಂದಲೇ ಮತ್ತೆ ಅಭಿವೃದ್ಧಿ ಹೊಂದುತ್ತಾನೆ. ಸಂಪತ್ತಿರಲಿ, ಕಷ್ಟಬರಲಿ ಯಾವ ಬ್ರಹ್ಮಾದಿ ನಿಯಾಮಕ ಶ್ರೀಹರಿಯೇ ನಮಗೆ ಗತಿ, ಅವನನ್ನು ಬಿಟ್ಟು ಬೇರೆಯವರನ್ನು ಭಜಿಸುವುದಿಲ್ಲ. ಹರಿ, ಹರಿಪತ್ನಿ, ಅವನ ದಾಸರಾದ ದೇವತೆಗಳು, ಗುರುಗಳನ್ನು ಅನುಸರಿಸುತ್ತೇನೆ. ಗೋವಿಂದನಲ್ಲಿ ಭಕ್ತಿಯಿರಲಿ. ಅವನ ಸೇವೆಯಲ್ಲೇ ತೃಪ್ತಿಯಿರಲಿ. ಭಗವಂತನನ್ನು ಬಿಟ್ಟು ಅನ್ಯವಿಷಯದಲ್ಲಿ ವಿರಕ್ತಿಯನ್ನೂ, ಭಕ್ತಿಯನ್ನು ಮಾತ್ರ ಕೊಡು ಎಂದು ಪ್ರಾರ್ಥಿಸಿದ್ದಾರೆ.

ಇದನ್ನು ನೋಡಿದಾಗ ಹರಿಯನ್ನು ಬಿಟ್ಟು ಅನ್ಯರನ್ನು ಪ್ರಾರ್ಥಿಸುವುದು ಋಜುಲಕ್ಷಣವಲ್ಲ ಹೇಗೆ ಪ್ರಾರ್ಥಿಸಿದರು? ಎಂದು ಕೆಲವರು ಪ್ರಶ್ನೆಕೇಳುವರು.

ಆದರೆ ಈ ಶ್ಲೋಕಕ್ಕೆ ಪೀಠಿಕೆ ಬರೆದ ಸುರೋತ್ತಮರು 'ವಿಪತ್ತೌ ತತ್ ಪರಿಹರಾಯ ಇತ್ಯತ್ರ ದೃಷ್ಟಾಂತಮಾಹ' ಎಂದು ಒಬ್ಬ ಹರಿಭಕ್ತನಾದವನು ಸಂಪತ್ ಬಂದಾಗ ಮರೆಯದೇ, ವಿಪತ್ ಬಂದಾಗ ಪರಿಹಾರಕ್ಕಾಗಿ ಹರಿಯನ್ನೇ, ಇರುವ ಸಂಪತ್ ನಷ್ಟವಾಗದಂತೆ ಸ್ಥಿರವಾಗಿರಲು ಹರಿಯನ್ನೇ ಪ್ರಾರ್ಥಿಸಬೇಕು. ಅನ್ಯದೇವತೆಗಳನ್ನಲ್ಲ ಎಂಬುದಕ್ಕೆ ದೃಷ್ಟಾಂತವನ್ನು ತೋರಿಸುತ್ತಾರೆ ಎಂದಿದ್ದಾರೆ. ಅಂದರೆ ಹರಿಭಕ್ತರು ಹೇಗಿರಬೇಕು ಹೇಗೆ ಪ್ರಾರ್ಥಿಸಬೇಕು ಎಂಬ ಶಿಷ್ಯ ಶಿಕ್ಷಣೆಯೇ ಹೊರತು ತಮಗಾಗಿ ಪ್ರಾರ್ಥಿಸಿದ್ದಲ್ಲ. ಆದ್ದರಿಂದ ವ್ಯಾಖ್ಯಾನವನ್ನು ನೋಡಿ ಯಾವುದು ವಿನಯಕ್ಕಾಗಿ, ಯಾವುದು ಗರ್ವ ಪರಿಹಾರಕ್ಕಾಗಿ, ಯಾವುದು ಲೋಕಶಿಕ್ಷಣಕ್ಕಾಗಿ ಎಂದು ವಿವೇಚಿಸಿ ಅರ್ಥತಿಳಿಯಬೇಕೇ ಹೊರತು ನೇರಶಬ್ದಾರ್ಥವಲ್ಲ. ಈ ಪೀಠಿಕೆಯನ್ನು ಸರ್ವತ್ರ ಅನುಸಂಧಾನಿಸಬೇಕು (ಏಕತ್ರ ನಿರ್ಣೀತಪರತ್ರಾಪಿ ಎಂಬಂತೆ).

ಜನ್ಮಜನ್ಮಾಂತರದಲ್ಲೂ, ಮೋಕ್ಷದಲ್ಲೂ ನಿನ್ನ ದಾಸಾನುದಾಸನಾಗುವಂತೆ ಅನುಗ್ರಹಿಸು. ನೀನೇ ಸರ್ವಕಾಲದಲ್ಲಿಯೂ ರಕ್ಷಕನಾಗು ಎಂದಿದ್ದಾರೆ. ಬ್ರಹ್ಮದೇವರು ಹೇಗೆ 'ಕಾಮಯೇ ವೈಷ್ಣವತ್ವಂ ಸರ್ವಜನ್ಮಸು ಕೇವಲಂ' ಎಂದಿದ್ದಾರೋ ಅದೇ ರೀತಿ ಅನುಸರಿಸಿ ಸ್ತೋತ್ರಮಾಡಿದ್ದಾರೆ. ಇನ್ನು ಹನುಮ, ಭೀಮ, ಮಧ್ವ ಅಥವಾ ವಾಯುದೇವರ ಕಾರ್ಯಗಳನ್ನು ನೋಡಿದಾಗ ಋಜುಲಕ್ಷಣಕ್ಕೆ ವಿರೋಧಬರದಂತೆ ತಾತ್ಪರ್ಯನಿರ್ಣಯಾನುಸಾರ ಅರ್ಥೈಸುತ್ತೇವೆಯೋ, ಹಾಗೇ ರಾಜರ ವಿಷಯದಲ್ಲೂ ಎಲ್ಲೇ ಅರ್ಥಮಾಡಬೇಕಾದರೆ ರಾಜರಿಂದಲೇ ಉತ್ತಮವಾದ ನಿರವಕಾಶಪ್ರಮಾಣವಾದ ಆಖ್ಯಾನಗ್ರಂಥಕ್ಕೆ ಅನುಗುಣವಾಗಿ (ಋಜುಧರ್ಮಕ್ಕೆ) ಅನುಗುಣವಾಗಿ ಅರ್ಥೈಸಬೇಕೇ ಹೊರತು ಮೇಲ್ನೋಟದ ಶಬ್ದದಂತೆ ಅಲ್ಲ. ಮನೋಹರವಾದ ಯುಕ್ತಿಮಲ್ಲಿಕಾ ಗ್ರಂಥವು 'ಪದ್ಮನಾಭಸ್ಯ ಮಧ್ವಸ್ಯ...' ಎಂದು ಪದ್ಮನಾಭನಿಗೂ, ಮಧ್ವರಿಗೂ ಶಾರದಾದೇವಿಗೂ ಮನಸ್ಸಿಗೆ ಅತ್ಯಂತ ಪ್ರೀತಿಕರವಾದ ಪದ್ಯಾಖ್ಯ ಸೂತ್ರಬದ್ಧವೆಂದಿದ್ದಾರೆ. 'ಪದ್ಮನಾಭ' ಪದದಿಂದ ಮುಂದೆ ಬ್ರಹ್ಮಪದವಿಗೆ ಅವನ ನಾಭಿಯಿಂದ ಬರುವರೆಂಬ ಸೂಚನೆಯನ್ನೂ, 'ಪದ್ಯಾಖ್ಯಸೂತ್ರ'ವೆಂಬುದರಿಂದ ಸೂತ್ರಗಳಿಂದ ಬಹ್ವರ್ಥಗರ್ಭಿತಶ್ಲೋಕಗಳೆಂದೂ ಸೂಚಿಸಿದ್ದಾರೆ. ಹಯಗ್ರೀವನ

ಪಾದವನ್ನೇ ಆಶ್ರಯಿಸಿದ ದುಂಬಿಗಳಂತಿರುವ ಜ್ಞಾನಿಗಳಿಂದ ಸದಾ ಸೇವ್ಯಮಾನವಾದ ಯುಕ್ತಿಮಲ್ಲಿಕೆಯನ್ನು ಪ್ರತಿಪಾದ್ಯನಾದ ಶ್ರೀಹರಿಯೇ ನಗುಮುಖದಿಂದ ಉಲ್ಲಾಸಗೊಂಡ ಚಿಗುರಿನಂತೆ ಸ್ವೀಕರಿಸುವನು.

ಯುಕ್ತಿಮಲ್ಲಿಕೆಯ ಶಾಸ್ತ್ರಾರ್ಥ ವಿಚಾರಕ್ಕೆ ಮಧ್ವರ ಶಾಸ್ತ್ರವೇ ಮೂಲ. ಅಂದಮೇಲೆ ಯಾವ ಮಧ್ವರು (ವಾಯುದೇವರು) ೧೦ ರೂಪಗಳಿಂದ ಜಗತ್ತಿನ ದಶದಿಕ್ಕುಗಳಲ್ಲಿ ವ್ಯಾಪ್ತರೋ ಅವರೇ ಈ ಗ್ರಂಥದ ಸೌರಭವನ್ನು (ಪರಿಮಳ) ಹರಡಲಿ ಎಂದಿದ್ದಾರೆ. ವಾಯುವಿನ ಸ್ವಭಾವವೇ ಪರಿಮಳವನ್ನು ವಿಸ್ತರಿಸುವುದು (ಗಾಳಿ ಬೀಸುವಿಕೆಯಿಂದ). ಆದ್ದರಿಂದ ಈ ಗ್ರಂಥದ ಗುಣಗಳ ವಿಸ್ತರಣೆಯ ಭಾರವೂ ಅವರದೇ ಆಗಿವೆ. ಈ ಬಳ್ಳಿಯ ಉತ್ಪತ್ತಿಗೆ, ಅಂಕುರಕ್ಕೆ, ಬೆಳೆಸಲಿಕ್ಕೆ, ಪುಷ್ಪ ವಿಕಸನ, ಮಾಲೆ ಕಟ್ಟಲಿಕ್ಕೆ, ಸುಗಂಧ ಹರಡೋಣ ಎಲ್ಲರೂ ಮಧ್ವರ ಶಕ್ತಿಯೇ ಆದ್ದರಿಂದ ಸಕಲ ಪುಣ್ಯವೂ ಅವರಿಗೇ. ಬ್ರಹ್ಮಾಂಡದಲ್ಲಿ ಯಾರು ಏನೇ ಕರ್ಮಮಾಡಿದರೂ ಅದರ ಪೂರ್ಣಫಲ ವಾಯುವಿಗೆ. ತದನಂತರ ದೇವತೆಗಳಿಗೆ, ಅತ್ಯಲ್ಪಫಲ ಜೀವನಿಗೆ (ವೇತನದಂತೆ) ಎಂದು ಚಮತ್ಕಾರವಾಗಿ (ತಮ್ಮಲ್ಲಿ ಆರೋಪಿಸಿಕೊಂಡು) ಜೀವನ ಯೋಗ್ಯತೆ ತಿಳಿಸಿದ್ದಾರೆ. ಏಕೆಂದರೆ ವಾಯುವಿಲ್ಲದೇ ಜೀವನವೇ ಇಲ್ಲ (ಬದುಕೇ ಇಲ್ಲದಿದ್ದರೇ ಕರ್ಮಕರಣ ಎಲ್ಲಿಂದ ಬಂತು?) ಆದ್ದರಿಂದ ಪೂರ್ಣಫಲ ವಾಯುದೇವರಿಗೆ ಎಂಬ ಶಾಸ್ತ್ರದ ಸಾರವನ್ನೂ ತಿಳಿಸಿದ್ದಾರೆ.

ಮಂತ್ರಿ ಜೊತೆ ಸೇರಿದ ಯುವಕ ಹೇಗೆ ಮಂತ್ರಿ ಜೊತೆ ಸುಲಭವಾಗಿ ಅರಮನೆ ಪ್ರವೇಶಿಸಿ ರಾಜನ ಸಮೀಪ ಸೇರುವನೋ, ಹಾಗೆಯೇ ವಾಯುದೇವರನ್ನು ನಂಬಿದವನು ವೈಕುಂಠವೆಂಬ ಅರಮನೆಗೆ ಶ್ರೀಹರಿಯ ಸಮೀಪಕ್ಕೆ ಸೇರುವುದು ನಿಶ್ಚಿತ. ಅಂದಮೇಲೆ ಸರ್ವರ ಯೋಗಕ್ಷೇಮ ಧುರಂಧರರು ವಾಯುದೇವರಲ್ಲದೆ ಇನ್ಯಾರು?

ಮಧ್ವರು ಕೊಟ್ಟ ಪ್ರಮಾಣಗಳೆಂಬ ಅಸ್ತ್ರ ಹಿಡಿದು ಧೈರ್ಯವಾಗಿ ಜಯಾಕಾಂಕ್ಷಿಯಾಗಿ ಶತ್ರುಪುರವನ್ನು ಪ್ರವೇಶಿಸುವೆನೆಂದು 'ವಾದೀಭ ಮೃಗರಾಜೋಽಹಂ' ಎಂಬುದನ್ನು ನೆನಪಿಸಿದ್ದಾರೆ.

ಇನ್ನು ದುಷ್ಟಶಾಸ್ತ್ರಗಳನ್ನು ರಚಿಸಿದ ರುದ್ರ, ಬೃಹಸ್ಪತ್ಯಾದಿಗಳೇ ಆಯಾ ಶಾಸ್ತ್ರಗಳಲ್ಲಿ ಪರಸ್ಪರ ವಿರುದ್ಧ ವಾಕ್ಯಗಳನ್ನು ಪ್ರಯೋಗಿಸಿ ಅವರ ಮತಗಳು ಹತವಾಗುವಂತೆ ಮಾಡಿದ್ದಾರೆ. ಸಮರ್ಥನಾದ (ಸರ್ವಜ್ಞ) ನಾನು ಪರವಾದಿಗಳನ್ನು ನಿರಾಕರಣೆಯನ್ನು ಮಾಡಿದ್ದರೂ, ಅನ್ಯರು ಅವರನ್ನು (ಪರವಾದಿಗಳನ್ನು) ಜಯಿಸಬೇಕಾದರೆ ದೇವತೆಗಳ ಅನುಗ್ರಹ ಅವಶ್ಯ ಎಂದು ಸೂಚಿಸಲು ಅವರ ಚರಣಸ್ಮರಣೆ ತಾವು ಮಾಡಿದಂತೆ ತೋರಿಸಿ ನಮಗೆ ಜ್ಞಾಪಿಸಿದ್ದಾರೆ. ಯದ್ಯಪಿ ಋಜುಗಳು ಎಲ್ಲಿ ಯಾರನ್ನು ಸ್ತೋತ್ರ, ನಮನ ಮಾಡಿದರೂ ಅವೆಲ್ಲ ಭಗವಂತನಿಗೇ ಹೊರತು ಅನ್ಯರಿಗಲ್ಲವೆಂದು ನಿರ್ಣಯದಲ್ಲಿ (ಪ್ರತ್ಯಕ್ಷೀಭೂತ ದೇವೇಷು) ತಿಳಿಸಿದ್ದಾರೆ. ರಾಜರೂ ಕೂಡ ನಿರವಕಾಶ ಪ್ರಮಾಣವಾದ ಆಖ್ಯಾನದಲ್ಲಿ 'ಯತ್ರ ಪ್ರತೀತಾರ್ಥಬಾಧಃ ತತ್ರ ಅಂತರ್ಯಾಮಿ ಸಂಗ್ರಹಃ' ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಆ ಅನುಸಂಧಾನದಿಂದ ನೋಡಿದರೇ ಗ್ರಂಥ ಅಧ್ಯಯನ ಸಾರ್ಥಕ ಹೊರತು ಇಲ್ಲದಿದ್ದರೆ ವ್ಯರ್ಥವೇ ಸರಿ.

ಕಡೆಯದಾಗಿ ವಿನಯಕ್ಕೋಸ್ಕರ '**ನ ಶಾಸ್ತ್ರಾಭಿಜ್ಞಾಃ ಚ ನಿಯಮಮುಕ್ತಾಃ ನ ಯಮಿನೋ...... ನ ತದ್ಯತ್ನೋಪೇತಾಃ ತದಪಿ ಚತುರಾ ಏವ ನಿತರಾಂ ವದಾಮೋ ಯದ್ದಿಷ್ಟ್ಯಾ ಹಯವದನ ತುಭ್ಯಂ ನಮಃ**' ಎಂಬುದಾಗಿ ಶಾಸ್ತ್ರ ತಿಳಿದವರಲ್ಲ, ನಿಯಮಾದಿಗಳಿಂದ ಕೂಡಿದವರಲ್ಲ ಇತ್ಯಾದಿಯಾಗಿ ಹೇಳಿಕೊಂಡರೂ ಪ್ರಯತ್ನಪಡದಿದ್ದರೂ ನಾವು ಚತುರರೇ ಆಗಿದ್ದೇವೆ ಹಯವದನನ ಅನುಗ್ರಹದಿಂದ ಎಂದಿರುವುದರಿಂದ, ರಾಜರ ಪ್ರತಿಭೆ ಅಶ್ರುತ ಪ್ರತಿಭೆಯೇ ಹೊರತು ಲೋಕದ ಅಧ್ಯಯನದಿಂದ ಬಂದಿದ್ದಲ್ಲ. ಋಜುಗಳ ಪ್ರತಿಭೆ ಸ್ವಾಭಾವಿಕ. ಅದು ಸರ್ಗಾದಿಯಲ್ಲಿ ಹಯಗ್ರೀವನ ಉಪದೇಶದಿಂದಲೇ ಸರ್ವವೂ. ಆದಕ್ಕೋಸ್ಕರ ಅವನನ್ನೇ ಸ್ಮರಿಸಿ ಗ್ರಂಥ ಸಮರ್ಪಿಸಿದ್ದಾರೆ.

ಇದರಿಂದ ಹಿಂದೆ ಹೇಳಿಕೊಂಡ ದೇವತಾನುಗ್ರಹ, ಗುರುಗಳ ಅನುಗ್ರಹ ಎಲ್ಲವೂ ಲೋಕಶಿಕ್ಷಣಗಾಗಿ ಹೇಳಿದ್ದೇ ಹೊರತು ವಾಸ್ತವಿಕವಲ್ಲ ಎಂಬುದನ್ನು ಅವರೇ ಬಹಿರಂಗಪಡಿಸಿದ್ದಾರೆ.

**'ಆಚಾರ್ಯಃ ಪವನೋಽಸ್ಮಾಕಂ ಆಚಾರ್ಯಾಣೀ ಚ ಭಾರತೀ । ದೇವೋ ನಾರಾಯಣಃ ಶ್ರೀಶೋ ದೇವೀ ಮಂಗಲದೇವತಾ॥'** ಎಂಬುದಾಗಿ ಮಾಧ್ವರಿಗೆಲ್ಲ ಮೂಲಗುರುಗಳಾದ ಮಧ್ವಾಚಾರ್ಯರು, ಗುರುಪತ್ನಿ ಭಾರತೀದೇವಿ, ಎಲ್ಲರಿಗೂ ಒಡೆಯರಾದ ರಮಾನಾರಾಯಣರು, ಇವರುಗಳನ್ನು ಸ್ಮರಿಸುತ್ತಾ ಗ್ರಂಥಮಂಗಳವನ್ನು ಮಾಡಿದ್ದಾರೆ. ಋಜುಗಳು ಯದ್ಯಪಿ ಸಮಗುಣವುಳ್ಳವರಾದರೂ ಪದವಿ ಪ್ರಯುಕ್ತ ಆಧಿಕ್ಯವಿದ್ದುದರಿಂದ ಹಿರಿಯ ಋಜುಗಳಿಗೆ ಕಿರಿಯ ಋಜುಗಳು ನಮಿಸುತ್ತಾರೆ. ಸಮಾನಗುಣ, ಕಕ್ಷದಲ್ಲಿದ್ದರೂ ಪದವಿಪ್ರಯುಕ್ತ ನಮನವು ದೇವತೆಗಳಲ್ಲಿ ಪ್ರಸಿದ್ಧ. ಆಚಾರ್ಯರು ದ್ವಾದಶ ಸ್ತೋತ್ರದಲ್ಲಿ 'ಶರ್ವಾದಿವಂದ್ಯಚರಣೋ ಯದಪಾಂಗಲೇಶಂ' ಎಂದು ಶೇಷನಿಗೆ ರುದ್ರವಂದ್ಯತ್ವ ಹೇಳಿದ್ದಾರೆ. ಯದ್ಯಪಿ ಸಮಕಕ್ಷದವರಾದರೂ (ಶೇಷಗರುಡರುದ್ರ) ಪದವಿಪ್ರಯುಕ್ತ ಆಧಿಕ್ಯವುಳ್ಳವರು. ಆದ್ದರಿಂದ ಮಧ್ವರನ್ನು 'ಗುರು' ಎಂದು ಸಂಭೋಧಿಸಿದರೆ, ನಮಿಸಿ ಸ್ತೋತ್ರಮಾಡಿದರೆ, ಕಿಂಕರನೆಂದರೆ ಬಂಧಕವೇನಿಲ್ಲ. ಶ್ರೀವಿಶ್ವೋತ್ತಮರು 'ಹನೂಮತ್ ಕಿಂಕರಃ' ಎಂಬ ಪ್ರಯೋಗಕ್ಕೆ 'ಹನುಮವತ್ ಕಿಂಕರಃ'ನೆಂದು ಅರ್ಥೈಸಬೇಕೆಂದು ಹೇಳುತ್ತಿದ್ದರು. ಇನ್ನು ಋಜುಗಳು ೧೦೦ ಜನರಿದ್ದರೂ, 'ವಾಯು' ಪದವಿಯಲ್ಲೇ ಜಗತ್‌ವಿಖ್ಯಾತರಾಗಿ, ಅವರ ಎಲ್ಲ ಗುಣಗಳ ಅಭಿವ್ಯಕ್ತಿ ಲೋಕಕ್ಕೆ ಈ ಪದವಿಯಿಂದಲೇ. ಆ ಪದವಿಯ ಶ್ರೇಷ್ಠತ್ವವನ್ನು ತೋರಿಸಲು ಬ್ರಹ್ಮಾನಲ್ಲೂ ಶ್ವಾಸಕ್ಕಾಗಿ ವಾಯುದೇವರನ್ನೇ ಇಟ್ಟಿದ್ದಾನೆ ಶ್ರೀಹರಿ. ಇದರಿಂದ ವಾಯುಪದವಿಯೆಂಬುದು ಅತಿ ಹೆಚ್ಚು ಲೋಕಪ್ರಸಿದ್ಧಿ ಪಡೆದ ರೂಪ, ಪದವಿ. ಈ ಪದವಿಯನ್ನು ಎಲ್ಲ ಋಜುಗಳು ಪದವಿಗೆ ಬಂದಾಗ ಅನುಭವಿಸುತ್ತಾರೆ. ಈ ರೀತಿ 'ವಾಯು' ಉತ್ಕೃಷ್ಟತೆಯನ್ನು ಜಗತ್ತಿಗೆ ಶ್ರುತಪಡಿಸುವುದು ಎಲ್ಲ ಋಜುಗಳಿಗೂ ಸಮ್ಮತವೇ, ಇಚ್ಛಿತವೂ ಆಗಿದೆ. ಆದ್ದರಿಂದ ವಾಯುವಿನ ಮಹಿಮಾತಿಶಯವನ್ನು ಹೆಜ್ಜೆ ಹೆಜ್ಜೆಗೂ ರಾಜರು ಕೊಂಡಾಡಿದ್ದಾರೆ. 'ಪವಮಾನಾಃ ಇತಿ ಪ್ರೋಕ್ತಾಃ ಮುಖ್ಯವಾಯುತ್ವಯೋಗಿನಃ' ಎಂದು ಆಚಾರ್ಯರೇ ಬೃಹದಾರಣ್ಯಕದಲ್ಲಿ ಋಜುಗಳೆಲ್ಲ ಪವಮಾನಶಬ್ದವಾಚ್ಯರೆಂದೂ, ಸಕಲ ವೇದಪ್ರತಿಪಾದ್ಯರೆಂದೂ ತಿಳಿಸಿದ್ದಾರೆ. ಆಚಾರ್ಯರು ಐತರೇಯದಲ್ಲಿ

'ಪರಾಧೀನೇನ ವಿತ್ತೇನ ಭುಂಜನ್ನಪಿ ಹಿ ಭಿಕ್ಷುಕಃ । ವಿತ್ತವಾನಿತಿ ನೈವೋಕ್ತಸ್ತಥಾ ಶ್ರೀ ಮುಕ್ತಿಗಾ ಅಪಿ' ಎಂಬುದಾಗಿ 'ಪರಾಧೀನತ್ವ'ದಿಂದ ಕೂಡಿದವರೆಲ್ಲ ಭಿಕ್ಷುಕರೇ ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ 'ತತ್ ಸೈನ್ಯ ಭಿಕ್ಷುಕ'ನೆಂಬ ಪ್ರಯೋಗವನ್ನು ರಾಜರು ಮಾಡಿರುತ್ತಾರೆ. ಇನ್ನು ಗುರುದೇವತಾದಿ ನಮನಗಳಲ್ಲಂತೂ, ಆಚಾರ್ಯರು ಹೇಗೆ 'ಪ್ರಣಮ್ಯ ನಾನಾಯತನೇಷು ಸಂಚರನ್' ಎಂಬುದಾಗಿ ತದ್ಗತ ಹರಿಗೆ ನಮಿಸಿದರೋ ತದ್ವತ್ ಎಂಬುದಾಗಿ ಅರ್ಥೈಸಿದಾಗ ಋಜುಲಕ್ಷಣಕ್ಕೆ ಯಾವ ಬಾಧಕವೂ ಇಲ್ಲ. ಈ ರೀತಿ ಆಖ್ಯಾನ, ನಿರ್ಣಯಕ್ಕೆ ಹೊಂದಿಸಿಕೊಂಡು ಅಧ್ಯಯನ ಮಾಡುವುದೇ ವಿವೇಕಿಗಳ ಲಕ್ಷಣ.

ಇದರ ಟೀಕೆಯನ್ನು ಬರೆದ ಅವರ ಪೂರ್ವಾಶ್ರಮ ತಮ್ಮಂದಿರಾದ ಶ್ರೀಸುರೋತ್ತಮ ಯತಿಶ್ರೇಷ್ಠರು, ಅವರಿಂದಲೇ ಶಿಕ್ಷಣ ಹೊಂದಿ ವ್ಯಾಖ್ಯಾನ ಬರೆದಿದ್ದರೂ, ರಾಜರೇ ನಿಂತು ನುಡಿಸಿ ನನಗೆ ಕೀರ್ತಿ ತಂದಿದ್ದಾರೆ ಎಂದು ಸ್ಮರಿಸಿ, ಈ ಕೃತಿಯಲ್ಲಿ ರಾಜರು ಮಾಡಿದ ಶ್ರುತಿಚರ್ಚೆ, ಯುಕ್ತಿಚರ್ಚೆ ಎಲ್ಲವೂ ಅಶ್ರುತ (ಅಪೂರ್ವವಾದದ್ದು). ಹೀಗಿರಬೇಕಾದರೆ ಈ ಕೃತಿ ಮಾನುಷಕೃತಿಯಾಗಿರಲು ಶಕ್ಯವೇ? ಎಂದಿದ್ದಾರೆ. ಅಂದರೆ ಮುಂದೆ ಭವಿಷ್ಯತ್ತಿನಲ್ಲಿ ರಾಜರನ್ನು ಮನುಷ್ಯರೆಂದು ತಿಳಿಯುವರೆಂದೂ, ಮಾನುಷ ಕೃತಿಗಳು ದೋಷಾಸ್ಪದವಾಗಿರುವಂತೆ ರಾಜರ ಕೃತಿಗಳೂ ದೋಷವುಳ್ಳವು ಎಂದು ಹೇಳುವ ಜನಗಳು ಹುಟ್ಟುವರೆಂದು ತಿಳಿದೇ ಈ ವಾಕ್ಯವನ್ನು ಪ್ರಯೋಗಿಸಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ. ಇದು ಕೂಡ ರಾಜರ ಸರ್ವಜ್ಞತ್ವವನ್ನೇ ಸೂಚಿಸುತ್ತದೆ. ಋಜುವೆಂದೇ ತೋರಿಸಿಕೊಡುತ್ತದೆ.

ಇಂತಹ ನಿರ್ದುಷ್ಟ ಕೃತಿಯನ್ನು (ಗ್ರಂಥದ ಭಾರವನ್ನು) ಅರ್ಥಮಾಡಿಕೊಳ್ಳಬೇಕಾದರೆ ರಾಜರ ಸ್ವರೂಪಜ್ಞಾನವೂ ಆವಶ್ಯಕ. ಅವರನ್ನು ಯಃಕಶ್ಚಿತ್ ವ್ಯಾಖ್ಯಾನಕಾರರೆಂದು ತಿಳಿದರೆ ಎಂದೂ ಅವರ ಗ್ರಂಥಭಾವ ಅರ್ಥವಾಗುವುದಿಲ್ಲ.

ಶ್ರೀಮದಾಚಾರ್ಯರನ್ನು ಭಾರತದೇಶದಲ್ಲಿ ಹುಟ್ಟಿದ ಅನೇಕ ದರ್ಶನಕಾರರಲ್ಲಿ ಅವರೂ ಒಬ್ಬರೆಂದು ತಿಳಿದು ಸರ್ವಮೂಲ ಗ್ರಂಥಗಳನ್ನು ಅಧ್ಯಯನ ಮಾಡುವುದಕ್ಕೂ, ಆಚಾರ್ಯರನ್ನು ವಾಯುದೇವರ ಅವತಾರ ಜಗದ್ಗುರುಗಳು ಎಂದು ಸ್ವರೂಪ ಮಹಿಮೆ ತಿಳಿದು ಅಧ್ಯಯನ ಮಾಡುವುದಕ್ಕೂ ಎಷ್ಟು ವ್ಯತ್ಯಾಸವೋ, ಫಲದಲ್ಲೂ ಹೇಗೆ ವ್ಯತ್ಯಾಸವೋ, ರಾಜರ ವಿಚಾರದಲ್ಲೂ ಅಷ್ಟೆ. ಉದಾಹರಣೆಗೆ ಯುಕ್ತಿಮಲ್ಲಿಕೆಯ ಮೊದಲನೇ ಶ್ಲೋಕದಲ್ಲಿ **'ವಿಸ್ಮೃತೌ ಸ್ಮಾರಕಾಯ'** ಎಂದಿದ್ದಾರೆ ರಾಜರು. ಕೆಲವರು ಈ ಶಬ್ದಕ್ಕೆ ರಾಜರಿಗೆ ಮರೆವು ಬಂದಿತ್ತು ಆಗ ಹಯಗ್ರೀವ ಸ್ಮರಣೆಗೆ ತಂದುಕೊಟ್ಟನೆಂದು ಅರ್ಥೈಸಿದ್ದಾರೆ. ಹಾಗಾದರೆ ಆಚಾರ್ಯರು **'ಕರುಣಾಪೂರ್ವ ವರಪ್ರದ ಚರಿತಂ ಜ್ಞಾಪಯ ಮೇ ತೇ'** ಎಂದು ದ್ವಾದಶ ಸ್ತೋತ್ರದಲ್ಲಿ 'ಜ್ಞಾಪಯ' ಎಂಬ ಶಬ್ದ ಬಳಸಿದ್ದಾರೆ. ಇದರರ್ಥ ಮರೆತುಹೋಗಿತ್ತು ಎಂದು ಹೇಳಬಹುದೇ? ಅಲ್ಲಿ ಹೇಗೆ ಋಜುಲಕ್ಷಣಕ್ಕೆ ವಿರೋಧ ಬರದಂತೆ ಅರ್ಥೈಸುತ್ತೇವೆಯೋ ತದ್ವತ್ ರಾಜರ ಗ್ರಂಥಗಳಲ್ಲಿಯೂ ಋಜುಲಕ್ಷಣಕ್ಕೆ ವಿರೋಧಬರದಂತೆ ಅರ್ಥೈಸುವುದೇ ವಿವೇಕಿಗಳ ಲಕ್ಷಣ. ಅದೇ ಶುದ್ಧಸಂಪ್ರದಾಯ. ಹರಿಗುರುಗಳಿಗೆ ಒಪ್ಪಿಗೆಯಾದ ಮಾರ್ಗ. ಅಂತಹ ಮಾರ್ಗದಲ್ಲಿ ಸಾಗಿ ಗ್ರಂಥ ಅಧ್ಯಯನ ಮಾಡಿ ಜ್ಞಾನಭಕ್ತಿಗಳನ್ನು ಗಳಿಸೋಣ.

ಆಚಾರ್ಯರು ತಮ್ಮ ಸ್ವರೂಪವನ್ನು ಹೇಳಿಕೊಳ್ಳಲು ಕಾರಣವನ್ನು ಟೀಕಾಕೃತ್ಪಾದರು **'ಯಥಾ ಭಗವತ್ಸ್ವರೂಪವಿಜ್ಞಾನಂ ಸಮಸ್ತ ಪುರುಷಾರ್ಥಸಾಧನಂ ತಥಾ ಸ್ವಸ್ವರೂಪವಿಜ್ಞಾನಂ ಅಪಿ ಇತ್ಯತಃ ತದಾವಿಷ್ಕುರ್ವನ್ ಆಹ'** ಎಂದು ಹೇಳಿದಂತೆ ರಾಜರ ಸ್ವರೂಪ ಚಿಂತನೆಯೂ ಪುರುಷಾರ್ಥಸಾಧನೆಗೆ ಅವಶ್ಯವಿದ್ದುದರಿಂದಲೇ 'ಸ್ವಾಪ್ನವೃಂದಾವನಾಖ್ಯಾನ'ದ ಮುಖಾಂತರ 'ಸಾಧನಂ ತು ಭವಿಷ್ಯತಿ' ಎಂದಿದ್ದಾರೆ. ಆದ್ದರಿಂದ ಆಖ್ಯಾನಗ್ರಂಥಕ್ಕೆ ಅನುಗುಣವಾಗಿಯೇ ರಾಜರ ಗ್ರಂಥಗಳನ್ನು ಅಭ್ಯಸಿಸಬೇಕು.

ಇಂತಹ ಅಮೋಘ ಗ್ರಂಥವನ್ನು ಮೇಲ್ಕಂಡ ಹಿನ್ನೆಲೆಯಲ್ಲಿ ಸಜ್ಜನರು ಅರ್ಥಮಾಡಿಕೊಳ್ಳಲೆಂದೇ ಅತ್ಯಂತ ಕಿರಿಯರಾದರೂ ಅತ್ಯಂತ ಹಿರಿಯ ಸಾಹಸ.

ಅದೂ ರಾಜರಿಗೆ ಅತ್ಯಂತ ಪ್ರೀತ್ಯಾಸ್ಪದವಾದದ್ದು. ಶ್ರೀಮಠದಿಂದ ಪ್ರಕಟಿಸಿ ಶ್ರೀಸುಧಾಗ್ರಂಥದಂತೆ ಈ ಗ್ರಂಥದ ದೀರ್ಘ ಅಧ್ಯಯನ, ಅಧ್ಯಾಪನಗಳು, ಸಂಶೋಧನೆಗಳು ಮುಂದುವರೆದು ಜಿಜ್ಞಾಸುಗಳು ಇದರ ಸದುಪಯೋಗ ಪಡೆಯಲೆಂದೇ **ಶ್ರೀ ಶ್ರೀ ವಿಶ್ವೋತ್ತಮರ ಕರಕಮಲ ಸಂಜಾತರಾದ ಶ್ರೀ ಶ್ರೀ ವಿಶ್ವವಲ್ಲಭತೀರ್ಥರು** ರಾಜರ ಭಕ್ತರೆಂಬ ದುಂಬಿಗಳಿಗೆ ಕಮಲದಂತೆ ಈ ಗ್ರಂಥಪುಷ್ಪವನ್ನು ಆಘ್ರಾಣಿಸಲು ಕೊಡುತ್ತಿದ್ದಾರೆ. ಅದರ ಜೊತೆಗೆ ಸಾರಗ್ರಹಣದ ಶಕ್ತಿಯನ್ನೂ ಅನುಗ್ರಹಿಸಲಿ ಎಂದು ಅನಂತ ಸಾಷ್ಟಾಂಗ ನಮಸ್ಕಾರಪೂರ್ವಕ ಪ್ರಾರ್ಥಿಸುತ್ತೇವೆ.



# ಯುಕ್ತಿಮಲ್ಲಿಕಾ
# ಮತ್ತು
# ಶ್ರೀವಿಶ್ವವಲ್ಲಭತೀರ್ಥರು

ಸಾಧಕ ಶ್ರೀನಿವಾಸತಂತ್ರಿಗಳು, ಹಾಗೂ ಧರ್ಮಪತ್ನಿ ವೇದವತಿ ಈ ದಂಪತಿಗಳು ಸೋದೆ ಮಹಾಸಂಸ್ಥಾನದ ಪೀಠಾದಿರೂಢರಾದ ಭಾವಿಶ್ರೀವಿಶ್ವವಲ್ಲಭತೀರ್ಥ 'ರಾಘವ' ಎಂಬ ಮಗುವಿಗೆ ಉಡುಪಿಯಲ್ಲಿ 1991ನೇ ವರ್ಷದಲ್ಲಿ ಜನ್ಮ ನೀಡಿದರು.

ವಂಶದ ಬಳುವಳಿಯಾದ ವೇದವತಿ ರಾಘವನಲ್ಲಿ ಶಕ್ತಿಯುತವಾದ ವ್ಯಕ್ತಿತ್ವವನ್ನು ತುಂಬಿದರು. ರಾಘವನು ಬೆಳೆದಂತೆ ಅವನ ವೈರಾಗ್ಯಜೀವನಕ್ಕೆ ಅಣಿಮಾಡಿಕೊಟ್ಟು ಸ್ವತಂತ್ರಬೆಳವಣಿಗೆಗೆ ಮುಕ್ತ ಅವಕಾಶ ಕಲ್ಪಿಸಿದ ತಂದೆಯಾದ ಶ್ರೀನಿವಾಸತಂತ್ರಿಯವರ ವಿಶಾಲಭಾವನೆ ಊಹೆಗೂ ನಿಲುಕದ್ದು. ಬಾಲ್ಯದಲ್ಲಿ ರಾಘವನ ಉದಾತ್ತಭಾವನೆಗಳಿಗೆ ನೀರೆರೆದು ಲೌಕಿಕ ವಿದ್ಯಾಭ್ಯಾಸದ ಮೂಲಕ ಲೋಕಜ್ಞಾನದ ಬೀಜ ಬಿತ್ತಿದ ಗುಂಡಿಬೈಲು ಹಿರಿಯ ಪ್ರಾಥಮಿಕಶಾಲೆಯ ಹಾಗೂ ಪ್ರೌಢಶಿಕ್ಷಣ ನೀಡಿದ ಒಳಕಾಲಿನ ಪ್ರೌಢಶಾಲೆಯ ಅಧ್ಯಾಪಕವೃಂದದವರೇ ನಿಜವಾಗಿಯೂ ಧನ್ಯರು.

ಸಾಧನೆಯ ಛಲ ಹತ್ತಿಸಿ ಬಂಡಾಯದ ಮನೋಧರ್ಮದ ಭೂಮಿಕೆಗೆ ಕಾರಣರಾಗಿ ಒಡನಾಡಿಗಳಾಗಿ ಇದ್ದುಕೊಂಡು, ರಾಘವನಿಗೆ ಜಗತ್ತಿನ ಬಗ್ಗೆ ವಿರಕ್ತಿ ಹುಟ್ಟಿಸಿದ ವಿಷಯಲೋಲುಪರಾದ ತಿಳಿಗೇಡಿ ವರ್ಗದವರ ಉಪಕಾರವೂ ಅನನ್ಯ.

ನೂರಾರು ಶಾಲಾ ವಿದ್ಯಾರ್ಥಿಗಳ ನಡುವೆ ಭೀಮಸೇನನಂತೆ ವಿಜೃಂಭಿಸುತ್ತಿತ್ತು ರಾಘವನ ಧೀರತನ.

ಕಾಲೇಜಿನ ವಿದ್ಯಾಭ್ಯಾಸವು ತನಗೆ ಅನರ್ಹವೆಂದು ಭಾವಿಸಿತು ರಾಘವನ ಮನ. ತಾರುಣ್ಯದ ಹೊಸ್ತಿಲನ್ನೇ ಕಂಡಿರಲಿಲ್ಲ ರಾಘವನ ನಯನ.

ಆವಾಗಲೇ 'ಭಕ್ತಿ', 'ವಿರಕ್ತಿ' ಎಂಬ ಇಬ್ಬರು ತರುಣಿಯರು ಹಿಡಿದರು ರಾಘವನ ಹಸ್ತವನ್ನ.

ಇವನೂ ಕೂಡ ಭಕ್ತಿ, ವಿರಕ್ತಿಯೆಂಬ ತರುಣಿಯರನ್ನು ಹಗಲು-ರಾತ್ರಿಯ ಭೇದವಿಲ್ಲದೇ ಪ್ರೀತಿಸಿದ. ಯಾವಾಗಲೂ 'ವಿಟ್ಠಲ ಕೃಷ್ಣ' ಎಂಬ ತಾಂಬೂಲವನ್ನು ಅಗಿಯಲು ಪ್ರಾರಂಭಿಸಿದ. ವಿವೇಕವೆಂಬ ಖಡ್ಗ ಹಿಡಿದು ಸತ್ಕಾಲವೆಂಬ ಕುದರೆಯೇರಿ ಅನೇಕ ಕ್ರೂರಪ್ರಾಣಿಗಳಿಂದ ಹಾಗೂ ಕಳ್ಳಕಾಕರರಿಂದ ತುಂಬಿರುವ ಗೊಂಡಾರಣ್ಯವನ್ನು ಏಕಾಕಿಯಾಗಿ ನಾಶಮಾಡಿದ. ತನ್ನ ಜೀವನದ ವಿಶಾಲ ಮೈದಾನದಲ್ಲಿ ರಾಜಕುಮಾರನಂತೆ ಧೀರನಾಗಿ ತಯಾರಾದ.

ಶ್ರೀಮದಾಚಾರ್ಯರು ಅತ್ಯಂತ ಪ್ರೀತಿಪೂರ್ವಕವಾಗಿ ಆಶ್ರಮವನ್ನು ನೀಡಿ ಯಾರಿಗೂ ಉಪದೇಶಿಸದ ವರಾಹ ಉಪಾಸನೆಯನ್ನು ಯಾವ ತಮ್ಮಂದಿರಾದ ಶ್ರೀವಿಷ್ಣುತೀರ್ಥರಿಗೆ ನೀಡಿದರೋ, ಅಂತಹ ಮಹಾಪುರುಷರಾದ ಶ್ರೀ ವಿಷ್ಣುತೀರ್ಥರು ಹಾಗೂ ಅವರ ಪರಂಪರೆಯಲ್ಲಿ ಬಂದಿರುವ ಋಜುಯೋಗಿ ರಾಜರು, ತಮ್ಮ ಸಂಸ್ಥಾನದ ಭಾವೀಚಕ್ರವರ್ತಿಯಾದ, ಚಿ॥ ರಾಘವನಲ್ಲಿ ಓಜಸ್ಸು, ಭ್ರಾಜಸ್ಸು, ತೇಜಸ್ಸು, ಪ್ರತಾಪ, ಬಲ, ಸಾಮರ್ಥ್ಯ, ಔದಾರ್ಯ, ಪರಾಕ್ರಮಗಳು ಚಿಗುರುತ್ತಿರುವುದನ್ನು ನೋಡಿ ಮನದೊಳಗೆ ಸಂತೋಷಪಡುತ್ತಿದ್ದರು. ಅವನಿಗೆ ತಮ್ಮ ಸಂಸ್ಥಾನದಲ್ಲಿ ಪಟ್ಟಾಭಿಷೇಕ ಮಾಡುವ ಸುಮುಹೂರ್ತಕಾಲವನ್ನು ನೀರಿಕ್ಷಿಸುತ್ತಿದ್ದರು.

ಮತ್ತೊಂದು ಕಡೆ ಭೂಮಾಪುರುಷರಾದ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದರು ಸಂಸ್ಥಾನದ ಸಮರ್ಥ ಉತ್ತರಾಧಿಕಾರಿಯನ್ನು ದೇಶದ ಉದ್ದಗಲಕ್ಕೂ ಅನ್ವೇಷಿಸುತ್ತಿದ್ದಾರೆ. ರಾಜರ ಅನನ್ಯಭಕ್ತರಾದ ಹಲವಾರು ವಿರಕ್ತಸಾಧಕರು ಮೇಲ್ಪಂಕ್ತಿಯಲ್ಲಿ ಕುಳಿತು ತಮಗೆ ಉತ್ತರಾಧಿಕಾರ ದೊರೆಯಬಹುದೆಂದು ನೀರಿಕ್ಷಿಸಿದ್ದಾರೆ. ಆದರೆ ರಾಘವನ ಹೃದಯತೋಟದಲ್ಲಿ ಭಕ್ತಿಲತೆಯನ್ನು ಪ್ರತಿನಿತ್ಯ ಮೆದ್ದು ದಷ್ಟಪುಷ್ಟನಾದ ಹಯಗ್ರೀವನು ರಾಘವನನ್ನು ಬಿಟ್ಟು ಬೇರೆಡೆ ತೆರಳಲಾರೆ ಎನ್ನುತ್ತಿದ್ದಾನೆ. 'ಯಮೈವೇಷ ವೃಣತೇ ತೇನ ಲಭ್ಯಃ' ಎಂಬಂತೆ ಹಯಗ್ರೀವದೇವರು ರಾಘವನನ್ನು ಒಪ್ಪಿಕೊಂಡಿದ್ದಾರೆ, ಅಪ್ಪಿಕೊಂಡಿದ್ದಾರೆ. ರಾಘವನ ಸದ್ಗುಣಗಳನ್ನು

ಗುರುವಿಶ್ವೋತ್ತಮರಿಗೆ ಮನದಟ್ಟು ಮಾಡಿಸಿದ್ದಾರೆ. ಹಯಗ್ರೀವದೇವರಿಂದ ಪ್ರೇರಿತರಾದ ಮಹಾನ್ ಗುರುಗಳು ಹದಿನಾಲ್ಕನೆಯ ಪ್ರಾಯದ ರಾಘವನನ್ನು ತಮ್ಮ ಸಂಸ್ಥಾನದ ಉತ್ತರಾಧಿಕಾರಕ್ಕಾಗಿ ಕೈಬೀಸಿ ಕರೆದಿದ್ದಾರೆ.

14-6-2006ರಂದು ಸೋಂದಾ ಕ್ಷೇತ್ರದಲ್ಲಿ ರಾಘವನು 'ಸನ್ಯಸ್ತೋಽಹಂ' ಎಂದು ಮೂರು ಬಾರಿ ಹೇಳಿದಾಗ ರಾಜರು ಹಾಗೂ ದೇವತೆಗಳು ಮಗುವಿನ ಅದ್ಭುತ ತ್ಯಾಗಜೀವನವನ್ನು ನೋಡಿ ಆನಂದ ತುಂದಿಲರಾಗಿದ್ದಾರೆ. ರಾಘವನು ಶ್ರೀವಿಶ್ವವಲ್ಲಭತೀರ್ಥನಾಗಿದ್ದಾನೆ. ಅತ್ಯಂತ ಕಠಿಣವಾದ ದೇವಾನುದೇವತೆಗಳಿಂದಷ್ಟೇ ಸಾಧ್ಯವಾಗುವ ಹಯಗ್ರೀವ ಹಾಗೂ ವರಾಹ ರೂಪಗಳ ಅಖಂಡ ಉಪಾಸನೆಯ ದೀಕ್ಷೆಯನ್ನು ಪುಟ್ಟ ಶ್ರೀವಿಶ್ವವಿಲ್ಲಭತೀರ್ಥರಿಗೆ ಗುರುಗಳಾದ ಶ್ರೀ ವಿಶ್ವೋತ್ತಮತೀರ್ಥರು ಉಪದೇಶಿಸಿದ್ದಾರೆ. ವೃಂದಾವನದಲ್ಲಿ ಕುಳಿತು ಋಜುರಾಜರು ಎಲ್ಲಾ ಮಂತ್ರಗಳನ್ನು ಉಚ್ಚರಿಸುತ್ತಿದ್ದಾರೆ. ಅವರ ಜೊತೆಯಲ್ಲಿ ಗುರು ವಿಶ್ವೋತ್ತಮತೀರ್ಥರು ಮಂತ್ರಗಳನ್ನು ಉಚ್ಚರಿಸಿ ತಮ್ಮ ಉತ್ತರಾಧಿಕಾರಿಗಳಾದ ಶ್ರೀವಿಶ್ವವಲ್ಲಭತೀರ್ಥರಿಗೆ ಉಪದೇಶಿಸಿದ್ದಾರೆ. ಪಟ್ಟಾಭಿಷೇಕ ಮಾಡಿ ಸಂಸ್ಥಾನದ ಉತ್ತರಾಧಿಕಾರಿ ಪದವಿಯಲ್ಲಿ ಕೂಡಿಸಿದ್ದಾರೆ.

ಶ್ರೀವಿಶ್ವವಲ್ಲಭತೀರ್ಥರ ಮನದಲ್ಲಿ ಭಗವಂತನ ಬಗೆಬಗೆಯ ಆರಾಧನೆಯ ತುಡಿತಮಿಡಿತಗಳಷ್ಟೇ ಹುಟ್ಟುತ್ತಿವೆ. ಸರ್ವಮೂಲ ಹಾಗೂ ರಾಜರು ರಚಿಸಿದ ಗ್ರಂಥಗಳೆಂಬ ದುರ್ಗಗಳಲ್ಲಿ ಪುಟ್ಟಮೂರ್ತಿಯ ಶ್ರೀವಿಶ್ವವಲ್ಲಭತೀರ್ಥರು ರಾರಾಜಿಸುತ್ತಿದ್ದಾರೆ. ಮಧ್ವವಿಜಯ, ರುಕ್ಮಿಣೀಶವಿಜಯ ಮೊದಲಾದ ಬಿಂಕದ ನದಿಯ ವೈಯಾರಗಳಲ್ಲಿ ಸಂಸ್ಕೃತಭಾಷೆಯ ವಿಶಾಲಮೈದಾನದಲ್ಲಿ ಸರಾಗವಾಗಿ ವಿಹರಿಸುವ ಚಮತ್ಕಾರ ಪಡೆದಿದ್ದಾರೆ. ನವನವೋನ್ವೇಷಶಾಲಿಗಳಾಗಿ ಕನ್ನಡ, ಸಂಸ್ಕೃತ, ಇಂಗ್ಲೀಷ್ ಮೂರು ಭಾಷೆಗಳಲ್ಲಿಯೂ ಪ್ರವೀಣರಾಗಿದ್ದಾರೆ.

ವಯಸ್ಸಿನಲ್ಲಿ ಸಣ್ಣವರಾದರೂ ವಿಚಾರದಲ್ಲಿ ಅಗಾಧತೆಯನ್ನು ಹೊಂದಿದ ಇವರಲ್ಲಿ ಮುತ್ತು, ರತ್ನ, ವಜ್ರ, ವೈಢೂರ್ಯ, ಚಿನ್ನದಂತಹ ಗುಣಗಳೆಂಬ ಸಂಪತ್ತು ಹೇರಳವಾಗಿ ಬೆಳೆಯುತ್ತಿವೆ. ರಂಜನೆಗೆ ರಾಜಿ ಮಾಡಿಕೊಳ್ಳದೇ, ಸತ್ವ, ತತ್ವ, ಸತ್ಯ ಇವುಗಳ ವಿಷಯದಲ್ಲಿ ನಿಷ್ಠೂರ ವಿಮರ್ಶಾತ್ಮಕ ಮನೋಭಾವನೆ ಇವರದ್ದಾಗಿದೆ.

ಗಗನದಲ್ಲಿರುವ ಗ್ರಹ ನಕ್ಷತ್ರಗಳಿಂದ ನಮ್ಮ ಜೀವನದ ಉಜ್ವಲ ಭವಿಷ್ಯವನ್ನು ಜ್ಯೋತಿಷ್ಕರು ಆಲೋಚನೆ ಮಾಡುತ್ತಾರೆ. ಆದರೆ ನಮ್ಮ ಸಮಾಜದ ಮುಂದಿನ ಭವಿಷ್ಯವನ್ನು ಯಾವುದರಿಂದ ನಿರ್ಣಯ ಮಾಡಬೇಕು? ಯಾವ ನಕ್ಷತ್ರಗಳಿಂದ ನಮ್ಮ ಸೀಮಿತವಾದ ವೈಷ್ಣವರ ಪರಂಪರೆ ಮತ್ತಷ್ಟು ಹಸನ್ಮುಖಿಯಾಗಿ ಬೆಳಗುತ್ತದೆ? ಎಂಬ ಪ್ರಶ್ನೆಗೆ ಉತ್ತರವೇ ಶ್ರೀವಿಶ್ವವಲ್ಲಭತೀರ್ಥರು. ಬಾಲ ಸನ್ಯಾಸಿಗಳಾದ ನಮ್ಮ ಶ್ರೀ ವಿಶ್ವವಲ್ಲಭತೀರ್ಥರ ಕಣ್ಣುಗಳೇ ಅಂತಹ ನಕ್ಷತ್ರಗಳು. ಅವರ ಯೋಚನಾಲಹರಿಗಳೇ ಸುತ್ತುವ ಗ್ರಹಗಳು. ಮಿನುಗುವ ತಾರೆಯಂತಿರುವ ಕಾಂತಿಯುಕ್ತವಾದ ಸಾವಿರಾರು ಸದ್ವಿಚಾರಗಳನ್ನು ಪ್ರತಿಬಿಂಬಿಸುವ ಶ್ರೀಪಾದರ ಹೊಳೆಯುವ ಕಣ್ಣುಗಳು ಮುಂದಿನ ಜಗತ್ತಿನ ಉಜ್ವಲ ಭವಿಷ್ಯಕ್ಕೆ ನಿರ್ಣಾಯಕಗಳಾಗಿವೆ. ನಿಷ್ಠಾವಂತ, ಪ್ರಜ್ಞಾವಂತ, ಧೀಮಂತ ಯತಿಗಳ ಅನಿವಾರ್ಯತೆ ನಮ್ಮ ಸಮಾಜಕ್ಕೆ ಬಹಳವಿದೆ. ಅಂತಹ ಉತ್ತಮ ಸ್ಥಾನವನ್ನು ಯಾರು ಅಲಂಕರಿಸುತ್ತಾರೆ ! ಎಂಬ ಕುತೂಹಲದ ಸಾವಿರಾರು ಭಕ್ತವರ್ಗಕ್ಕೆ ಇವರು ತಮ್ಮಲ್ಲಿರುವ ಧೀರೋದಾತ್ತ ಗುಣಗಳಿಂದ ಉತ್ತರಿಸಿದ್ದಾರೆ.

ಶ್ರೀಪಾದರ ಕಣ್ಣುಗಳಿಂದ ಹೊರಸೂಸುತ್ತಿರುವ ರಶ್ಮಿಗಳು ಹಾಗೂ ಮಂದಹಾಸದ ಕಾಂತಿಯು " ನಾನು ಯಾವುದೇ ಕಷ್ಟಗಳಿಗೆ ಹೆದರಿ ಪರಂಪರಾಗತವಾದ ಸಂಪ್ರದಾಯಗಳನ್ನು ಮುರಿಯಲಾರೆ ಅಥವಾ ಸುಖಕ್ಕೆ ಉಬ್ಬಿ ಸುಖವನ್ನೇ ವಿಷವನ್ನಾಗಿ ಮಾಡಿಕೊಳ್ಳಲಾರೆ. ಸುಖ ದುಃಖಗಳನ್ನು ಸಮಾನವನ್ನಾಗಿ ಕಾಣುತ್ತಾ ಜೀವನದಲ್ಲಿ ಎಲ್ಲರಿಗೂ ಆದರ್ಶ ವ್ಯಕ್ತಿಯಾಗಿ ಬೆಳೆದು ಕ್ರಾಂತಿಕಾರಿಯಾದ ಕೆಲಸಗಳನ್ನು ಮಾಡುತ್ತೇನೆ " ಎಂದು ಹೇಳುತ್ತಲೇ ಇರುತ್ತವೆ.

ದಿನಪತ್ರಿಕೆಯ ಮುಖಪುಟದಲ್ಲಿ ಲಕ್ಷಾಂತರ ಜನರಿಗೆ ಕಾಣಿಸುವಂತಹ ಮಹತ್ತರ ಕಾರ್ಯವನ್ನು ಸಾಧಿಸುವ ಕೀರ್ತಿಯ ಕಾಮುಕತನ, ತನ್ನ ಹೆಸರು ಎಲ್ಲರಿಗೂ ತಿಳಿಯಬೇಕು ಆದ್ದರಿಂದ ಸಾಮಾಜಿಕ ಕೆಲಸವನ್ನು ಮಾಡಬೇಕು, ಇಂತಹ ಸ್ವಾರ್ಥ ಆಲೋಚನೆಗಳು ಶ್ರೀಪಾದಂಗಳವರಲ್ಲಿ ಸರ್ವಥಾ ಇರುವುದಿಲ್ಲ.

ಶ್ರೀಪಾದರು ಪರ್ಯಾಯ ದರ್ಬಾರಿನಲ್ಲಿ ತಮ್ಮ ಉದ್ದೇಶವನ್ನು ಹೇಳುವಾಗ ಏನನ್ನು ಬೇಕಾದರೂ ಘೋಷಣೆ ಮಾಡಬಹುದಿತ್ತು, ಆದರೆ ತಮ್ಮಲ್ಲಿ ಎಲ್ಲಾ ಬಗೆಯ ಸಂಪತ್ತು, ಸಾಮರ್ಥ್ಯಗಳು ಇದ್ದರೂ ಅದನ್ನು ಪ್ರದರ್ಶಿಸಿಕೊಳ್ಳದೆ,

ಪೊಡವಿಗೊಡೆಯನಾದ ಕೃಷ್ಣಪರಮಾತ್ಮನನ್ನು ಯಥಾಶಕ್ತಿ ಪೂಜಿಸುವುದೇ ಎರಡುವರ್ಷ ಪರ್ಯಾಯದ ಮಹಾಯೋಜನೆ ಎಂದು ಘೋಷಣೆ ಮಾಡಿದರು. ಸ್ಂದರ್ಶನದಲ್ಲಿಯೂ ಪುನಃ ಪುನಃ ಅದನ್ನೇ ಸ್ಪಷ್ಟಪಡಿಸಿದರು. ಇವರ ಚಿಂತನೆಯ ಅಗಾಧತೆಯನ್ನು ಗಮನಿಸಿದ ಯಾವ ದೇವತೆಗಳೂ ತಲೆದೂಗದೆ ಇರಲಾರರು. ಸಜ್ಜನರು ಆನಂದಬಾಷ್ಪವನ್ನು ಸುರಿಸದೆ ಇರಲಾರರು.

''ಸೂರ್ಯನ ಮುಂದೆ ಕುಳಿತು ಇದು ಹಗಲೋ, ರಾತ್ರಿಯೋ ಎಂಬ ಸಂಶಯ ಬರಲು ಸಾಧ್ಯವೇ, ಅದರಂತೆ ರಾಜರು ಭಾವಿಸಮೀರರೋ ಅಲ್ಲವೋ ? ಎಂಬ ಗೊಂದಲವಿರುವವರು ಸೂರ್ಯನ ಬೆಳಕು ಕಾಣದ ಅಂಧರು. ಅವರಿಗೆ ರಾಜರ ಗ್ರಂಥವು ಅರ್ಥವಾಗಲು ಸಾಧ್ಯವಿಲ್ಲ'' ಹೀಗೆ ಕಡ್ಡಿ ಮುರಿದಂತೆ ತಮ್ಮ ಸಿದ್ಧಾಂತ ನಿಷ್ಠೆಯನ್ನು ಪ್ರಕಟಪಡಿಸುತ್ತಾರೆ.

ಗುರುಗಳಾದ ಶ್ರೀವಿಶ್ವೋತ್ತಮತೀರ್ಥಶ್ರೀಪಾದರು ಹಾಗೂ ವಿದ್ಯಾಗುರುಗಳಾದ ಕೃಷ್ಣಾಪುರಮಠದ ಶ್ರೀವಿದ್ಯಾಸಾಗರತೀರ್ಥಶ್ರೀಪಾದರು ಧ್ರುವ ನಕ್ಷತ್ರದಂತೆ ಆದರ್ಶವ್ಯಕ್ತಿಗಳಾಗಿ ಕಂಗೊಳಿಸುತ್ತಿರುವಾಗ ಇವರು ಅನ್ಯಮಾರ್ಗದಲ್ಲಿ ಕಿರುನೋಟವನ್ನು ಕೂಡ ಮಾಡಲಾರರು.

ಪ್ರತಿನಿತ್ಯ ಮೂರು ಗಂಟೆಗಳ ಕಾಲ ಇಂದೂ ಕೂಡ ಶ್ರೀವಿದ್ಯಾಸಾಗರತೀರ್ಥ ಶ್ರೀಪಾದಂಗಳವರ ಬಳಿ ಅಧ್ಯಯನವನ್ನು ನಡೆಸುತ್ತಿದ್ದಾರೆ. ಪರ್ಯಾಯದ ಸಂದರ್ಭದಲ್ಲಿ ಪ್ರತಿನಿತ್ಯ ಲಕ್ಷಾಂತರ ಶಾಲಾ ಮಕ್ಕಳಿಗೆ ಅನ್ನದಾನದ ಯೋಜನೆಯನ್ನು ಹಮ್ಮಿಕೊಂಡಿದ್ದಾರೆ. ಮೂವತ್ತುಸಾವಿರ ವಿದ್ಯಾರ್ಥಿಗಳಿಗೆ ಉಚಿತವಾಗಿ ಒಳ್ಳೆಯ ವಸ್ತ್ರಗಳನ್ನು ದಾನ ಮಾಡಿದ್ದಾರೆ. ತಮ್ಮ ಈ ಚಿಕ್ಕ ವಯಸ್ಸಿನಲ್ಲಿಯೇ ಯಾರಿಂದಲೂ ಊಹಿಸಲು ಸಾಧ್ಯವಾಗದ ಎರಡು ಕೋಟಿ ವೆಚ್ಚದ ಬ್ರಹ್ಮರಥವನ್ನು ನಿರ್ಮಾಣ ಮಾಡಿ ಕೃಷ್ಣನನ್ನು ಅದರಲ್ಲಿ ನಿಲ್ಲಿಸಿ ಸಂತೋಷಪಟ್ಟು ಕೃಷ್ಣನ ಕೈಂಕರ್ಯದಲ್ಲಿ ಬದ್ಧ ದೀಕ್ಷಿತರಾಗಿದ್ದಾರೆ. ಸೋದಾಕ್ಷೇತ್ರದಲ್ಲಿ ದೇದೀಪ್ಯಮಾನವಾದ ಇಂದ್ರಪ್ರಸ್ಥವನ್ನು ನಿರ್ಮಾಣ ಮಾಡಿದ್ದಾರೆ. ಶ್ರೀಮಧ್ವವಾದಿರಾಜ ಇಂಜಿನಿಯರಿಂಗ್ ಕಾಲೇಜು ಎಂಬ ವಿದ್ಯಾಸಂಸ್ಥೆಯನ್ನು ನಿರ್ಮಾಣ ಮಾಡಿ ಎಂತಹ ಸಮಾಜಸೇವಕರಿಗೂ

ಆಶ್ಚರ್ಯವನ್ನು ಹುಟ್ಟಿಸಿದ್ದಾರೆ. ಇಷ್ಟೆಲ್ಲಾ ಕಾರ್ಯಗಳನ್ನು ಪೂರೈಸಬೇಕೆಂದರೆ ಕಷ್ಟಗಳಿಗೆ ಗುರಿಯಾಗುವ ಧೈರ್ಯವಿರಬೇಕು, ವಿಪತ್ತುಗಳಿಗೆ ತಲೆಯೊಡ್ಡುವ ಸ್ಥೈರ್ಯವಿರಬೇಕು. ಗುರಿಯ ಕಡೆಗೆ ಮನಸ್ಸಿಡುವ ಸ್ಥಿರತೆ ಇರಬೇಕು. ಯಾರನ್ನೂ ಒಲಿಸಿಕೊಳ್ಳುವ ನಯವಿರಬೇಕು. ಮಾತು ಮಧುರವಿರಬೇಕು, ನಡೆ ನೇರವಿರಬೇಕು, ಇಂತಹ ವ್ಯಕ್ತಿಯು ಮಾತ್ರ ಭದ್ರವಾದ ಸಮಾಜವನ್ನು ಕಟ್ಟಲು ಸಮರ್ಥನಾಗುತ್ತಾನೆ.

ಧೀರರಾದ ಶ್ರೀಪಾದರ ಅನೇಕ ಗುಣಗಳಿಂದ ಆಕರ್ಷಿತರಾದವರಲ್ಲಿ ನನ್ನ ಅಣ್ಣಂದಿರೂ ಕೂಡ ಒಬ್ಬರು. ವಾದಿರಾಜರ ಮೇಲೆ ಅಪಾರ ಭಕ್ತಿ ಶ್ರದ್ಧೆಗಳನ್ನು ಇಟ್ಟುಕೊಂಡು ಅವರಿಗಾಗಿಯೇ ಜೀವನವನ್ನು ಸಮರ್ಪಣೆ ಮಾಡುತ್ತಿರುವ ನನ್ನ ಅಣ್ಣಂದಿರಾದ ವಿಜಯೀಂದ್ರಾಚಾರ್ಯರಿಗೆ ರಾಜರ ಸೇವೆಯನ್ನು ವ್ಯಾಪಕವಾಗಿ ನಡೆಸಬೇಕೆಂಬ ಮಹತ್ವಾಕಾಂಕ್ಷೆಯು ಅನೇಕ ವರ್ಷಗಳಿಂದ ಇತ್ತು. ರಾಜರ ಗ್ರಂಥಗಳಲ್ಲಿರುವ ತತ್ವವಿಚಾರಗಳನ್ನು ಎಲ್ಲೆಡೆ ಹಂಚುತ್ತಾ ಅವರ ಗ್ರಂಥಗಳನ್ನು ಬೆಳೆಸಿ ತಾನೂ ಕೂಡ ಆ ಗ್ರಂಥಗಳಿಂದ ಸಮಾಜದಲ್ಲಿ ಬೆಳೆದವರು. ವಾದಿರಾಜರ ಗ್ರಂಥಗಳೆಂಬ ಕುಸುಮದಲ್ಲಿ ದುಂಬಿಯಾದ ಇವರಿಗೆ ವಾದಿರಾಜರ ಗ್ರಂಥಗಳ ರಸಾಸ್ವಾದನೆ ಎಲ್ಲ ಸಾಧಕರಿಗೂ ಮಾಡಿಸಬೇಕೆಂಬ ಕುತೂಹಲವಿತ್ತು. ಅನೇಕ ವಿದ್ವಾಂಸರುಗಳ ಮೂಲಕ ಶ್ರೇಷ್ಠವಾದ ಯುಕ್ತಿಮಲ್ಲಿಕಾ ಗ್ರಂಥವನ್ನು ಕಸ್ತೂರಿ ಕನ್ನಡದಲ್ಲಿ ಬರೆಸಿ ಮುದ್ರಿಸಿ ಮನೆಮನಗಳಿಗೆ ತಲುಪಿಸಬೇಕೆಂಬ ಉತ್ಕಟ ಅಪೇಕ್ಷೆಯಿತ್ತು. ಆದರೆ, ಈ ಯೋಜನೆಯನ್ನು ಸಂಪೂರ್ಣ ಕೈಗೆತ್ತಿಕೊಂಡು ಸಮರ್ಥವಾಗಿ ನಿಭಾಯಿಸಲು ಯೋಗ್ಯರಾದ ಗುರುಗಳನ್ನು ಅನ್ವೇಷಣೆ ಮಾಡುವಷ್ಟರಲ್ಲಿಯೇ ಸೋದೆ ಮಠದ ಸಂಸ್ಥಾನಕ್ಕೆ ಅಧಿಪತಿಗಳಾದ ಶ್ರೀವಿಶ್ವವಲ್ಲಭತೀರ್ಥಶ್ರೀಪಾದರ ಗುಣಗಳು ಇವರ ಮನಸ್ಸನ್ನು ಆಕರ್ಷಿಸಿದವು. ವಿಶಾಲಮನಸ್ಕರಾದ ಶ್ರೀಪಾದರ ಬಳಿ ಯುಕ್ತಿಮಲ್ಲಿಕಾ ಜ್ಞಾನಪ್ರಚಾರದ ಬಗ್ಗೆ ವಿನಂತಿ ಮಾಡಿದಾಗ ಒಂದೇ ಮಾತಿಗೆ ಶ್ರೀಪಾದರು 'ತಥಾಸ್ತು' ಎಂಬ ವರವನ್ನಿತ್ತರು. ಹಿಂದೆ, ಮುಂದೆ, ಯಾರು, ಏನು, ಹೇಗೆ, ಯಾವಾಗ, ಹಾಗೋ, ಹೀಗೋ, ಏನೋ, ಯಾರಿಂದ, ಇತ್ಯಾದಿಯಾಗಿ ಪ್ರಶ್ನಿಸದೇ, ಏನನ್ನೂ ವಿಚಾರ ಮಾಡದೇ "ಇದು ಆಗಲೇ ಬೇಕಾದ ಕಾರ್ಯ, ರಾಜರು ಮಾಡಿಸುತ್ತಾರೆ"

ಎಂದಷ್ಟೇ ಪ್ರತ್ಯುತ್ತರ ನೀಡಿದರು. ಮುಂದಿನ ಸಂಪೂರ್ಣ ಯೋಜನೆಯನ್ನು ವಿಜಯೀಂದ್ರಾಚಾರ್ಯರಿಂದಲೇ ಮಾಡಿಸಿ ಅವರಿಗೂ ಮಹಾಪುಣ್ಯ ಒದಗುವಂತೆ ಅನುಗ್ರಹಿಸಿದರು. ಪ್ರಾರಂಭದ ದಿವಸದಿಂದ ಇಲ್ಲಿಯ ತನಕ ಒಂದು ಬಾರಿಯೂ ಲವಲೇಶ ಅವಿಶ್ವಾಸವನ್ನೂ ಕೂಡ ಶ್ರೀಪಾದರು ತೋರಿಸಿಲ್ಲ. ದೃಢವಿಶ್ವಾಸದಿಂದ, ಒಂದೇ ಧೋರಣೆಯಿಂದ ಯೋಜನೆಯ ಸಮಾಪ್ತಿಗೆ ಸಕಲ ಬಗೆಯ ಅನುಕೂಲಗಳನ್ನು ಮಾಡಿಕೊಟ್ಟರು. ಸ್ವತಃ ನಿಂತು ತಾವೇ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಿದರು. ಶ್ರೀಪಾದರಲ್ಲಿರುವ ವಿಶ್ವಾಸಗುಣ, ಧೈರ್ಯ, ಗುರಿಮುಟ್ಟುವ ಛಲ, ಇವೆಲ್ಲವನ್ನೂ ಗಮನಿಸಿದ ನಮ್ಮಂತಹ ಅನೇಕ ವ್ಯಕ್ತಿಗಳು ಆಶ್ಚರ್ಯಚಕಿತರಾಗಿದ್ದೇವೆ. ಇಂತಹ ಶ್ರೀಪಾದಂಗಳವರು ನಮ್ಮ ಮೇಲೆ ನಿರಂತರ ಅನುಗ್ರಹವಿತ್ತು ಇಂತಹ ಜ್ಞಾನಕಾರ್ಯವನ್ನು ಮತ್ತಷ್ಟು ನಮ್ಮಿಂದ ಮಾಡಿಸಿಕೊಳ್ಳಲಿ ಎಂದಷ್ಟೇ ಕೊನೆಯಲ್ಲಿ ಪ್ರಾರ್ಥಿಸುತ್ತೇನೆ.

ಶ್ರೀಕೃಷ್ಣಾರ್ಪಣಮಸ್ತು

# ಯುಕ್ತಿಮಲ್ಲಿಕಾದಿಂದ ಉಂಟಾದ ಫಲಗಳು

ನಾನು ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರ ಶಿಷ್ಯನಾಗಿ ಅಧ್ಯಯನ ಮಾಡಿ, ನಂತರ ಗುರುಗಳ ದಯೆಯಿಂದ ವಿವಾಹಿತನಾಗಿ ಚೆನ್ನೈನಗರದಲ್ಲಿ ಅನೇಕವರ್ಷಗಳ ಕಾಲ ಟಿ.ನಗರ ಮಠದಲ್ಲಿ ಜ್ಞಾನಕಾರ್ಯದ ಜೊತೆಗೆ ಗುರುಗಳ ಸೇವೆಯನ್ನು ಮಾಡುತ್ತಿದ್ದೆ. ವಿವಾಹಿತನಾಗಿ ಹತ್ತುವರ್ಷಗಳಾದರೂ ಕೂಡ ನನಗೆ ಸಂತತಿಯು ಆಗಿರಲಿಲ್ಲ. ಉಡುಪಿಗೆ ಬಂದ ತರುವಾಯ ಶ್ರೀವಿಶ್ವವಲ್ಲಭತೀರ್ಥ ಶ್ರೀಪಾದಂಗಳವರು ಭಾವಿಸಮೀರ ವಾದಿರಾಜ ಗುರುಕುಲದಲ್ಲಿ ನನ್ನನ್ನು ಅಧ್ಯಾಪಕನನ್ನಾಗಿ ಸೇರಿಸಿದರು. ಅವರ ದಯೆಯಿಂದ ಯುಕ್ತಿಮಲ್ಲಿಕಾ ಕಾರ್ಯಕ್ಕೆ ಪ್ರವೃತ್ತನಾದೆ. ನನ್ನ ಮನಸ್ಸಿನ ಸಮಾಧಾನ ಆಗುವ ರೀತಿಯಲ್ಲಿ ಗುರುಗಳ ಸೇವೆಯನ್ನು ಮಾಡಿದೆ. ಇದರ ಪರಿಣಾಮ ಗುರುಗಳ ದಯೆಯಿಂದ ನಾನೀಗ ಉತ್ತಮ ಸಂತಾನವನ್ನು ಹೊಂದಿರುತ್ತೇನೆ. ವಾದಿರಾಜರ ಗ್ರಂಥಗಳ ಸೇವೆ ಅವರ ಸೇವೆಯಿದ್ದಂತೆ. ಇದಕ್ಕೆ ಸಾಕ್ಷಿಯಾಗಿ ನಾನಿದ್ದೇನೆ. ಗ್ರಂಥ ಫಲಪ್ರದವಾಗಿದೆ ಎನ್ನಲು ನನಗಿಂತ ದೊಡ್ಡ ಉದಾಹರಣೆ ಮತ್ತೊಬ್ಬರು ಬೇಕಿಲ್ಲ.

**- ವಿದ್ವಾನ್ ಗಣಪತಿ ಭಟ್**
**ಉಡುಪಿ.**

—o—

ಮಾಧವಾಚಾರ್ಯ ಎಂಬ ನಾನು ಪೂಜ್ಯಗುರುಗಳಾದ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರಲ್ಲಿ ಅಧ್ಯಯನ ಮಾಡಿ ಪ್ರಕೃತ ಅವರ ಸುಪುತ್ರರಾದ ಶ್ರೀಕರಾಚಾರ್ಯರಲ್ಲಿ ಅಧ್ಯಯನ ಮಾಡುತ್ತಿದ್ದೇನೆ. ನಾನು ವಿವಾಹಿತನಾಗಿ ಅನೇಕವರ್ಷಗಳಾಗಿವೆ. ಆಚಾರ್ಯರ ಸೇವೆಯಲ್ಲಿ ಆಸಕ್ತನಾಗಿದ್ದೇನೆ. ವಾದಿರಾಜರ

ಹಸ್ತಪ್ರತಿಗಳನ್ನು ಶೋಧನೆ ಮಾಡುವ ಕಾರ್ಯದಲ್ಲಿ ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದರು ನನ್ನನ್ನು ನಿಯೋಜಿಸಿದ್ದರು. ನನ್ನ ಮನಸ್ಸಿಗೆ ವಾದಿರಾಜರ ಸೇವೆ ಮುದನೀಡಿದೆ: ಭಾವಿಸಮೀರ ವಾದಿರಾಜರ ಅನುಗ್ರಹದಿಂದ ಸೇವೆಯ ಫಲವಾಗಿ ಒಂದು ಗಂಡುಸಂತಾನವನ್ನು ಹೊಂದಿದ್ದೇನೆ. ಮೊದಲೇ ಹೆಣ್ಣುಸಂತತಿಯನ್ನು ಹೊಂದಿದ ನನಗೆ ಬದುಕಿನಲ್ಲೇ ಪೂರ್ಣತೆ ಬಂದಂತಾಗಿದೆ. ಇಂತಹ ವಾದಿರಾಜರ ದಯೆ ಮತ್ತು ಅವರ ಸೇವಾಭಾಗ್ಯ ಜನ್ಮಜನ್ಮದಲ್ಲಿಯೂ ನನಗೆ ಲಭಿಸಲೆಂದು ಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

**- ವಿದ್ವಾನ್ ಬಿ.ಎನ್. ಮಾಧವಾಚಾರ್ಯ**

**ಬೆಂಗಳೂರು.**

—o—

ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ಅಧ್ಯಯನ ಮಾಡಿದ ಪಾಂಡುರಂಗ ಪಾಂಡುರಂಗಿ ಎಂಬ ನಾನು ವಾದಿರಾಜರ ಸೇವೆಯಿಂದ ಸಾಕಷ್ಟು ಪ್ರಭಾವಿತನಾಗಿದ್ದೇನೆ. ಶ್ರೀ ಶ್ರೀ ವಿಶ್ವವಲ್ಲಭತೀರ್ಥ ಶ್ರೀಪಾದಂಗಳವರು ನನ್ನನ್ನು ಯುಕ್ತಿಮಲ್ಲಿಕಾ ಕೆಲಸದಲ್ಲಿ ನಿಯೋಜಿಸಿದರು. ನನ್ನ ಸ್ನೇಹಿತರಾದ ವಿಜಯೀಂದ್ರಾಚಾರ್ಯರು ಈ ಕಾರ್ಯದಲ್ಲಿ ಅನೇಕ ರೀತಿಯಾದ ಸೇವೆಗೆ ಅವಕಾಶವನ್ನು ಶ್ರೀಪಾದಂಗಳವರ ಆದೇಶದಂತೆ ಮಾಡಿಕೊಟ್ಟರು. ಈ ಕಾರ್ಯಪ್ರವೃತ್ತನಾಗುವ ಮೊದಲೇ ನಿಮಗೆ ವಿವಾಹ ಈ ಗ್ರಂಥಸೇವೆಯಿಂದ ಆಗುತ್ತದೆ ಎಂಬುದಾಗಿ ಸೂಚಿಸಿದರು. ಇದರ ಪರಿಣಾಮವಾಗಿ ಇಂದು ವಿವಾಹಿತನಾಗಿದ್ದೇನೆ. ನಲವತ್ತೈದನೆಯ ಈ ವಯಸ್ಸಿನಲ್ಲಿ ನನ್ನ ವಿವಾಹ ಆದ ಪ್ರಸಂಗವನ್ನು ಕೇಳಿದ ಅನೇಕ ಸ್ನೇಹಿತರು ಇಂದಿಗೂ ಅದನ್ನು ನಂಬಿಲ್ಲ. ಇದು ವಾದಿರಾಜರ ಒಂದು ಪವಾಡ ಅಥವಾ ಅನುಗ್ರಹವಿಶೇಷವೆಂದೇ ನನ್ನ ಬದುಕಿನಲ್ಲಿ ಭಾವಿಸಿದ್ದೇನೆ.

**- ವಿದ್ವಾನ್ ಪಾಂಡುರಂಗ ಪಾಂಡುರಂಗಿ**

**ಘಟಪ್ರಭಾ**

—o—

ಪೂರ್ಣಪ್ರಜ್ಞವಿದ್ಯಾಪೀಠದಲ್ಲೇ ಅಧ್ಯಾಪಕನಾಗಿರುವ ನಾನು ನಮ್ಮ ಮನೆತನ ಎಲ್ಲರೂ ಕೂಡ ವಾದಿರಾಜರ ಭಕ್ತಕೋಟಿಪ್ರವಿಷ್ಟರು. ವಾದಿರಾಜರೇ ನಮ್ಮ ಬದುಕಿನ ಉಸಿರು. ವಾದಿರಾಜರ ಗ್ರಂಥಗಳ ಅಧ್ಯಯನದಲ್ಲಿ ಆಸಕ್ತನಾದ ನಾನು ಅನೇಕ ವರ್ಷಗಳಿಂದ ಸಂತಾನ ಸಮಸ್ಯೆಯನ್ನು ಅನುಭವಿಸಿ ರಾಜರ ಗ್ರಂಥವನ್ನು ಯಥಾಮತಿ ಲೇಖನಮಾಡಿದ ಪುಣ್ಯದಿಂದ ಅವರ ಕೃಪೆಗೆ ಪಾತ್ರನಾಗಿ ಇಂದು ಸಂತಾನವನ್ನು ಹೊಂದುವಂತಹ ಪುಣ್ಯವನ್ನು, ಸುಕೃತವನ್ನು ಹೊಂದಿದ್ದೇನೆ. ಭಾವಿಸಮೀರ ವಾದಿರಾಜರ ದಯೆ ಜನ್ಮಜನ್ಮಕ್ಕೂ ಅವಿಚ್ಛಿನ್ನವಾಗಿ ಒದಗಿಬರಲೆಂದು ಹರಿವಾಯುಗುರುಗಳಲ್ಲಿ ಪುನಃ ಪುನಃ ಪ್ರಾರ್ಥಿಸುತ್ತೇನೆ.

**- ವಿದ್ವಾನ್ ರಂಗನಾಥ ಗಣಾಚಾರಿ**
**ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು**

**॥ ಶ್ರೀಕೃಷ್ಣಾರ್ಪಣಮಸ್ತು ॥**





## ರಾಜಸುಭಾಷಿತ

**ಸ್ವಕೋಶಸ್ಥಸದರ್ಥಾಖ್ಯವಿತ್ತೈರ್ದತ್ತೈಃ ಸ ಏವ ತತ್ ।**
**ವಿದ್ರಾವಯೇದ್ಧಿ ದಾರಿದ್ರ್ಯಂ ದದ್ಯಾನ್ಮಧ್ವೋ ಗತಿಂ ಚ ಮೇ ॥**

ತಮ್ಮ ಕೋಶದಲ್ಲಿರುವ ಶ್ರೇಷ್ಠವಾದ ಅರ್ಥಗಳೆಂಬ ಧನವನ್ನು ಕೊಟ್ಟು ಆ ಮಧ್ವರೇ ನನ್ನ ಜ್ಞಾನದಾರಿದ್ರ್ಯವನ್ನು ಬಡಿದೋಡಿಸುತ್ತಾರಷ್ಟೆ? ಆ ಮಧ್ವರೇ ನನಗೆ ಉತ್ತಮ ಗತಿಯನ್ನೂ ಕೊಡಲಿ.

